ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೭

## ಶತರುದ್ರಸಂಹಿತಾ



ಅನುವಾದಕ.

**ಹಾಸನದ ಪಂಡಿತ ವೆಂಕಟರಾವ್**

ಆಸ್ಥಾನ ವಿದ್ವಾನ್

ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**




# ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ವಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲುಲಿತವಪುಃ ಸಂಪದೇ ಪಾರ್ವತೀಶಃ ॥

ಬೆಂಗಳೂರು ಪ್ರೆಸ್ ಬ್ರಾಂಚ್.

# ಪ್ರಸ್ತಾವನೆ.

ಮೂರನೆಯ ಸಂಹಿತೆಯಾದ ಈ ಶತರುದ್ರಸಂಹಿತೆಯಲ್ಲಿ ಲೀಲಾರ್ಥವಾಗಿಯೂ ಭಕ್ತರ ಸಂರಕ್ಷಣೆಗಾಗಿಯೂ ಪರಮೇಶ್ವರನು ಕೈಗೊಂಡ ಅವತಾರಗಳು ವರ್ಣಿಸಲ್ಪಟ್ಟಿರುವವು. ಇಂತಹ ಅವತಾರಗಳಲ್ಲಿ ನೂರನ್ನು ಇಲ್ಲಿ ಹೇಳಿರುವುದರಿಂದ ಈ ಭಾಗಕ್ಕೆ ಶತರುದ್ರಸಂಹಿತೆಯೆಂದು ಹೆಸರಾಗಿರುವುದು ವಿಷ್ಣು ಮೊದಲಾದ ದೇವತೆಗಳ ಅವತಾರಕ್ಕೂ ಶಿವನ ಅವತಾರಕ್ಕೂ ವ್ಯತ್ಯಾಸವಿರುವುದು. ವಿಷ್ಣ್ವಾದಿದೇವತೆಗಳು ತಮ್ಮ ಅಂಶದಿಂದ ತಮಗೆ ಬೇಕಾದ ಜನನೀಜನಕರಲ್ಲಿ ಆವಿರ್ಭವಿಸುವರು ಮತ್ತು ಆಯಾ ಅವತಾರಕ್ಕೆ ತಕ್ಕಂತೆ ವೇಷಭೂಷಾದಿಗಳನ್ನು, ನಟನೆಯನ್ನು ಪ್ರಕಟಿಸುವರು. ಪರಮೇಶ್ವರನ ಅವತಾರವು ಹಾಗಿರದೆ ಆಯಾಕಾಲಕ್ಕೆ ಬೇಕಾಗುವ ಆಕಾರಾದಿಗಳಿಂದ ಆಯಾ ಪ್ರದೇಶಗಳಲ್ಲಿ ಗೋಚರಿಸಿ ಉದ್ದೇಶಿಸಿದ ಕಾರ್ಯವು ಮುಗಿದೊಡನೆಯೇ ಅಂತರ್ಧಾನನಾಗುವನು. ಪರಮೇಶ್ವರನು ಸರ್ವಜ್ಞನಾದುದರಿಂದ ಅವನ ಮತ್ತು ಅವನ ಅವತಾರಗಳ ಶಕ್ತಿಸಾಮರ್ಥ್ಯಾದಿಗಳಿಗೆ ಯಾವಾಗಲೂ ನ್ಯೂನತೆಯಿಲ್ಲ. ಅಜ್ಞಾನಮೋಹಾದಿಗಳ ಪ್ರಭಾವಕ್ಕೆ ಸಿಲುಕುವವನಲ್ಲ. ಅವತಾರಾದಿಗಳಲ್ಲಿ ಲೋಕರೀತಿಯಾಗಿ ಪ್ರದರ್ಶಿಸುವ ಲೋಪದೋಷಗಳು ಆ ಸರ್ವೇಶ್ವರನ ಭಕ್ತಾನುಗ್ರಹಕ್ಕಾಗಿ ಕೈಗೊಳ್ಳುವ ಲೀಲಾವಿನೋದಗಳಲ್ಲದೆ ಬೇರೆಯಲ್ಲ ಆ ಪರಶಿವನು ನಿತ್ಯನೂ, ನಿರ್ಗುಣನೂ, ವಿಕಾರರಹಿತನೂ, ಸಚ್ಚಿದಾನಂದರೂಪನೂ ಆದ ಪರಬ್ರಹ್ಮವಸ್ತುವೇ ಆಗಿರುವುದರಿಂದ ಅವನನ್ನು ಬಿಟ್ಟು ಬೇರೊಂದು ವಸ್ತುವು ಈ ಪ್ರಪಂಚದಲ್ಲಿಲ್ಲ ಆದುದರಿಂದ ದೃಶ್ಯಾದೃಶ್ಯ ಪ್ರಪಂಚವೆಲ್ಲವೂ ಈಶ್ವರಾತ್ಮಕವಾದುದೆಂದು ತಿಳಿಯಬೇಕು.

ನಾನಾವಿಧವಾದ ಈಶ್ವರನ ಅದ್ಭುತಲೀಲೆಗಳ ವರ್ಣನೆಯನ್ನೂ, ತತ್ತ್ವಮಸ್ಯಾದಿ ಮಹಾವಾಕ್ಯಗಳ ವಿವರಣೆಗಳನ್ನೂ ಒಳಗೊಂಡಿರುವ ಈ ಶಿವಪುರಾಣವು ಈಶ್ವರಾರಾಧಕರಿಗೂ ತತ್ತ್ವಜಿಜ್ಞಾಸುಗಳಿಗೂ ಬಹಳ ಉಪಯುಕ್ತವಾಗಿರುವುದು ಸಾಧಾರಣ ಜನರಿಗೆ ಹಿತವಾದ ಮನರಂಜಕವಾದ ಅನೇಕ ಕಥೆಗಳಿರುವವು. ತತ್ತ್ವಾಭಿಲಾಷಿಗಳಾದ ಪ್ರಾಜ್ಞರಿಗೆ ಬೇಕಾದ ವೇದಾಂತವಿಷಯಗಳೂ ಚೆನ್ನಾಗಿ ವಿವರಿಸಲ್ಪಟ್ಟಿರುವವು. ಆದುದರಿಂದ ಈ ಸದ್ಗ್ರಂಥ ಪಠನಶ್ರವಣಾದಿಗಳು ಈಶ್ವರಾನುಗ್ರಹವನ್ನುಂಟುಮಾಡುವುದರ ಮೂಲಕ ಇಹಪರಗಳೆರಡರಲ್ಲಿಯೂ ಭಕ್ತರ ಇಷ್ಟಾರ್ಥಗಳನ್ನು ಪೂರೈಸಿ ಸಕಲ ಸನ್ಮಂಗಳಗಳನ್ನೂ ಉಂಟುಮಾಡುವವು.

ಸಂಸ್ಕೃತವನ್ನು ತಿಳಿಯದ ಜನಸಾಮಾನ್ಯಕ್ಕೂ ಈ ಗ್ರಂಥದ ಉಪಯೋಗವಾಗಬೇಕೆಂಬ ಘನವಾದ ಉದ್ದೇಶದಿಂದ, ಪ್ರಜಾನುರಾಗಿಗಳೂ, ಸದಾಚಾರನಿರತರೂ ಆದ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್, ಐ. ಮಹಾಪ್ರಭುಗಳ** ಅಪ್ಪಣೇಮೇರೆಗೆ ಈ ಗ್ರಂಥವನ್ನು ಯಥಾಮತಿ ಬರೆದಿರುತ್ತೇನೆ. ಇದರಲ್ಲಿರುವ ಗುಣಾವಗುಣಗಳನ್ನು ಪ್ರಾಜ್ಞರಾದವರು ಹಂಸಕ್ಷೀರನ್ಯಾಯದಂತೆ ಪರಿಗ್ರಹಿಸಬೇಕೆಂದು ಬೇಡುವುದಲ್ಲದೆ, ಸರ್ವಶಕ್ತನೂ, ದಯಾಮಯನೂ ಆದ ಪರಮೇಶ್ವರನು ನಮ್ಮ ಪ್ರಭುವರ್ಯರಿಗೂ ಅವರ ರಾಷ್ಟ್ರಕ್ಕೂ ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು.
ಪಾರ್ಥಿವ ಸಂ ॥ ಭಾದ್ರಪದ ಬ ನವಮಿ ॥
೨೯-೯-೧೯೪೫.

ಅನುವಾದಕ.
**ಹೆಚ್. ಪಿ. ವೆಂಕಟರಾವ್.**
ಆಸ್ಥಾನ ವಿದ್ವಾನ್.



# ವಿಷಯಾನುಕ್ರಮಣಿಕೆ

ಪುಟಸಂಖ್ಯೆ

**ಒಂದನೆಯ ಅಧ್ಯಾಯ—**

ಶಿವಾವತಾರಗಳನ್ನು ಹೇಳಬೇಕೆಂದು ಶೌನಕಾದಿಋಷಿಗಳ ಪ್ರಶ್ನೆ—ಸೂತನು ಅದರಂತೆ ಸದ್ಯೋಜಾತ, ವಾಮದೇವ, ತತ್ಪುರುಷ, ಅಘೋರ, ಈಶಾನವೆಂಬ ಐದು ಅವತಾರಗಳನ್ನು ವಿವರಿಸುವುದು. 1

**ಎರಡನೆಯ ಅಧ್ಯಾಯ—**

ಶರ್ವ, ಭವ, ರುದ್ರ, ಉಗ್ರ, ಭೀಮ, ಪಶುಪತಿ, ಈಶಾನ, ಮಹಾದೇವ ಎಂಬ ಈಶ್ವರನ ಅಷ್ಟಮೂರ್ತಿಸ್ವರೂಪ ವಿವರಣೆ. 12

**ಮೂರನೆಯ ಅಧ್ಯಾಯ—**

ಅರ್ಧನಾರೀಶ್ವರಪ್ರಾದುರ್ಭಾವ ವಿವರಣೆ. 17

**ನಾಲ್ಕನೆಯ ಅಧ್ಯಾಯ—**

ವಾರಾಹಕಲ್ಪದಲ್ಲಿ ಮೊದಲನೆಯ ದ್ವಾಪರಯುಗದಿಂದ ಒಂಭತ್ತನೇ ದ್ವಾಪರಯುಗದವರಿವಿಗೆ ಶ್ವೇತಮುನಿಯೇ ಮೊದಲಾದ ಶಂಭುವಿನ ಅವತಾರಗಳು ಋಷಭಾವತಾರವರ್ಣನೆ —ಭದ್ರಾಯುವಿನ ಚರಿತ್ರೆ. 24

**ಐದನೆಯ ಅಧ್ಯಾಯ—**

ಹತ್ತರಿಂದ ಇಪ್ಪತ್ತೆಂಟನೇ ದ್ವಾಪರಯುಗಗಳಲ್ಲಿ ನಡೆದ ಈಶ್ವರಾವತಾರಗಳ ವಿವರಣೆ. 34

**ಆರನೆಯ ಅಧ್ಯಾಯ—**

ಪುತ್ರಾರ್ಥವಾಗಿ ಶಿಲಾದಮುನಿಯ ತಪಸ್ಸು. ಶಿವನು ನಂದೀಶ್ವರ ರೂಪದಿಂದ ಶಿಲಾದಮುನಿಗೆ ಪುತ್ರನಾಗಿ ಅವತರಿಸುವುದು. ತನ್ನ ಪುತ್ರನಾದ ನಂದೀಶ್ವರನು ಅಲ್ಪಾಯುವೆಂದು ಶಿಲಾದಮುನಿಯು ದುಃಖಿಸುವುದು. ನಂದೀಶ್ವರನು ತಪಸ್ಸುಮಾಡಲು ವನಕ್ಕೆ ಹೋಗುವುದು. 47

ಪುಟಸಂಖ್ಯೆ

**ಏಳನೆಯ ಅಧ್ಯಾಯ**—

ತಪಃಪ್ರಭಾವದಿಂದ ನಂದೀಶ್ವರನಿಗೆ ಗಣಾಧಿಪತ್ವಪ್ರಾಪ್ತಿಯು—ನಂದೀಶ್ವರನ ವಿವಾಹ ಮತ್ತು ಶಿವಭಕ್ತಿರೂಪವಾದ ವರಪ್ರಾಪ್ತಿ. 62

**ಎಂಟನೆಯ ಅಧ್ಯಾಯ**—

ಚತುರ್ಮುಖ ಬ್ರಹ್ಮನು ತಾನೇ ಸರ್ವೇಶ್ವರನೆಂದೂ, ತನಗಿಂತ ಅಧಿಕರಿಲ್ಲನೆಂದೂ ಗರ್ವಪಡುತ್ತಿರಲು, ಆ ಗರ್ವಭಂಗಕ್ಕಾಗಿ ರುದ್ರನು ಕಾಲಭೈರವ ಎಂಬ ಹೆಸರಿಸಿಂದ ಅವತರಿಸುವುದು. 76

**ಒಂಭತ್ತನೆಯ ಅಧ್ಯಾಯ**—

ಬ್ರಹ್ಮನ ಶಿರಸ್ಸನ್ನು ಕತ್ತರಿಸಿದುದರಿಂದ ಭೈರವನಿಗೆ ಬ್ರಹ್ಮಹತ್ಯಾ ದೋಷವು ಪ್ರಾಪ್ತವಾಗಿ ಎಲ್ಲಿಗೆ ಹೋದರೂ ಅದು ಬಿಡದಿರಲು, ಕಡೆಗೆ ಕಾಶಿಯಲ್ಲಿ ಕಪಾಲಮೋಚನತೀರ್ಥದಲ್ಲಿ ಆ ದೋಷವು ಪರಿಹಾರವಾದುದು. ಕಪಾಲಮೋಚನತೀರ್ಥದ ಶ್ರೇಷ್ಠತ್ವ ಕಥನ. 92

**ಹತ್ತನೆಯ ಅಧ್ಯಾಯ**—

ನೃಸಿಂಹಚರಿತ್ರವರ್ಣನ— ನೃಸಿಂಹನ ಮಹಾಕೋಪಜ್ವಾಲೆಯಿಂದ ಮೂರು ಲೋಕಗಳೂ ಸಂತಪ್ತವಾಗಲು, ಅದರ ಪರಿಹಾರಕ್ಕಾಗಿ ದೇವತೆಗಳು ಈಶ್ವರನನ್ನು ಪ್ರಾರ್ಥಿಸುವುದು. ಈಶ್ವರನು ಆ ದುಃಖೋಪಶಮನದ ಪರಿಹಾರವನ್ನು ಸೂಚಿಸುವುದು. 108

**ಹನ್ನೊಂದನೆಯ ಅಧ್ಯಾಯ**—

ಮಹಾದೇವನ ಆಜ್ಞೆಯಿಂದ ವೀರಭದ್ರನು ನೃಸಿಂಹನ ಬಳಿಗೆ ಹೋಗಿ ಕೋಪಶಮನಾರ್ಥವಾಗಿ ಸೌಮ್ಯವಚನದಿಂದ ಎಷ್ಟು ಹೇಳಿದರೂ ನೃಸಿಂಹನು ಕೋಪವನ್ನು ಬಿಡದೆ ಗರ್ವದಿಂದ ಮಾತನಾಡುವುದು—ಶರಭಾವತಾರವು. 118

**ಹನ್ನೆರಡನೆಯ ಅಧ್ಯಾಯ**—

ಶರಭಾವತಾರವರ್ಣನೆ—ನೃಸಿಂಹನ ಶಿರಚ್ಛೇದನಮಾಡಿ ಅವನ ಚರ್ಮವನ್ನು ಧರಿಸಿದುದರಿಂದ ಶಿವನಿಗೆ ಕೃತ್ತಿವಾಸನೆಂದು ಹೆಸರು ಪ್ರಸಿದ್ಧವಾಗುವುದು. 133

ಪುಟಸಂಖ್ಯೆ

**ಹದಿಮೂರನೆಯ ಅಧ್ಯಾಯ**—

ಅತ್ಯುಗ್ರವಾಗಿ ತಪಸ್ಸುಮಾಡುತ್ತಿರುವ ವಿಶ್ವಾನರಮುನಿಯನ್ನು ಶಿವನು ಸಂತೈಸಿ ಅವನ ಪತ್ನಿಯಾದ ಶುಚಿಷ್ಮತಿಯಲ್ಲಿ ಗೃಹಪತಿ ಯೆಂಬ ಹೆಸರಿನಿಂದ ಅವನಿಗೆ ಪುತ್ರನಾಗುವನೆಂದು ಪ್ರತಿಜ್ಞೆ ಮಾಡುವುದು. ಗೃಹಪತ್ಯಾವತಾರವರ್ಣನೆ. 144

**ಹದಿನಾಲ್ಕನೆಯ ಅಧ್ಯಾಯ**—

ಗೃಹಪತ್ಯಾವತಾರಕಾಲದಲ್ಲಿ ವಿಷ್ಣ್ವಾದಿದೇವತೆಗಳ ಆಗಮನವು ಆ ಕಾಲದಲ್ಲಿ ಗೃಹಪತಿಬಾಲಕನು ಅಲ್ಪಾಯುವೆಂದು ನಾರದನು ಹೇಳುವುದು 161

**ಹದಿನೈದನೆಯ ಅಧ್ಯಾಯ**—

ಅಕಾಲಮೃತ್ಯುಪರಿಹಾರಕ್ಕಾಗಿ ಗೃಹಪತಿಯು ತಪಸ್ಸುಮಾಡುವುದು ಅವನನ್ನು ಪರೀಕ್ಷಿಸುವುದಕ್ಕಾಗಿ ಶಿವನು ಇಂದ್ರನ ವೇಷದಿಂದ ಬಂದು ಅವನ ದೃಢವಾದ ಶಿವಭಕ್ತಿಯನ್ನು ಅರಿತು ಅವನಿಗೆ ಅಗ್ನಿಪದವಿಯನ್ನು ಕೊಡುವುದು. 172

**ಹದಿನಾರನೆಯ ಅಧ್ಯಾಯ**—

ಸಮುದ್ರಮಥನಕಾಲದಲ್ಲಿ ದೇವತೆಗಳು ಅಮೃತಪಾನದಿಂದ ಮತ್ತರಾಗಿ ಅಹಂಕಾರಪಡುತ್ತಿರಲು, ಅವರ ಗರ್ವಾಪಹಾರಕ್ಕಾಗಿ ಶಿವನ ಯಜ್ಞೇಶ್ವರಾವತಾರವು 189

**ಹದಿನೇಳನೆಯ ಅಧ್ಯಾಯ**—

ಮಹಾಕಾಲಾದಿ ದಶಾವತಾರವರ್ಣನೆ 200

**ಹದಿನೆಂಟನೆಯ ಅಧ್ಯಾಯ**—

ದೇವತೆಗಳಿಗೆ ದೈತ್ಯರಿಂದ ಉಂಟಾದ ಉಪದ್ರವಪರಿಹಾರಕ್ಕಾಗಿ ಕಶ್ಯಪಮುನಿಯು ತಪಸ್ಸುಮಾಡುತ್ತಿರಲು, ಅದರಿಂದ ಸಂತುಷ್ಟನಾದ ಶಿವನು ದೇವರಕ್ಷಾರ್ಥವಾಗಿ ಕಪಾಲಾದಿ ಏಕಾದಶರುದ್ರಾವತಾರಮಾಡುವುದು. 206

**ಹತ್ತೊಂಭತ್ತನೆಯ ಅಧ್ಯಾಯ**—

ದುರ್ವಾಸಚರಿತೆಯು–ದುರ್ವಾಸಮುನಿಯು ಅಂಬರೀಷಾದಿಗಳನ್ನು ಪರೀಕ್ಷಿಸುವುದು. 215

ಪುಟಸಂಖ್ಯೆ

**ಇಪ್ಪತ್ತನೆಯ ಅಧ್ಯಾಯ—**

ಮೋಹಿನೀರೂಪದಿಂದ ಮುಗ್ಧನಾದ ಹರನ ವೀರ್ಯಸ್ಖಲನವಾಗಲು, ಅದನ್ನು ಸಪ್ತರ್ಷಿಗಳು ಗೌತಮಪುತ್ರಿಯಾದ ಅಂಜನಾದೇವಿಯ ಕಿವಿಯಲ್ಲಿ ಬಿಡುವುದು. ಅದರಿಂದ ಹನುಮಂತನ ಉತ್ಪತ್ತಿಯು. ಹನುಮಂತನು ಸೂರ್ಯನಿಂದ ಅಧ್ಯಯನ ಮಾಡಿ ಅವನ ಮಾತಿನಂತೆ ಸುಗ್ರೀವನ ಬಳಿಗೆ ಬಂದು ಸೀತಾನ್ವೇಷಣಾದಿ ರಾಮಕಾರ್ಯಾದಿಗಳನ್ನು ಮಾಡುವುದು. 233

**ಇಪ್ಪತ್ತೊಂದನೆಯ ಅಧ್ಯಾಯ—**

ಮನುಷ್ಯನಾಗೆಂದು ಭೈರವನಿಗೆ ಗಿರಿಜೆಯು ಶಾಪಕೊಡುವುದು. ಮಹೇಶಾವತಾರಕಥನವು. 243

**ಇಪ್ಪತ್ತೆರಡನೆಯ ಅಧ್ಯಾಯ—**

ಪಾತಾಳಲೋಕದಲ್ಲಿ ಸಮುದ್ರಪುತ್ರಿಯರಲ್ಲಿ ವಿಷ್ಣುವು ಕಾಮಾಸಕ್ತತೆಯಿಂದ ವಿಹರಿಸುತ್ತಿರಲು ವಿಷ್ಣುಪ್ರಬೋಧನಕ್ಕಾಗಿ ಶಿವನು ವೃಷಭರೂಪಧಾರಣೆಮಾಡುವುದು—ವೃಷಭಾವತಾರವರ್ಣನೆ. 248

**ಇಪ್ಪತ್ತಮೂರನೆಯ ಅಧ್ಯಾಯ—**

ವೃಷಭರೂಪಿಯಾದ ಶಿವನು ಯುದ್ಧದಲ್ಲಿ ವಿಷ್ಣುಪುತ್ರರನ್ನು ಸಂಹರಿಸಿ, ವಿಷ್ಣುವಿನೊಡನೆ ಯುದ್ಧಮಾಡುವುದು. ವಿಷ್ಣುವು ಪರಾಜಿತನಾಗಿ ಶಿವಾಜ್ಞೆಯಂತೆ ತನ್ನ ಲೋಕಕ್ಕೆ ಹಿಂತಿರುಗುವುದು. 261

**ಇಪ್ಪತ್ತನಾಲ್ಕನೆಯ ಅಧ್ಯಾಯ—**

ದಧೀಚಮುನಿಪತ್ನಿಯಲ್ಲಿ ಶಿವನು ಪಿಪ್ಪಲಾದಾವತಾರವನ್ನು ಮಾಡುವುದು. 271

**ಇಪ್ಪತ್ತೈದನೆಯ ಅಧ್ಯಾಯ—**

ಪಿಪ್ಪಲಾದಮುನಿಯು ಅನರಣ್ಯರಾಜಪುತ್ರಿಯನ್ನು ವಿವಾಹವಾಗುವುದು. ಪಿಪ್ಪಲಾದನನ್ನು ಸ್ಮರಣೆಮಾಡುವುದರಿಂದ ಶನಿಯಿಂದುಂಟಾದ ಪೀಡೆಯು ನಾಶವಾಗುವುದು. 287

**ಇಪ್ಪತ್ತಾರನೆಯ ಅಧ್ಯಾಯ—**

ಮಹಾನಂದೆಯೆಂಬ ವೇಶ್ಯೆಯ ಭಕ್ತಿಗೆ ಶಿವನು ಸಂತುಷ್ಟನಾಗುವುದು—ವೇಶ್ಯಾನಾಥಾವತಾರವರ್ಣನೆಯು. 294

ಪುಟಸಂಖ್ಯೆ

**ಇಪ್ಪತ್ತೇಳನೆಯ ಅಧ್ಯಾಯ**--
ದ್ವಿಜೇಶಾವತಾರವರ್ಣನೆ—ಭದ್ರಾಯುನೃಪತಿಯ ಭಕ್ತಿಪರೀಕ್ಷೆ—ಅವನಿಗೆ ಶಿವಲೋಕಪ್ರಾಪ್ತಿಯೇ ಮೊದಲಾದ ವರಪ್ರದಾನವು 311

**ಇಪ್ಪತ್ತೆಂಟನೆಯ ಅಧ್ಯಾಯ**—
ಆಹುಕನೆಂಬ ಭಿಲ್ಲನ ಮತ್ತೂ ಅವನ ಪತ್ನಿ ಆಹುಕೆಯ ಶಿವಭಕ್ತಿಯನ್ನು ಯತಿರೂಪದಿಂದ ಶಿವನು ಪರೀಕ್ಷಿಸುವುದು. ಅದರಿಂದ ಸಂತೋಷಗೊಂಡು ಮುಂದಿನ ಜನ್ಮದಲ್ಲಿ ಆಹುಕೆಯು ವಿದರ್ಭರಾಜನ ಪುತ್ರಿ ದಮಯಂತಿಯಾಗುವಂತೆಯೂ ಆಹುಕನು ನಲನಾಗುವನೆಂದೂ ಇವರಿಗೆ ತಾನು ಹಂಸರೂಪದಿಂದ ಪ್ರೀತಿಯನ್ನುಂಟುಮಾಡುವೆನೆಂದೂ ವರಪ್ರದಾನವು—ಹಂಸಾವತಾರ ಕಥನ 330

**ಇಪ್ಪತ್ತೊಂಭತ್ತನೆಯ ಅಧ್ಯಾಯ**—
ಕೃಷ್ಣದರ್ಶನಶಿವಾವತಾರವರ್ಣನೆ 341

**ಮೂವತ್ತನೆಯ ಅಧ್ಯಾಯ**--
ಅವಧೂತೇಶ್ವರಾವತಾರವರ್ಣನೆ—ಇಂದ್ರನನ್ನು ಸಂಹರಿಸಲುದ್ಯುಕ್ತನಾದ ಶಿವನನ್ನು ಬೃಹಸ್ಪತಿಯು ಪ್ರಾರ್ಥಿಸಿ, ಅವನಿಗೆ ಜೀವದಾನ ಮಾಡಬೇಕೆಂದು ಕೇಳಿಕೊಳ್ಳುವುದು ಇಂದ್ರನಿಗೆ ಜೀವದಾನಮಾಡಬೇಕೆಂದು ಬೃಹಸ್ಪತಿಯು ಪ್ರಾರ್ಥಿಸಿದುದರಿಂದ ಬೃಹಸ್ಪತಿಗೆ ಜೀವನೆಂದು ಹೆಸರಾಗುವುದು. 355

**ಮೂವತ್ತೊಂದನೆಯ ಅಧ್ಯಾಯ**—
ಶಿವನ ಭಿಕ್ಷುವರ್ಯಾವತಾರವರ್ಣನೆ. 366

**ಮೂವತ್ತೆರಡನೆಯ ಅಧ್ಯಾಯ**—
ಕ್ಷೀರಾರ್ಥವಾಗಿ ಉಪಮನ್ಯು ಬಾಲಕನು ತಪಸ್ಸುಮಾಡುತ್ತಿರಲು ಶಿವನು ಇಂದ್ರನ ರೂಪದಿಂದ ಬಂದು ಅವನನ್ನು ಪರೀಕ್ಷಿಸುವುದು. ಅವನ ಶಿವಭಕ್ತಿಗೆ ಮೆಚ್ಚಿ ಕ್ಷೀರೋದಧಿಪ್ರಾಪ್ತಿಯೇ ಮೊದಲಾದ ಅನೇಕ ವರಗಳನ್ನು ಕೊಟ್ಟು ಗಣಪದವಿಯನ್ನು ಅನುಗ್ರಹಿಸುವುದು. 385

**ಮೂವತ್ತಮೂರನೆಯ ಅಧ್ಯಾಯ**—
ಬ್ರಹ್ಮಚಾರೀ ಶಿವಾವತಾರವರ್ಣನೆ. 404

ಪುಟಸಂಖ್ಯೆ

**ಮೂವತ್ತನಾಲ್ಕನೆಯ ಅಧ್ಯಾಯ—**

ಸುನರ್ತಕನಟಾಹ್ವಶಿವಾವತಾರವರ್ಣನ. 420

**ಮೂವತ್ತೈದನೆಯ ಅಧ್ಯಾಯ—**

ಸಾಧುದ್ವಿಜಶಿವಾವತಾರವರ್ಣನೆ 429

**ಮೂವತ್ತಾರನೆಯ ಅಧ್ಯಾಯ—**

ಅಶ್ವತ್ಥಾಮಶಿವಾವತಾರವರ್ಣನೆ. 439

**ಮೂವತ್ತೇಳನೆಯ ಅಧ್ಯಾಯ—**

ದ್ವೈತವನದಲ್ಲಿರುವ ಪಾಂಡವರಿಗೆ ಕೆಡಕನ್ನು ಮಾಡಲು ದುರ್ಯೋಧನನು ಅವರ ಬಳಿಗೆ ದುರ್ವಾಸಮುನಿಯನ್ನು ಕಳುಹಿಸುವುದು. ಕೃಷ್ಣನ ಕೃಪೆಯಿಂದ ಪಾಂಡವರ ಕಷ್ಟ ನಿವಾರಣೆ—ವ್ಯಾಸಮುನಿಯ ಆಗಮನ—ಪಾಶುಪತಾಸ್ತ್ರಪ್ರಾಪ್ತಿಗಾಗಿ ಇಂದ್ರಕೀಲಪರ್ವತಕ್ಕೆ ಅರ್ಜುನನ ಪ್ರಯಾಣ. 450

**ಮೂವತ್ತೆಂಟನೆಯ ಅಧ್ಯಾಯ—**

ಕಿರಾತಾವತಾರವರ್ಣನೆ. 466

**ಮೂವತ್ತೊಂಭತ್ತನೆಯ ಅಧ್ಯಾಯ—**

ಭಿಲ್ಲವೇಷಧಾರಿಯಾದ ಶಿವನಿಂದ ಮೂಕದೈತ್ಯವಧವು. 482

**ನಲವತ್ತನೆಯ ಅಧ್ಯಾಯ—**

ಭಿಲ್ಲಾರ್ಜುನವಿವಾದವು. 496

**ನಲವತ್ತೊಂದನೆಯ ಅಧ್ಯಾಯ—**

ಭಿಲ್ಲಾರ್ಜುನಯುದ್ಧವರ್ಣನೆ. ಕಿರಾತರೂಪಧಾರಿಯಾದ ಶಿವನು ಅರ್ಜುನನ ಶಿವಭಕ್ತಿಗೆ ಮೆಚ್ಚಿ ಅವನಿಗೆ ವರಪ್ರದಾನಮಾಡುವುದು. ಅರ್ಜುನನು ತಪಸ್ಸಿನಿಂದ ಹಿಂತಿರುಗುವುದು—ಕೃಷ್ಣ ದರ್ಶನ. 507

**ನಲವತ್ತೆರಡನೆಯ ಅಧ್ಯಾಯ—**

ಸನತ್ಕುಮಾರನಂದೀಶ್ವರಸಂವಾದ—ದ್ವಾದಶಜ್ಯೋತಿರ್ಲಿಂಗ ವರ್ಣನೆ. 522



|| ಶ್ರೀಃ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಪ್ರಥಮೋಽಧ್ಯಾಯಃ

ವಂದೇ ಮಹಾನಂದಮನಂತಲೀಲಂ
ಮಹೇಶ್ವರಂ ಸರ್ವವಿಭುಂ ಮಹಾಂತಂ ।
ಗೌರೀಪ್ರಿಯಂ ಕಾರ್ತಿಕವಿಘ್ನರಾಜ-
ಸಮುದ್ಭವಂ ಶಂಕರಮಾದಿದೇವಂ ॥

॥ ಶೌನಕ ಉವಾಚ ॥

**ವ್ಯಾಸಶಿಷ್ಯ ಮಹಾಭಾಗ ಸೂತ ಜ್ಞಾನದಯಾನಿಧೇ ।**
**ವದ ಶಂಭ್ವವತಾರಾಂಶ್ಚ ಯೈರಕಾರ್ಷೀತ್ಸತಾಂ ಶಿವಂ** ॥ ೧ ॥

---

**ಮೊದಲನೆಯ ಅಧ್ಯಾಯವು.**

ಅತಿಶಯವಾದ ಆನಂದವನ್ನೀಯುವವನೂ, ನಾನಾವಿಧವಾದ ಲೀಲೆಗಳನ್ನು ತೋರುವವನೂ, ಮಹೇಶ್ವರನೂ ಸರ್ವತ್ರವ್ಯಾಪಿಸಿರುವವನೂ, ಮಹಾತ್ಮನೂ. ಗೌರೀ ದೇವಿಯ ವಲ್ಲಭನೂ, ಷಣ್ಮುಖಗಜಾನನರ ಜನಕನೂ, ದೇವತೆಗಳಿಗೆಲ್ಲಾ ಆದಿ ಪುರುಷನೂ ಆದ ಶ್ರೀ ಶಂಕರನನ್ನು ನಮಿಸುವೆನು.

೧. ಶೌನಕಮಹರ್ಷಿಯು- **ವ್ಯಾಸಶಿಷ್ಯನೂ, ಜ್ಞಾನನಿಧಿಯೂ, ದಯಾ ಸಾಗರನೂ ಆದ ಸೂತಪುರಾಣಿಕನನ್ನು ಕುರಿತು ಹೇ ಮಹಾಭಾಗ, ಯಾವ ಅವತಾರ ಗಳಿಂದ ಸತ್ಪುರುಷರಿಗೆ ಮಂಗಳವುಂಟಾಯಿತೋ ಆ ಶಿವನ ಅವತಾರಗಳನ್ನು ವಿವರಿಸು ಎಂದು ಬೆಸಗೊಂಡನು.**

॥ ಸೂತ ಉವಾಚ ॥

ಮುನೇ ಶೌನಕ ಸದ್ಭಕ್ತ್ಯಾ ದತ್ತಚಿತ್ತೋ ಜಿತೇಂದ್ರಿಯಃ ।
ಅವತಾರಾಞ್ಛಿವಸ್ಯಾಹಂ ವಚ್ಮಿ ತೇ ಮುನಯೇ ಶೃಣು ॥ ೨ ॥

ಏತತ್ಪೃಷ್ಟಃ ಪುರಾ ನಂದೀ ಶಿವಮೂರ್ತಿಸ್ಸತಾಂ ಗತಿಃ ।
ಸನತ್ಕುಮಾರೇಣ ಮುನೇ ತಮುವಾಚ ಶಿವಂ ಸ್ಮರನ್ ॥ ೩ ॥

॥ ನಂದೀಶ್ವರ ಉವಾಚ ॥

ಅಸಂಖ್ಯಾತಾ ಹಿ ಕಲ್ಪೇಷು ವಿಭೋಃ ಸರ್ವೇಶ್ವರಸ್ಯ ವೈ ।
ಅವತಾರಾಸ್ತಥಾಪೀಹ ವಚ್ಮ್ಯಹಂ ತಾನ್ಯಥಾಮತಿ ॥ ೪ ॥

ಏಕೋನವಿಂಶಕಃ ಕಲ್ಪೋ ವಿಜ್ಞೇಯಃ ಶ್ವೇತಲೋಹಿತಃ ।
ಸದ್ಯೋಜಾತಾವತಾರಸ್ತು ಪ್ರಥಮಃ ಪರಿಕೀರ್ತಿತಃ ॥ ೫ ॥

ತಸ್ಮಿಂಸ್ತತ್ಪರಮಂ ಬ್ರಹ್ಮ ಧ್ಯಾಯತೋ ಬ್ರಹ್ಮಣಸ್ತಥಾ ।
ಉತ್ಪನ್ನಸ್ತು ಶಿಖಾಯುಕ್ತಃ ಕುಮಾರಃ ಶ್ವೇತಲೋಹಿತಃ ॥ ೬ ॥

---

೨. ಆಗ ಸೂತಪುರಾಣಿಕನು ಶೌನಕಮಹರ್ಷಿಯನ್ನು ಕುರಿತು ಹೇಳತೊಡಗಿದನು :—ಎಲೈ ಮುನಿಯೇ, ಒಳ್ಳೆಯ ಭಕ್ತಿಯಿಂದ ಮನಸ್ಸಿಟ್ಟು ಜಿತೇಂದ್ರಿಯನಾಗಿ ಕೇಳು. ನಿನಗೆ ಶಿವನ ಅವತಾರಗಳೆಲ್ಲವನ್ನೂ ವರ್ಣಿಸುವೆನು.

೩. ಓ ಮುನೀಂದ್ರ, ಹಿಂದೆ ಸನತ್ಕುಮಾರಮುನಿಯು ಇದೇರೀತಿ ಪ್ರಶ್ನಿಸಿದಾಗ ಸಾಕ್ಷಾತ್ ಶಿವಸ್ವರೂಪನೂ ಸತ್ಪುರುಷರಿಗೆ ಸದ್ಗತಿಯನ್ನು ಕೊಡುವವನೂ ಆದ ನಂದೀಶ್ವರನು ಶಿವನನ್ನು ಮನಸ್ಸಿನಲ್ಲಿ ಧ್ಯಾನಿಸಿ ಈರೀತಿ ಹೇಳಿದನು.

೪. ಸರ್ವವ್ಯಾಪಿಯಾದ ಆ ಶಿವನ ಅವತಾರಗಳು ಪ್ರತಿಯೊಂದು ಕಲ್ಪದಲ್ಲಿಯೂ ಅಸಂಖ್ಯಾತವಾಗಿ ಇರುವುವು. ಹಾಗಿದ್ದರೂ ಸಹ ನನಗೆ ತಿಳಿದಮಟ್ಟಿಗೆ ಅವುಗಳನ್ನು ತಿಳಿಸುವೆನು.

## (೧) ಸದ್ಯೋಜಾತಾವತಾರವು

೫. ಹತ್ತೊಂಭತ್ತನೇ ಕಲ್ಪವನ್ನು ಶ್ವೇತಲೋಹಿತಕಲ್ಪವೆನ್ನುವರು. ಆ ಕಲ್ಪದಲ್ಲಿ ಮೊಟ್ಟಮೊದಲನೆಯದಾಗಿ ಸದ್ಯೋಜಾತಾವತಾರವು ನಡೆಯಿತು.

೬. ಆ ಕಲ್ಪದಲ್ಲಿ ಪರಬ್ರಹ್ಮವಸ್ತುವನ್ನು ಧ್ಯಾನಮಾಡುತ್ತಿದ್ದ ಚತುರ್ಮುಖನಿಂದ ಬಿಳುಪು, ಕೆಂಪು, ಸಂಮಿಶ್ರವಾದ ಬಣ್ಣವುಳ್ಳ ಶಿಖಾಯುಕ್ತನಾದ ಪುರುಷನೋರ್ವನು ಉದಯಿಸಿದನು.

ತಂ ದೃಷ್ಟ್ವಾ ಪುರುಷಂ ಬ್ರಹ್ಮಾ ಬ್ರಹ್ಮರೂಪಿಣಮೀಶ್ವರಂ ।
ಜ್ಞಾತ್ವಾ ಧ್ಯಾತ್ವಾ ಸ ಹೃದಯೇ ವವಂದೇ ಪ್ರಯತಾಂಜಲಿಃ ॥ ೭ ॥

ಸದ್ಯೋಜಾತಂ ಶಿವಂ ಬುದ್ಧ್ವಾ ಜಹರ್ಷ ಭುವನೇಶ್ವರಃ ।
ಮುಹುರ್ಮುಹುಶ್ಚ ಸದ್ಬುದ್ಧ್ಯಾ ಪರಂ ತಂ ಸಮಚಿಂತಯತ್ ॥ ೮ ॥

ತತೋಽಸ್ಯ ಧ್ಯಾತಃ ಶ್ವೇತಾಃ ಪ್ರಾದುರ್ಭೂತಾ ಯಶಸ್ವಿನಃ ।
ಕುಮಾರಾಃ ಪರವಿಜ್ಞಾನಪರಬ್ರಹ್ಮಸ್ವರೂಪಿಣಃ ॥ ೯ ॥

ಸುನಂದೋ ನಂದನಶ್ಚೈವ ವಿಶ್ವನಂದೋಪನಂದನೌ ।
ಶಿಷ್ಯಾಸ್ತಸ್ಯ ಮಹಾತ್ಮಾನೋ ಯೈಸ್ತದ್ಬ್ರಹ್ಮ ಸಮಾವೃತಂ ॥ ೧೦ ॥

ಸದ್ಯೋಜಾತಶ್ಚ ವೈ ಶಂಭುರ್ದದೌ ಜ್ಞಾನಂ ಚ ವೇಧಸೇ ।
ಸರ್ಗಶಕ್ತಿಮಪಿ ಪ್ರೀತ್ಯಾ ಪ್ರಸನ್ನಃ ಪರಮೇಶ್ವರಃ ॥ ೧೧ ॥

ಇತಿ ಸದ್ಯೋಜಾತಾವತಾರಃ

---

೭ ಆ ಪುರುಷನನ್ನು ಕಂಡೊಡನೆ ಬ್ರಹ್ಮನು ಈತನೇ ಪರಮಪುರುಷನಾದ ಈಶ್ವರನೆಂದು ತಿಳಿದು ಮನಸ್ಸಿನಲ್ಲಿ ಧ್ಯಾನಿಸಿ ಕೈಮುಗಿದುಕೊಂಡು ನಮಸ್ಕಾರ ಮಾಡಿದನು.

೮. ಪ್ರಪಂಚವನ್ನು ಸೃಷ್ಟಿಸಿದ ಆ ಬ್ರಹ್ಮನು ಈತನೇ ಸದ್ಯೋಜಾತನಾದ ಶಿವನೆಂದು ತಿಳಿದು ಹರ್ಷವನ್ನು ತಾಳಿದನು. ಶುದ್ಧವಾದ ಜ್ಞಾನದಿಂದ ಪುನಪುನಃ ಆ ಪರಮಪುರುಷನನ್ನು ಧ್ಯಾನಿಸತೊಡಗಿದನು

೯. ಈರೀತಿ ಆತನು ಧ್ಯಾನಿಸುತ್ತಿರಲು ಅತಿಶಯವಾದ ಕೀರ್ತಿಶಾಲಿಗಳೂ ಮಹಾಜ್ಞಾನಿಗಳೂ ಪರಬ್ರಹ್ಮಸ್ವರೂಪರೂ ಆದ ಬಿಳಿಯಬಣ್ಣದ ನಾಲ್ಕುಮಂದಿ ಕುಮಾರರು ಅವತರಿಸಿದರು

೧೦. ಸುನಂದ, ನಂದನ, ವಿಶ್ವನಂದ ಉಪನಂದನ ಎಂಬುದಾಗಿ ಹೆಸರುಳ್ಳ ಆ ನಾಲ್ಕುಮಂದಿ ಮಹಾತ್ಮರು ಪರಬ್ರಹ್ಮಸ್ವರೂಪನಾದ ಸದ್ಯೋಜಾತಮೂರ್ತಿಗೆ ಶಿಷ್ಯರಾಗಿ ಸುತ್ತಲೂ ಸೇವಿಸುತ್ತಿದ್ದರು.

೧೧ ಸದ್ಯೋಜಾತಸ್ವರೂಪನೂ ಪರಮಪುರುಷನೂ ಆದ ಆ ಶಿವನು ಪ್ರಸನ್ನನಾಗಿ ಬ್ರಹ್ಮನಿಗೆ ದಿವ್ಯಜ್ಞಾನವನ್ನೂ ಸೃಷ್ಟಿಶಕ್ತಿಯನ್ನೂ ಕರುಣಿಸಿದನು. ಇದು ಸದ್ಯೋಜಾತಾವತಾರವು.

ತತೋ ವಿಂಶತಿಮಃ ಕಲ್ಪೋ ರಕ್ತೋ ನಾಮ ಪ್ರಕೀರ್ತಿತಃ ।
ಬ್ರಹ್ಮಾ ಯತ್ರ ಮಹಾತೇಜಾ ರಕ್ತವರ್ಣಮಧಾರಯತ್ ॥ ೧೨ ॥

ಧ್ಯಾಯತಃ ಪುತ್ರಕಾಮಸ್ಯ ಪ್ರಾದುರ್ಭೂತೋ ವಿಧೇಸ್ಸುತಃ ।
ರಕ್ತಮಾಲ್ಯಾಂಬರಧರೋ ರಕ್ತಾಕ್ಷೋ ರಕ್ತಭೂಷಣಃ ॥ ೧೩ ॥

ಸ ತಂ ದೃಷ್ಟ್ವಾ ಮಹಾತ್ಮಾನಂ ಕುಮಾರಂ ಧ್ಯಾನಮಾಶ್ರಿತಃ ।
ವಾಮದೇವಂ ಶಿವಂ ಜ್ಞಾತ್ವಾ ಪ್ರಣನಾಮ ಕೃತಾಂಜಲಿಃ ॥ ೧೪ ॥

ತತಸ್ತಸ್ಯ ಸುತಾ ಹ್ಯಾಸಂಶ್ಚತ್ವಾರೋ ರಕ್ತವಾಸಸಃ ।
ವಿರಜಾಶ್ಚ ವಿವಾಹಶ್ಚ ವಿಶೋಕೋ ವಿಶ್ವಭಾವನಃ ॥ ೧೫ ॥

ವಾಮದೇವಃ ಸ ವೈ ಶಂಭುರ್ದದೌ ಜ್ಞಾನಂ ಚ ವೇಧಸೇ ।
ಸರ್ಗಶಕ್ತಿಮಪಿ ಪ್ರೀತ್ಯಾ ಪ್ರಸನ್ನಃ ಪರಮೇಶ್ವರಃ ॥ ೧೬ ॥

ಇತಿ ವಾಮದೇವಾವತಾರಃ

---

## (೨) ವಾಮದೇವಾವತಾರವು

೧೨. ಅದಾದನಂತರ ಬಂದ ಇಪ್ಪತ್ತನೆಯ ಕಲ್ಪಕ್ಕೆ ರಕ್ತವೆಂಬುದಾಗಿ ಹೆಸರು. ಆ ರಕ್ತವೆಂಬ ಕಲ್ಪದಲ್ಲಿ ಮಹಾತೇಜಸ್ವಿಯಾದ ಬ್ರಹ್ಮನು ಕೆಂಪುಬಣ್ಣವನ್ನು ತಾಳಿದನು.

೧೩. ಪುತ್ರಾಪೇಕ್ಷೆಯಿಂದ ಧ್ಯಾನಮಾಡುತ್ತಿರುವ ಆ ಬ್ರಹ್ಮನಿಗೆ ಕೆಂಪು ಬಣ್ಣದ ಹಾರಗಳನ್ನೂ ವಸ್ತ್ರಭೂಷಣಗಳನ್ನೂ ಧರಿಸಿದ ಕೆಂಪುಕಣ್ಣಿನ ಕುಮಾರನು ಉದಯಿಸಿದನು.

೧೪. ಮಹಾತ್ಮನಾದ ಆ ಕುಮಾರನನ್ನು ಕಂಡು ಬ್ರಹ್ಮನು ಧ್ಯಾನಮಗ್ನನಾಗಿ ಈತನೇ ವಾಮದೇವಮೂರ್ತಿಯಾದ ಶಿವನೆಂಬುದಾಗಿ ಅರಿತು ಬದ್ಧಾಂಜಲಿಪುಟನಾಗಿ ನಮಸ್ಕರಿಸಿದನು.

೧೫. ಆಗ ಆತನಿಗೆ ರಕ್ತವಸ್ತ್ರಧಾರಿಗಳಾದ (ಕೆಂಪುಬಟ್ಟೆಯನ್ನುಟ್ಟಿರುವ) ವಿರಜಸ್ಸು, ವಿವಾಹ, ವಿಶೋಕ, ವಿಶ್ವಭಾವನರೆಂಬ ನಾಲ್ಕುಮಂದಿ ಮಕ್ಕಳು ಉದಯಿಸಿದರು.

೧೬. ವಾಮದೇವಸ್ವರೂಪನಾದ ಆ ಶಿವನು ಪ್ರಸನ್ನನಾಗಿ ಬ್ರಹ್ಮನಿಗೆ ಜ್ಞಾನವನ್ನೂ ಸೃಷ್ಟಿ ಶಕ್ತಿಯನ್ನೂ ಕರುಣಿಸಿದನು. ಇದು ವಾಮದೇವಾವತಾರವು.

ಏಕವಿಂಶತಿಮಃ ಕಲ್ಪಃ ಪೀತವಾಸಾ ಇತಿ ಸ್ಮೃತಃ ।
ಬ್ರಹ್ಮಾ ಯತ್ರ ಮಹಾಭಾಗಃ ಪೀತವಾಸಾ ಬಭೂವ ಹಿ ॥ ೧೭ ॥

ಧ್ಯಾಯತಃ ಪುತ್ರಕಾಮಸ್ಯ ವಿಧೇರ್ಜಾತಃ ಕುಮಾರಕಃ ।
ಪೀತವಸ್ತ್ರಾದಿಕಪ್ರೌಢೋ ಮಹಾತೇಜಾ ಮಹಾಭುಜಃ ॥ ೧೮ ॥

ತಂ ದೃಷ್ಟ್ವಾ ಧ್ಯಾನಸಂಯುಕ್ತಂ ಜ್ಞಾತ್ವಾ ತತ್ಪುರುಷಂ ಶಿವಂ ।
ಪ್ರಣನಾಮ ತತೋ ಬುದ್ಧ್ಯಾ ಗಾಯತ್ರೀಂ ಶಾಂಕರೀಂ ವಿಧಿಃ ॥ ೧೯ ॥

ಜಪಿತ್ವಾ ತು ಮಹಾದೇವೀಂ ಸರ್ವಲೋಕನಮಸ್ಕೃತಾಂ ।
ಪ್ರಸನ್ನಸ್ತು ಮಹಾದೇವೋ ಧ್ಯಾನಯುಕ್ತೇನ ಚೇತಸಾ ॥ ೨೦ ॥

ತತೋಽಸ್ಯ ಪಾರ್ಶ್ವತೋ ದಿವ್ಯಾಃ ಪ್ರಾದುರ್ಭೂತಾಃ ಕುಮಾರಕಾಃ ।
ಪೀತವಸ್ತ್ರಾ ಹಿ ಸಕಲಾ ಯೋಗಮಾರ್ಗಪ್ರವರ್ತಕಾಃ ॥ ೨೧ ॥

ಇತಿ ತತ್ಪುರುಷಾವತಾರಃ

---

## (೩) ತತ್ಪುರುಷಾವತಾರವು

೧೭. ಇಪ್ಪತ್ತೊಂದನೆಯ ಕಲ್ಪಕ್ಕೆ ಪೀತವಾಸಕಲ್ಪವೆಂದು ಹೆಸರು. ಆಗ ಮಹಾತ್ಮನಾದ ಬ್ರಹ್ಮನು ಹಳದಿಯ ಬಟ್ಟೆಗಳನ್ನು ಧರಿಸಿದ್ದನು.

೧೮. ಆ ಬ್ರಹ್ಮನು ಪುತ್ರಕಾಮನೆಯಿಂದ ಧ್ಯಾನನಿಷ್ಠನಾಗಿರಲು ಕುಮಾರನೋರ್ವನು ಉದಯಿಸಿದನು. ಆತನ ಉಡಿಗೆತೊಡಿಗೆಗಳೆಲ್ಲವೂ ಪೀತವರ್ಣದವು. ಆ ಕುಮಾರನು ಪ್ರೌಢನಾಗಿದ್ದನು. ಅಲ್ಲದೆ ಮಹಾತೇಜಸ್ವಿಯೂ ದೀರ್ಘಬಾಹುವೂ ಆಗಿದ್ದನು.

೧೯. ಆ ಕುಮಾರನನ್ನು ಕಂಡು ಬ್ರಹ್ಮನು ಕೆಲಹೊತ್ತು ಧ್ಯಾನಾಸಕ್ತನಾಗಿದ್ದು ಈತನೇ ತತ್ಪುರುಷಮೂರ್ತಿಯಾದ ಶಿವನೆಂಬುದಾಗಿ ಅರಿತು, ಎಲ್ಲರಿಗೂ ಪರಮಪೂಜ್ಯವೂ ಮಾಹಾತ್ಮ್ಯವುಳ್ಳದ್ದೂ ದಿವ್ಯವೂ ಆದ ಶಿವಗಾಯತ್ರಿಯನ್ನು ಜಪಿಸುತ್ತಾ ನಮಸ್ಕಾರಮಾಡಿದನು.

೨೦-೨೧. ಆ ಬ್ರಹ್ಮನ ಧ್ಯಾನನಿರತವಾದ ಮನಸ್ಸಿಗೆ ಮೆಚ್ಚಿ ಮಹಾದೇವನು ಪ್ರಸನ್ನನಾದನು. ಆಗ ಆತನ ಪಕ್ಕದಿಂದ ಹಳದಿವಸ್ತ್ರಗಳನ್ನು ಧರಿಸಿರುವ ಕುಮಾರರು ಉದಿಸಿದರು. ಅವರು ಯೋಗಮಾರ್ಗವನ್ನು ಜಗತ್ತಿನಲ್ಲಿ ಹರಡಿದರು.

ತತಸ್ತಸ್ಮಿನ್ಗತೇ ಕಲ್ಪೇ ಪೀತವರ್ಣೇ ಸ್ವಯಂಭುವಃ ।
ಪುನರನ್ಯಃ ಪ್ರವೃತ್ತಸ್ತು ಕಲ್ಪೋ ನಾಮ್ನಾ ಶಿವಸ್ತು ಸಃ ॥ ೨೨ ॥

ಏಕಾರ್ಣವೇ ಸಂವ್ಯತೀತೇ ದಿವ್ಯವರ್ಷಸಹಸ್ರಕೇ ।
ಸ್ರಷ್ಟುಕಾಮಃ ಪ್ರಜಾ ಬ್ರಹ್ಮಾ ಚಿಂತಯಾಮಾಸ ದುಃಖಿತಃ ॥ ೨೩ ॥

ತತೋಽಪಶ್ಯನ್ಮಹಾತೇಜಾಃ ಪ್ರಾದುರ್ಭೂತಂ ಕುಮಾರಕಂ ।
ಕೃಷ್ಣವರ್ಣಂ ಮಹಾವೀರ್ಯಂ ದೀಪ್ಯಮಾನಂ ಸ್ವತೇಜಸಾ ॥ ೨೪ ॥

ಧೃತಕೃಷ್ಣಾಂಬರೋಷ್ಣೀಷಂ ಕೃಷ್ಣಯಜ್ಞೋಪವೀತಿನಂ ।
ಕೃಷ್ಣೇನ ಮೌಲಿನಾ ಯುಕ್ತಂ ಕೃಷ್ಣಸ್ನಾನಾನುಲೇಪನಂ ॥ ೨೫ ॥

ಸ ತಂ ದೃಷ್ಟ್ವಾ ಮಹಾತ್ಮಾನಮಘೋರಂ ಘೋರವಿಕ್ರಮಂ ।
ವವಂದೇ ದೇವದೇವೇಶಮದ್ಭುತಂ ಕೃಷ್ಣಪಿಂಗಲಂ ॥ ೨೬ ॥

---

## (೪) ಅಘೋರಾವತಾರವು.

೨೨. ಆ ಪೀತವಾಸಕಲ್ಪವು ಕಳೆದಬಳಿಕ ಶಿವವೆಂಬ ಹೆಸರಿನ ಮತ್ತೊಂದು ಕಲ್ಪವು ಮೊದಲಾಯಿತು.

೨೩. ಆಗ ಎಲ್ಲೆಲ್ಲೂ ನೀರೇ ತುಂಬಿಹೋಗಿದ್ದಿತು. ದೇವಮಾನದ ಒಂದು ಸಾವಿರವರ್ಷಗಳೂ ಕಳೆದುಹೋದುವು. ಆಗ ಪ್ರಜೆಗಳನ್ನು ಸೃಷ್ಟಿಮಾಡಬೇಕೆಂದು ಬ್ರಹ್ಮನಿಗೆ ಇಚ್ಛೆಯುಂಟಾಗಲು, ಆತನು ದುಃಖಿತನಾಗಿ ಚಿಂತಿಸತೊಡಗಿದನು.

೨೪. ಆಗ ಅತಿ ತೇಜಸ್ವಿಯಾದ ಆ ಬ್ರಹ್ಮನು ಕಪ್ಪುಬಣ್ಣದ ಕುಮಾರನೋರ್ವನು ಉದಯಿಸಿದುದನ್ನು ಕಂಡನು. ಆ ಕುಮಾರನು ಮಹಾಬಲಾಢ್ಯನು. ತನ್ನ ತೇಜಸ್ಸಿನಿಂದಲೇ ಬೆಳಗುತ್ತಿದ್ದನು.

೨೫-೨೬. ಆತನು ಕರಿಯ ಉಡುಪುಗಳನ್ನೂ ಕರಿಯ ಪಾಗನ್ನೂ ಧರಿಸಿದ್ದನು. ಆತನ ಯಜ್ಞೋಪವೀತವೂ ಕಪ್ಪು. ಆತನ ಕಿರೀಟವೂ ಕಪ್ಪು. ಆತನು ಮೈಗೆ ತೊಡೆದಿದ್ದ ಗಂಧವೂ ಕಪ್ಪೇ. ಇಂತಹ ಮಹಾತ್ಮನೂ, ಸೌಮ್ಯಾಕಾರನೂ, ಅದ್ಭುತವಾದ ಪರಾಕ್ರಮವುಳ್ಳವನೂ, ದೇವತೆಗಳಿಗೆಲ್ಲಾ ಒಡೆಯನೂ, ಕಪ್ಪು ಹಳದಿ ಬೆರೆತ ಬಣ್ಣವುಳ್ಳವನೂ ಆದ ಆ ಪುರುಷನನ್ನು ಕಂಡು ಬ್ರಹ್ಮನು ನಮಸ್ಕರಿಸಿದನು.

ಅಘೋರಂ ತು ತತೋ ಬ್ರಹ್ಮಾ ಬ್ರಹ್ಮರೂಪಂ ವ್ಯಚಿಂತಯತ್ ।
ತುಷ್ಟಾವ ವಾಗ್ಭಿರಿಷ್ಟಾಭಿರ್ಭಕ್ತವತ್ಸಲಮವ್ಯಯಂ ॥ ೨೭ ॥

ಅಥಾಸ್ಯ ಪಾರ್ಶ್ವತಃ ಕೃಷ್ಣಾಃ ಕೃಷ್ಣಸ್ನಾನಾನುಲೇಪನಾಃ ।
ಚಾತ್ವಾರಸ್ತು ಮಹಾತ್ಮಾನಃ ಸಂಬಭೂವುಃ ಕುಮಾರಕಾಃ. ॥ ೨೮ ॥

ಕೃಷ್ಣಃ ಕೃಷ್ಣಶಿಖಶ್ಚೈವ ಕೃಷ್ಣಾಸ್ಯಃ ಕೃಷ್ಣಕಂಠಧೃಕ್ ।
ಇತಿ ತೇಽವ್ಯಕ್ತನಾಮಾನಃ ಶಿವರೂಪಾಃ ಸುತೇಜಸಃ ॥ ೨೯ ॥

ಏವಂಭೂತಾ ಮಹಾತ್ಮಾನೋ ಬ್ರಹ್ಮಣಃ ಸೃಷ್ಟಿಹೇತವೇ ।
ಯೋಗಂ ಪ್ರವರ್ತಯಾಮಾಸುರ್ಘೋರಾಖ್ಯಂ ಮಹದದ್ಭುತಂ ॥ ೩೦ ॥

ಇತ್ಯಘೋರಾವತಾರಶ್ಚತುರ್ಥಃ

ಅಥಾನ್ಯೋ ಬ್ರಹ್ಮಣಃ ಕಲ್ಪಃ ಪ್ರಾವರ್ತತ ಮುನೀಶ್ವರಾಃ ।
ವಿಶ್ವರೂಪ ಇತಿ ಖ್ಯಾತೋ ನಾಮತಃ ಪರಮಾದ್ಭುತಃ ॥ ೩೧ ॥

---

೨೭. ಬಳಿಕ ಪರಬ್ರಹ್ಮವಸ್ತುವಿನ ಅಘೋರವೆಂಬ ಮೂರ್ತಿಯು ಇದೇ ಎಂಬುದಾಗಿ ಧ್ಯಾನಿಸಿ ಭಕ್ತವತ್ಸಲನೂ ಅವಿನಾಶಿಯೂ ಆದ ಆ ಪರಮಪುರುಷನನ್ನು ಮಧುರವಾದ ಮಾತುಗಳಿಂದ ಸ್ತೋತ್ರಮಾಡತೊಡಗಿದನು

೨೮. ಬಳಿಕ ಈತನ ಪಕ್ಕದಿಂದ ಕಪ್ಪುಗಂಧವನ್ನು ಮೈಗೆ ಹಚ್ಚಿಕೊಂಡಿರುವ ಕಪ್ಪುಬಣ್ಣದ ಮಹಾತ್ಮರಾದ ನಾಲ್ಕುಮಂದಿ ಕುಮಾರರು ಆವಿರ್ಭವಿಸಿದರು.

೨೯. ಕೃಷ್ಣ, ಕೃಷ್ಣಶಿಖ, ಕೃಷ್ಣಾಸ್ಯ, ಕೃಷ್ಣಕಂಠಧೃಕ್ ಎಂಬುದಾಗಿ ಅವ್ಯಕ್ತವಾದ ಹೆಸರುಳ್ಳ ಆ ನಾಲ್ಕುಮಂದಿ ಕುಮಾರರೂ ಮಹಾತೇಜಶ್ಶಾಲಿಗಳಾಗಿ ಅಘೋರಮೂರ್ತಿಯಾದ ಶಿವನಂತೆಯೇ ಇದ್ದರು

೩೦. ಈರೀತಿಯಾದ ಆ ಮಹಾತ್ಮರು ಬ್ರಹ್ಮನ ಸೃಷ್ಟಿಕಾರ್ಯದ ಸಲುವಾಗಿ ಮಹತ್ತಾದುದೂ ಅದ್ಭುತವೂ ಆದ ಘೋರವೆಂಬ ಯೋಗವನ್ನು ಆಚರಿಸುತ್ತಾ ಬಂದರು

## (೫) ಈಶಾನಾವತಾರವು

೩೧ ಎಲೈ ಮುನಿಯೇ, ಬಳಿಕ ವಿಶ್ವರೂಪವೆಂದು ಪ್ರಸಿದ್ಧವಾದ ಪರಮಾಶ್ಚರ್ಯಕರವಾದ ಬ್ರಹ್ಮನ ಮತ್ತೊಂದು ಕಲ್ಪವು ಆರಂಭವಾಯಿತು.

ಬ್ರಹ್ಮಣಃ ಪುತ್ರಕಾಮಸ್ಯ ಧ್ಯಾಯತೋ ಮನಸಾ ಶಿವಂ ।
ಪ್ರಾದುರ್ಭೂತಾ ಮಹಾನಾದಾ ವಿಶ್ವರೂಪಾ ಸರಸ್ವತೀ ॥ ೩೨ ॥

ತಥಾವಿಧಃ ಸ ಭಗವಾನೀಶಾನಃ ಪರಮೇಶ್ವರಃ ।
ಶುದ್ಧಸ್ಫಟಿಕಸಂಕಾಶಃ ಸರ್ವಾಭರಣಭೂಷಿತಃ ॥ ೩೩ ॥

ತಂ ದೃಷ್ಟ್ವಾ ಪ್ರಣನಾಮಾಸೌ ಬ್ರಹ್ಮೇಶಾನಮಜಂ ವಿಭುಂ ।
ಸರ್ವಗಂ ಸರ್ವದಂ ಸರ್ವಂ ಸುರೂಪಂ ರೂಪವರ್ಜಿತಂ ॥ ೩೪ ॥

ಈಶಾನೋಽಪಿ ತಥಾದಿಶ್ಯ ಸನ್ಮಾರ್ಗಂ ಬ್ರಹ್ಮಣೇ ವಿಭುಃ ।
ಸಶಕ್ತಿಃ ಕಲ್ಪಯಾಂಚಕ್ರೇ ಸ ಬಾಲಾಂಶ್ಚತುರಃ ಶುಭಾನ್ ॥ ೩೫ ॥

ಜಟೀ ಮುಂಡೀ ಶಿಖಂಡೀ ಚ ಅರ್ಧಮುಂಡಶ್ಚ ಜಜ್ಞಿರೇ ।
ಯೋಗೇನಾದಿಶ್ಯ ಸದ್ಧರ್ಮಂ ಕೃತ್ವಾ ಯೋಗಗತಿಂ ಗತಾಃ ॥ ೩೬ ॥

ಇತೀಶಾನಾವತಾರಃ ಪಂಚಮಃ

---

೩೨. ಆಗ ಬ್ರಹ್ಮನಿಗೆ ಮಕ್ಕಳಾಗಬೇಕೆಂಬ ಬಯಕೆಯುಂಟಾಯಿತು. ಅವನು ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸತೊಡಗಿದನು. ಹೀಗಿರಲು ಮಹಾಶಬ್ದವುಳ್ಳ ವಿಶ್ವರೂಪಿಣಿಯಾದ ವಾಣಿಯು ಆವಿರ್ಭವಿಸಿತು.

೩೩. ಆ ವಾಣಿಯು ನುಡಿದಂತೆ ಶುಭ್ರವಾದ ಸ್ಫಟಿಕದಂತೆ ಹೊಳೆಯುತ್ತಾ ನಾನಾವಿಧವಾದ ಆಭರಣಗಳಿಂದ ಅಲಂಕೃತನಾದ ಭಗವಂತನೂ ಪರಮೇಶ್ವರನೂ ಆದ ಈಶಾನಮೂರ್ತಿಯು ಆವಿರ್ಭವಿಸಿದನು.

೩೪. ಆಗ ಬ್ರಹ್ಮನು, ಜನ್ಮರಹಿತನೂ ಸರ್ವವ್ಯಾಪಿಯೂ ಸರ್ವಸ್ವರೂಪನೂ ಸರ್ವವಸ್ತುವನ್ನೂ ಈಯುವವನೂ ಮಹಾರೂಪಶಾಲಿಯೂ ರೂಪವರ್ಜಿತನೂ ಆದ ಈಶಾನಮೂರ್ತಿಯನ್ನು ಕಂಡು ನಮಸ್ಕರಿಸಿದನು.

೩೫. ವಿಭುವಾದ ಆ ಈಶಾನನು ಬ್ರಹ್ಮನಿಗೆ ಸನ್ಮಾರ್ಗದಲ್ಲಿರುವಂತೆ ಅಪ್ಪಣೆಯಿತ್ತು, ತನ್ನ ಶಕ್ತಿಯಿಂದ ಮಂಗಲಸ್ವರೂಪರಾದ ನಾಲ್ಕುಮಂದಿ ಕುಮಾರರನ್ನು ಸೃಷ್ಟಿಸಿದನು.

೩೬. ಜಟಿ, ಮುಂಡಿ, ಶಿಖಂಡಿ, ಅರ್ಧಮುಂಡ ಎಂಬ ಆ ನಾಲ್ಕುಮಂದಿ ಬಾಲಕರು ಯೋಗಮಾರ್ಗದಿಂದ ಸದ್ಧರ್ಮವನ್ನು ಉಪದೇಶಿಸಿ ಯೋಗಗತಿಯನ್ನು ಹೊಂದಿದರು.

ಏವಂ ಸಂಕ್ಷೇಪತಃ ಪ್ರೋಕ್ತಃ ಸದ್ಯಾದೀನಾಂ ಸಮುದ್ಭವಃ ।
ಸನತ್ಕುಮಾರ ಸರ್ವಜ್ಞ ಲೋಕಾನಾಂ ಹಿತಕಾಮ್ಯಯಾ　　॥ ೩೭ ॥

ಅಥ ತೇಷಾಂ ಮಹಾಪ್ರಾಜ್ಞ ವ್ಯವಹಾರಂ ಯಥಾಯಥಂ ।
ತ್ರಿಲೋಕಹಿತಕಾರಂ ಹಿ ಸರ್ವಂ ಬ್ರಹ್ಮಾಂಡಸಂಸ್ಥಿತಂ　　॥ ೩೮ ॥

ಈಶಾನಃ ಪುರುಷೋ ಘೋರೋ ವಾಮಸಂಜ್ಞಸ್ತಥೈವ ಚ ।
ಬ್ರಹ್ಮಸಂಜ್ಞಾ ಮಹೇಶಸ್ಯ ಮೂರ್ತಯಃ ಪಂಚ ವಿಶ್ರುತಾಃ　　॥ ೩೯ ॥

ಈಶಾನಃ ಶಿವರೂಪಶ್ಚ ಗರೀಯಾನ್ಪ್ರಥಮಃ ಸ್ಮೃತಃ ।
ಭೋಕ್ತಾರಂ ಪ್ರಕೃತೇಃ ಸಾಕ್ಷಾತ್ಕ್ಷೇತ್ರಜ್ಞಮಧಿತಿಷ್ಠತಿ　　॥ ೪೦ ॥

ಶೈವಸ್ತತ್ಪುರುಷಾಖ್ಯಶ್ಚ ಸ್ವರೂಪೋ ಹಿ ದ್ವಿತೀಯಕಃ ।
ಗುಣಾಶ್ರಯಾತ್ಮಕಂ ಭೋಗ್ಯಂ ಸರ್ವಜ್ಞಮಧಿತಿಷ್ಠತಿ　　॥ ೪೧ ॥

---

೩೭. ಎಲೈ ಸರ್ವಜ್ಞನಾದ ಸನತ್ಕುಮಾರನೇ, ಈರೀತಿಯಾಗಿ ಸದ್ಯೋಜಾತ ಮೊದಲಾದ ಐದು ಶಿವಾವತಾರಗಳನ್ನು ಲೋಕಕಲ್ಯಾಣಕ್ಕೋಸ್ಕರ ಸಂಕ್ಷೇಪವಾಗಿ ತಿಳಿಸಿದೆನು.

೩೮. ಓ ಮಹಾಪ್ರಾಜ್ಞ, ಮೂರು ಲೋಕಕ್ಕೂ ಹಿತವನ್ನುಂಟುಮಾಡುವ ಆ ಪಂಚಾವತಾರಗಳ ವ್ಯವಹಾರವು ಯಥಾಯೋಗ್ಯವಾಗಿ ಬ್ರಹ್ಮಾಂಡದಲ್ಲೆಲ್ಲಾ ವಿಸ್ತಾರವಾಗಿ ಹಬ್ಬಿತು.

೩೯. ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಎಂಬ ಈ ಅವತಾರಗಳು ಮಹೇಶ್ವರನ ಪಂಚಬ್ರಹ್ಮಮೂರ್ತಿಗಳೆಂಬುದಾಗಿ ಪ್ರಖ್ಯಾತಿಯನ್ನು ಪಡೆದುವು

೪೦. ಇವುಗಳಲ್ಲಿ ಈಶಾನವೆಂಬ ಶಿವಸ್ವರೂಪವು ಶ್ರೇಷ್ಠವು ಇದೇ ಮೊದಲನೆಯದು. ಸಾಕ್ಷಾತ್ಪ್ರಕೃತಿಯನ್ನು ಭೋಗಿಸುವ ಕ್ಷೇತ್ರಜ್ಞನೆಂಬ ಪರಸ್ವರೂಪವು ಇದೇ.

೪೧. ತತ್ಪುರುಷವೆಂಬ ಮತ್ತೊಂದು ಶಿವಸ್ವರೂಪವೇ ಎರಡನೆಯದು. ಇದೇ ಗುಣಗಳಿಗೆ ಆಶ್ರಯವೆನಿಸಿದ ಭೋಗಾನುಭವಶಾಲಿಯಾದ ಸರ್ವಜ್ಞನೆಂಬ ಸ್ವರೂಪವು.

ಧರ್ಮಾಯ ಸ್ವಾಂಗಸಂಯುಕ್ತಂ ಬುದ್ಧಿತತ್ತ್ವಂ ಪಿನಾಕಿನಃ ।
ಅಘೋರಾಖ್ಯಸ್ವರೂಪೋ ಯಸ್ತಿಷ್ಠತ್ಯಂತಸ್ತ್ರೀಯಕಃ ॥ ೪೨ ॥

ವಾಮದೇವಾಹ್ವಯೋ ರೂಪಶ್ಚತುರ್ಥಃ ಶಂಕರಸ್ಯ ಹಿ ।
ಅಹಂಕೃತೇರಧಿಷ್ಠಾನೋ ಬಹುಕಾರ್ಯಕರಃ ಸದಾ ॥ ೪೩ ॥

ಈಶಾನಾಹ್ವಸ್ವರೂಪೋ ಹಿ ಶಂಕರಸ್ಯೇಶ್ವರಃ ಸದಾ ।
ಶ್ರೋತ್ರಸ್ಯ ವಚಸಶ್ಚಾಪಿ ವಿಭೋರ್ವ್ಯೋಮ್ನಸ್ತಥೈವ ಚ ॥ ೪೪ ॥

ತ್ವಕ್ಪಾಣಿಸ್ಪರ್ಶವಾಯೂನಾಮೀಶ್ವರಂ ರೂಪಮೈಶ್ವರಂ ।
ಪುರುಷಾಖ್ಯಂ ವಿಚಾರಜ್ಞಾ ಮತಿಮಂತಃ ಪ್ರಚಕ್ಷತೇ ॥ ೪೫ ॥

ವಪುಷಶ್ಚ ರಸಸ್ಯಾಪಿ ರೂಪಸ್ಯಾಗ್ನೇಸ್ತಥೈವ ಚ ।
ಅಘೋರಾಖ್ಯಮಧಿಷ್ಠಾನಂ ರೂಪಮಾಹುರ್ಮನೀಷಿಣಃ ॥ ೪೬ ॥

ರಶನಾಯಾಶ್ಚ ಪಾಯೋಶ್ಚ ರಸಸ್ಯಾಪಾಂ ತಥೈವ ಚ ।
ಈಶ್ವರಂ ವಾಮದೇವಾಖ್ಯಂ ಸ್ವರೂಪಂ ಶಾಂಕರಂ ಸ್ಮೃತಂ ॥ ೪೭ ॥

---

೪೨. ಅಘೋರವೆಂಬ ಯಾವ ಮೂರನೆಯ ಶಿವಸ್ವರೂಪವಿದೆಯೋ ಅದು ಧರ್ಮನಿಮಿತ್ತವಾದ ಅಂಗಸಮೇತವಾದ ಶಿವನ ಬುದ್ಧಿತತ್ತ್ವವೆಂದರಿಯಬೇಕು.

೪೩. ವಾಮದೇವನೆಂಬ ಶಿವನ ಮತ್ತೊಂದು ರೂಪವು ನಾಲ್ಕನೆಯದು. ಇದು ಎಲ್ಲ ಕೆಲಸಗಳಿಗೂ ಕಾರಣಭೂತವಾದ ಅಹಂಕಾರತತ್ತ್ವದ ಸ್ವರೂಪವು.

೪೪. ಮೇಲೆ ಹೇಳಿದ ಶಿವನ ಈಶಾನವೆಂಬ ಸ್ವರೂಪವು. ಶ್ರೋತ್ರೇಂದ್ರಿಯಕ್ಕೂ ವಾಕ್ಕಿಗೂ ವಿಭುವಿಗೂ ಆಕಾಶಕ್ಕೂ ಅಧಿಪತಿಯು.

೪೫. ತತ್ಪುರುಷವೆಂಬ ಶಿವನ ಮತ್ತೊಂದು ಸ್ವರೂಪವು ತ್ವಗಿಂದ್ರಿಯಕ್ಕೂ ಸ್ಪರ್ಶಕ್ಕೂ ಪ್ರಾಣಿಗೂ ವಾಯುವಿಗೂ ಅಧಿಪತಿಯೆಂದು ವಿಚಾರಪರರಾದ ವಿದ್ವಾಂಸರು ಹೇಳುವರು.

೪೬. ಅಘೋರವೆಂಬ ಶಿವಸ್ವರೂಪವು ದೇಹಕ್ಕೂ ರಸಕ್ಕೂ ರೂಪಕ್ಕೂ ಅಗ್ನಿಗೂ ಅಧಿಷ್ಠಾನವೆಂಬುದಾಗಿ ತಿಳಿದವರು ಹೇಳುವರು.

೪೭. ಶಿವನ ವಾಮದೇವವೆಂಬ ನಾಲ್ಕನೆಯ ಸ್ವರೂಪವು ಜಿಹ್ವೆಗೂ ಗುದಕ್ಕೂ ರಸಕ್ಕೂ ನೀರಿಗೂ ಅಧಿಷ್ಠಾತೃವೆಂಬುದಾಗಿ ಹೇಳಲ್ಪಟ್ಟಿರುವುದು.

ಘ್ರಾಣಸ್ಯ ಚೈವೋಪಸ್ಥಸ್ಯ ಗಂಧಸ್ಯ ಚ ಭುವಸ್ತಥಾ ।
ಸದ್ಯೋಜಾತಾಹ್ವಯಂ ರೂಪಮಿಶ್ವರಂ ಶಾಂಕರಂ ವಿದುಃ ॥ ೪೮ ॥

ಇಮೇ ಸ್ವರೂಪಾಃ ಶಂಭೋರ್ಹಿ ವಂದನೀಯಾಃ ಪ್ರಯತ್ನತಃ ।
ಶ್ರೇಯೋಽರ್ಥಿಭಿರ್ನರೈರ್ನಿತ್ಯಂ ಶ್ರೇಯಸಾಮೇಕಹೇತವಃ ॥ ೪೯ ॥

ಯಃ ಪಠೇಚ್ಛೃಣುಯಾದ್ವಾಪಿ ಸದ್ಯಾದೀನಾಂ ಸಮುದ್ಭವಂ ।
ಸ ಭುಕ್ತ್ವಾ ಸಕಲಾನ್ಕಾಮಾನ್ಪ್ರಯಾತಿ ಪರಮಾಂ ಗತಿಂ ॥ ೫೦ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಶಿವಸ್ಯ ಪಂಚಾವತಾರವರ್ಣನಂ ನಾಮ ಪ್ರಥಮೋಽಧ್ಯಾಯಃ

---

೪೮ ಸದ್ಯೋಜಾತವೆಂಬ ಶಿವನ ಸ್ವರೂಪವು, ಘ್ರಾಣೇಂದ್ರಿಯ, ಉಪಸ್ಥ, ಗಂಧ, ಭೂಮಿ, ಗಳಿಗೆ, ಪ್ರಭುವೆಂಬುದಾಗಿ ತಿಳಿದವರು ಹೇಳುವರು.

೪೯. ಶ್ರೇಯಸ್ಸನ್ನು ಬಯಸುವ ಮಾನವರು ಪ್ರತಿನಿತ್ಯವೂ ಶ್ರೇಯಸ್ಸಿಗೆ ಮುಖ್ಯಕಾರಣವಾದ ಶಿವನ ಈ ಸ್ವರೂಪಗಳನ್ನು ಪ್ರಯತ್ನಪೂರ್ವಕವಾಗಿ ನಮಸ್ಕರಿಸಬೇಕು.

೫೦ ಯಾವಾತನು ಸದ್ಯೋಜಾತಾದಿ ಪಂಚಮೂರ್ತಿಗಳ ಉತ್ಪತ್ತಿಯನ್ನು ಪಠನಮಾಡುವನೋ ಅಥವಾ ಶ್ರವಣಮಾಡುವನೋ ಅವನು ಎಲ್ಲ ಇಷ್ಟಾರ್ಥಗಳನ್ನೂ ಅನುಭವಿಸಿ ಕೊನೆಗೆ ಶ್ರೇಷ್ಠವಾದ ಸದ್ಗತಿಯನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಪಂಚಾವತಾರವರ್ಣನವೆಂಬ ಮೊದಲನೆಯ
ಅಧ್ಯಾಯವು ಮುಗಿದುದು.

|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾಪುರಾಣೇ

## ಶತರುದ್ರಸಂಹಿತಾಯಾಂ

## ದ್ವಿತೀಯೋಽಧ್ಯಾಯಃ



|| ನಂದೀಶ್ವರ ಉವಾಚ ||

**ಶೃಣು ತಾತ ಮಹೇಶಸ್ಯಾವತಾರಾನ್ಪರಮಾನ್ಪ್ರಭೋ ।**
**ಸರ್ವಕಾರ್ಯಕರಾಂಲ್ಲೋಕೇ ಸರ್ವಸ್ಯ ಸುಖದಾನ್ಮುನೇ || ೧ ||**

**ತಸ್ಯ ಶಂಭೋಃ ಪರೇಶಸ್ಯ ಮೂರ್ತ್ಯಷ್ಟಕಮಯಂ ಜಗತ್ ।**
**ತಸ್ಮಿನ್ವ್ಯಾಪ್ಯ ಸ್ಥಿತಂ ವಿಶ್ವಂ ಸೂತ್ರೇ ಮಣಿಗಣಾ ಇವ || ೨ ||**

---

## ಎರಡನೆಯ ಅಧ್ಯಾಯವು.

೧. ನಂದೀಶ್ವರನು ಸನತ್ಕುಮಾರನನ್ನು ಕುರಿತು ಹೇಳತೊಡಗಿದನು :— ಅಯ್ಯಾ ಮುನಿಯೇ, ಪ್ರಪಂಚದಲ್ಲಿ ನಡೆಯುವ ಸಕಲ ಕಾರ್ಯಗಳಿಗೂ ಕಾರಣ ಭೂತವೂ, ಸಕಲರಿಗೂ ಸುಖದಾಯಕವೂ ಆದ ಪರಮಶ್ರೇಷ್ಠವಾದ ಶಿವನ ಅವತಾರ ಗಳನ್ನು ಹೇಳುವೆನು ಕೇಳು.

೨. ಈ ಜಗತ್ತೆಲ್ಲವೂ ಪರಾತ್ಪರನಾದ ಆ ಪರಶಿವನ ಅಷ್ಟಮೂರ್ತ್ಯಾತ್ಮಕ ವೆಂಬುದಾಗಿ ತಿಳಿ. ಹಾರದಲ್ಲಿನ ಮಣಿಗಳು ತಮಗೆ ಆಶ್ರಯವಾದ ದಾರದಲ್ಲಿ ನೆಲಸಿ ರುವಂತೆ ಈ ನಿಖಿಲ ಪ್ರಪಂಚವೂ ಆತನಲ್ಲೇ ವ್ಯಾಪಿಸಿಕೊಂಡು ನೆಲಸಿದೆ.

ಶರ್ವೋ ಭವಸ್ತಥಾ ರುದ್ರ ಉಗ್ರೋ ಭೀಮಃ ಪಶೋ ಪತಿಃ ।
ಈಶಾನಶ್ಚ ಮಹಾದೇವೋ ಮೂರ್ತಯಶ್ಚಾಷ್ಟವಿಶ್ರುತಾಃ ॥ ೩ ॥

ಭೂವ್ಯಂಭೋಗ್ನಿಮರುದ್ವ್ಯೋಮಕ್ಷೇತ್ರಜ್ಞಾರ್ಕನಿಶಾಕರಾಃ ।
ಅಧಿಷ್ಠಿತಾಶ್ಚ ಶರ್ವಾದ್ಯೈರಷ್ಟರೂಪೈಃ ಶಿವಸ್ಯ ಹಿ ॥ ೪ ॥

ಧತ್ತೇ ಚರಾಚರಂ ವಿಶ್ವಂ ರೂಪಂ ವಿಶ್ವಂಭರಾತ್ಮಕಂ ।
ಶಂಕರಸ್ಯ ಮಹೇಶಸ್ಯ ಶಾಸ್ತ್ರಸ್ಯೈವೇತಿ ನಿಶ್ಚಯಃ ॥ ೫ ॥

ಸಂಜೀವನಂ ಸಮಸ್ತಸ್ಯ ಜಗತಃ ಸಲಿಲಾತ್ಮಕಂ ।
ಭವ ಇತ್ಯುಚ್ಯತೇ ರೂಪಂ ಭವಸ್ಯ ಪರಮಾತ್ಮನಃ ॥ ೬ ॥

ಬಹಿರಂತರ್ಜಗದ್ವಿಶ್ವಂ ಬಿಭರ್ತಿ ಸ್ಪಂದತೇ ಸ್ವಯಂ ।
ಉಗ್ರ ಇತ್ಯುಚ್ಯತೇ ಸದ್ಭಿ ರೂಪಮುಗ್ರಸ್ಯ ಸತ್ಪ್ರಭೋ ॥ ೭ ॥

---

೩. ಶರ್ವ, ಭವ, ರುದ್ರ, ಉಗ್ರ, ಭೀಮ, ಪಶುಪತಿ, ಈಶಾನ, ಮಹಾದೇವ ಎಂಬಿವರೇ ಆ ಶಿವನ ಪ್ರಖ್ಯಾತರಾದ ಅಷ್ಟಮೂರ್ತಿಗಳು

೪. ಭೂಮಿ, ಜಲ, ಅಗ್ನಿ, ಮರುತ್ತು, ಆಕಾಶ, ಆತ್ಮ, ಸೂರ್ಯ, ಚಂದ್ರ ರೆಂಬ ಈ ಎಂಟೂ ಶಿವನ ಶರ್ವ ಮೊದಲಾದ ಎಂಟು ರೂಪಗಳಿಗೆ ಅಧಿಷ್ಠಾನ (ಆಶ್ರಯ) ವೆನಿಸಿರುವುವು ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಜೀವ, ಸೂರ್ಯ, ಚಂದ್ರರೆಂಬೀ ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಶಿವಸ್ವರೂಪವೇ

೫. ಮಹಾದೇವನಾದ ಆ ಶಂಕರನ ವಿಶ್ವಂಭರಾತ್ಮಕ (ಶರ್ವ) ಸ್ವರೂಪವು ಈ ಚರಾಚರಾತ್ಮಕವಾದ ಪ್ರಪಂಚವನ್ನು ಧರಿಸಿರುವುದು. ಹೀಗೆಂದು ಶಾಸ್ತ್ರಗಳು ನಿಶ್ಚಯಿಸಿ ನುಡಿಯುವುವು.

೬. ಈ ಸಮಸ್ತ ಜಗತ್ತಿನ ಜೀವನಕ್ಕೆ ಆಧಾರಭೂತವಾದ ನೀರನ್ನು ಪರಮಾತ್ಮನಾದ ಶಿವನ ಭವವೆಂಬ ಮೂರ್ತಿಯೆಂಬುದಾಗಿ ಕರೆಯುವರು.

೭ ಎಲೈ ಸತ್ಪುರುಷಾಗ್ರಣಿಯೇ, ಯಾವುದು ಈ ಜಗತ್ತಿನ ಒಳಗೂ ಹೊರಗೂ ಇದ್ದು ಅದನ್ನು ಧರಿಸಿರುವುದೋ ಮತ್ತು ಮತ್ತೊಬ್ಬರ ಪ್ರೇರಣೆಯಿಲ್ಲದೆ ತಾನಾಗಿಯೇ ಚಲಿಸುವುದೋ ಆ ವಾಯುವು ಶಿವನ ಉಗ್ರವೆಂಬ ಮೂರ್ತಿಯೆಂಬುದಾಗಿ ಸತ್ಪುರುಷರು ಹೇಳುವರು

ಸರ್ವಾವಕಾಶದಂ ಸರ್ವವ್ಯಾಪಕಂ ಗಗನಾತ್ಮಕಂ ।
ರೂಪಂ ಭೀಮಸ್ಯ ಭೀಮಾಖ್ಯಂ ಭೂಪವೃಂದಸ್ಯ ಭೇದಕಂ ॥ ೮ ॥

ಸರ್ವಾತ್ಮನಾಮಧಿಷ್ಠಾನಂ ಸರ್ವಕ್ಷೇತ್ರನಿವಾಸಕಂ ।
ರೂಪಂ ಪಶುಪತೇರ್ಜ್ಞೇಯಂ ಪಶುಪಾಶನಿಕೃಂತನಂ ॥ ೯ ॥

ಸಂದೀಪಯಜ್ಜಗತ್ಸರ್ವಂ ದಿವಾಕರಸಮಾಹ್ವಯಂ ।
ಈಶಾನಾಖ್ಯಂ ಮಹೇಶಸ್ಯ ರೂಪಂ ದಿವಿ ವಿಸರ್ಪತಿ ॥ ೧೦ ॥

ಆಪ್ಯಾಯಯತಿ ಯೋ ವಿಶ್ವಮಮೃತಾಂಶುರ್ನಿಶಾಕರಃ ।
ಮಹಾದೇವಸ್ಯ ತದ್ರೂಪಂ ಮಹಾದೇವಸ್ಯ ಚಾಹ್ವಯಂ ॥ ೧೧ ॥

ಆತ್ಮಾ ತಸ್ಯಾಷ್ಟಮಂ ರೂಪಂ ಶಿವಸ್ಯ ಪರಮಾತ್ಮನಃ ।
ವ್ಯಾಪಿಕೇತರಮೂರ್ತೀನಾಂ ವಿಶ್ವಂ ತಸ್ಮಾಚ್ಛಿವಾತ್ಮಕಂ ॥ ೧೨ ॥

---

೮. ಎಲ್ಲ ವಸ್ತುಗಳಿಗೂ ಅವಕಾಶವನ್ನು ಇತ್ತು ಅವೆಲ್ಲ ವಸ್ತುಗಳಲ್ಲಿಯೂ ವ್ಯಾಪಿಸಿಕೊಂಡು ಇರುವ ಈ ಆಕಾಶವು ಆ ಪರಶಿವನ, ದುಷ್ಟರಾದ ಅರಸರನ್ನು ಹುಟ್ಟಡಗಿಸುವ, ಭೀಮವೆಂಬ ಮೂರ್ತಿಯೆಂದು ಅರಿಯಬೇಕು.

೯. ಎಲ್ಲ ಆತ್ಮಗಳಿಗೂ ಅಧಿಷ್ಠಾನವೆನಿಸಿ ಎಲ್ಲ ಕ್ಷೇತ್ರಗಳಲ್ಲೂ (ದೇಹ) ನೆಲಸಿರುವ ಕ್ಷೇತ್ರಜ್ಞವೆಂಬ ರೂಪವು ಪಶುಪ್ರಾಯರಾದ ಜೀವರ ಸಂಸಾರಪಾಶವನ್ನು ಕತ್ತರಿಸಿಹಾಕುವ ಪಶುಪತಿಯೆಂಬ ಶಿವನ ಮೂರ್ತಿಯೆಂದು ಭಾವಿಸಬೇಕು.

೧೦. ಈ ಜಗತ್ತೆಲ್ಲವನ್ನೂ ಬೆಳಗುತ್ತಾ ಆಕಾಶದಲ್ಲಿ ಸಂಚರಿಸುವ ಸೂರ್ಯನೆಂಬ ತೇಜಸ್ಸು ಆ ಮಹೇಶ್ವರನ ಈಶಾನವೆಂಬ ಮೂರ್ತಿಯೆಂದು ತಿಳಿಯಬೇಕು.

೧೧. ತನ್ನ ಅಮೃತಮಯವಾದ ಕಿರಣಗಳಿಂದ ಜಗತ್ತನ್ನು ಸಂತಸಗೊಳಿಸುವ ಈ ಚಂದ್ರನು ಶಿವನ ಮಹಾದೇವಮೂರ್ತಿಯೆಂದು ಭಾವಿಸಬೇಕು.

೧೨. ಸಕಲ ದೇಹಗಳಲ್ಲಿಯೂ ನಮಗೆ ವ್ಯಕ್ತವಾಗುವ ಆತ್ಮನು ಪರಾತ್ಪರನಾದ ಆ ಶಿವನ ಎಂಟನೆಯ ಸ್ವರೂಪವು. ಈ ಸ್ವರೂಪವು ಹಿಂದೆ ಹೇಳಿದ ಪೃಥಿವ್ಯಾದಿ ಸಕಲ ಮೂರ್ತಿಗಳಲ್ಲಿಯೂ ವ್ಯಾಪಿಸಿ ಅವಕ್ಕೂ ಮೇಲೆನಿಸಿರುವುದು. ಆದುದರಿಂದ ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಸಾಕ್ಷಾತ್ ಶಿವಸ್ವರೂಪವು.

ಶಾಖಾಃ ಪುಷ್ಯಂತಿ ವೃಕ್ಷಸ್ಯ ವೃಕ್ಷಮೂಲಸ್ಯ ಸೇಚನಾತ್ ।
ತದ್ವದಸ್ಯ ವಪುರ್ವಿಶ್ವಂ ಪುಷ್ಯತೇ ಚ ಶಿವಾರ್ಚನಾತ್ ॥ ೧೩ ॥

ಯಥೇಹ ಪುತ್ರಪೌತ್ರಾದೇಃ ಪ್ರೀತ್ಯಾ ಪ್ರೀತೋ ಭವೇತ್ಪಿತಾ ।
ತಥಾ ವಿಶ್ವಸ್ಯ ಸಂಪ್ರೀತ್ಯಾ ಪ್ರೀತೋ ಭವತಿ ಶಂಕರಃ ॥ ೧೪ ॥

ಕ್ರಿಯತೇ ಯಸ್ಯ ಕಸ್ಯಾಪಿ ದೇಹಿನೋ ಯದಿ ನಿಗ್ರಹಃ ।
ಅಷ್ಟಮೂರ್ತೇರನಿಷ್ಟಂ ತತ್ಕೃತಮೇವ ನ ಸಂಶಯಃ ॥ ೧೫ ॥

ಅಷ್ಟಮೂರ್ತ್ಯಾತ್ಮನಾ ವಿಶ್ವಮಧಿಷ್ಠಾಯಾಸ್ಥಿತಂ ಶಿವಂ ।
ಭವಸ್ಯ ಸರ್ವಭಾವೇನ ರುದ್ರಂ ಪರಮಕಾರಣಂ ॥ ೧೬ ॥

---

೧೩ ಮರದ ಬುಡಕ್ಕೆ ನೀರೆರೆದರೆ ಕೊಂಬೆಗಳು ಚಿಗಿತು ಹೂಬಿಡುವಂತೆ ಶಿವನ ದೇಹರೂಪವಾದ ಈ ಜಗತ್ತು ಶಿವನ ಪೂಜೆಯಿಂದ ವಿಕಾಸವನ್ನು ಪಡೆಯುವುದು. ಎಂದರೆ ಸುಖಸಂತೋಷಗಳಿಂದ ನಲಿದಾಡುವುದು

೧೪ ಲೋಕದಲ್ಲಿ ತನ್ನ ಮಕ್ಕಳು ಮೊಮ್ಮಕ್ಕಳು ನಲಿದಾಡುತ್ತಿದ್ದರೆ ತಂದೆ ಯಾದವನು ಸಂತೋಷಪಡುವಂತೆ ಜಗತ್ತು ಸುಖಸಂತೋಷಗಳಿಂದ ನಲಿಯುತ್ತಿದ್ದರೆ ಶಿವನು ಸಂತೋಷಪಡುವನು

೧೫. ಲೋಕದಲ್ಲಿರುವ ಯಾವ ವ್ಯಕ್ತಿಯನ್ನೂ (ಪ್ರಾಣಿಸಾಮಾನ್ಯ) ನಿಷ್ಕಾರಣವಾಗಿ ದಂಡಿಸಿದರೂ ಹಿಂದೆ ವಿವರಿಸಿದ ಪೃಥಿವ್ಯಾದಿಸ್ವರೂಪನಾದ ಆ ಅಷ್ಟಮೂರ್ತಿ (ಶಿವ) ಗೆ ಅನಿಷ್ಟವನ್ನು ಮಾಡಿದಂತಾಗುವುದೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ

೧೬. ಆ ಶಿವನು ಮೇಲೆ ಹೇಳಿದಂತಹ ಈ ಪೃಥಿವ್ಯಾದಿ ಅಷ್ಟಸ್ವರೂಪಗಳಿಂದ ಈ ಪ್ರಪಂಚವೆಲ್ಲವನ್ನೂ ಆವರಿಸಿಕೊಂಡು ನೆಲಸಿರುವನು. ಸಕಲಕಾರಣ ವಸ್ತುಗಳಿಗೂ ಮೂಲಕಾರಣವೆನಿಸಿದ ಆ ಪರಮಪುರುಷನಾದ ಶಿವನನ್ನು ಎಲ್ಲ ಬಗೆಗಳಿಂದಲೂ ಆರಾಧಿಸು.

ಇತಿ ಪ್ರೋಕ್ತಾಃ ಸ್ವರೂಪಾಸ್ತೇ ವಿಧಿಪುತ್ರಾಷ್ಟವಿಶ್ರುತಾಃ ।
ಸರ್ವೋಪಕಾರನಿರತಾಃ ಸೇವ್ಯಾಃ ಶ್ರೇಯೋರ್ಥಿಭಿರ್ನರೈಃ ॥ ೧೭ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಶಿವಾಷ್ಟಮೂರ್ತಿವರ್ಣನಂ ನಾಮ ದ್ವಿತೀಯೋಽಧ್ಯಾಯಃ

---

೧೭. ಎಲೈ ಬ್ರಹ್ಮಪುತ್ರನೇ, ಈರೀತಿ ಪ್ರಖ್ಯಾತವಾದ ಶಿವನ ಎಂಟು ಸ್ವರೂಪಗಳನ್ನು ನಿನಗೆ ವಿವರಿಸಿಯಾಯಿತು. ಆ ಪರಮಾತ್ಮನ ಈ ಅಷ್ಟಸ್ವರೂಪಗಳು ಸಕಲರಿಗೂ ಉಪಕಾರವನ್ನು ಮಾಡುವುದರಲ್ಲಿಯೇ ತತ್ಪರವಾಗಿರುವುವು. ಆದುದರಿಂದ ಶ್ರೇಯಸ್ಕಾಮಿಗಳಾದ ಮಾನವರು ಇವುಗಳನ್ನು ಅನನ್ಯಭಕ್ತಿಯಿಂದ ಆರಾಧಿಸಬೇಕು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಶಿವನ ಅಷ್ಟಮೂರ್ತಿಸ್ವರೂಪಗಳ ವರ್ಣನವೆಂಬ ಎರಡನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ತೃತೀಯೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಶೃಣು ತಾತ ಮಹಾಪ್ರಾಜ್ಞ ವಿಧಿಕಾಮಪ್ರಪೂರಕಂ ।
ಅರ್ಧನಾರೀನರಾಖ್ಯಂ ಹಿ ಶಿವರೂಪಮನುತ್ತಮಂ ॥ ೧ ॥

ಯದಾ ಸೃಷ್ಟಾಃ ಪ್ರಜಾಃ ಸರ್ವಾಃ ನ ವ್ಯವರ್ಧಂತ ವೇಧಸಾ ।
ತದಾ ಚಿಂತಾಕುಲೋಽಭೂತ್ಸ ತೇನ ದುಃಖೇನ ದುಃಖಿತಃ ॥ ೨ ॥

## ಮೂರನೆಯ ಅಧ್ಯಾಯವು.

೧ ನಂದೀಶ್ವರನು ನುಡಿಯತೊಡಗಿದನು:—ಅಪ್ಪಾ, ಮಹಾಮೇಧಾವಿಯೇ, ಬ್ರಹ್ಮನ ಇಷ್ಟಾರ್ಥಗಳೆಲ್ಲವನ್ನೂ ಪರಿಪೂರ್ಣಗೊಳಿಸಿದ ಅರ್ಧನಾರೀಶ್ವರನೆಂಬ ಶಿವನ ಸ್ವರೂಪವನ್ನು ವಿವರಿಸುವೆನು ಕೇಳು. ಇದು ಶಿವನ ಸ್ವರೂಪಗಳಲ್ಲಿ ಅತಿಶ್ರೇಷ್ಠವಾದುದು

೨ ಹಿಂದೆ ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದನು. ಆದರೆ ಆ ಪ್ರಜೆಗಳು ಬೆಳೆಯಲಿಲ್ಲ. ಆಗ ಅವನಿಗೆ ಯೋಚನೆಗೆ ಇಟ್ಟುಕೊಂಡಿತು. ಅದೇ ವ್ಯಥೆಯಿಂದ ಕೊರಗತೊಡಗಿದನು.

ನಭೋವಾಣೀ ತದಾಭೂದ್ವೈ ಸೃಷ್ಟಿಂ ಮಿಥುನಜಾಂ ಕುರು ।
ತಚ್ಛ್ರುತ್ವಾ ಮೈಥುನೀಂ ಸೃಷ್ಟಿಂ ಬ್ರಹ್ಮಾ ಕರ್ತುಮಮನ್ಯತ ॥ ೩ ॥

ನಾರೀಣಾಂ ಕುಲಮೀಶಾನಾನ್ನಿರ್ಗತಂ ನ ಪುರಾ ಯತಃ ।
ತತೋ ಮೈಥುನಜಾಂ ಸೃಷ್ಟಿಂ ಕರ್ತುಂ ಶೇಕೇ ನ ಪದ್ಮಭೂಃ ॥ ೪ ॥

ಪ್ರಭಾವೇಣ ವಿನಾ ಶಂಭೋರ್ನ ಜಾಯೇರನ್ನಿಮಾಃ ಪ್ರಜಾಃ ।
ಏವಂ ಸಂಚಿಂತಯನ್ಬ್ರಹ್ಮಾ ತಪಃ ಕರ್ತುಂ ಪ್ರಚಕ್ರಮೇ ॥ ೫ ॥

ಶಿವಯಾ ಪರಯಾ ಶಕ್ತ್ಯಾ ಸಂಯುಕ್ತಂ ಪರಮೇಶ್ವರಂ ।
ಸಂಚಿಂತ್ಯ ಹೃದಯೇ ಪ್ರೀತ್ಯಾ ತಪೇ ತಪಂ ಪರಮಂ ತಪಃ ॥ ೬ ॥

ತೀವ್ರೇಣ ತಪಸಾ ತಸ್ಯ ಸಂಯುಕ್ತಸ್ಯ ಸ್ವಯಂಭುವಃ ।
ಅಚಿರೇಣೈವ ಕಾಲೇನ ತುತೋಷ ಸ ಶಿವೋ ದ್ರುತಂ ॥ ೭ ॥

---

೩. ಆಗ, ಇನ್ನು ಮೇಲೆ ಮಿಥುನಸೃಷ್ಟಿಯನ್ನು ( ಸ್ತ್ರೀ-ಪುರುಷರೂಪವಾದ ) ಮಾಡು, ಎಂದು ಅಶರೀರವಾಣಿಯು ನುಡಿಯಿತು. ಆ ಮಾತನ್ನು ಕೇಳಿ ಬ್ರಹ್ಮನು, ಅಂದಿನಿಂದ ಸ್ತ್ರೀಪುರುಷರೂಪವಾದ ಸೃಷ್ಟಿಯನ್ನು ಮಾಡಬೇಕೆಂದು ಸಂಕಲ್ಪಿಸಿದನು.

೪. ಅದುವರೆಗೂ ಶ್ರೀ ಶಿವನಿಂದ ಸ್ತ್ರೀಸ್ವರೂಪವೇ ಪ್ರಕಟಿಸಲ್ಪಟ್ಟಿರಲಿಲ್ಲ. ಆದುದರಿಂದ ಬ್ರಹ್ಮನು ಮೈಥುನೀಭಾವಕ್ರಮದಿಂದ ( ಸ್ತ್ರೀಪುರುಷರುಗಳ ರೂಪವಾಗಿ) ಸೃಷ್ಟಿಸಲು ಶಕ್ತನಾಗಲಿಲ್ಲ.

೫. ಶಿವನ ಅನುಗ್ರಹವನ್ನು ಸಂಪಾದಿಸಿದಲ್ಲದೆ, ನಾನು ಉದ್ದೇಶಿಸಿದ ಈ ಪ್ರಜೆಗಳ ಸೃಷ್ಟಿಕಾರ್ಯವು ನೆರವೇರಲಾರದು. ಹೀಗೆಂದು ಮನಸ್ಸಿನಲ್ಲಿ ಆಲೋಚಿಸಿ, ಬ್ರಹ್ಮನು, ತಪಸ್ಸುಮಾಡಲು ತೊಡಗಿದನು.

೬. ಆಗ ಪರಾಶಕ್ತಿಯೆನಿಸಿದ ಸರ್ವಮಂಗಳೆಯೊಡಗೂಡಿದ ಪರಶಿವನನ್ನು ಪ್ರೀತಿಯಿಂದ ಹೃದಯದಲ್ಲಿ ಧ್ಯಾನಿಸುತ್ತಾ ಆ ಬ್ರಹ್ಮನು ಮಹತ್ತರವಾದ ತಪಸ್ಸನ್ನು ಆಚರಿಸಿದನು.

೭. ಈ ರೀತಿ ಬ್ರಹ್ಮನು ಅತಿತೀವ್ರವಾದ ತಪಸ್ಸಿನಲ್ಲಿ ತೊಡಗಿರುವುದನ್ನು ಕಂಡು, ಶಿವನು ಒಹುಬೇಗನೆ ಪ್ರಸನ್ನನಾದನು.

ತತಃ ಪೂರ್ಣಚಿದೀಶಸ್ಯ ಮೂರ್ತಿರ್ನಾನಿಶ್ಯ ಕಾಮದಾಂ ।
ಅರ್ಧನಾರೀನರೋ ಭೂತ್ವಾ ತತೋ ಬ್ರಹ್ಮಾಂತಿಕಂ ಹರಃ ॥ ೮ ॥

ತಂ ದೃಷ್ಟ್ವಾ ಶಂಕರಂ ದೇವಂ ಶಕ್ತ್ಯಾ ಪರಮಯಾನ್ವಿತಂ ।
ಪ್ರಣಮ್ಯ ದಂಡವದ್ಬ್ರಹ್ಮಾ ಸ ತುಷ್ಟಾವ ಕೃತಾಂಜಲಿಃ ॥ ೯ ॥

ಅಥ ದೇವೋ ಮಹಾದೇವೋ ವಾಚಾ ಮೇಘಗಭೀರಯಾ ।
ಸಂಭವಾಯ ಸುಸಂಪ್ರೀತೋ ವಿಶ್ವಕರ್ತಾ ಮಹೇಶ್ವರಃ ॥ ೧೦ ॥

॥ ಈಶ್ವರ ಉವಾಚ ॥

ವತ್ಸ ವತ್ಸ ಮಹಾಭಾಗ ಮಮ ಪುತ್ರ ಪಿತಾಮಹ ।
ಜ್ಞಾತವಾನಸ್ಮಿ ಸರ್ವ ತತ್ತ್ವತಸ್ತೇ ಮನೋರಥಂ ॥ ೧೧ ॥

ಪ್ರಜಾನಾಮೇವ ವೃದ್ಧ್ಯರ್ಥಂ ತಪಸ್ತಪ್ತಂ ತ್ವಯಾಧುನಾ ।
ತಪಸಾ ತೇನ ತುಷ್ಟೋಽಸ್ಮಿ ದದಾಮಿ ಚ ತವೇಪ್ಸಿತಂ ॥ ೧೨ ॥

---

೮. ಬಳಿಕ ಪೂರ್ಣಜ್ಞಾನಸ್ವರೂಪನಾದ ಶಿವನು, ಭಕ್ತರ ಇಷ್ಟಾರ್ಥಗಳೆಲ್ಲವನ್ನೂ ಈಡೇರಿಸುವಂತಹ ಅರ್ಧದೇಹವು ಸ್ತ್ರೀಯಾಗಿಯೂ, ಉಳಿದರ್ಧದೇಹವು ಪುರುಷನಾಗಿಯೂ, ಇರುವ ಆಕೃತಿಯನ್ನು ತಾಳಿ ಬ್ರಹ್ಮನ ಬಳಿಗೆ ಬಂದನು

೯. ಆಗ ಪರಾಶಕ್ತಿಯೊಡಗೂಡಿ ತನ್ನೆದುರು ನಿಂತಿರುವ ಶ್ರೀಶಂಕರನನ್ನು ಕಂಡು ಬ್ರಹ್ಮನು, ಸಾಷ್ಟಾಂಗಪ್ರಣಾಮವನ್ನು ಮಾಡಿ ಕೈಗಳನ್ನು ಜೋಡಿಸಿಕೊಂಡು ಸ್ತೋತ್ರಮಾಡಿದನು.

೧೦ ಅನಂತರ ದೇವತೆಗಳಿಗೆಲ್ಲಾ ದೇವನೆನಿಸಿದ, ಪ್ರಪಂಚಸೃಷ್ಟಿಗೆ ಮೂಲ ಕಾರಣನಾದ ಆ ಪರಶಿವನು, ಮೇಘಗಂಭೀರಧ್ವನಿಯಿಂದ ಬ್ರಹ್ಮನನ್ನು ಕುರಿತು ಇಂತು ನುಡಿದನು.

೧೧. ಓ ವತ್ಸ, ನನ್ನ ಮಗನಾದ ಓ ವಿಧೀ! ಓ ಮಹಾಭಾಗ್ಯಶಾಲಿಯೇ, ನಿನ್ನ ಮನಸ್ಸಿನ ಅಭಿಲಾಷೆಯೇನೆಂಬುದನ್ನು ಸಂಪೂರ್ಣವಾಗಿ ಚೆನ್ನಾಗಿ ತಿಳಿದಿರುವೆನು.

೧೨. ಪ್ರಜಾಭಿವೃದ್ಧಿಗೋಸ್ಕರವೇ ನೀನೀಗ ತಪಸ್ಸನ್ನು ಮಾಡಿದೆ- ನಿನ್ನ ಆ ತಪಸ್ಸಿನಿಂದ ಸುಪ್ರೀತನಾಗಿರುವೆನು. ನೀನು ಬಯಸಿರುವ ವರವನ್ನು ಕೊಡುವೆನು.

ಇತ್ಯುಕ್ತ್ವಾ ಪರಮೋದಾರಂ ಸ್ವಭಾವಮಧುರಂ ವಚಃ ।
ಪೃಥಕ್ಚಕಾರ ವಪುಷೋ ಭಾಗಾದ್ದೇವೀಂ ಶಿವಾಂ ಶಿವಃ ॥ ೧೩ ॥

ತಾಂ ದೃಷ್ಟ್ವಾ ಪರಮಾಂ ಶಕ್ತಿಂ ಪೃಥಗ್ಭೂತಾಂ ಶಿವಾಗತಾಂ ।
ಪ್ರಣಿಪತ್ಯ ವಿನೀತಾತ್ಮಾ ಪ್ರಾರ್ಥಯಾಮಾಸ ತಾಂ ವಿಧಿಃ ॥ ೧೪ ॥

॥ ಬ್ರಹ್ಮೋವಾಚ ॥

ದೇವದೇವೇನ ಸೃಷ್ಟೋಽಹಮಾದೌ ತ್ವತ್ಪತಿನಾ ಶಿವೇ ।
ಪ್ರಜಾಃ ಸರ್ವಾ ನಿಯುಕ್ತಾಶ್ಚ ಶಂಭುನಾ ಪರಮಾತ್ಮನಾ ॥ ೧೫ ॥

ಮನಸಾ ನಿರ್ಮಿತಾಃ ಸರ್ವೇ ಶಿವೇ ದೇವಾದಯೋ ಮಯಾ ।
ನ ವೃದ್ಧಿಮುಪಗಚ್ಛಂತಿ ಸೃಜ್ಯಮಾನಾಃ ಪುನಃ ಪುನಃ ॥ ೧೬ ॥

ಮಿಥುನಪ್ರಭವಾಮೇವ ಕೃತ್ವಾ ಸೃಷ್ಟಿಮತಃ ಪರಂ ।
ಸಂವರ್ಧಯಿತುಮಿಚ್ಛಾಮಿ ಸರ್ವಾ ಏವ ಮಮ ಪ್ರಜಾಃ ॥ ೧೭ ॥

---

೧೩. ಈ ರೀತಿಯಾಗಿ, ಮಹಾಔದಾರ್ಯದಿಂದ ಕೂಡಿದ ಸ್ವಭಾವಮಧುರವಾದ ಮಾತುಗಳನ್ನಾಡಿ, ತನ್ನ ದೇಹಾರ್ಧದಿಂದ ಜಗಜ್ಜನನಿಯಾದ ಶಿವೆಯನ್ನು ಬೇರೆಯಾಗಿ ಮಾಡಿದನು.

೧೪. ಆಗ ಶಿವನ ದೇಹದಿಂದ ಪ್ರತ್ಯೇಕವಾಗಿ ಈಚೆಗೆಬಂದ ಆ ಪರಾಶಕ್ತಿಯನ್ನು ಕಂಡು ಬ್ರಹ್ಮನು ನಮಸ್ಕಾರಮಾಡಿ ಬಹುವಿನಯದಿಂದ ಇಂತು ಪ್ರಾರ್ಥಿಸತೊಡಗಿದನು.

೧೫. ಓ ತಾಯೆ, ಶಿವೆ, ದೇವದೇವನಾದ ನಿನ್ನ ಪತಿಯಿಂದ ಮೊದಲು ನಾನು ಸೃಷ್ಟಿಸಲ್ಪಟ್ಟೆನು. ಆ ಪರಮಾತ್ಮನಾದ ಶಿವನಿಂದಲೇ ಎಲ್ಲಪ್ರಜೆಗಳೂ ಸೃಷ್ಟಿಸಲ್ಪಟ್ಟರು.

೧೬. ಎಲೌ ಸರ್ವಮಂಗಳೆಯೇ, ಈ ದೇವತೆಗಳನ್ನೆಲ್ಲಾ ನಾನು ಮನಸ್ಸಿನಿಂದಲೇ ನಿರ್ಮಿಸಿದೆನು. ಮತ್ತೆ ಮತ್ತೆ ಸೃಷ್ಟಿಸುತ್ತಿದ್ದರೂ ಇವರು ಮಾತ್ರ ವೃದ್ಧಿಯನ್ನು ಪಡೆಯುತ್ತಲೇ ಇಲ್ಲ.

೧೭. ಆದುದರಿಂದ ಇನ್ನುಮೇಲೆ ಸ್ತ್ರೀಪುರುಷ ಸಂಯೋಗಜನ್ಯವಾದ ಸೃಷ್ಟಿಯನ್ನು ಮಾಡಬೇಕೆಂದಿರುವೆನು. ಈ ರೀತಿಯಾಗಿ ನನ್ನ ಪ್ರಜೆಗಳೆಲ್ಲರೂ, (ಸಂತಾನರೂಪವಾಗಿ) ಅಭಿವೃದ್ಧಿಯನ್ನು ಪಡೆಯುವಂತಾಗಲಿ.

ನ ನಿರ್ಗತಂ ಪುರಾ ತ್ವತ್ತೋ ನಾರೀಣಾಂ ಕುಲಮವ್ಯಯಂ ।
ತೇನ ನಾರೀಕುಲಂ ಶ್ರೇಷ್ಠಂ ಮಮ ಶಕ್ತಿರ್ನ ವಿದ್ಯತೇ ॥ ೧೮ ॥

ಸರ್ವಾಸಾಮೇವ ಶಕ್ತೀನಾಂ ತ್ವತ್ತಃ ಖಲು ಸಮುದ್ಭವಃ ।
ತಸ್ಮಾತ್ತ್ವಾಂ ಪರಮಾಂ ಶಕ್ತಿಂ ಪ್ರಾರ್ಥಯಾಮ್ಯಖಿಲೇಶ್ವರೀಂ ॥ ೧೯ ॥

ಶಿವೇ ನಾರೀಕುಲಂ ಸ್ರಷ್ಟುಂ ಶಕ್ತಿಂ ದೇಹಿ ನಮೋಽಸ್ತು ತೇ ।
ಚರಾಚರಂ ಜಗದ್ವಿದ್ಧಿ ಹೇತೋರ್ಮಾತಃ ಶಿವಂ ಪ್ರಿಯೇ ॥ ೨೦ ॥

ಅನ್ಯಂ ತ್ವತ್ತಃ ಪ್ರಾರ್ಥಯಾಮಿ ವರಂ ಚ ವರದೇಶ್ವರಿ ।
ದೇಹಿ ಮೇ ತಂ ಕೃಪಾಂ ಕೃತ್ವಾ ಜಗನ್ಮಾತರ್ನಮೋಽಸ್ತು ತೇ ॥ ೨೧ ॥

ಚರಾಚರವಿವೃದ್ಧ್ಯರ್ಥಮಾಂಶೇನೈಕೇನ ಸರ್ವಗೇ ।
ದಕ್ಷಸ್ಯ ಮಮ ಪುತ್ರಸ್ಯ ಪುತ್ರೀ ಭವ ಭವಾಂಬಿಕೇ ॥ ೨೨ ॥

---

೧೮ ಎಲೌ ತಾಯೇ, ನೀನಿದುವರೆಗೆ ಅವಿನಾಶಿಯಾದ ಸ್ತ್ರೀ ಸಂತಾನವನ್ನೇ ತೋರ್ಪಡಿಸದಿರುವೆ ಆದುದರಿಂದ ಶ್ರೇಷ್ಠವಾದ ಆ ನಾರೀಕುಲವನ್ನು ಸೃಷ್ಟಿಸಲು ನನಗೆ ಶಕ್ತಿಯಿಲ್ಲವಾಗಿದೆ

೧೯. ಎಲ್ಲ ಶಕ್ತಿಯರೂ ಕೂಡ ನಿನ್ನಿಂದಲೇ ಉದ್ಭವಿಸಿರುವರಲ್ಲವೇ ? ಆದುದರಿಂದ ಎಲ್ಲರಿಗೂ ಒಡತಿಯಾದ, ಶಕ್ತಿಗಳಿಗೂ ಶಕ್ತಿಯೆನಿಸಿದ ನಿನ್ನನ್ನು ನಾನು ಪ್ರಾರ್ಥಿಸುವೆನು

೨೦. ಓ ತಾಯಿ, ಶಿವಪ್ರಿಯೆ, ನನಗೆ ಸ್ತ್ರೀವರ್ಗವನ್ನು ಸೃಷ್ಟಿಸಲು ತಕ್ಕ ಶಕ್ತಿಯನ್ನು ಅನುಗ್ರಹಿಸು ನಿನಗೆ ನಮಸ್ಕರಿಸುವೆನು ಈ ಚರಾಚರಸ್ವರೂಪವಾದ ಈ ಜಗತ್ತೆಲ್ಲವೂ ಕಾರಣಪುರುಷನಾದ ನಿನ್ನ ಪ್ರಿಯನಿಂದಲೇ ಆದುವೆಂದು ತಿಳಿ.

೨೧. ಇಷ್ಟವಾದ ವರಗಳೆಲ್ಲವನ್ನೂ ನೀಡುವ ತಾಯೇ, ನಿನ್ನನ್ನು ಮತ್ತೊಂದು ವರವನ್ನು ಕೊಡುವಂತೆ ಪ್ರಾರ್ಥಿಸುವೆನು. ನನ್ನ ಮೇಲೆ ಕೃಪೆಯಿಟ್ಟು ಆ ವರವನ್ನು ಅನುಗ್ರಹಿಸು ಓ ಜಗಜ್ಜನನಿ, ನಿನ್ನನ್ನು ನಮಸ್ಕರಿಸುವೆನು.

೨೨. ಸಕಲ ವಸ್ತುಗಳಲ್ಲಿಯೂ, ವ್ಯಾಪಿಸಿರುವ, ಎಲೌ ತಾಯೇ ! ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವನ್ನೂ ನೀನು ಪರಮಪುರುಷನಾದ ಶಿವನೊಂದಿಗೆ ಕಲೆತು ಅಭಿವೃದ್ಧಿಗೊಳಿಸಲೋಸುಗ ನನ್ನ ಮಗನಾದ ದಕ್ಷಪ್ರಜಾಪತಿಯ ಮಗಳಾಗಿ ಅವತರಿಸು.

ಏವಂ ಸಂಯಾಚಿತಾ ದೇವೀ ಬ್ರಹ್ಮಣಾ ಪರಮೇಶ್ವರೀ ।
ತಥಾಸ್ತ್ವಿತಿ ವಚಃ ಪ್ರೋಚ್ಯ ತಚ್ಛಕ್ತಿಂ ವಿಧಯೇ ದದೌ ॥ ೨೩ ॥

ತಸ್ಮಾದ್ಧಿ ಸಾ ಶಿವಾ ದೇವೀ ಶಿವಶಕ್ತಿರ್ಜಗನ್ಮಯೀ ।
ಶಕ್ತಿಮೇಕಾಂ ಭ್ರುವೋರ್ಮಧ್ಯಾತ್ಸಸರ್ಜಾತ್ಮಸಮಪ್ರಭಾಂ ॥ ೨೪ ॥

ತಾಮಾಹ ಪ್ರಹಸನ್ಪ್ರೇಕ್ಷ್ಯ ಶಕ್ತಿಂ ದೇವೇಶ್ವರೋ ಹರಃ ।
ಕೃಪಾಸಿಂಧುರ್ಮಹೇಶಾನೋ ಲೀಲಾಕಾರೀ ಭವಾಂಬಿಕಾಂ ॥ ೨೫ ॥

॥ ಶಿವ ಉವಾಚ ॥

ತಪಸಾರಾಧಿತಾ ದೇವಿ ಬ್ರಹ್ಮಣಾ ಪರಮೇಷ್ಠಿನಾ ।
ಪ್ರಸನ್ನಾ ಭವ ಸುಪ್ರೀತ್ಯಾ ಕುರು ತಸ್ಯಾಖಿಲೇಪ್ಸಿತಂ ॥ ೨೬ ॥

ತಾಮಾಜ್ಞಾಂ ಪರಮೇಶಸ್ಯ ಶಿರಸಾ ಪ್ರತಿಗೃಹ್ಯ ಸಾ ।
ಬ್ರಹ್ಮಣೋ ವಚನಾದ್ದೇವೀ ದಕ್ಷಸ್ಯ ದುಹಿತಾಭವತ್ ॥ ೨೭ ॥

---

೨೩. ಈ ರೀತಿಯಾಗಿ ಬ್ರಹ್ಮನು ಪ್ರಾರ್ಥಿಸಲು ಪರಮೇಶ್ವರಿಯು, ಹಾಗೆಯೇ ಆಗಲೆಂದು ನುಡಿದು, ಸ್ತ್ರೀವರ್ಗದ ಸೃಷ್ಟಿಶಕ್ತಿಯನ್ನು ಅವನಿಗೆ ಅನುಗ್ರಹಿಸಿದಳು.

೨೪. ಜಗನ್ಮಾಯೆಯೂ, ಶಿವಶಕ್ತಿಸ್ವರೂಪಿಣಿಯೂ, ಆದ ಆ ಸರ್ವಮಂಗಳೆಯು, ತನ್ನಂತೆಯೇ ಇರುವ ಕಾಂತಿಮತಿಯಾದ ಶಕ್ತಿಯೊಬ್ಬಳನ್ನು ತನ್ನ ಹುಬ್ಬುಗಳ ನಡುವೆಯಿಂದ ಸೃಷ್ಟಿಸಿದಳು.

೨೫. ಆಗ ಕರುಣಾಸಾಗರನೂ, ದೇವತೆಗಳಿಗೆಲ್ಲಾ ಪ್ರಭುವೂ, ಲೀಲಾಮೂರ್ತಿಯೂ, ಆದ ಮಹೇಶ್ವರನು ನಸುನಗುತ್ತ ಆ ಜಗಜ್ಜನನಿಯಾದ ನೂತನ ಶಕ್ತಿಯನ್ನು ನೋಡಿ ಇಂತೆಂದನು.

೨೬. ಎಲೌ ದೇವಿ, ಈ ಪರಮೇಷ್ಠಿಯು ( ಬ್ರಹ್ಮನು ) ತಪಸ್ಸಿನಿಂದ ನಿನ್ನನ್ನು ಆರಾಧಿಸುವನು. ಆತನಲ್ಲಿ ನೀನು ಪ್ರಸನ್ನಳಾಗು. ಸಂತೋಷದಿಂದ ಆತನ ಅಭಿಲಾಷೆಯನ್ನು ನೆರವೇರಿಸು.

೨೭. ಹೀಗೆ ನುಡಿದ ಪರಶಿವನ ಅಪ್ಪಣೆಯನ್ನು ಶಿರಸಾವಹಿಸಿ, ಆ ನವೀನ ಶಕ್ತಿಯು, ಬ್ರಹ್ಮನ ಮಾತಿನಂತೆ, ದಕ್ಷಪ್ರಜಾಪತಿಗೆ ಮಗಳಾದಳು.

ದತ್ತ್ವೈವಮತುಲಾಂ ಶಕ್ತಿಂ ಬ್ರಹ್ಮಣೇ ಸಾ ಶಿವಾ ಮುನೇ ।
ವಿವೇಶ ದೇಹಂ ಶಂಭೋರ್ಹಿ ಶಂಭುಶ್ಚಾಂತರ್ದಧೇ ಪ್ರಭುಃ ॥ ೨೮ ॥

ತದಾಪ್ರಭೃತಿ ಲೋಕೇಽಸ್ಮಿನ್ಸ್ತ್ರಿಯಾ ಭಾಗಃ ಪ್ರಕಲ್ಪಿತಃ ।
ಆನಂದಂ ಪ್ರಾಪ ಸ ವಿಧಿಃ ಸೃಷ್ಟಿರ್ಜಾತಾ ಚ ಮೈಥುನೀ ॥ ೨೯ ॥

ಏತತ್ತೇ ಕಥಿತಂ ತಾತ ಶಿವರೂಪಂ ಮಹೋತ್ತಮಂ ।
ಅರ್ಧನಾರೀನರಾರ್ದ್ಧಂ ಹಿ ಮಹಾಮಂಗಲದಂ ಸತಾಂ ॥ ೩೦ ॥

ಏತದಾಖ್ಯಾನಮನಘಂ ಯಃ ಪಠೇಚ್ಛೃಣುಯಾದಪಿ ।
ಸ ಭುಕ್ತ್ವಾ ಸಕಲಾನ್ಭೋಗಾನ್ಪ್ರಯಾತಿ ಪರಮಾಂ ಗತಿಂ ॥ ೩೧ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಶಿವಸ್ಯಾರ್ಧನಾರೀಶ್ವರಾವತಾರವರ್ಣನಂ ನಾಮ
ತೃತೀಯೋಽಧ್ಯಾಯಃ

---

೨೮. ಓ ಸನತ್ಕುಮಾರ, ಈರೀತಿ ಅನುಪಮವಾದ ತನ್ನ ಶಕ್ತಿಯನ್ನು ಬ್ರಹ್ಮನಿಗೆ ಅನುಗ್ರಹಿಸಿ, ಆ ಪರಾಶಕ್ತಿಯಾದ ಶಿವೆಯು ಶಿವನ ದೇಹದಲ್ಲೇ ಐಕ್ಯವಾದಳು ಬಳಿಕ ಪ್ರಭುವಾದ ಶಿವನೂ, ಅಲ್ಲಿಯೇ ಅಂತರ್ಧಾನಹೊಂದಿದನು

೨೯. ಅದುಮೊದಲುಗೊಂಡು ಈ ಲೋಕದಲ್ಲಿ ಸೃಷ್ಟಿಕಾರ್ಯದಲ್ಲಿ ಸ್ತ್ರೀಯೂ ಭಾಗವಹಿಸುವಂತಾಯಿತು ಆ ಬ್ರಹ್ಮನೂ ಬಹುವಾಗಿ ಆನಂದವನ್ನು ಪಡೆದನು ಅಂದಿನಿಂದ ಸ್ತ್ರೀಪುರುಷಸಮಾಗಮವೇ ಸೃಷ್ಟಿಗೆ ನಿಮಿತ್ತವಾಯಿತು

೩೦. ಅಪ್ಪಾ! ಅತಿಮಾಹಾತ್ಮ್ಯಶಾಲಿಯೂ, ಉತ್ತಮೋತ್ತಮವೂ, ಸತ್ಪುರುಷರಿಗೆ ಅತಿಶಯವಾದ ಮಂಗಲಗಳನ್ನು ನೀಡುವಂಥದೂ ಆದ ಅರ್ಧನಾರೀನರಾತ್ಮಕವಾದ ಶಿವಸ್ವರೂಪವನ್ನು ನಿನಗೆ ವಿವರಿಸಿದೆನು.

೩೧ ಪಾಪಪರಿಹಾರಕವಾದ ಈ ಉಪಾಖ್ಯಾನವನ್ನು ಯಾವಾತನು ಪಠಿಸುವನೋ, ಅಥವಾ ಶ್ರವಣಮಾಡುವನೋ, ಆತನು ಈ ಲೋಕದಲ್ಲಿ ಸಕಲ ಭೋಗಭಾಗ್ಯಗಳನ್ನೂ ಅನುಭವಿಸಿ ಶ್ರೇಷ್ಠವಾದ ಗತಿಯನ್ನು ಪಡೆಯುವನು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ ಶಿವನ
ಅರ್ಧನಾರೀಶ್ವರಾವತಾರ ವರ್ಣನವೆಂಬ ಮೂರನೆಯ
ಅಧ್ಯಾಯವು ಮುಗಿದುದು.

*

## ॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಚತುರ್ಥೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಸನತ್ಕುಮಾರ ಸರ್ವಜ್ಞ ಚರಿತಂ ಶಾಂಕರಂ ಮುದಾ ।
ರುದ್ರೇಣ ಕಥಿತಂ ಪ್ರೀತ್ಯಾ ಬ್ರಹ್ಮಣೇ ಸುಖದಂ ಸದಾ ॥ ೧ ॥

॥ ಶಿವ ಉವಾಚ ॥

ಸಪ್ತಮೇ ಚೈವ ವಾರಾಹೇ ಕಲ್ಪೇ ಮನ್ವಂತರಾಭಿಧೇ ।
ಕಲ್ಪೇಶ್ವರೋಽಥ ಭಗವಾನ್ಸರ್ವಲೋಕಪ್ರಕಾಶನಃ ॥ ೨ ॥

## ನಾಲ್ಕನೆಯ ಅಧ್ಯಾಯವು.

೧. ಎಲೈ ಸರ್ವಜ್ಞನಾದ ಸನತ್ಕುಮಾರಮುನಿಯೇ, ಸತ್ಪುರುಷರಿಗೆ ಸುಖದಾಯಕವಾದ ಶಂಕರನ ದಿವ್ಯಚರಿತ್ರವನ್ನು, ರುದ್ರನು ಬ್ರಹ್ಮನಿಗೆ ಪ್ರೀತಿಯಿಂದ ತಿಳಿಸಿದನು. ಅದನ್ನೇ ನಿನಗೀಗ ತಿಳಿಸುವೆನು.

೨-೩. ಶಿವನು ನುಡಿದನು :—ಎಲೈ ಬ್ರಹ್ಮನೇ ಕೇಳು. ಏಳನೆಯದಾದ ವೈವಸ್ವತಮನ್ವಂತರದಲ್ಲಿ ಶ್ವೇತವರಾಹಕಲ್ಪದಲ್ಲಿ ಎಲ್ಲ ಲೋಕಗಳನ್ನೂ ಬೆಳಗಿಸು

ಮನೋರ್ವೈವಸ್ವತಸ್ಯೈವ ತೇ ಪ್ರಪುತ್ರೋ ಭವಿಷ್ಯತಿ ।
ತದಾ ಚತುರ್ಯುಗಾಶ್ಚೈವ ತಸ್ಮಿನ್ಮನ್ವಂತರೇ ವಿಧೇ ॥ ೩ ॥

ಅನುಗ್ರಹಾರ್ಥಂ ಲೋಕಾನಾಂ ಬ್ರಾಹ್ಮಣಾನಾಂ ಹಿತಾಯ ಚ ।
ಉತ್ಪಶ್ಯಾಮಿ ವಿಧೇ ಬ್ರಹ್ಮನ್ದ್ವಾಪರಾಖ್ಯಯುಗಾಂತಿಕೇ ॥ ೪ ॥

ಯುಗಪ್ರವೃತ್ತ್ಯಾ ಚ ತದಾ ತಸ್ಮಿಂಶ್ಚ ಪ್ರಥಮೇ ಯುಗೇ ।
ದ್ವಾಪರೇ ಪ್ರಥಮೇ ಬ್ರಹ್ಮನ್ಯದಾ ವ್ಯಾಸಃ ಸ್ವಯಂ ಪ್ರಭುಃ ॥ ೫ ॥

ತದಾಹಂ ಬ್ರಾಹ್ಮಣಾರ್ಥಾಯ ಕಲೌ ತಸ್ಮಿನ್ಯುಗಾಂತಿಕೇ ।
ಭವಿಷ್ಯಾಮಿ ಶಿವಾಯುಕ್ತಃ ಶ್ವೇತೋ ನಾಮ ಮಹಾಮುನಿಃ ॥ ೬ ॥

ಹಿಮವಚ್ಛಿಖರೇ ರಮ್ಯೇ ಛಾಗಲೇ ಪರ್ವತೋತ್ತಮೇ ।
ತದಾ ಶಿಷ್ಯಾಃ ಶಿಖಾಯುಕ್ತಾ ಭವಿಷ್ಯಂತಿ ವಿಧೇ ಮಮ ॥ ೭ ॥

ಶ್ವೇತಃ ಶ್ವೇತಶಿಖಶ್ಚೈವ ಶ್ವೇತಾಶ್ವಃ ಶ್ವೇತಲೋಹಿತಃ ।
ಚತ್ವಾರೋ ಧ್ಯಾನಯೋಗಾತ್ತೇ ಗಮಿಷ್ಯಂತಿ ಪುರಂ ಮಮ ॥ ೮ ॥

---

ವಂತಹ ಭಗವಂತನಾದ ಕಲ್ಪೇಶ್ವರನು ಆ ಮನುವಿನ ಮೊಮ್ಮಗನಾಗಿ ಹುಟ್ಟುವನು. ಆಗ ಆ ಮನ್ವಂತರದಲ್ಲಿ ನಾಲ್ಕು ಯುಗಗಳು ನಡೆಯುವುವು

೪-೫. ಆ ಮನ್ವಂತರದ ಪ್ರಥಮಾವೃತ್ತಿಯ ದ್ವಾಪರಯುಗಾಂತ್ಯದಲ್ಲಿ ಅದೇ ಮನುವಿನ ಮೊಮ್ಮಗನಾದ ಕಲ್ಪೇಶ್ವರನು ವ್ಯಾಸನೆನಿಸುವನು ಆಗ ಲೋಕಾನುಗ್ರಹಾರ್ಥವಾಗಿಯೂ ಬ್ರಾಹ್ಮಣರ ಹಿತಕ್ಕಾಗಿಯೂ,

೬. ನಾನು ಆ ದ್ವಾಪರಯುಗಾನಂತರ ಕಲಿಯುಗದ ಆದಿಭಾಗದಲ್ಲಿ (ನನ್ನ ಸತಿಯಾದ ಶಿವೆಯೊಡನೆ) ಶ್ವೇತನೆಂಬ ಶಿಖಾಧಾರಿಯಾದ ಮಹಾಮುನಿಯಾಗಿ ಅವತರಿಸುವೆನು

೭. ಹಿಮವತ್ಪರ್ವತದ ಶಿಖರಗಳಲ್ಲಿ ಒಂದಾದ ಮನೋಹರವಾದ ಛಾಗಲವೆಂಬ ಪರ್ವತಶ್ರೇಷ್ಠದಲ್ಲಿ ನಾನು ವಾಸಿಸುವೆನು ಆಗ ನನಗೆ ಶಿಖಾಧಾರಿಗಳಾದ (ನಾಲ್ಕುಮಂದಿ) ಶಿಷ್ಯರು ಆಗುವರು.

೮. ಶ್ವೇತ, ಶ್ವೇತಶಿಖ, ಶ್ವೇತಾಶ್ವ, ಶ್ವೇತಲೋಹಿತ ಎಂಬ ಹೆಸರಿನ ಆ ನಾಲ್ಕುಮಂದಿ ಶಿಷ್ಯರು ಧ್ಯಾನಯೋಗದಿಂದ ನನ್ನ ಪುರವನ್ನು ಸೇರುವರು

ತತೋ ಭಕ್ತಾ ಭವಿಷ್ಯಂತಿ ಜ್ಞಾತ್ವಾ ಮಾಂ ತತ್ತ್ವತೋಽವ್ಯಯಂ ।
ಜನ್ಮಮೃತ್ಯುಜರಾಹೀನಾಃ ಪರಬ್ರಹ್ಮಸಮಾಧಯಃ ॥ ೯ ॥

ದ್ರಷ್ಟುಂ ಶಕ್ಯೋ ನರೈರ್ನಾಹಂ ಋತೇ ಧ್ಯಾನಾತ್ಪಿತಾಮಹ ।
ದಾನಧರ್ಮಾದಿಭಿರ್ವತ್ಸ ಸಾಧನೈಃ ಕರ್ಮಹೇತುಭಿಃ ॥ ೧೦ ॥

ದ್ವಿತೀಯೇ ದ್ವಾಪರೇ ವ್ಯಾಸಃ ಸತ್ಯೋ ನಾಮ ಪ್ರಜಾಪತಿಃ ।
ಯದಾ ತದಾ ಭವಿಷ್ಯಾಮಿ ಸುತಾರೋ ನಾಮತಃ ಕಲೌ ॥ ೧೧ ॥

ತತ್ರಾಪಿ ಮೇ ಭವಿಷ್ಯಂತಿ ಶಿಷ್ಯಾ ವೇದವಿದೋ ದ್ವಿಜಾಃ ।
ದುಂದುಭಿಃ ಶತರೂಪಶ್ಚ ಹೃಷೀಕಃ ಕೇತುಮಾಂಸ್ತಥಾ ॥ ೧೨ ॥

ಚತ್ವಾರೋ ಧ್ಯಾನಯೋಗಾತ್ತೇ ಗಮಿಷ್ಯಂತಿ ಪುರಂ ಮಮ ।
ತತೋ ಮುಕ್ತಾ ಭವಿಷ್ಯಂತಿ ಜ್ಞಾತ್ವಾ ಮಾಂ ತತ್ತ್ವತೋಽವ್ಯಯಂ॥ ೧೩ ॥

---

೯. ಬಳಿಕ ಆ ಭಕ್ತರು ತತ್ತ್ವದೃಷ್ಟಿಯಿಂದ ನಾನೇ ಅವಿನಾಶಿಯಾದ ಪರಮಾತ್ಮನೆಂದು ತಿಳಿದು ಹುಟ್ಟು, ಸಾವು, ಮುಂತಾದ ಕೋಟಲೆಗಳನ್ನು ಕಳೆದುಕೊಂಡು ಪರಬ್ರಹ್ಮಸ್ವರೂಪರಾಗುವರು.

೧೦. ಓ ಪಿತಾಮಹಾ, ಧ್ಯಾನಮಾರ್ಗವೊಂದನ್ನು ಹೊರತು ಇತರ ಕರ್ಮಮಾತ್ರಸಾಧನಗಳಾದ ದಾನಧರ್ಮಾದಿಗಳಿಂದ ಮನುಷ್ಯರು ನನ್ನನ್ನು ನೋಡಲಾರರು.

೧೧. ಎರಡನೆಯ ದ್ವಾಪರಯುಗಾಂತ್ಯದಲ್ಲಿ ಸತ್ಯನೆಂಬ ಪ್ರಜಾಪತಿಯು ವ್ಯಾಸನಾಗಿ ಅವತರಿಸುವನು. ಆಗ ನಾನು ಕಲಿಯುಗಾದಿಯಲ್ಲಿ ಸುತಾರನೆಂಬುದಾಗಿ ಅವತರಿಸುವೆನು.

೧೨. ಆಗ ದುಂದುಭಿ, ಶತರೂಪ, ಹೃಷೀಕ, ಕೇತುಮಂತ, ಎಂಬ ನಾಲ್ಕು ಮಂದಿ ವೇದವಿದರಾದ ಬ್ರಾಹ್ಮಣರು ನನ್ನ ಶಿಷ್ಯರಾಗುವರು.

೧೩. ಆ ನಾಲ್ಕುಮಂದಿಯೂ ಧ್ಯಾನಯೋಗದಿಂದ ನನ್ನ ಲೋಕವನ್ನು ಸೇರಿ ಬಳಿಕ ನಾನೇ ನಾಶರಹಿತನಾದ ಪರಮಾತ್ಮನೆಂದು ತತ್ತ್ವದೃಷ್ಟಿಯಿಂದ ಅರಿತವರಾಗಿ ಮುಕ್ತಿಯನ್ನು ಹೊಂದುವರು.

ತೃತೀಯೇ ದ್ವಾಪರೇ ಚೈವ ಯದಾ ವ್ಯಾಸಸ್ತು ಭಾರ್ಗವಃ ।
ತದಾಪ್ಯಹಂ ಭವಿಷ್ಯಾಮಿ ದಮನಸ್ತು ಪುರಾಂತಿಕೇ ॥ ೧೪ ॥

ತತ್ರಾಪಿ ಚ ಭವಿಷ್ಯಂತಿ ಚತ್ವಾರೋ ಮಮ ಪುತ್ರಕಾಃ ।
ವಿಶೋಕಶ್ಚ ವಿಶೇಷಶ್ಚ ವಿಪಾಪಃ ಪಾಪನಾಶನಃ ॥ ೧೫ ॥

ಶಿಷ್ಯೈಃ ಸಾಹಾಯ್ಯಂ ವ್ಯಾಸಸ್ಯ ಕರಿಷ್ಯೇ ಚತುರಾನನ ।
ನಿವೃತ್ತಿಮಾರ್ಗಂ ಸುದೃಢಂ ವರ್ತಯಿಷ್ಯೇ ಕಲಾವಿಹ ॥ ೧೬ ॥

ಚತುರ್ಥೇ ದ್ವಾಪರೇ ಚೈವ ಯದಾ ವ್ಯಾಸೋಽಂಗಿರಾ ಸ್ಮೃತಃ ।
ತದಾಪ್ಯಹಂ ಭವಿಷ್ಯಾಮಿ ಸುಹೋತ್ರೋ ನಾಮ ನಾಮತಃ ॥ ೧೭ ॥

ತತ್ರಾಪಿ ಮಮ ತೇ ಪುತ್ರಾಶ್ಚತ್ವಾರೋ ಯೋಗಸಾಧಕಾಃ ।
ಭವಿಷ್ಯಂತಿ ಮಹಾತ್ಮಾನಸ್ತನ್ನಾಮಾನಿ ಬ್ರುವೇ ವಿಧೇ ॥ ೧೮ ॥

---

೧೪. ಮೂರನೆಯ ದ್ವಾಪರಯುಗಾಂತ್ಯದಲ್ಲಿ ಭಾರ್ಗವನು ವ್ಯಾಸನಾಗುವನು. ಆಗ ನಾನು ಪುರದಬಳಿ ದಮನನೆಂಬುದಾಗಿ ಅವತರಿಸುವೆನು.

೧೫ ಆಗಲೂ ನನಗೆ ವಿಶೋಕ, ವಿಶೇಷ, ವಿಪಾಪ, ಪಾಪನಾಶನರೆಂಬ ನಾಲ್ಕುಮಂದಿ ಮಕ್ಕಳು ಜನಿಸುವರು

೧೬. ಓ ಚತುರ್ಮುಖ, ನಾನೀ ನಾಲ್ಕುಮಂದಿ ಶಿಷ್ಯರೊಡನೆ ವ್ಯಾಸನಿಗೆ ಸಹಾಯಮಾಡುವೆನು ಆತನು ಉಪದೇಶಿಸಿದ ನಿವೃತ್ತಿ (ಮೋಕ್ಷ) ಮಾರ್ಗವು ದೃಢವಾಗಿ ಬೇರೂರಿ ನಿಲ್ಲುವಂತೆ ಆ ಕಲಿಯುಗದಲ್ಲಿ ಪ್ರಚಾರಗೊಳಿಸುವೆನು.

೧೭. ನಾಲ್ಕನೆಯ ದ್ವಾಪರಯುಗದಲ್ಲಿ ಅಂಗಿರಸ್ಸು ವ್ಯಾಸನಾಗುವನು. ಆಗ ನಾನು ಪ್ರಖ್ಯಾತನಾದ ಸುಹೋತ್ರನೆಂಬ ಮುನಿಯಾಗುವೆನು.

೧೮. ಓ ವಿಧಿ, ಆಗಲೂ ನನಗೆ ಯೋಗಮಾರ್ಗನಿರತರೂ ಮಹಾತ್ಮರೂ ಆದ ನಾಲ್ಕುಮಂದಿ ಪುತ್ರರು ಜನಿಸುವರು. ಅವರ ಹೆಸರುಗಳನ್ನು ತಿಳಿಸುವೆನು.

**ಸುಮುಖೋ ದುರ್ಮುಖಶ್ಚೈವ ದುರ್ದಭೋ ದುರತಿಕ್ರಮಃ ।**
**ಶಿಷ್ಯೈಃ ಸಾಹಾಯ್ಯಂ ವ್ಯಾಸಸ್ಯ ಕರಿಷ್ಯೇಽಹಂ ತದಾ ವಿಧೇ ॥ ೧೯ ॥**

**ಪಂಚಮೇ ದ್ವಾಪರೇ ಚೈವ ವ್ಯಾಸಸ್ತು ಸವಿತಾ ಸ್ಮೃತಃ ।**
**ತದಾ ಯೋಗೀ ಭವಿಷ್ಯಾಮಿ ಕಂಕೋ ನಾಮ ಮಹಾತಪಾಃ ॥ ೨೦ ॥**

**ತತ್ರಾಪಿ ಮಮ ತೇ ಪುತ್ರಾಶ್ಚತ್ವಾರೋ ಯೋಗಸಾಧಕಾಃ ।**
**ಭವಿಷ್ಯಂತಿ ಮಹಾತ್ಮಾನಸ್ತನ್ನಾಮಾನಿ ಶೃಣುಷ್ವ ಮೇ ॥ ೨೧ ॥**

**ಸನಕಃ ಸನಾತನಶ್ಚೈವ ಪ್ರಭುರ್ಯಶ್ಚ ಸನಂದನಃ ।**
**ವಿಭುಃ ಸನತ್ಕುಮಾರಶ್ಚ ನಿರ್ಮಲೋ ನಿರಹಂಕೃತಿಃ ॥ ೨೨ ॥**

**ತತ್ರಾಪಿ ಕಂಕನಾಮಾಹಂ ಸಾಹಾಯ್ಯಂ ಸವಿತುರ್ವಿಧೇ ।**
**ವ್ಯಾಸಸ್ಯ ಹಿ ಕರಿಷ್ಯಾಮಿ ನಿವೃತ್ತಿಪಥವರ್ಧಕಃ ॥ ೨೩ ॥**

---

೧೯. ಎಲೈ ಬ್ರಹ್ಮನೇ, ಕೇಳು ಸುಮುಖ, ದುರ್ಮುಖ, ದುರ್ದಭ, ದುರತಿಕ್ರಮರೆಂಬ ಈ ನಾಲ್ಕುಮಂದಿ ಶಿಷ್ಯರೊಡನೆ ವ್ಯಾಸನಿಗೆ ಸಹಾಯವನ್ನು ಮಾಡುವೆನು.

೨೦. ಐದನೆಯ ದ್ವಾಪರಯುಗಾಂತ್ಯದಲ್ಲಿ ಸವಿತೃವು ವ್ಯಾಸನಾಗುವನು. ಆಗ ನಾನು ಮಹಾತಪಸ್ವಿಯಾದ ಕಂಕನೆಂಬ ಯೋಗಿಯಾಗುವೆನು.

೨೧. ಆಗಲೂ ಸಹ ನನಗೆ ಯೋಗಸಾಧನೆಯಲ್ಲಿ ತೊಡಗಿರುವ ಮಹಾತ್ಮರಾದ ನಾಲ್ಕುಮಂದಿ ಮಕ್ಕಳು ಜನಿಸುವರು. ಅವರ ಹೆಸರುಗಳನ್ನು ತಿಳಿಸುವೆನು ಕೇಳು.

೨೨. ಸನಕನು ಮೊದಲನೆಯವನು ಸನಾತನನು ಎರಡನೆಯವನು ಸಮರ್ಥನಾದ ಸನಂದನು ಮೂರನೆಯವನು. ವಿಭುವೂ ಪಾಪರಹಿತನೂ ಅಹಂಕಾರ ವರ್ಜಿತನೂ ಆದ ಸನತ್ಕುಮಾರನು ನಾಲ್ಕನೆಯವನು.

೨೩. ಎಲೈ ವಿಧಿಯೇ, ಆಗಲೂ ಸಹ ಕಂಕನೆಂಬ ನಾನು ನಿವೃತ್ತಿಮಾರ್ಗವನ್ನು ವಿಸ್ತಾರಗೊಳಿಸುತ್ತಾ ವ್ಯಾಸನಾಗಿರುವ ಸವಿತೃವಿಗೆ ಸಹಾಯವನ್ನೆಸಗುವೆನು.

ಪರಿವೃತ್ತೇ ಪುನಃ ಷಷ್ಠೇ ದ್ವಾಪರೇ ಲೋಕಕಾರಕಃ ।
ಕರ್ತಾ ವೇದವಿಭಾಗಸ್ಯ ಮೃತ್ಯುರ್ವ್ಯಾಸೋ ಭವಿಷ್ಯತಿ　　॥ ೨೪ ॥

ತದಾಪ್ಯಹಂ ಭವಿಷ್ಯಾಮಿ ಲೋಕಾಕ್ಷಿರ್ನಾಮ ನಾಮತಃ ।
ವ್ಯಾಸಸ್ಯ ಸುಸಾಹಾಯ್ಯಾರ್ಥಂ ನಿವೃತ್ತಿಪಥವರ್ಧನಃ　　॥ ೨೫ ॥

ತತ್ರಾಪಿ ಶಿಷ್ಯಾಶ್ಚತ್ವಾರೋ ಭವಿಷ್ಯಂತಿ ದೃಢವ್ರತಾಃ ।
ಸುಧಾಮಾ ವಿರಜಾಶ್ಚೈವ ಸಂಜಯೋ ವಿಜಯಸ್ತಥಾ　　॥ ೨೬ ॥

ಸಪ್ತಮೇ ಪರಿವರ್ತೇ ತು ಯದಾ ವ್ಯಾಸಃ ಶತಕ್ರತುಃ ।
ತದಾಪ್ಯಹಂ ಭವಿಷ್ಯಾಮಿ ಜೈಗೀಷವ್ಯೋ ವಿಭುರ್ವಿಧೇ　　॥ ೨೭ ॥

ಯೋಗಂ ಸಂದೃಢಯಿಷ್ಯಾಮಿ ಮಹಾಯೋಗವಿಚಕ್ಷಣಃ ।
ಕಾಶ್ಯಾಂ ಗುಹಾಂತರೇ ಸಂಸ್ಥೋ ದಿವ್ಯದೇಶೇ ಕುಶಾಸ್ತರಿಃ　　॥ ೨೮ ॥

---

೨೪　ಆರನೆಯ ದ್ವಾಪರಯುಗವು ನಡೆಯುವಾಗ ಲೋಕಕಾರಕನಾದ ಮೃತ್ಯುವೆಂಬುವನು ವೇದಗಳನ್ನು ವಿಭಾಗಗೊಳಿಸಿ ವ್ಯಾಸನೆನಿಸುವನು

೨೫　ಆ ಯುಗಾಂತ್ಯದಲ್ಲಿಯೂ ಸಹ ಮೋಕ್ಷಮಾರ್ಗವನ್ನು ಪ್ರಕಾಶ ಪಡಿಸುತ್ತಾ ಲೋಕಾಕ್ಷಿಯೆಂಬ ಹೆಸರಿನಿಂದ ಪ್ರಸಿದ್ಧನಾಗಿ ಆ ವ್ಯಾಸನಿಗೆ ಸಹಾಯ ವನ್ನಾಚರಿಸುವೆನು

೨೬　ಆಗಲೂ ನನಗೆ ನಿಯಮನಿಷ್ಠರಾದ ಸುಧಾಮ, ವಿರಜಸ್ಸು, ಸಂಜಯ, ವಿಜಯರೆಂಬ ನಾಲ್ಕುಮಂದಿ ಶಿಷ್ಯರಾಗುವರು

೨೭　ಮುಂದೆ ಏಳನೆಯ ದ್ವಾಪರಯುಗವು ಮರಳಿದಾಗ ಶತಕ್ರತುವು ವ್ಯಾಸ ನಾಗುವನು. ಎಲೈ ವಿಧಿಯೇ, ಆಗ ನಾನು ಜೈಗೀಷವ್ಯನೆಂಬ ಮುನಿಯಾಗಿ ಅವತರಿ ಸುವೆನು

೨೮.　ಆಗ ನಾನು ಕಾಶೀಕ್ಷೇತ್ರದಲ್ಲಿ ಒಂದಾನೊಂದು ಗುಹೆಯ ಒಳಹೊಕ್ಕು ರಮ್ಯವಾದ ಪ್ರದೇಶದಲ್ಲಿ ದರ್ಭಾಸ್ತರಣದಮೇಲೆ ಕುಳಿತು ಯೋಗಮಾರ್ಗದಲ್ಲಿ ಬಹು ನಿಪುಣನಾಗಿ ಆ ಯೋಗಶಾಸ್ತ್ರವು ಬೇರೂರಿ ನಿಲ್ಲುವಂತೆ ಮಾಡುವೆನು

ಸಾಹಾಯ್ಯಂ ಚ ಕರಿಷ್ಯಾಮಿ ವ್ಯಾಸಸ್ಯ ಹಿ ಶತಕ್ರತೋಃ ।
ಉದ್ಧರಿಷ್ಯಾಮಿ ಭಕ್ತಾಂಶ್ಚ ಸಂಸಾರಭಯತೋ ವಿಧೇ ॥ ೨೯ ॥

ತತ್ರಾಪಿ ಮಮ ಚತ್ವಾರೋ ಭವಿಷ್ಯಂತಿ ಸುತಾ ಯುಗೇ ।
ಸಾರಸ್ವತಶ್ಚ ಯೋಗೀಶೋ ಮೇಘವಾಹಃ ಸುವಾಹನಃ ॥ ೩೦ ॥

ಅಷ್ಟಮೇ ಪರಿವರ್ತೇ ಹಿ ವಸಿಷ್ಠೋ ಮುನಿಸತ್ತಮಃ ।
ಕರ್ತಾ ವೇದವಿಭಾಗಸ್ಯ ವೇದವ್ಯಾಸೋ ಭವಿಷ್ಯತಿ ॥ ೩೧ ॥

ತತ್ರಾಪ್ಯಹಂ ಭವಿಷ್ಯಾಮಿ ನಾಮತೋ ದಧಿವಾಹನಃ ।
ವ್ಯಾಸಸ್ಯ ಹಿ ಕರಿಷ್ಯಾಮಿ ಸಾಹಾಯ್ಯಂ ಯೋಗವಿತ್ತಮ ॥ ೩೨ ॥

ಕಪಿಲಶ್ಚಾಸುರಿಃ ಪಂಚಶಿಖಃ ಶಾಲ್ವಲಪೂರ್ವಕಃ ।
ಚತ್ವಾರೋ ಯೋಗಿನಃ ಪುತ್ರಾ ಭವಿಷ್ಯಂತಿ ಸಮಾ ಮಮ ॥ ೩೩ ॥

ನವಮೇ ಪರಿವರ್ತೇ ತು ತಸ್ಮಿನ್ನೇವ ಯುಗೇ ವಿಧೇ ।
ಭವಿಷ್ಯತಿ ಮುನಿಶ್ರೇಷ್ಠೋ ವ್ಯಾಸಃ ಸಾರಸ್ವತಾಹ್ವಯಃ ॥ ೩೪ ॥

---

೨೯. ಎಲೈ ಬ್ರಹ್ಮನೇ, ಆಗ ವ್ಯಾಸನಾದ ಶತಕ್ರತುವಿಗೆ ಈರೀತಿ ಸಹಾಯ ಮಾಡುವೆನಲ್ಲದೆ ನನ್ನ ಬಳಿ ಬಂದ ಭಕ್ತರನ್ನು ಸಂಸಾರಭಯದಿಂದ ಬಿಡಿಸುವೆನು.

೩೦. ಆ ಯುಗದಲ್ಲಿಯೂ ನನಗೆ ಸಾರಸ್ವತ, ಯೋಗೀಶ, ಮೇಘವಾಹ, ಸುವಾಹನರೆಂಬ ನಾಲ್ಕುಮಂದಿ ಮಕ್ಕಳಾಗುವರು.

೩೧. ಅನಂತರ ಎಂಟನೆಯ ದ್ವಾಪರಯುಗವು ಮರಳಿದಾಗ ಮುನಿಶ್ರೇಷ್ಠನಾದ ವಸಿಷ್ಠಮಹರ್ಷಿಯು ವೇದಗಳನ್ನು ವಿಭಜನೆಗೊಳಿಸಿ ವೇದವ್ಯಾಸನೆನಿಸುವನು.

೩೨. ಆಗಲೂ ಸಹ ನಾನು ಯೋಗಿಗಳಲ್ಲಿ ಅಗ್ರಗಣ್ಯನೆನಿಸಿ ದಧಿವಾಹನನೆಂಬ ಹೆಸರಿನಿಂದ ಪ್ರಸಿದ್ಧನಾಗಿ ವ್ಯಾಸನಿಗೆ ಸಹಾಯವನ್ನು ಮಾಡುವೆನು.

೩೩. ಆಗ ನನಗೆ ಸಮಾನರಾದ ಯೋಗನಿಷ್ಠರಾದ ಕಪಿಲ, ಆಸುರಿ, ಪಂಚಶಿಖ, ಶಾಲ್ವಲಪೂರ್ವಕ ಎಂಬ ನಾಲ್ಕು ಮಕ್ಕಳು ಜನಿಸುವರು.

೩೪. ಒಂಭತ್ತನೆಯ ಚತುರ್ಯುಗಗಳು ಮರಳಿದಾಗ ಅದೇ ದ್ವಾಪರಯುಗದ ಅಂತ್ಯದಲ್ಲಿ ಸಾರಸ್ವತನೆಂಬ ಮುನಿಶ್ರೇಷ್ಠನು ವ್ಯಾಸನಾಗುವನು.

ವ್ಯಾಸಸ್ಯ ಧ್ಯಾಯತಸ್ತಸ್ಯ ನಿವೃತ್ತಿಪಥವೃದ್ಧಯೇ ।
ತದಾಪ್ಯಹಂ ಭವಿಷ್ಯಾಮಿ ಋಷಭೋ ನಾಮತಃ ಸ್ಮೃತಃ ॥ ೩೫ ॥

ಪರಾಶರಶ್ಚ ಗರ್ಗಶ್ಚ ಭಾರ್ಗವೋ ಗಿರಿಶಸ್ತಥಾ ।
ಚತ್ವಾರಸ್ತತ್ರ ಶಿಷ್ಯಾ ಮೇ ಭವಿಷ್ಯಂತಿ ಸುಯೋಗಿನಃ ॥ ೩೬ ॥

ತೈಃ ಸಾಕಂ ದ್ರಢಯಿಷ್ಯಾಮಿ ಯೋಗಮಾರ್ಗಂ ಪ್ರಜಾಪತೇ ।
ಕರಿಷ್ಯಾಮಿ ಸಾಹಾಯ್ಯಂ ವೈ ವೇದವ್ಯಾಸಸ್ಯ ಸನ್ಮನೇ ॥ ೩೭ ॥

ತೇನ ರೂಪೇಣ ಭಕ್ತಾನಾಂ ಬಹೂನಾಂ ದುಃಖಿನಾಂ ವಿಧೇ ।
ಉದ್ಧಾರಂ ಭವತೋಽಹಂ ವೈ ಕರಿಷ್ಯಾಮಿ ದಯಾಕರಃ ॥ ೩೮ ॥

ಸೋಽವತಾರೋ ವಿಧೇ ಮೇ ಹಿ ಋಷಭಾಖ್ಯಸ್ಸುಯೋಗಕೃತ್ ।
ಸಾರಸ್ವತವ್ಯಾಸಮುನಃ ಪರ್ತಾ ದಾನೋತಿಕಾರಕಃ ॥ ೩೯ ॥

---

೩೫ ತಾನು ಉಪದೇಶಿಸಿದ ನಿವೃತ್ತಿಮಾರ್ಗವು ಅಭಿವೃದ್ಧಿಯನ್ನು ಪಡೆಯುವುದು ಹೇಗೆಂದು ಯೋಚಿಸುತ್ತಿರುವ ಆ ವ್ಯಾಸನಿಗೆ ಸಹಾಯಮಾಡುವ ಸಲುವಾಗಿ ಋಷಭನೆಂಬ ಯೋಗಿಯಾಗಿ ಅವತರಿಸುವೆನು

೩೬. ಯೋಗಮಾರ್ಗವನ್ನು ಚೆನ್ನಾಗಿ ಬಲ್ಲ ಪರಾಶರ, ಗರ್ಗ, ಭಾರ್ಗವ, ಗಿರಿಶ ಎಂಬ ನಾಲ್ಕುಮಂದಿ ಶಿಷ್ಯರು ಆಗ ನನಗೆ ದೊರೆಯುವರು.

೩೭ ಎಲೈ ಪ್ರಜಾಪತಿಯೇ, ಆ ಶಿಷ್ಯರೊಡನೆ ಯೋಗಶಾಸ್ತ್ರವನ್ನು ದೃಢವಾಗಿ ನಿಲ್ಲುವಂತೆ ಮಾಡುವೆನು. ಈರೀತಿಯಾಗಿ ಆ ವೇದವ್ಯಾಸನಿಗೆ ಸಹಾಯವನ್ನು ಮಾಡುವೆನು.

೩೮. ಎಲೈ ಬ್ರಹ್ಮನೇ, ಆಗ ನಾನು ಋಷಭಯೋಗಿವೇಷದಿಂದ ಅನೇಕ ಮಂದಿ ನನ್ನ ಭಕ್ತರು ದುಃಖಕ್ಕೆ ಈಡಾಗಿರುವುದನ್ನು ಕಂಡು ಮರುಕವುಂಟಾದವನಾಗಿ ಅವರೆಲ್ಲರನ್ನೂ ಈ ಸಂಸಾರದುಃಖದಿಂದ ಪಾರುಮಾಡುವೆನು.

೩೯. ಓ ವಿಧಿ, ನನ್ನ ಈ ಯೋಗನಿಷ್ಠವಾದ ಋಷಭನೆಂಬ ಅವತಾರವು ಸಾರಸ್ವತವೆಂಬ ಆ ವ್ಯಾಸನ ಇಷ್ಟಾರ್ಥವನ್ನು ಪೂರ್ಣಗೊಳಿಸಿ ಅನೇಕವಿಧವಾದ ಮಂಗಲಕಾರ್ಯಗಳನ್ನು ನೆರವೇರಿಸುವುದು

**ಅವತಾರೇಣ ಮೇ ಯೇನ ಭದ್ರಾಯುರ್ನೃಪಬಾಲಕಃ ।**
**ಜೀವಿತೋ ಹಿ ಮೃತಃ ಕ್ಷ್ವೇಡದೋಷತೋ ಜನಕೋಜ್ಝಿತಃ ॥ ೪೦ ॥**

**ಪ್ರಾಪ್ತೇಽಥ ಷೋಡಶೇ ವರ್ಷೇ ತಸ್ಯ ರಾಜಶಿಶೋಃ ಪುನಃ ।**
**ಯಯೌ ತದ್ವೇಶ್ಮ ಸಹಸಾ ಋಷಭಃ ಸ ಮುದಾತ್ಮಕಃ ॥ ೪೧ ॥**

**ಪೂಜಿತಸ್ತೇನ ಸ ಮುನಿಃ ಸದ್ರೂಪಶ್ಚ ಕೃಪಾನಿಧಿಃ ।**
**ಉಪಾದಿದೇಶ ತದ್ಧರ್ಮಾನ್ರಾಜ್ಯಯೋಗ್ಯಾನ್ ಪ್ರಜಾಪತೇ ॥ ೪೨ ॥**

**ತತಃ ಸ ಕವಚಂ ದಿವ್ಯಂ ಶಂಖಂ ಖಡ್ಗಂ ಚ ಭಾಸ್ವರಂ ।**
**ದದೌ ತಸ್ಮೈ ಪ್ರಸನ್ನಾತ್ಮಾ ಸರ್ವಶತ್ರುವಿನಾಶನಂ ॥ ೪೩ ॥**

**ತದಂಗಭಸ್ಮನಾಮೃಶ್ಯ ಕೃಪಯಾ ದೀನವತ್ಸಲಃ ।**
**ಸ ದ್ವಾದಶಸಹಸ್ರಸ್ಯ ಗಜಾನಾಂ ಚ ಬಲಂ ದದೌ ॥ ೪೪ ॥**

---

೪೦. ಭದ್ರಾಯುವೆಂಬ ರಾಜಕುಮಾರನು ವಿಷಪ್ರಯೋಗಕ್ಕೆ ಗುರಿಯಾಗಿ ಸತ್ತುಹೋದನು. ಆ ಕುವರನನ್ನು ತಂದೆಯೂ ಸಹ ತಿರಸ್ಕರಿಸಿಬಿಟ್ಟಿದ್ದನು. ಅಂತಹ ಭದ್ರಾಯುವನ್ನು ನನ್ನೀ ಋಷಭಯೋಗೀ ಅವತಾರವು ಬದುಕಿಸಿತು.

೪೧. ಆ ರಾಜಕುಮಾರನಿಗೆ ಹದಿನಾರುವರ್ಷಗಳು ತುಂಬುತ್ತಬಂದುವು. ಆಗ ನನ್ನ ಅವತಾರವಾದ ಋಷಭಯೋಗೀಶ್ವರನು ಅಕಸ್ಮಾತ್ತಾಗಿ ಅವನ ಮನೆಗೆ ಬಂದನು.

೪೨. ಸಾತ್ತ್ವಿಕಶ್ರೇಷ್ಠನೂ ಕೃಪಾಸಾಗರನೂ ಆದ ಆ ಮುನಿಯನ್ನು ರಾಜ ಕುವರನು ಸತ್ಕರಿಸಿದನು. ಆಗ ಆ ಮುನಿಯು ಆ ಕುಮಾರನಿಗೆ ರಾಜರಿಗೆ ಉಚಿತ ವಾದ ರಾಜಧರ್ಮಗಳನ್ನು ಉಪದೇಶಮಾಡಿದನು.

೪೩. ಅನಂತರ ಸರ್ವ ಶತ್ರುಗಳನ್ನೂ ಸಂಹಾರಮಾಡುವಂತಹ ದಿವ್ಯವಾದ ಕವಚವನ್ನೂ, ಶಂಖವನ್ನೂ, ಅತಿ ಚೂಪಾಗಿ ಥಳಥಳಿಸುತ್ತಿರುವ ಕತ್ತಿಯನ್ನೂ ಆ ಮುನಿಯು ಪ್ರಸನ್ನನಾಗಿ ಅವನಿಗೆ ಅನುಗ್ರಹಿಸಿದನು.

೪೪. ದೀನರಲ್ಲಿ ವಾತ್ಸಲ್ಯವುಳ್ಳ ಆ ಮುನಿಯು ಕರುಣೆಯಿಂದ ತನ್ನ ಮೈಗೆ ತೊಡೆದಿದ್ದ ಭಸ್ಮವನ್ನು ತೆಗೆದುಕೊಂಡು ಆ ಭದ್ರಾಯುವಿನ ಮೈಯನ್ನು ಸವರಿ ದೊಡನೆಯೇ ಹನ್ನೆರಡುಸಾವಿರ ಆನೆಗಳ ಬಲವು ಅವನಿಗೆ ಉಂಟಾಯಿತು.

ಇತಿ ಭದ್ರಾಯುಷಂ ಸಮ್ಯಗನುಶಾಸ್ಯ ಸಮಾತೃಕಂ ।
ಯಯೌ ಸ್ವೈರಗತಸ್ತಾಭ್ಯಾಂ ಪೂಜಿತೋ ಋಷಭಃ ಪ್ರಭುಃ ॥ ೪೫ ॥

ಭದ್ರಾಯುರಪಿ ರಾಜರ್ಷಿರ್ಜಿತ್ವಾ ರಿಪುಗಣಾನ್ವಿಧೇ ।
ರಾಜ್ಯಂ ಚಕಾರ ಧರ್ಮೇಣ ವಿವಾಹ್ಯ ಕೀರ್ತಿಮಾಲಿನೀಂ ॥ ೪೬ ॥

ಇತ್ಥಂ ಪ್ರಭಾವ ಋಷಭೋಽವತಾರಃ ಶಂಕರಸ್ಯ ಮೇ ।
ಸತಾಂ ಗತಿರ್ದೀನಬಂಧುರ್ನವಮಃ ಕಥಿತಸ್ತವ ॥ ೪೭ ॥

ಋಷಭಸ್ಯ ಚರಿತ್ರಂ ಹಿ ಪರಮಂ ಪಾವನಂ ಮಹತ್ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಶ್ರೋತವ್ಯಂ ಚ ಪ್ರಯತ್ನತಃ ॥ ೪೮ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಋಷಭಮಚರಿತ್ರವರ್ಣನಂ ನಾಮ
ಚತುರ್ಥೋಽಧ್ಯಾಯಃ

---

೪೫　ಈರೀತಿ ಆಕಸ್ಮಿಕವಾಗಿ ಬಂದ ಪ್ರಭುವಾದ ಋಷಭಯೋಗೀಶ್ವರನು ಭದ್ರಾಯುವನ್ನೂ ಆತನ ತಾಯಿಯನ್ನೂ ಸಂತೋಷಪಡಿಸಿ ಅವರಿಂದ ಸತ್ಕೃತನಾಗಿ ತನ್ನಿಷ್ಟಬಂದೆಡೆಗೆ ಹೊರಟುಹೋದನು

೪೬　ಇತ್ತಲಾಗಿ ಭದ್ರಾಯುವು ತನ್ನ ಶತ್ರುಗಳನ್ನೆಲ್ಲಾ ನಿಗ್ರಹಿಸಿ ಕೀರ್ತಿ ಮಾಲಿನಿಯೆಂಬ ವಧುವನ್ನು ಮದುವೆಯಾಗಿ ಧರ್ಮದಿಂದ ರಾಜ್ಯವನ್ನು ಪಾಲಿಸುತ್ತ ರಾಜರ್ಷಿಯೆನಿಸಿಕೊಂಡು ಆಳುತ್ತಿದ್ದನು

೪೭.　ಸತ್ಪುರುಷರಿಗೆ ಗತಿಯೆನಿಸಿದವನೂ ದೀನಬಂಧುವೂ, ಮೇಲೆ ವಿವರಿಸಿ ದಂತಹ ಮಹಾಮಹಿಮಾಶಾಲಿಯೂ ಆದ ಋಷಭಯೋಗೀಶ್ವರನು ನನ್ನ ಒಂಭತ್ತನೆಯ ಅವತಾರವು. ಇದನ್ನು ನಿನಗೆ ತಿಳಿಸಿರುವೆನು

೪೮.　ಆ ಋಷಭಚರಿತ್ರವು ಪರಮಪಾವನವಾದುದು ಇದು ಸ್ವರ್ಗವನ್ನು ಕರುಣಿಸುವುದು ಯಶಸ್ಕರವಾದುದು ಆಯುಸ್ಸನ್ನೂ ಹೆಚ್ಚಿಸುವುದು ಇದನ್ನು ಪ್ರಯತ್ನಪೂರ್ವಕವಾಗಿ ಯಾದರೂ ಕೇಳಲೇಬೇಕು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ ಋಷಭಚರಿತ್ರ
ವರ್ಣನವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಪಂಚಮೋಽಧ್ಯಾಯಃ

॥ ಶಿವ ಉವಾಚ ॥

ದಶಮೇ ದ್ವಾಪರೇ ವ್ಯಾಸಸ್ತ್ರಿಧಾಮಾ ನಾಮತೋ ಮುನಿಃ ।
ಹಿಮವಚ್ಛಿಖರೇ ರಮ್ಯೇ ಭೃಗುತುಂಗೇ ನಗೋತ್ತಮೇ ॥ ೧ ॥

ತತ್ರಾಪಿ ಮಮ ಪುತ್ರಾಶ್ಚ ಭೃಂಗಾದ್ಯಾಃ ಶ್ರುತಿಸಂಮಿತಾಃ ।
ಬಲಬಂಧುರ್ನರಾಮಿತ್ರಃ ಕೇತುಶೃಂಗಸ್ತಪೋಧನಃ ॥ ೨ ॥

---

### ಐದನೆಯ ಅಧ್ಯಾಯವು.

೧. ಹತ್ತನೆಯ ದ್ವಾಪರಯುಗದಲ್ಲಿ ತ್ರಿಧಾಮನೆಂಬ ಮುನಿಯು ವ್ಯಾಸನಾಗುವನು. ಆಗ ನಾನು ರಮಣೀಯವಾದ ಹಿಮವತ್ಪರ್ವತದ ಶಿಖರಗಳಲ್ಲೊಂದಾದ ಭೃಗುತುಂಗವೆಂಬ ಶಿಖರವೊಂದರಲ್ಲಿರುವೆನು.

೨. ಆಗ ನನಗೆ ಭೃಂಗ ಮೊದಲಾದ ವೇದಮಾರ್ಗಾನುಸಾರಿಗಳಾದ ಬಲಬಂಧು, ನರಾಮಿತ್ರ, ಕೇತುಶೃಂಗ, ತಪೋಧನ ಎಂಬ ಹೆಸರಿನ ಮಕ್ಕಳಾಗುವರು.

ಏಕಾದಶೇ ದ್ವಾಪರೇ ತು ವ್ಯಾಸಶ್ಚ ತ್ರಿವೃತೋ ಯದಾ।
ಗಂಗಾದ್ವಾರೇ ಕಲೌ ನಾಮ್ನಾ ತಪೋಽಹಂ ಭವಿತಾ ತದಾ ॥ ೩ ॥

ಲಂಬೋದರಶ್ಚ ಲಂಬಾಕ್ಷಃ ಕೇಶಲಂಬಃ ಪ್ರಲಂಬಕಃ।
ತತ್ರಾಪಿ ಪುತ್ರಾಶ್ಚತ್ವಾರೋ ಭವಿಷ್ಯಂತಿ ದೃಢವ್ರತಾಃ ॥ ೪ ॥

ದ್ವಾದಶೇ ಪರಿವರ್ತೇ ತು ಶತತೇಜಾಶ್ಚ ವೇದಕೃತ್।
ತತ್ರಾಪ್ಯಹಂ ಭವಿಷ್ಯಾಮಿ ದ್ವಾಪರಾಂತೇ ಕಲಾವಿಹ ॥ ೫ ॥

ಹೇಮಕಂಚುಕಮಾಸಾದ್ಯ ನಾಮ್ನಾ ಹ್ಯತ್ರಿಃ ಪರಿಪ್ಲುತಃ।
ವ್ಯಾಸಸ್ಯೈವ ಸಾಹಾಯ್ಯಾರ್ಥಂ ನಿವೃತ್ತಿಪಥರೋಪಣಃ ॥ ೬ ॥

ಸರ್ವಜ್ಞಃ ಸಮಬುದ್ಧಿಶ್ಚ ಸಾಧ್ಯಃ ಶರ್ವಃ ಸುಯೋಗಿನಃ।
ತತ್ರೇತಿ ಪುತ್ರಾಶ್ಚತ್ವಾರೋ ಭವಿಷ್ಯಂತಿ ಮಹಾಮುನೇ ॥ ೭ ॥

---

೩. ಹನ್ನೊಂದನೆಯ ದ್ವಾಪರಯುಗಾಂತ್ಯದಲ್ಲಿ ತ್ರಿವೃತನೆಂಬ ಮುನಿಯು ವ್ಯಾಸನಾಗುವನು. ಆಗ ನಾನು ಕಲಿಯುಗದಲ್ಲಿ ಗಂಗಾದ್ವಾರದಲ್ಲಿ ತಪನೆಂಬುದಾಗಿ ಅವತರಿಸುವೆನು.

೪. ಆಗಲೂ ನನಗೆ ವ್ರತನಿಷ್ಠರಾದ ಲಂಬೋದರ, ಲಂಬಾಕ್ಷ, ಕೇಶಲಂಬ, ಪ್ರಲಂಬ ಎಂಬ ನಾಲ್ಕುಮಂದಿ ಮಕ್ಕಳು ಜನಿಸುವರು.

೫. ಹನ್ನೆರಡನೆಯ ಚತುರ್ಯುಗವು ಮರಳಿದಾಗ ದ್ವಾಪರಾಂತ್ಯದಲ್ಲಿ ಶತತೇಜಸ್ಸೆಂಬುವನು ವೇದವ್ಯಾಸನೆನಿಸುವನು. ಆಗ ನಾನು ಕಲಿಯುಗದಲ್ಲಿ ಅವತರಿಸುವೆನು.

೬. ಹೇಮಕಂಚುಕವೆಂಬಲ್ಲಿ ಅತ್ರಿಯೆಂಬ ಹೆಸರಿನಿಂದ ಪ್ರಖ್ಯಾತನಾಗಿ ಮೋಕ್ಷ ಮಾರ್ಗವನ್ನು ಪ್ರಚುರಗೊಳಿಸಿ ಆ ವ್ಯಾಸನಿಗೆ ಸಹಾಯಮಾಡುವೆನು.

೭. ಆಗಲೂ ಸಹ ಯೋಗಿಶ್ರೇಷ್ಠರಾದ ಸರ್ವಜ್ಞ, ಸಮಬುದ್ಧಿ, ಸಾಧ್ಯ ಶರ್ವರೆಂಬೀ ನಾಲ್ಕುಮಂದಿ ಮಕ್ಕಳು ನನಗೆ ಜನಿಸುವರು.

ತ್ರಯೋದಶೇ ಯುಗೇ ತಸ್ಮಿನ್ಧರ್ಮೋ ನಾರಾಯಣಃ ಸದಾ ।
ವ್ಯಾಸಸ್ತದಾಹಂ ಭವಿತಾ ಬಲಿರ್ನಾಮ ಮಹಾಮುನಿಃ ॥ ೮ ॥

ವಾಲಖಿಲ್ಯಾಶ್ರಮೇ ಗಂಧಮಾದನೇ ಪರ್ವತೋತ್ತಮೇ ।
ಸುಧಾಮಾ ಕಾಶ್ಯಪಶ್ಚೈವ ವಸಿಷ್ಠೋ ವಿರಜಾಃ ಶುಭಾಃ ॥ ೯ ॥

ಯದಾ ವ್ಯಾಸಸ್ತು ರಕ್ಷಾಖ್ಯಃ ಪರ್ಯಾಯೇ ತು ಚತುರ್ದಶೇ ।
ವಂಶ ಆಂಗಿರಸೇ ತತ್ರ ಭವಿತಾಹಂ ಚ ಗೌತಮಃ ॥ ೧೦ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಕಲೌ ತದಾ ।
ಅತ್ರಿರ್ದವಶದಶ್ಚೈವ ಶ್ರವಣೋऽಥ ಶ್ರವಿಷ್ಕಟಃ ॥ ೧೧ ॥

ವ್ಯಾಸಃ ಪಂಚದಶೇ ತ್ರಯ್ಯಾರುಣಿರ್ವೈ ದ್ವಾಪರೇ ಯದಾ ।
ತದಾಹಂ ಭವಿತಾ ವೇದಶಿರಾ ವೇದಶಿರಸ್ತಥಾ ॥ ೧೨ ॥

---

೮. ಹದಿಮೂರನೇ ದ್ವಾಪರಯುಗದ ಕೊನೆಯಲ್ಲಿ ಸಾಕ್ಷಾನ್ನಾರಾಯಣ ಸ್ವರೂಪನಾದ ಧರ್ಮನು ವ್ಯಾಸನಾಗುವನು. ಆಗ ನಾನು ಬಲಿಯೆಂಬ ಮಹಾಮುನಿಯಾಗಿ ಅವತರಿಸುವೆನು.

೯. ಪರ್ವತಶ್ರೇಷ್ಠವಾದ ಗಂಧಮಾಧನದಲ್ಲಿ ವಾಲಖಿಲ್ಯಾಶ್ರಮದಲ್ಲಿ ನಾಸಿರುವೆನು. ಆಗ ನನಗೆ ಮಂಗಳಸ್ವರೂಪರಾದ ಸುಧಾಮ, ಕಾಶ್ಯಪ, ವಸಿಷ್ಠ, ವಿರಜಸ್ಸು ಎಂಬ ಮಕ್ಕಳು ಹುಟ್ಟುವರು.

೧೦. ಹದಿನಾಲ್ಕನೆಯ ಪರ್ಯಾಯದಲ್ಲಿ ರಕ್ಷನೆಂಬುವನು ವ್ಯಾಸನಾಗುವನು. ಆಗ ನಾನು ಅಂಗಿರಸ್ಸಿನ ವಂಶದಲ್ಲಿ ಗೌತಮನೆಂಬ ಹೆಸರಿನಿಂದ ಹುಟ್ಟುವೆನು.

೧೧. ಆ ಕಲಿಯುಗದಲ್ಲಿಯೂ ಸಹ ಅತ್ರಿ, ದವಶದ, ಶ್ರವಣ, ಶ್ರವಿಷ್ಕಟ ಎಂಬ ನಾಲ್ಕುಮಂದಿ ಮಕ್ಕಳು ನನಗೆ ಜನಿಸುವರು.

೧೨-೧೩. ಹದಿನೈದನೆಯ ದ್ವಾಪರಯುಗಾಂತ್ಯದಲ್ಲಿ ತ್ರಯ್ಯಾರುಣಿಯು ವ್ಯಾಸನಾಗುವನು. ಆಗ ನಾನು ವೇದಶಿರಸ್ಸೆಂಬ ಮುನಿಯಾಗುವೆನು. ನಾನು ವೇದಶಿರಸ್ಸೆಂಬ ಅಸ್ತ್ರವನ್ನು ಸೃಜಿಸುವೆನು. ಅದು ಮಹಾತೇಜಸ್ವಿಯಾದುದು. ನಾನು

ಮಹಾವೀರ್ಯಂ ತದಸ್ತ್ರಂ ಚ ವೇದಶೀರ್ಷಶ್ಚ ಪರ್ವತಃ ।
ಹಿಮವತ್ಪೃಷ್ಠಮಾಸಾದ್ಯ ಸರಸ್ವತ್ಯಾಸ್ತಥೋತ್ತರೇ ॥ ೧೩ ॥

ತತ್ರಾಪಿ ಮಮ ಚತ್ವಾರೋ ಭವಿಷ್ಯಂತಿ ಸುತಾ ದೃಢಾಃ ।
ಕುಣಿಶ್ಚ ಕುಣಿಬಾಹುಶ್ಚ ಕುಶರೀರಃ ಕುನೇತ್ರಕಃ ॥ ೧೪ ॥

ವ್ಯಾಸೋ ಯುಗೇ ಷೋಡಶೇ ತು ಯದಾ ದೇವೋ ಭವಿಷ್ಯತಿ ।
ತದಾ ಯೋಗಪ್ರದಾನಾಯ ಗೋಕರ್ಣೋ ಭವಿತಾ ಹ್ಯಯಂ ॥ ೧೫ ॥

ತತ್ರೈವ ಚ ಸುಪುಣ್ಯಂ ಚ ಗೋಕರ್ಣಂ ನಾಮ ತದ್ವನಂ ।
ತತ್ರಾಪಿ ಯೋಗಿನಃ ಪುತ್ರಾ ಭವಿಷ್ಯಂತ್ಯಂಬುಸಂಮಿತಾಃ ॥ ೧೬ ॥

ಕಾಶ್ಯಪೋಽಪ್ಯುಶನಾಶ್ಚೈವ ಚ್ಯವನೋಽಥ ಬೃಹಸ್ಪತಿಃ ।
ತೇಽಪಿ ತೇನೈವ ಮಾರ್ಗೇಣ ಗಮಿಷ್ಯಂತಿ ಶಿವಾಲಯಂ ॥ ೧೭ ॥

---

ವೇದಶೀರ್ಷವೆಂಬ ಪರ್ವತದಲ್ಲಿ ವಾಸವಾಗಿರುವೆನು ಆ ಪರ್ವತವು ಸರಸ್ವತೀನದಿಗೆ ಉತ್ತರಭಾಗದಲ್ಲಿ ಹಿಮವತ್ಪರ್ವತದ ತಪ್ಪಲಿನಲ್ಲಿರುವುದು

೧೪ ಆಗಲೂ ಸಹ ನನಗೆ ದೃಢಚಿತ್ತರಾದ ಕುಣಿ, ಕುಣಿಬಾಹು, ಕುಶರೀರ, ಕುನೇತ್ರಕ ಎಂಬ ನಾಲ್ಕು ಪುತ್ರರು ಜನಿಸುವರು.

೧೫ ಹದಿನಾರನೆಯ ದ್ವಾಪರಯುಗದ ಅಂತಿಮಭಾಗದಲ್ಲಿ ವೇದನೆಂಬ ಮುನಿಯು ವ್ಯಾಸನಾಗುವನು ಆಗ ನಾನು ಯೋಗಶಾಸ್ತ್ರವನ್ನು ಪ್ರಚಾರಗೊಳಿಸಲು ಗೋಕರ್ಣನೆಂಬುವವನಾಗಿ ಅವತರಿಸುವೆನು.

೧೬. ಅಲ್ಲಿಯೇ ಪರಮಪವಿತ್ರವಾದ ಗೋಕರ್ಣವೆಂಬ ವನವು ಇರುವುದು. ಆಗಲೂ ಸಹ ನನಗೆ ನೀರಿನಂತೆ ಪರಿಶುದ್ಧಾತ್ಮರಾದ ಯೋಗನಿರತರಾದ ಮಕ್ಕಳು ಜನಿಸುವರು

೧೭ ಕಾಶ್ಯಪ, ಉಶನಸ್ಸು, ಚ್ಯವನ, ಬೃಹಸ್ಪತಿ ಎಂಬ ಈ ನಾಲ್ವರು ಮಕ್ಕಳು ಯೋಗಮಾರ್ಗದಿಂದಲೇ ಕೈಲಾಸವನ್ನು ಸೇರುವರು.

ಪರಿವರ್ತೇ ಸಪ್ತದಶೇ ವ್ಯಾಸೋ ದೇವಕೃತಂಜಯಃ ।
ಗುಹಾವಾಸೀತಿ ನಾಮ್ನಾಹಂ ಹಿಮವಚ್ಛಿಖರೇ ಶುಭೇ ॥ ೧೮ ॥

ಮಹಾಲಯೇ ಮಹೋತ್ತುಂಗೇ ಶಿವಕ್ಷೇತ್ರಂ ಹಿಮಾಲಯಂ ।
ಉತಥ್ಯೋ ವಾಮದೇವಶ್ಚ ಮಹಾಯೋಗೋ ಮಹಾಬಲಃ ॥ ೧೯ ॥

ಪರಿವರ್ತೇಽಷ್ಟಾದಶೇ ತು ಯದಾ ವ್ಯಾಸ ಋತಂಜಯಃ ।
ಶಿಖಂಡೀನಾಮತೋಽಹಂ ತದ್ಧಿಮವಚ್ಛಿಖರೇ ಶುಭೇ ॥ ೨೦ ॥

ಸಿದ್ಧಕ್ಷೇತ್ರೇ ಮಹಾಪುಣ್ಯೇ ಶಿಖಂಡೀ ನಾಮ ಪರ್ವತಃ ।
ಶಿಖಂಡಿನೋ ವನಂ ಚಾಪಿ ಯತ್ರ ಸಿದ್ಧನಿಷೇವಿತಂ ॥ ೨೧ ॥

ವಾಚಃಶ್ರವಾ ಋಚೀಕಶ್ಚ ಶ್ಯಾವಾಶ್ವಶ್ಚ ಯತೀಶ್ವರಃ ।
ಏತೇ ಪುತ್ರಾ ಭವಿಷ್ಯಂತಿ ತತ್ರಾಪಿ ಚ ತಪೋಧನಾಃ ॥ ೨೨ ॥

---

೧೮-೧೯. ಹದಿನೇಳನೆಯ ಪರ್ಯಾಯದ ದ್ವಾಪರಯುಗದಲ್ಲಿ ದೇವಕೃತಂಜಯ ನೆಂಬುವನು ವ್ಯಾಸನಾಗುವನು ಆಗ ನಾನು ಶುಭಕರವಾದ, ಅತ್ಯುನ್ನತವೂ ಅತಿ ವಿಸ್ತೃತವೂ ಶಿವಕ್ಷೇತ್ರವೂ ಎನಿಸಿದ ಹಿಮಾಚಲದ ಶಿಖರವೊಂದರಲ್ಲಿ ಗುಹಾವಾಸಿ ಎಂಬ ಹೆಸರಿನಿಂದ ಅವತರಿಸುವೆನು. ಆಗ ನನಗೆ ಉತಥ್ಯ, ವಾಮದೇವ, ಮಹಾ ಯೋಗ, ಮಹಾಬಲರೆಂಬ ನಾಲ್ಕು ಮಕ್ಕಳು ಜನಿಸುವರು.

೨೦. ಹದಿನೆಂಟನೆಯ ಪರ್ಯಾಯದಲ್ಲಿ ಅದೇ ದ್ವಾಪರಾಂತ್ಯದಲ್ಲಿ ಋತಂಜಯ ನೆಂಬುವನು ವ್ಯಾಸನಾಗುವನು. ಆಗ ನಾನು ಶಿಖಂಡಿಯೆಂಬ ಹೆಸರಿನಿಂದ ಅವತರಿ ಸುವೆನು.

೨೧. ಅತಿ ಪುಣ್ಯಕರವಾದ ಹಿಮವತ್ಪರ್ವತದ ಶಿಖರಗಳಲ್ಲೊಂದಾದ ಶಿಖಂಡಿ ಯೆಂಬ ಪರ್ವತವು ನನ್ನ ನಿವಾಸವು. ಅಲ್ಲಿಯೇ ಸರ್ವದಾ ಸಿದ್ಧರಿಗೆ ನಿವಾಸವೆನಿಸಿದ ಶಿಖಂಡಿಯೆಂಬ ವನವೂ ಇರುವುದು.

೨೨ ಆಗಲೂ ಸಹ ನನಗೆ ತಪೋಧನರಾದ ವಾಚಶ್ಶ್ರವಸ್ಸು, ಋಚೀಕ, ಶ್ಯಾವಾಶ್ವ ಯತೀಶ್ವರರೆಂಬ ಮಕ್ಕಳಾಗುವರು.

ಏಕೋನವಿಂಶೇ ವ್ಯಾಸಸ್ತು ಭರದ್ವಾಜೋ ಮಹಾಮುನಿಃ ।
ತದಾಪ್ಯಹಂ ಭವಿಷ್ಯಾಮಿ ಜಟೀ ಮಾಲೀ ಚ ನಾಮತಃ ॥ ೨೩ ॥

ಹಿಮವಚ್ಛಿಖರೇ ತತ್ರ ಪುತ್ರಾ ಮೇಽಂಬುಧಿಸಂಮಿತಾಃ ।
ಹಿರಣ್ಯನಾಮಾ ಕೌಶಲ್ಯೋ ಲೋಕಾಕ್ಷೀ ಪ್ರಧಿಮಿಸ್ತಥಾ ॥ ೨೪ ॥

ಪರಿವರ್ತೇ ವಿಂಶತಿಮೇ ಭವಿತಾ ವ್ಯಾಸ ಗೋತಮಃ ।
ತತ್ರಾಟ್ಟಹಾಸನಾಮಾಹಮಟ್ಟಹಾಸಪ್ರಿಯಾ ನರಾಃ ॥ ೨೫ ॥

ತತ್ರೈವ ಹಿಮವತ್ಪೃಷ್ಠೇ ಅಟ್ಟಹಾಸೋ ಮಹಾಗಿರಿಃ ।
ದೇವಮಾನುಷಯಕ್ಷೇಂದ್ರಸಿದ್ಧಚಾರಣಸೇವಿತಃ ॥ ೨೬ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಸುಯೋಗಿನಃ ।
ಸುಮಂತುರ್ವರ್ವರಿರ್ವಿದ್ವಾನ್ಕಬಂಧಃ ಕುಶಿಕಂಧರಃ ॥ ೨೭ ॥

---

೨೩. ಹತ್ತೊಂಭತ್ತನೆಯ ದ್ವಾಪರಾಂತದಲ್ಲಿ ಮಹಾಮುನಿಯಾದ ಭರದ್ವಾಜನು ವ್ಯಾಸನಾಗುವನು. ಆಗ ನಾನು ಜಟಾಮಾಲಿಯೆಂಬ ಹೆಸರಿನಿಂದ ಅವತರಿಸುವೆನು

೨೪. ಆಗ ನನಗೆ ಹಿಮವತ್ಪರ್ವತದ ಶಿಖರವೊಂದರಲ್ಲಿ ಸಾಗರದಂತೆ ಗಾಂಭೀರ್ಯದಿಂದೊಪ್ಪುವ ಹಿರಣ್ಯನಾಮ, ಕೌಶಲ್ಯ, ಲೋಕಾಕ್ಷಿ, ಪ್ರಧಿಮಿ ಎಂಬ ಪುತ್ರರು ಜನಿಸುವರು.

೨೫ ಇಪ್ಪತ್ತನೆಯ ದ್ವಾಪರಯುಗದಲ್ಲಿ ಗೋತಮನು ವ್ಯಾಸನಾಗುವನು. ಆಗ ನಾನು ಅಟ್ಟಹಾಸನೆಂಬುದಾಗಿ ಅವತರಿಸುವೆನು. ಆ ಜನರೆಲ್ಲರೂ ಅಟ್ಟಹಾಸದಲ್ಲಿ ಆಸಕ್ತರಾಗಿರುವರು.

೨೬. ಆಗ ಹಿಮವತ್ಪರ್ವತದ ತಪ್ಪಲಲ್ಲಿ ಅಟ್ಟಹಾಸವೆಂಬ ಅತ್ಯುನ್ನತವಾದ ಬೆಟ್ಟವೊಂದಿರುವುದು ಅದನ್ನು ದೇವತೆಗಳೂ ಮನುಷ್ಯರೂ ಯಕ್ಷಶ್ರೇಷ್ಠರೂ ಸಿದ್ಧರೂ ಚಾರಣರೂ ಸೇವಿಸುತ್ತಿರುವರು.

೨೭. ಅಲ್ಲಿಯೂ ಸಹ ನನಗೆ ಮಹಾಯೋಗಿಗಳಾದ ಸುಮಂತು, ವರ್ವರಿ, ಕಬಂಧ, ಕುಶಿಕಂಧರರೆಂಬ ಮಕ್ಕಳಾಗುವರು.

ಏಕವಿಂಶೇ ಯುಗೇ ತಸ್ಮಿನ್ವ್ಯಾಸೋ ವಾಚಃಶ್ರವಾ ಯದಾ ।
ತದಾಹಂ ದಾರುಕೋ ನಾಮ ತಸ್ಮಾದ್ದಾರುವನಂ ಶುಭಂ ॥ ೨೮ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಸುಯೋಗಿನಃ ।
ಪ್ಲಕ್ಷೋ ದಾರ್ಭಾಯಣಿಶ್ಚೈವ ಕೇತುಮಾನ್ಗೌತಮಸ್ತಥಾ ॥ ೨೯ ॥

ದ್ವಾಂವಿಶೇ ಪರಿವರ್ತೇ ತು ವ್ಯಾಸಃ ಶುಷ್ಮಾಯಣೋ ಯದಾ ।
ತದಾಪ್ಯಹಂ ಭವಿಷ್ಯಾಮಿ ವಾರಾಣಸ್ಯಾಂ ಮಹಾಮುನಿಃ ॥ ೩೦ ॥

ನಾಮ್ನಾ ವೈ ಲಾಂಗಲೀಭೀಮೋ ಯತ್ರ ದೇವಾಃ ಸವಾಸವಾಃ ।
ದ್ರಕ್ಷ್ಯಂತಿ ಮಾಂ ಕಲೌ ತಸ್ಮಿನ್ನವಂ ಚೈವ ಹಲಾಯುಧಂ ॥ ೩೧ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಸುಧಾರ್ಮಿಕಾಃ ।
ಭಲ್ಲವೀ ಮಧುಪಿಂಗಶ್ಚ ಶ್ವೇತಕೇತುಸ್ತಥೈವ ಚ ॥ ೩೨ ॥

---

೨೮. ಇಪ್ಪತ್ತೊಂದನೆಯ ದ್ವಾಪರಯುಗದಲ್ಲಿ ವಾಚಶ್ರವಸ್ಸೆಂಬ ಮುನಿಯು ವ್ಯಾಸನಾಗುವನು. ಆಗ ನಾನು ದಾರುಕನೆಂಬ ಹೆಸರಿನಿಂದ ಅವತರಿಸುವೆನು. ನಾನಿರುವ ವನವು ದಾರುವನವೆಂದೇ ಪ್ರಸಿದ್ಧವಾಗುವುದು.

೨೯. ಆಗ ನನಗೆ ಯೋಗಮಾರ್ಗದಲ್ಲಿ ನಿಷ್ಣಾತರಾದ ಪ್ಲಕ್ಷ, ದಾರ್ಭಾಯಣಿ, ಕೇತುಮಂತ, ಗೌತಮ ಎಂಬ ನಾಲ್ಕುಮಂದಿ ಮಕ್ಕಳು ಜನಿಸುವರು.

೩೦-೩೧. ಇಪ್ಪತ್ತೆರಡನೆಯ ಪರ್ಯಾಯದ ದ್ವಾಪರಯುಗಾಂತ್ಯದಲ್ಲಿ ಶುಷ್ಮಾಯಣನು ವ್ಯಾಸನಾಗುವನು. ಆಗ ನಾನು ಕಾಶೀಕ್ಷೇತ್ರದಲ್ಲಿ ಲಾಂಗಲೀಭೀಮನೆಂಬ ಮಹಾಮುನಿಯಾಗಿ ಅವತರಿಸುವೆನು. ಆಗ ಇಂದ್ರಾದಿ ದೇವತೆಗಳೆಲ್ಲರೂ ಆ ಕಲಿಯುಗದಲ್ಲಿ ನೇಗಿಲನ್ನು ಹಿಡಿದುಕೊಂಡಿರುವ (ಹಲಾಯುಧನಾದ) ನನ್ನನ್ನು ನೋಡುವರು.

೩೨. ಆಗಲೂ ನನಗೆ ಪರಮಧಾರ್ಮಿಕರಾದ ಭಲ್ಲವ, ಮಧು, ಪಿಂಗ, ಶ್ವೇತಕೇತು ಎಂಬ ನಾಲ್ಕುಮಂದಿ ಮಕ್ಕಳು ಜನಿಸುವರು.

ಪರಿವರ್ತ್ತೇ ತ್ರಯೋವಿಂಶೇ ತೃಣಬಿಂದುರ್ಯದಾ ಮುನಿಃ ।
ಶ್ವೇತೋ ನಾಮ ತದಾಹಂ ವೈ ಗಿರೌ ಕಾಲಂಜರೇ ಶುಭೇ ॥ ೩೩ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪಸ್ವಿನಃ ।
ಉಶಿಕೋ ಬೃಹದಶ್ವಶ್ಚ ದೇವಲಃ ಕವಿರೇವ ಚ ॥ ೩೪ ॥

ಪರಿವರ್ತ್ತೇ ಚತುರ್ವಿಂಶೇ ವ್ಯಾಸೋ ಯಕ್ಷೋ ಯದಾ ವಿಭುಃ ।
ಶೂಲೀ ನಾಮ ಮಹಾಯೋಗೀ ತದ್ಯುಗೇ ನೈಮಿಷೇ ತದಾ ॥ ೩೫ ॥

ತತ್ರಾಪಿ ಮಮ ತೇ ಶಿಷ್ಯಾ ಭವಿಷ್ಯಂತಿ ತಪಸ್ವಿನಃ ।
ಶಾಲಿಹೋತ್ರೋಽಗ್ನಿವೇಶಶ್ಚ ಯುವನಾಶ್ವಃ ಶರದ್ವಸುಃ ॥ ೩೬ ॥

ಪಂಚವಿಂಶೇ ಯದಾ ವ್ಯಾಸಃ ಶಕ್ತಿರ್ನಾಮ್ನಾ ಭವಿಷ್ಯತಿ ।
ತದಾಪ್ಯಹಂ ಮಹಾಯೋಗೀ ದಂಡೀ ಮುಂಡೀಶ್ವರಃ ಪ್ರಭುಃ ॥ ೩೭ ॥

೩೩-೩೪ ಇಪ್ಪತ್ತಮೂರನೆಯ ಪರ್ಯಾಯದಲ್ಲಿ ತೃಣಬಿಂದು ಮುನಿಯು ವ್ಯಾಸನಾಗುವನು. ಆಗ ನಾನು ಶುಭಕರವಾದ ಕಾಲಂಜರಪರ್ವತದಲ್ಲಿ ಶ್ವೇತನೆಂಬ ಹೆಸರಿನಿಂದ ಅವತರಿಸುವೆನು. ಆಗ ನನಗೆ ಮಹಾತಪಸ್ವಿಗಳಾದ ಉಶಿಕ, ಬೃಹದಶ್ವ, ದೇವಲ, ಕವಿ ಎಂಬುದಾಗಿ ನಾಲ್ಕು ಮಕ್ಕಳು ಜನಿಸುವರು.

೩೫-೩೬ ಇಪ್ಪತ್ತನಾಲ್ಕನೆಯ ಚತುರ್ಯುಗವು ಮರಳಿದಾಗ ದ್ವಾಪರಾಂತ್ಯದಲ್ಲಿ ಯಕ್ಷನೆಂಬುವನು ವ್ಯಾಸನಾಗುವನು. ಆಗ ಕಲಿಯುಗದಲ್ಲಿ ನಾನು ಶೂಲಿಯೆಂಬ ಮಹಾಯೋಗಿಯಾಗಿ ನೈಮಿಷಾರಣ್ಯದಲ್ಲಿ ಅವತರಿಸುವೆನು. ತಪಸ್ವಿಗಳಾದ ಶಾಲಿಹೋತ್ರ, ಅಗ್ನಿವೇಶ, ಯುವನಾಶ್ವ, ಶರದ್ವಸು, ಎಂಬೀ ನಾಲ್ಕುಮಂದಿ ಆಗ ನನಗೆ ಶಿಷ್ಯರಾಗುವರು.

೩೭-೩೮ ಇಪ್ಪತ್ತೈದನೆಯ ದ್ವಾಪರಯುಗದ ಕೊನೆಯಲ್ಲಿ ಶಕ್ತಿಯೆಂಬ ಮುನಿಯು ವ್ಯಾಸನೆನಿಸುವನು. ಆಗ ನಾನು ಮಹಾಯೋಗಾಚಾರ್ಯನಾದ ಮುಂಡೀಶ್ವರ

ತತ್ರಾಪಿ ಮಮ ತೇ ಶಿಷ್ಯಾ ಭವಿಷ್ಯಂತಿ ತಪಸ್ವಿನಃ ।
ಭಗಲಃ ಕುಂಡಕರ್ಣಶ್ಚ ಕುಂಭಾಂಡಶ್ಚ ಪ್ರವಾಹಕಃ ॥ ೩೮ ॥

ವ್ಯಾಸಃ ಪರಾಶರೋ ಯರ್ಹಿ ಷಡ್ವಿಂಶೇ ಭವಿತಾಪ್ಯಹಂ ।
ಪುರಂ ಭದ್ರವಟಂ ಪ್ರಾಪ್ಯ ಸಹಿಷ್ಣುರ್ನಾಮ ನಾಮತಃ ॥ ೩೯ ॥

ತತ್ರಾಪಿ ಮಮ ತೇ ಶಿಷ್ಯಾ ಭವಿಷ್ಯಂತಿ ತಪಸ್ವಿನಃ ।
ಉಲೂಕೋ ವಿದ್ಯುತಶ್ಚೈವ ಶಂಬೂಕೋ ಹ್ಯಾಶ್ವಲಾಯನಃ ॥ ೪೦ ॥

ಸಪ್ತವಿಂಶೇ ಯದಾ ವ್ಯಾಸೋ ಜಾತೂಕರ್ಣ್ಯೋ ಭವಿಷ್ಯತಿ ।
ಪ್ರಭಾಸತೀರ್ಥಮಾಶ್ರಿತ್ಯ ಸೋಮಶರ್ಮಾ ತದಾಪ್ಯಹಂ ॥ ೪೧ ॥

ತತ್ರಾಪಿ ಮಮ ತೇ ಶಿಷ್ಯಾ ಭವಿಷ್ಯಂತಿ ತಪಸ್ವಿನಃ ।
ಅಕ್ಷಪಾದಃ ಕುಮಾರಶ್ಚೋಲೂಕೋ ವತ್ಸಸ್ತಥೈವ ಚ ॥ ೪೨ ॥

---

ನೆಂಬ ಸನ್ಯಾಸಿಯಾಗುವೆನು. ಆಗ ನನಗೆ ಭಗಲ, ಕುಂಡಕರ್ಣ, ಕುಂಭಾಂಡ, ಪ್ರವಾಹಕ ಎಂಬ ನಾಲ್ಕುಮಂದಿ ಶಿಷ್ಯರು ಆಗುವರು.

೩೯-೪೦. ಇಪ್ಪತ್ತಾರನೆಯ ದ್ವಾಪರಯುಗಾಂತ್ಯದಲ್ಲಿ ಪರಾಶರನು ವ್ಯಾಸನಾಗುವನು. ಆಗ ನಾನು ಭದ್ರವಟವೆಂಬ ಊರಿನಲ್ಲಿ ಸಹಿಷ್ಣುವೆಂಬುವವನಾಗಿ ಅವತರಿಸುವೆನು. ಆಗ ನನಗೆ ಉಲೂಕ, ವಿದ್ಯುತ, ಶಂಬೂಕ, ಆಶ್ವಲಾಯನರೆಂಬ ತಪಸ್ವಿಗಳು ಶಿಷ್ಯರಾಗುವರು.

೪೧-೪೨. ಇಪ್ಪತ್ತೇಳನೆಯ ಪರ್ಯಾಯದ ದ್ವಾಪರಯುಗದಲ್ಲಿ ಜಾತೂಕರ್ಣ್ಯ ಮುನಿಯು ವ್ಯಾಸನಾದಾಗ, ನಾನು ಪ್ರಭಾಸತೀರ್ಥದಲ್ಲಿ ಸೋಮಶರ್ಮನೆಂಬ ಹೆಸರಿನಿಂದ ಅವತರಿಸುವೆನು. ಆಗ ನನಗೆ ಅಕ್ಷಪಾದ, ಕುಮಾರ, ಉಲೂಕ, ವತ್ಸ ಎಂಬ ತಪೋಧನರು ಶಿಷ್ಯರಾಗುವರು.

ಅಷ್ಟಾವಿಂಶೇ ದ್ವಾಪರೇ ತು ಪರಾಶರಸುತೋ ಹರಿಃ ।
ಯದಾ ಭವಿಷ್ಯತಿ ವ್ಯಾಸೋ ನಾಮ್ನಾ ದ್ವೈಪಾಯನಃ ಪ್ರಭುಃ　　॥ ೪೩ ॥

ತದಾ ಷಷ್ಠೇನ ಚಾಂಶೇನ ಕೃಷ್ಣಃ ಪುರುಷಸತ್ತಮಃ ।
ವಸುದೇವಸುತಃ ಶ್ರೇಷ್ಠೋ ವಾಸುದೇವೋ ಭವಿಷ್ಯತಿ　　॥ ೪೪ ॥

ತದಾಪ್ಯಹಂ ಭವಿಷ್ಯಾಮಿ ಯೋಗಾತ್ಮಾ ಯೋಗಮಾಯಯಾ ।
ಲೋಕವಿಸ್ಮಾಪನಾರ್ಥಾಯ ಬ್ರಹ್ಮಚಾರಿಶರೀರಕಃ　　॥ ೪೫ ॥

ಶಶ್ಮಾನೇ ಮೃತಮುತ್ಸೃಜ್ಯ ದೃಷ್ಟ್ವಾ ಕಾಯಮನಾಮಯಂ ।
ಬ್ರಾಹ್ಮಣಾನಾಂ ಹಿತಾರ್ಥಾಯ ಪ್ರವಿಷ್ಟೋ ಯೋಗಮಾಯಯಾ ॥ ೪೬ ॥

ದಿವ್ಯಾಂ ಮೇರುಗುಹಾಂ ಪುಣ್ಯಾಂ ತ್ವಯಾ ಸಾರ್ಧಂ ಚ ವಿಷ್ಣುನಾ ।
ಭವಿಷ್ಯಾಮಿ ತದಾ ಬ್ರಹ್ಮಂಲ್ಲಕುಲೀ ನಾಮ ನಾಮತಃ　　॥ ೪೭ ॥

---

೪೩-೪೪　ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಪರಾಶರಮಹರ್ಷಿಯ ಮಗನಾದ, ವಿಷ್ಣುವಿನ ಅಂಶಭೂತನಾದ ಕೃಷ್ಣದ್ವೈಪಾಯನಮುನಿಯು ವ್ಯಾಸನಾಗುವನು ಆಗ ಪುರುಷೋತ್ತಮನಾದ ಶ್ರೀಹರಿಯು ತನ್ನ ಆರನೆಯ ಅಂಶದಿಂದ ವಸುದೇವನ ಮಗನಾಗಿ ಹುಟ್ಟಿ ವಾಸುದೇವನೆಂದು ಪ್ರಸಿದ್ಧನಾಗುವನು.

೪೫-೪೬　ಆಗಲೂ ಸಹ ಯೋಗಿವರೇಣ್ಯನಾದ ನಾನು ಈ ಜಗತ್ತಿನ ಜನರನ್ನೆಲ್ಲಾ ಬೆರಗುಗೊಳಿಸಲು ನನ್ನ ಯೋಗಮಾಯೆಯಿಂದ ಬ್ರಹ್ಮಚಾರಿಯ ಶರೀರವನ್ನು ಧರಿಸಿ ತಿರುಗುವೆನು. ಬ್ರಹ್ಮನಿಷ್ಠರಾದ ಮಹನೀಯರಿಗೆ ಒಳ್ಳೆಯದನ್ನು ಮಾಡಬೇಕೆಂಬಾಸೆಯಿಂದ ಶ್ಮಶಾನದಲ್ಲಿ ಬಿಟ್ಟುಬಂದಿದ್ದ ಶವವೊಂದರ ಶರೀರವು ನೀರೋಗವಾಗಿರುವುದನ್ನರಿತು ಅದರೊಳಗೆ ಯೋಗಮಾಯೆಯಿಂದ ಪ್ರವೇಶಿಸಿದೆನು.

೪೭.　ಎಲೈ ಬ್ರಹ್ಮನೇ, ಆಗ ನಾನು ನಿನ್ನೊಡನೆಯೂ ವಿಷ್ಣುವಿನೊಡನೆಯೂ ಸೇರಿ ಪವಿತ್ರವಾದ ಮೇರುಗಿರಿಯ ದಿವ್ಯವಾದ ಗುಹೆಯಲ್ಲಿರುತ್ತಾ ಲಕುಲಿ ಎಂಬ ಹೆಸರಿನಿಂದ ಪ್ರಖ್ಯಾತನಾಗಿರುವೆನು

ಕಾಯಾವತಾರ ಇತ್ಯೇವಂ ಸಿದ್ಧಕ್ಷೇತ್ರಂ ಪರಂ ತದಾ ।
ಭವಿಷ್ಯತಿ ಸುವಿಖ್ಯಾತಂ ಯಾವದ್ಭೂಮಿರ್ಧರಿಷ್ಯತಿ ॥ ೪೮ ॥

ತತ್ರಾಪಿ ಮಮ ತೇ ಶಿಷ್ಯಾ ಭವಿಷ್ಯಂತಿ ತಪಸ್ವಿನಃ । ।
ಕುಶಿಕಶ್ಚೈವ ಗರ್ಗಶ್ಚ ಮಿತ್ರಃ ರೌರುಷ್ಯ ಏವ ಚ ॥ ೪೯ ॥

ಯೋಗಿನೋ ಬ್ರಾಹ್ಮಣಾ ವೇದಪಾರಗಾ ಊರ್ಧ್ವರೇತಸಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ಗಮಿಷ್ಯಂತಿ ಶಿವಂ ಪುರಂ ॥ ೫೦ ॥

ವೈವಸ್ವತೇಽಂತರೇ ಸಮ್ಯಕ್ಪ್ರೋಕ್ತಾ ಹಿ ಪರಮಾತ್ಮನಾ ।
ಯೋಗೇಶ್ವರಾವತಾರಾಶ್ಚ ಸರ್ವಾವರ್ತೇಷು ಸುವ್ರತಾಃ ॥ ೫೧ ॥

ವ್ಯಾಸಾಶ್ಚೈವಾಷ್ಟವಿಂಶತ್ಯಾ ದ್ವಾಪರೇದ್ವಾಪರೇ ವಿಭೋ ।
ಯೋಗೇಶ್ವರಾವತಾರಶ್ಚ ಪ್ರಾರಂಭೇ ಚ ಕಲೌಕಲೌ ॥ ೫೨ ।

---

೪೮ ಅದು ಮೊದಲುಗೊಂಡು ಭೂಮಿಯು ಇರುವವರೆಗೂ ಈ ಪವಿತ್ರವಾದ ಸಿದ್ಧಕ್ಷೇತ್ರವು ಕಾಯಾವತಾರವೆಂಬುದಾಗಿಯೇ ಪ್ರಸಿದ್ಧವಾಗುವುದು.

೪೯. ಆಗಲೂ ಸಹ ಮಹಾತಪಸ್ವಿಗಳಾದ ಕುಶಿಕ, ಗರ್ಗ, ಮಿತ್ರ, ರೌರುಷ್ಯ, ಎಂಬ ನಾಲ್ಕುಮಂದಿ ಮುನಿಗಳು ನನಗೆ ಶಿಷ್ಯರಾಗುವರು.

೫೦. ಅವರೆಲ್ಲರೂ ಮಹಾಯೋಗಿಗಳು, ಬ್ರಹ್ಮನಿಷ್ಠರು. ವೇದಾಧ್ಯಯನ ನಿರತರು, ಜಿತೇಂದ್ರಿಯರು. ಈ ನಾಲ್ಕುಮಂದಿಯೂ ಮಾಹೇಶ್ವರಯೋಗವನ್ನವಲಂಬಿಸಿ ಶಿವಲೋಕವನ್ನು ಸೇರುವರು.

೫೧. ಈರೀತಿ ವೈವಸ್ವತಮನ್ವಂತರದಲ್ಲಿ ಪರಮಾತ್ಮನಾದ ನಾನು ಪ್ರತಿಯೊಂದು ಚತುರ್ಯುಗದ ಆವೃತ್ತಿಯಲ್ಲಿಯೂ ಕೈಗೊಳ್ಳುವ ಯೋಗೇಶ್ವರರ ಅವತಾರಗಳನ್ನು ವರ್ಣಿಸಿದೆನು

೫೨ ಎಲೈ ವಿಧಿಯೇ, ಹೀಗೆ ಪ್ರತಿಯೊಂದು ದ್ವಾಪರಯುಗದ ಅಂತ್ಯದಲ್ಲಿಯೂ ಒಟ್ಟು ಇಪ್ಪತ್ತೆಂಟು ಮಂದಿ ವ್ಯಾಸರು ಅವತರಿಸುವರು. ಪ್ರತಿ ಕಲಿಯುಗದ ಆರಂಭದಲ್ಲಿಯೂ ಇಪ್ಪತ್ತೆಂಟು ಯೋಗೇಶ್ವರರು ಅವತರಿಸುವರು.

ಯೋಗೇಶ್ವರಾವತಾರಾಣಾಂ ಯೋಗಮಾರ್ಗಪ್ರವರ್ಧಕಾಃ ।
ಮಹಾಶೈವಾಶ್ಚ ಚತ್ವಾರಃ ಶಿಷ್ಯಾಃ ಪ್ರತ್ಯೇಕಮವ್ಯಯಾಃ ॥ ೫೩ ॥

ಏತೇ ಪಾಶುಪತಾಃ ಶಿಷ್ಯಾ ಭಸ್ಮೋದ್ಧೂಲಿತವಿಗ್ರಹಾಃ ।
ರುದ್ರಾಕ್ಷಮಾಲಾಭರಣಾಃ ತ್ರಿಪುಂಡ್ರಾಂಕಿತಮಸ್ತಕಾಃ ॥ ೫೪ ॥

ಶಿಷ್ಯಾ ಧರ್ಮರತಾಃ ಸರ್ವೇ ವೇದವೇದಾಂಗಪಾರಗಾಃ ।
ಲಿಂಗಾರ್ಚನರತಾ ನಿತ್ಯಂ ಬಾಹ್ಯಾಭ್ಯಂತರತಃ ಸ್ಥಿತಾಃ ॥ ೫೫ ॥

ಭಕ್ತ್ಯಾ ಮಯಿ ಚ ಯೋಗೇನ ಧ್ಯಾನನಿಷ್ಠಾ ಜಿತೇಂದ್ರಿಯಾಃ ।
ಸಂಖ್ಯಯಾ ದ್ವಾದಶಾಧಿಕ್ಯಶತಂ ಚ ಗಣಿತಾ ಬುಧೈಃ ॥ ೫೬ ॥

ಇತ್ಯೇತದ್ವೈ ಮಯಾ ಪ್ರೋಕ್ತಮವತಾರೇಷು ಲಕ್ಷಣಂ ।
ಮನ್ವಾದಿಕೃಷ್ಣಪರ್ಯಂತಮಷ್ಟಾವಿಂಶದ್ಯುಗಕ್ರಮಾತ್ ॥ ೫೭ ॥

---

೫೩. ಆ ಇಪ್ಪತ್ತೆಂಟು ಯೋಗೇಶ್ವರರ ನಾಲ್ಕುಮಂದಿ ಶಿಷ್ಯರಲ್ಲಿ ಪ್ರತಿಯೊಬ್ಬರೂ ಯೋಗಮಾರ್ಗವನ್ನು ವಿಸ್ತರಿಸಿದವರು. ಪ್ರತಿಯೊಬ್ಬರೂ ಮಹಾಶಿವಭಕ್ತರು, ಪ್ರತಿಯೊಬ್ಬರೂ ನಾಶರಹಿತರು.

೫೪. ಈ ಶಿಷ್ಯರೆಲ್ಲರೂ ಪಾಶುಪತವ್ರತವನ್ನವಲಂಬಿಸಿದವರು ಮೈಗೆಲ್ಲಾ ಭಸ್ಮವನ್ನು ಬಳಿದುಕೊಂಡಿರುವವರು ರುದ್ರಾಕ್ಷಿಯ ಸರಗಳನ್ನು ಒಡವೆಗಳಂತೆ ಧರಿಸಿದವರು. ಮೂರೆಳೆ ವಿಭೂತಿಯಿಂದ ಅಲಂಕೃತವಾದ ಲಲಾಟವುಳ್ಳವರು,

೫೫ ಇಷ್ಟೇ ಅಲ್ಲದೆ ಇವರೆಲ್ಲರೂ ಧರ್ಮವನ್ನು ಬಿಡದವರು, ವೇದಗಳನ್ನೂ ವೇದಾಂಗಗಳನ್ನೂ ಚೆನ್ನಾಗಿ ಬಲ್ಲವರು ಸರ್ವದಾ ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಲಿಂಗಾರ್ಚನದಲ್ಲಿ ನಿರತರಾದವರು.

೫೬ ಇವರು ನನ್ನಲ್ಲಿ ವಿಶೇಷವಾದ ಭಕ್ತಿಯುಳ್ಳವರು. ಯೋಗನಿರತರಾಗಿ ಸರ್ವದಾ ಧ್ಯಾನಾಸಕ್ತರಾಗಿರುವವರು. ಇಂದ್ರಿಯಗಳನ್ನು ನಿಗ್ರಹಿಸಿದವರು ಈ ಶಿಷ್ಯರು ಒಟ್ಟು ಒಂದುನೂರು ಹನ್ನೆರಡುಮಂದಿಯೆಂದು ತಿಳಿದವರು ಹೇಳುವರು.

೫೭ ಈರೀತಿಯಾಗಿ ವೈವಸ್ವತಮನುವನ್ನು ಮೊದಲುಗೊಂಡು ಶ್ರೀಕೃಷ್ಣಾವತಾರದವರೆಗೆ ಇಪ್ಪತ್ತೆಂಟು ಅವತಾರಗಳ ಸ್ವರೂಪವನ್ನು ಯುಗಕ್ರಮವನ್ನನುಸರಿಸಿ ವಿವರಿಸಿದೆನು.

ತತ್ರ ಶ್ರುತಿಸಮೂಹಾನಾಂ ವಿಧಾನಂ ಬ್ರಹ್ಮಲಕ್ಷಣಂ ।
ಭವಿಷ್ಯತಿ ತದಾ ಕಲ್ಪೇ ಕೃಷ್ಣದ್ವೈಪಾಯನೋ ಯದಾ ॥ ೫೮ ॥

ಇತ್ಯೇವಮುಕ್ತ್ವಾ ಬ್ರಹ್ಮಾಣಮನುಗೃಹ್ಯ ಮಹೇಶ್ವರಃ ।
ಪುನಃ ಸಂಪ್ರೇಕ್ಷ್ಯ ದೇವೇಶಸ್ತತ್ರೈವಾಂತರಧೀಯತ ॥ ೫೯ ॥

ಇತಿ ದ್ವಿಚತ್ವಾರಿಂಶಾವತಾರಾಃ ೪೨

**ಇತಿ ಶ್ರೀ ಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಶಿವಾವತಾರವರ್ಣನಂ ನಾಮ ಪಂಚಮೋಽಧ್ಯಾಯಃ**

---

೫೮. ಆ ಶ್ವೇತವರಾಹಕಲ್ಪದಲ್ಲಿಯೇ ಕೃಷ್ಣದ್ವೈಪಾಯನಮುನಿಯು ವ್ಯಾಸನೆನಿಸಿ ಎಲ್ಲ ಶ್ರುತಿಗಳಿಗೂ ಸಾರಭೂತವಾದ ಪರಬ್ರಹ್ಮಸ್ವರೂಪವನ್ನು ವಿವರಿಸುವನು.

೫೯. ಈರೀತಿಯಾಗಿ ತಿಳಿಸಿ ದೇವತೆಗಳಿಗೆಲ್ಲಾ ಪ್ರಭುವಾದ ಆ ಪರಶಿವನು ಬ್ರಹ್ಮನನ್ನು ಅನುಗ್ರಹಿಸಿ, ಮತ್ತೊಮ್ಮೆ ಕೃಪಾದೃಷ್ಟಿಯಿಂದ ಆತನನ್ನು ನೋಡಿ, ಅಲ್ಲಿಯೇ ಕಣ್ಮರೆಯಾದನು.

**ಇಂತು ನಾಲ್ವತ್ತೆರಡು ಅವತಾರಗಳು.**

ಸದ್ಯೋಜಾತಾದಿ ಪಂಚಮೂರ್ತಿಗಳು, ೫ ಪೃಥಿವ್ಯಾದ್ಯಷ್ಟಮೂರ್ತಿಗಳು, ೮ ಅರ್ಧನಾರೀಶ್ವರಾವತಾರ, ೧ ಯೋಗೇಶ್ವರಾವತಾರಗಳು, ೨೮ = ೪೨ (ಒಟ್ಟು ಅವತಾರಗಳು)

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಶಿವಾವತಾರವರ್ಣನವೆಂಬ ಐದನೆಯ ಅಧ್ಯಾಯವು
ಮುಗಿದುದು.

---

|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಷಷ್ಠೋಽಧ್ಯಾಯಃ



|| ಸನತ್ಕುಮಾರ ಉವಾಚ ||

ಭವಾನ್ಕಥಮನುಪ್ರಾಪ್ತೋ ಮಹಾದೇವಾಂಶಜಃ ಶಿವಂ |
ಶ್ರೋತುಮಿಚ್ಛಾಮಿ ತತ್ಸರ್ವಂ ವಕ್ತುಮರ್ಹಸಿ ಮೇ ಪ್ರಭೋ || ೧ ||

|| ನಂದೀಶ್ವರ ಉವಾಚ ||

ಸನತ್ಕುಮಾರ ಸರ್ವಜ್ಞ ಸಾವಧಾನತಯಾ ಶೃಣು ।
ಯಥಾಹಂ ಚ ಶಿವಂ ಪ್ರಾಪ್ತೋ ಮಹಾದೇವಾಂಶಜೋ ಮುನೇ || ೨ ||

---

### ಆರನೆಯ ಅಧ್ಯಾಯವು.

೧. ಸನತ್ಕುಮಾರನು ನಂದಿಕೇಶ್ವರನನ್ನು ಕುರಿತು ಕೇಳಿದನು :—ಶಿವಾಂಶ ಸಂಭೂತನಾದ ನೀನು ಶಿವನನ್ನು ಹೊಂದಿದ ಬಗೆ ಯಾವುದು ? ಅದೆಲ್ಲವನ್ನೂ ಕೇಳ ಬೇಕೆಂದು ಬಯಸುವೆನು. ಪ್ರಭುವೇ, ನನಗೆ ತಿಳಿಸಬೇಕು ಎನ್ನಲು,

೨. ಆಗ ನಂದಿಕೇಶ್ವರನು ಸನತ್ಕುಮಾರನನ್ನು ಕುರಿತು ಹೇಳತೊಡಗಿದನು. ಎಲೈ ಸರ್ವಜ್ಞನಾದ ಮುನಿಯೇ, ಸಾವಧಾನವಾಗಿ ಆಲಿಸು. ಶಿವಾಂಶಸಂಭೂತನಾದ ನಾನು ಶಿವನನ್ನೇ ಸೇರಿದಬಗೆಯನ್ನು ವಿವರಿಸುವೆನು.

ಪ್ರಜಾಕಾಮಃ ಶಿಲಾದೋಽಭೂದುಕ್ತಃ ಪಿತೃಭಿರಾದರಾತ್ ।
ತದುದ್ಧರ್ತುಮನಾ ಭಕ್ತ್ಯಾ ಸಮುದ್ಧಾರಮಭೀಪ್ಸುಭಿಃ ॥ ೩ ॥

ಅಧೋದೃಷ್ಟಿಃ ಸುಧರ್ಮಾತ್ಮಾ ಶಿಲಾದೋ ನಾಮ ವೀರ್ಯವಾನ್ ।
ತಸ್ಯಾಸೀನ್ಮುನಿಕೈರ್ವೃತ್ತಿಃ ಶಿವಲೋಕೇ ಚ ಸೋಽಗಮತ್ ॥ ೪ ॥

ಶಕ್ರಮುದ್ದಿಶ್ಯ ಸ ಮುನಿಸ್ತಪಸ್ತೇಪೇ ಸುದುಸ್ಸಹಂ ।
ನಿಶ್ಚಲಾತ್ಮಾ ಶಿಲಾದಾಖ್ಯೋ ಬಹುಕಾಲಂ ದೃಢವ್ರತಃ ॥ ೫ ॥

ತಪತಸ್ತಸ್ಯ ತಪಸಾ ಸಂತುಷ್ಟೋಽಭೂಚ್ಛತಕ್ರತುಃ ।
ಜಗಾಮ ಚ ವರಂ ದಾತುಂ ಸರ್ವದೇವಪ್ರಭುಸ್ತದಾ ॥ ೬ ॥

ಶಿಲಾದಮಾಹ ಸುಪ್ರೀತ್ಯಾ ಶಕ್ರಸ್ತುಷ್ಟೋಽಸ್ಮಿ ತೇಽನಘ ।
ತೇನ ತ್ವಂ ಮುನಿಶಾರ್ದೂಲ ವರಯಸ್ವ ವರಾನಿತಿ ॥ ೭ ॥

---

೩. ತನ್ನ ಪಿತೃಗಳಿಗೆ ಸದ್ಗತಿಯುಂಟಾಗಬೇಕೆಂಬ ಆಸೆಯಿಂದ ಸಂತತಿಯನ್ನು ಅಪೇಕ್ಷಿಸುತ್ತಿದ್ದ ಶಿಲಾದನೆಂಬುವನನ್ನು ಅವನ ಪಿತೃಗಳು ಆದರದಿಂದ ಆರೀತಿಯೆಸಗುವಂತೆ ಬೋಧಿಸಿದರು.

೪. ಧರ್ಮಾತ್ಮನೂ ಮಹಾವೀರ್ಯಶಾಲಿಯೂ ಆದ ಶಿಲಾದಮುನಿಯು ಸರ್ವದಾ ಕೆಳಗೇ ದೃಷ್ಟಿಯುಳ್ಳವನಾಗಿ ಮುನಿವೃತ್ತಿಯನ್ನೇ ಅವಲಂಬಿಸಿದ್ದು ಶಿವಲೋಕಕ್ಕೆ ತೆರಳಿದನು.

೫. ಆ ಶಿಲಾದಮುನಿಯು ಬಹಳಕಾಲ ನಿಯಮಪರನಾಗಿದ್ದು ನಿಶ್ಚಲಮನಸ್ಸಿನಿಂದ ಇಂದ್ರನನ್ನು ಕುರಿತು ಅತಿ ದುಸ್ಸಹವಾದ ತಪಸ್ಸುಮಾಡುತ್ತಿದ್ದನು. ಆತನ ತಪಸ್ಸಿಗೆ ಇಂದ್ರನು ಮೆಚ್ಚಿದನು.

೬-೭. ಆಗ ಎಲ್ಲ ದೇವತೆಗಳಿಗೂ ಅಧಿಪತಿಯಾದ ಇಂದ್ರನು ವರವನ್ನು ಕೊಡುವದಕ್ಕೆಂದು ಅವನ ಬಳಿಗೆ ಬಂದು ಪ್ರೀತಿಯಿಂದ ಅವನನ್ನು ಕುರಿತು, ಅಯ್ಯಾ, ನಿಷ್ಕಲಂಕನಾದ ಶಿಲಾದಮುನಿಯೇ, ಇಂದ್ರನಾದ ನಾನು ನಿನಗೆ ಸುಪ್ರೀತನಾಗಿರುವೆನು. ಎಲೈ ಮುನಿಶ್ರೇಷ್ಠನೇ, ನಿನಗೆ ಬೇಕಾದ ವರಗಳನ್ನು ಬೇಡು ಎಂದು ನುಡಿದನು.

ತತಃ ಪ್ರಣಮ್ಯ ದೇವೇಶಂ ಸ್ತುತ್ವಾ ಸ್ತುತಿಭಿರಾದರಾತ್ ।
ಶಿಲಾದೋ ಮುನಿಶಾರ್ದೂಲಸ್ತಮಾಹ ಸುಕೃತಾಂಜಲಿಃ ॥ ೮ ॥

॥ ಶಿಲಾದ ಉವಾಚ ॥

ಶತಕ್ರತೋ ಸುರೇಶಾನ ಸಂತುಷ್ಟೋ ಯದಿ ಮೇ ಪ್ರಭೋ ।
ಅಯೋನಿಜಂ ಮೃತ್ಯುಹೀನಂ ಪುತ್ರಮಿಚ್ಛಾಮಿ ಸುವ್ರತಂ ॥ ೯ ॥

॥ ಶಕ್ರ ಉವಾಚ ॥

ಪುತ್ರಂ ದಾಸ್ಯಾಮಿ ಪುತ್ರಾರ್ಥಿನ್ಯೋನಿಜಂ ಮೃತ್ಯುಸಂಯುತಂ ।
ಅನ್ಯಥಾ ತೇ ನ ದಾಸ್ಯಾಮಿ ಮೃತ್ಯುಹೀನಾ ನ ಸಂತಿ ವೈ ॥ ೧೦ ॥

ನ ದಾಸ್ಯಾಮಿ ಸುತಂ ತೇಽಹಂ ಮೃತ್ಯುಹೀನಮಯೋನಿಜಂ ।
ಹರಿರ್ವಿಧಿಶ್ಚ ಭಗವಾನ್ಕಿಮುತಾನ್ಯೇ ಮಹಾಮುನೇ ॥ ೧೧ ॥

---

೮. ಬಳಿಕ ಆ ಶಿಲಾದಮುನಿಯು ದೇವತೆಗಳಿಗೆ ಪ್ರಭುವಾದ ಆ ಇಂದ್ರನನ್ನು ನಮಸ್ಕರಿಸಿ ಆದರದಿಂದ ಸ್ತೋತ್ರಮಾಡುತ್ತಾ ಮುಕುಲಿತಹಸ್ತನಾಗಿ ಅವನನ್ನು ಕುರಿತು ಈರೀತಿ ನುಡಿದನು.

೯. ಸುರಾಧಿಪತಿಯಾದ ಎಲೈ ಶತಕ್ರತುವೇ, ನೀನು ನನಗೆ ಒಲಿದಿರುವುದೇ ಆದರೆ, ಅಯೋನಿಜನೂ ಸಾವಿಲ್ಲದವನೂ ಸದಾಚಾರಶೀಲನೂ ಆದ ಪುತ್ರನೊಬ್ಬನನ್ನು ಕರುಣಿಸೆಂದು ಪ್ರಾರ್ಥಿಸುವೆನು

೧೦. ಹೀಗೆ ಶಿಲಾದಮುನಿಯು ಪ್ರಾರ್ಥಿಸಲು ಇಂದ್ರನು ಅವನನ್ನು ಕುರಿತು ಎಲೈ ಪುತ್ರಾಪೇಕ್ಷೆಯುಳ್ಳ ಶಿಲಾದಮುನಿಯೇ, ನಿನಗೆ ಯೋನಿಸಂಜಾತನೂ ಮರಣ ಸಹಿತನೂ ಆದ ಮಗನನ್ನು ಕೊಡುವೆನು. ಇಲ್ಲವಿದ್ದರೆ ಕೊಡಲಾರೆನು. ಏಕೆಂದರೆ ಸಾವಿಲ್ಲದವರು ಇಲ್ಲವೇ ಇಲ್ಲವು.

೧೧. ಎಲೈ ಮಹಾಮುನಿಯೇ, ಸಾವಿಲ್ಲದವನೂ ಯೋನಿಸಂಜಾತನಲ್ಲದವನೂ ಆದ ಮಗನನ್ನು ಕೊಡಲಾರೆನು ಭಗವಂತರಾದ ಶ್ರೀಹರಿಯೂ ಬ್ರಹ್ಮನೂ ಸಹ ಕೊಡಲಾರರು. ಇತರರೇನು ಕೊಟ್ಟಾರು ?

ತಾವಪಿ ತ್ರಿಪುರಾರ್ಯಂಗಸಂಭವೌ ಮರಣಾನ್ವಿತೌ ।
ತಯೋರಪ್ಯಾಯುಷಾಂ ಮಾನಂ ಕಥಿತಂ ನಿಗಮೇ ಪೃಥಕ್ ॥ ೧೨ ॥

ತಸ್ಮಾದಯೋನಿಜೇ ಪುತ್ರೇ ಮೃತ್ಯುಹೀನೇ ಪ್ರಯತ್ನತಃ ।
ಪರಿತ್ಯಜಾಶಾಂ ವಿಪ್ರೇಂದ್ರ ಗೃಹಾಣಾತ್ಮಕ್ಷಮಂ ಸುತಂ ॥ ೧೩ ॥

ಕಿಂತು ದೇವೇಶ್ವರೋ ರುದ್ರಃ ಪ್ರಸೀದತಿ ಮಹೇಶ್ವರಃ ।
ಸುದುರ್ಲಭೋ ಮೃತ್ಯುಹೀನಸ್ತವ ಪುತ್ರೋ ಹ್ಯಯೋನಿಜಃ ॥ ೧೪ ॥

ಅಹಂ ಚ ವಿಷ್ಣುರ್ಭಗವಾನ್ನುಗ್ರಹಿಣಶ್ಚ ಮಹಾಮುನೇ ।
ಅಯೋನಿಜಂ ಮೃತ್ಯುಹೀನಂ ಪುತ್ರಂ ದಾತುಂ ನ ಶಕ್ನುಮಃ ॥ ೧೫ ॥

ಆರಾಧಯ ಮಹಾದೇವಂ ತತ್ಪುತ್ರವಿನಿಕಾಮ್ಯಯಾ ।
ಸರ್ವೇಶ್ವರೋ ಮಹಾಶಕ್ತಃ ಸ ತೇ ಪುತ್ರಂ ಪ್ರದಾಸ್ಯತಿ ॥ ೧೬ ॥

---

೧೨. ಆ ಹರಿಯೂ ಬ್ರಹ್ಮನೂ ಕೂಡ ತ್ರಿಪುರಸಂಹಾರಿಯಾದ ಶಿವನ ದೇಹದಿಂದ ಹುಟ್ಟಿದವರು. ಅವರಿಗೂ ಮರಣವು ಬಿಟ್ಟಿದ್ದಲ್ಲ. ಅವರೀರ್ವರಿಗೂ ಸಹ ಇಷ್ಟಿಷ್ಟೇ ಆಯುಃಪರಿಮಿತಿಯೆಂದು ವೇದದಲ್ಲಿ ನಿಶ್ಚಯಿಸಲ್ಪಟ್ಟಿರುವುದು.

೧೩. ಆದುದರಿಂದ ಎಲೈ ಬ್ರಾಹ್ಮಣಶ್ರೇಷ್ಠನೇ, ಅಯೋನಿಜನೂ ಮರಣಶೂನ್ಯನೂ ಆದ ಮಗನ ಹಂಬಲವನ್ನು ಬಿಟ್ಟು ನಿನಗೆ ಒಪ್ಪುವಂತಹ ಮಗನನ್ನು ಪ್ರಾರ್ಥಿಸುವವನಾಗು.

೧೪. ಆದರೆ ದೇವತೆಗಳಿಗೆಲ್ಲಾ ಪ್ರಭುವಾದ ಆ ಮಹೇಶ್ವರನು ಪ್ರಸನ್ನನಾದರೆ ಮಾತ್ರ ಅಂತಹ ದುರ್ಲಭನಾದ ಮೃತ್ಯುಹೀನನೂ ಅಯೋನಿಜನೂ ಆದ ಪುತ್ರನೇ ನಿನಗೆ ದೊರೆಯುವನು.

೧೫. ಎಲೈ ಮಹರ್ಷಿಯೇ, ನಾನೂ ಭಗವಂತನಾದ ವಿಷ್ಣುವೂ ಬ್ರಹ್ಮನೂ ಯೋನಿಜನಲ್ಲದವನೂ ಮರಣವರ್ಜಿತನೂ ಆದ ಪುತ್ರನನ್ನು ಕೊಡಲು ಸಾಮರ್ಥ್ಯವಿಲ್ಲದವರಾಗಿರುವೆವು.

೧೬. ಅಂತಹ ಮಗನನ್ನು ಪಡೆಯಲು ಮಹೇಶ್ವರನನ್ನು ಸೇವಿಸು. ಸರ್ವಶಕ್ತನಾದ ಆ ಪ್ರಭುವು ನಿನಗೆ ಅಂತಹ ಪುತ್ರನನ್ನು ಅನುಗ್ರಹಿಸುವನು ಎಂದನು.

॥ ನಂದೀಶ್ವರ ಉವಾಚ ॥

ಏವಂ ವ್ಯಾಹೃತ್ಯ ವಿಪ್ರೇಂದ್ರಮನುಗೃಹ್ಯ ಚ ತಂ ಘೃಣೀ ।
ದೇವೈರ್ವೃತಃ ಸುರೇಶಾನಸ್ಸ್ವಲೋಕಂ ಸಮುಗಾನ್ಮುನೇ ॥ ೧೭ ॥

ಗತೇ ತಸ್ಮಿಂಶ್ಚ ವರದೇ ಸಹಸ್ರಾಕ್ಷೇ ಶಿಲಾಶನಃ ।
ಆರಾಧಯನ್ಮಹಾದೇವಂ ತಪಸಾತೋಷಯದ್ಭವಂ ॥ ೧೮ ॥

ಅಥ ತಸ್ಯೈವಮನಿಶಂ ತತ್ಪರಸ್ಯ ದ್ವಿಜಸ್ಯ ವೈ ।
ದಿವ್ಯಂ ವರ್ಷಸಹಸ್ರಂ ತು ಗತಂ ಕ್ಷಣಮಿವಾದ್ಭುತಂ ॥ ೧೯ ॥

ವಲ್ಮೀಕೇನ ವೃತಾಂಗಶ್ಚ ಲಕ್ಷಕೀಟಗಣೈರ್ಮುನಿಃ ।
ವಜ್ರಸೂಚೀಮುಖೈಶ್ಚಾನ್ಯೈ ರಕ್ತಪೈರ್ಭಿಶ್ಚ ಸರ್ವತಃ ॥ ೨೦ ॥

ನಿರ್ಮಾಂಸರುಧಿರತ್ವಗ್ವೈ ಬಿಲೇ ತಸ್ಮಿನ್ನವಸ್ಥಿತಃ ।
ಅಸ್ಥಿಶೇಷೋಭವತ್ಪಶ್ಚಾಚ್ಛಿಲಾದೋ ಮುನಿಸತ್ತಮಃ ॥ ೨೧ ॥

---

೧೭. ಓ ಸನತ್ಕುಮಾರ, ಈರೀತಿ ಆ ಇಂದ್ರನು ಕನಿಕರದಿಂದ ಶಿಲಾದಮುನಿಗೆ ತಿಳಿಸಿ ತನ್ನ ಜೊತೆಯಲ್ಲಿ ಬಂದಿದ್ದ ದೇವತೆಗಳೊಡನೆ ತನ್ನ ಲೋಕಕ್ಕೆ ಹೊರಟು ಹೋದನು.

೧೮. ವರಪ್ರದನಾದ ಆ ಇಂದ್ರನು ಹೊರಟುಹೋದಮೇಲೆ ಆ ಶಿಲಾದ ಮುನಿಯು ಪರಶಿವನನ್ನು ಆರಾಧಿಸುತ್ತಾ ತಪಸ್ಸಿನಿಂದ ಆ ಶಂಕರನನ್ನು ಸಂತೋಷ ಪಡಿಸಿದನು

೧೯. ಅನಂತರ ಆ ಬ್ರಾಹ್ಮಣನು ಅದೇರೀತಿ ತಪಸ್ಸುಮಾಡುತ್ತಿರಲು ದೇವ ಮಾನದ ಒಂದು ಸಹಸ್ರವರ್ಷಗಳು ಕ್ಷಣದಂತೆ ಕಳೆದುಹೋದುವು

೨೦. ಆ ಮುನಿಯ ಮೈಮೇಲೆಲ್ಲಾ ಹುತ್ತವು ಬೆಳೆದುಬಿಟ್ಟು ಕಾಣಿಸದಂತಾದನು. ವಜ್ರಾಯುಧದಂತೆ ತೀಕ್ಷ್ಣವಾದ, ಸೂಜಿಯ ಮೊನೆಯ ಮುಖವುಳ್ಳ ಲಕ್ಷಾಂತರ ಕ್ರಿಮಿಗಳೂ, ರಕ್ತವನ್ನೇ ಹೀರುವ ಇನ್ನೂ ಇತರ ಕೀಟಗಳೂ ಸುತ್ತಲೂ ಅವನನ್ನು ಪೀಡಿಸಿದುವು.

೨೧. ಮುನಿಶ್ರೇಷ್ಠನಾದ ಆ ಶಿಲಾದನು ಆ ಹುತ್ತದಲ್ಲಿಯೇ ಇರುತ್ತಾ ಮಾಂಸವು ಕರಗಿ ರಕ್ತವು ಹೀರಿ ಚರ್ಮವು ತಿಂದುಹೋಗಿ ಬರಿಯ ಅಸ್ಥಿಪಂಜರವಾಗಿ ಉಳಿದನು.

ತುಷ್ಟಃ ಪ್ರಭುಸ್ತದಾ ತಸ್ಮೈ ದರ್ಶಯಾಮಾಸ ಸ್ವಾಂ ತನುಂ ।
ದಿವ್ಯಾಂ ದಿವ್ಯಗುಣೈರ್ಯುಕ್ತಾಂ ಮಲಭ್ಯಾಂ ವಾಮಬುದ್ಧಿಭಿಃ ॥ ೨೨ ॥

ದಿವ್ಯವರ್ಷಸಹಸ್ರೇಣ ತಪ್ಯಮಾನಾಯ ಶೂಲಧೃಕ್ ।
ಸರ್ವದೇವಾಧಿಪಸ್ತಸ್ಮೈ ವರದೋಽಸ್ಮೀತ್ಯಭಾಷತ ॥ ೨೩ ॥

ಮಹಾಸಮಾಧಿಸಂಲೀನಸ್ಸ ಶಿಲಾದೋ ಮಹಾಮುನಿಃ ।
ನಾಶೃಣೋತ್ತದ್ಗಿರಂ ಶಂಭೋರ್ಭಕ್ತ್ಯಧೀನತರಸ್ಯ ವೈ ॥ ೨೪ ॥

ಯದಾ ಸ್ಪೃಷ್ಟೋ ಮುನಿಸ್ತೇನ ಕರೇಣ ತ್ರಿಪುರಾರಿಣಾ ।
ತದೈವ ಮುನಿಶಾರ್ದೂಲ ಉತ್ಸಸರ್ಜ ತಪಃಕ್ರಮಂ ॥ ೨೫ ॥

ಅಥೋನ್ಮೀಲ್ಯ ಮುನಿರ್ನೇತ್ರೇ ಸೋಮಂ ಶಂಭುಂ ವಿಲೋಕಯನ್ ।
ದ್ರುತಂ ಪ್ರಣಮ್ಯ ಸ ಮುದಾ ಪಾದಯೋರ್ನ್ಯಪತನ್ಮುನೇ ॥ ೨೬ ॥

---

೨೨. ಆಗ ಅವನ ತಪಸ್ಸಿಗೆ ಸಂತೋಷಪಟ್ಟು ಪ್ರಭುವಾದ ಪರಶಿವನು ದಿವ್ಯವಾದ ಗುಣಗಳಿಂದ ಒಪ್ಪುತ್ತಾ ರಮಣೀಯವಾಗಿ ಕಂಗೊಳಿಸುತ್ತಿರುವ ಮತ್ತು ಕಲುಷಿತವಾದ ಮತಿಯುಳ್ಳವರಿಗೆ ದುರ್ಲಭವೆನಿಸಿದ ತನ್ನ ಸ್ವರೂಪವನ್ನು ತೋರ್ಪಡಿಸಿದನು.

೨೩. ಒಂದು ಸಹಸ್ರ ದಿವ್ಯವರ್ಷಗಳ ಪರ್ಯಂತವೂ ತಪಸ್ಸುಮಾಡುತ್ತಿದ್ದ ಆ ಶಿಲಾದಮುನಿಗೆ ಸರ್ವ ದೇವತೆಗಳಿಗೂ ಅಧಿಪತಿಯಾದ ಆ ಶೂಲಪಾಣಿಯು ವರವನ್ನು ಕೊಡುವೆನು ಎಂದು ಹೇಳಿದನು.

೨೪-೨೫. ಮಹತ್ತರವಾದ ಸಮಾಧಿಯಲ್ಲಿ ಮಗ್ನನಾಗಿದ್ದ ಆ ಶಿಲಾದಮುನಿಗೆ ಭಕ್ತಪರಾಧೀನನಾದ ಆ ಪರಮೇಶ್ವರ ಮಾತು ಕೇಳಿಸಲಿಲ್ಲ. ಆಗ ತ್ರಿಪುರಸಂಹಾರಿಯಾದ ಶಿವನು ಅವನನ್ನು ಮುಟ್ಟಿ ಅಲುಗಿಸಲು ಬಳಿಕ ಆ ಮುನಿಶ್ರೇಷ್ಠನು ತಪಸ್ಸನ್ನು ಬಿಟ್ಟು ಎಚ್ಚೆತ್ತನು.

೨೬. ಓ ಸನತ್ಕುಮಾರ ಮುನೀಂದ್ರ, ಅನಂತರ ಆ ಮುನಿಯು ಕಣ್ಣನ್ನು ತೆರೆದೊಡನೆಯೇ ತನ್ನೆದುರಿಗೆ ಪಾರ್ವತೀಸಮೇತನಾಗಿ ನಿಂತಿರುವ ಶಂಕರನನ್ನು ಕಂಡು ಮಹಾಸಂತೋಷದಿಂದ ಅವರ ಕಾಲ್ಗಳಮೇಲೆ ತಟಕ್ಕನೆ ಬಿದ್ದು ನಮಸ್ಕರಿಸಿದನು.

ಹರ್ಷಗದ್ಗದಯಾ ವಾಚಾ ನತಸ್ಕಂಧಃ ಕೃತಾಂಜಲಿಃ ।
ಪ್ರಸನ್ನಾತ್ಮಾ ಶಿಲಾದಸ್ಯ ತುಷ್ಟಾವ ಪರಮೇಶ್ವರಂ ॥ ೨೭ ॥

ತತಃ ಪ್ರಸನ್ನೋ ಭಗವಾನ್ದೇವದೇವಸ್ತ್ರಿಲೋಚನಃ ।
ವರದೋಽಸ್ಮೀತಿ ತಂ ಪ್ರಾಹ ಶಿಲಾದಂ ಮುನಿಪುಂಗವಂ ॥ ೨೮ ॥

ತಪಸಾನೇನ ಕಿಂ ಕಾರ್ಯಂ ಭವತೋ ಹಿ ಮಹಾಮತೇ ।
ದದಾಮಿ ಪುತ್ರಂ ಸರ್ವಜ್ಞಂ ಸರ್ವಶಾಸ್ತ್ರಾರ್ಥಪಾರಗಂ ॥ ೨೯ ॥

ತತಃ ಪ್ರಣಮ್ಯ ದೇವೇಶಂ ತಚ್ಛ್ರುತ್ವಾ ಚ ಶಿಲಾಶನಃ ।
ಹರ್ಷಗದ್ಗದಯಾ ವಾಚೋವಾಚ ಸೋಮವಿಭೂಷಣಂ ॥ ೩೦ ॥

॥ ಶಿಲಾದ ಉವಾಚ ॥

ಮಹೇಶ ಯದಿ ತುಷ್ಟೋಽಸಿ ಯದಿ ವಾ ವರದಶ್ಚ ಮೇ ।
ಇಚ್ಛಾಮಿ ತ್ವತ್ಸಮಂ ಪುತ್ರಂ ಮೃತ್ಯುಹೀನಮಯೋನಿಜಂ ॥ ೩೧ ॥

---

೨೭. ಆಗ ಶಿಲಾದಮುನಿಯು ಬಹುವಾಗಿ ಪ್ರಸನ್ನವಾದ ಮನಸ್ಸುಳ್ಳವನಾಗಿ ವಿನಯದಿಂದ ಶಿರಸ್ಸನ್ನು ಬಾಗಿಸಿ ಕೈಗಳನ್ನು ಜೋಡಿಸಿಕೊಂಡು ಹರ್ಷಗದ್ಗದವಾದ ವಾಣಿಯಿಂದ ಶಿವನನ್ನು ಸ್ತುತಿಸಿದನು

೨೮. ಬಳಿಕ ದೇವದೇವನಾದ ಶಂಕರನು ಸಂತುಷ್ಟನಾಗಿ ಮುನಿಶ್ರೇಷ್ಠನಾದ ಶಿಲಾದನನ್ನು ಕುರಿತು ವರವನ್ನು ಕೊಡುವೆನೆಂದನು.

೨೯ ಎಲೈ ಮಹಾಪ್ರಾಜ್ಞನೇ, ನೀನಿನ್ನೇತಕ್ಕೆ ತಪಸ್ಸುಮಾಡಬೇಕು ? ಸಕಲ ಶಾಸ್ತ್ರಾರ್ಥಗಳನ್ನೂ ಚೆನ್ನಾಗಿಬಲ್ಲ ಸರ್ವಜ್ಞನಾದ ಪುತ್ರನನ್ನು ಕೊಡುವೆನು

೩೦ ಹೀಗೆ ಶಿವನು ನುಡಿದುದನ್ನು ಕೇಳಿದೊಡನೆಯೇ ಆ ಶಿಲಾದನು ಆ ದೇವದೇವನಿಗೆ ನಮಸ್ಕರಿಸಿ ಹರ್ಷದಿಂದ ತುಂಬಿಬಂದ ಧ್ವನಿಯಿಂದ ಆ ಚಂದ್ರಕಲಾ ವತಂಸನನ್ನು ಕುರಿತು,

೩೧ ಎಲೈ ಮಹೇಶ್ವರನೇ, ನೀನು ಸಂತುಷ್ಟನಾಗಿ ನನಗೆ ವರವನ್ನು ಕರುಣಿಸ ಬೇಕೆಂದು ಇಷ್ಟವಿದ್ದರೆ ನಿನಗೆ ಸರಿಸಮನಾದ ಮೃತ್ಯುವರ್ಜಿತನೂ ಯೋನಿಜನಲ್ಲ ದವನೂ ಆದ ಕುಮಾರನೊಬ್ಬನನ್ನು ಬಯಸುವೆನು ಎಂದನು

॥ ನಂದೀಶ್ವರ ಉವಾಚ ॥

ಏವಮುಕ್ತಸ್ತತೋ ದೇವಸ್ತ್ರ್ಯಂಬಕಸ್ತೇನ ಶಂಕರಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಶಿಲಾದಂ ಮುನಿಸತ್ತಮಂ ॥ ೩೨ ॥

॥ ಶಿವ ಉವಾಚ ॥

ಪೂರ್ವಮಾರಾಧಿತೋ ವಿಪ್ರ ಬ್ರಹ್ಮಣಾಹಂ ತಪೋಧನ ।
ತಪಸಾ ಚಾವತಾರಾರ್ಥಂ ಮುನಿಭಿಶ್ಚ ಸುರೋತ್ತಮೈಃ ॥ ೩೩ ॥

ತವ ಪುತ್ರೋ ಭವಿಷ್ಯಾಮಿ ನಂದೀ ನಾಮ್ನಾ ತ್ವಯೋನಿಜಃ ।
ಪಿತಾ ಭವಿಷ್ಯಸಿ ಮಮ ಪಿತುರ್ವೈ ಜಗತಾಂ ಮುನೇ ॥ ೩೪ ॥

॥ ನಂದೀಶ್ವರ ಉವಾಚ ॥

ಏವಮುಕ್ತ್ವಾ ಮುನಿಂ ಪ್ರೇಕ್ಷ್ಯ ಪ್ರಣಿಪತ್ಯಾಸ್ಥಿತಂ ಘೃಣೀ ।
ಸೋಮಂ ತೂರ್ಣಂ ತಮಾದಿಶ್ಯ ತತ್ರೈವಾಂತರ್ದಧೇ ಹರಃ ॥ ೩೫ ॥

ಗತೇ ತಸ್ಮಿನ್ಮಹಾದೇವೇ ಸ ಶಿಲಾದೋ ಮಹಾಮುನಿಃ ।
ಸ್ವಮಾಶ್ರಮಮುಪಾಗಮ್ಯ ಋಷಿಭ್ಯೋಽಕಥಯತ್ತತಃ ॥ ೩೬ ॥

---

೩೨. ಎಲೈ ಸನತ್ಕುಮಾರನೇ, ಈರೀತಿ ಶಿಲಾದನು ಪ್ರಾರ್ಥಿಸಲು ಪ್ರಭುವಾದ ಶಿವನು ಪ್ರಸನ್ನಚಿತ್ತನಾಗಿ ಇಂತೆಂದನು.

೩೩-೩೪. ಎಲೈ ಮಹಾತಪಸ್ವಿಯಾದ ಶಿಲಾದಮಹರ್ಷಿಯೇ, ಹಿಂದೆ ಬ್ರಹ್ಮನೂ ಮುನಿಗಳೂ ದೇವತೆಗಳೂ ಎಲ್ಲರೂ ತಪಸ್ಸಿನಿಂದ ನನ್ನನ್ನು ಆರಾಧಿಸಿ ಅವತಾರಮಾಡ ಬೇಕೆಂದು ಬಿನ್ನವಿಸಿಕೊಂಡಿದ್ದರು. ಆದರಂತೆ ನಾನೀಗ ನಂದಿಯೆಂಬ ಹೆಸರಿನಿಂದ ನಿನಗೆ ಅಯೋನಿಜನಾದ ಮಗನಾಗಿ ಅವತರಿಸುವೆನು. ಎಲೈ ಮುನಿಯೇ, ಸಕಲ ಜಗತ್ತುಗಳಿಗೂ ಜನಕನಾದ ನನಗೆ ನೀನು ಜನಕನಾಗುವೆ.

೩೫. ಓ ಸನತ್ಕುಮಾರ, ನೈಬಾಗಿಸಿ ವಿನೀತನಾಗಿ ನಿಂತಿರುವ ಆ ಮುನಿಯನ್ನು ಕುರಿತು ಈರೀತಿ ನುಡಿದು ಪಾರ್ವತಿಯೊಡನೆ ಶ್ರೀ ಶಂಕರನು ಅಲ್ಲಿಯೇ ಅಂತರ್ಧಾನಹೊಂದಿದನು.

೩೬. ಶಂಕರನು ಅಂತರ್ಧಾನಹೊಂದಿದಮೇಲೆ ಆ ಶಿಲಾದಮುನಿಯು ತನ್ನ ಆಶ್ರಮಕ್ಕೆ ಬಂದು ಈ ವೃತ್ತಾಂತವೆಲ್ಲವನ್ನೂ ಋಷಿಗಳಿಗೆ ತಿಳಿಸಿದನು.

ಕಿಯತಾ ಚೈವ ಕಾಲೇನ ತದಾಸೌ ಜನಕಃ ಸ ಮೇ ।
ಯಜ್ಞಾಂಗಣಂ ಚಕರ್ಷಾಶು ಯಜ್ಞಾರ್ಥಂ ಯಜ್ಞವಿತ್ತಮಃ ॥ ೩೭ ॥

ತತಃ ಕ್ಷಣಾದಹಂ ಶಂಭೋಸ್ತನುಜಸ್ತಸ್ಯ ಚಾಜ್ಞಯಾ ।
ಸ ಜಾತಃ ಪೂರ್ವಮೇವಾಹಂ ಯುಗಾಂತಾಗ್ನಿಸಮಪ್ರಭಃ ॥ ೩೮ ॥

ಅವರ್ಷಂಸ್ತದಾ ಪುಷ್ಕರಾವರ್ತಕಾದ್ಯಾ
ಜಗುಃ ಖೇಚರಾಃ ಕಿನ್ನರಾಃ ಸಿದ್ಧಸಾಧ್ಯಾಃ ।
ಶಿಲಾದಾತ್ಮಜತ್ವಂ ಗತೇ ಮಯ್ಯೃಷೀಂದ್ರಾ-
ಸ್ಸಮಂತಾಚ್ಚ ವೃಷ್ಟಿಂ ವ್ಯಧುಃ ಕೌಸುಮೀಂ ತೇ ॥ ೩೯ ॥

ಅಥ ಬ್ರಹ್ಮಾದಯೋ ದೇವಾ ದೇವಪತ್ನ್ಯಶ್ಚ ಸರ್ವಶಃ ।
ತತ್ರಾಜಗ್ಮುಶ್ಚ ಸುಪ್ರೀತ್ಯಾ ಹರಿಶ್ಚೈವ ಶಿವೋಽಂಬಿಕಾ ॥ ೪೦ ॥

---

೩೭. ಕೆಲವು ಕಾಲಾನಂತರ ಯಜ್ಞೀಯವಾದ ಪ್ರಕ್ರಿಯೆಗಳನ್ನು ಚೆನ್ನಾಗಿ ಬಲ್ಲ ಆ ನನ್ನ ತಂದೆಯು ಯಜ್ಞವನ್ನು ಮಾಡಲೋಸುಗ ಯಜ್ಞಶಾಲೆಯನ್ನು ನಿರ್ಮಾಣ ಮಾಡಬೇಕೆಂದು ಬಯಸಿ ಭೂಮಿಯನ್ನು ಅಗಿಯತೊಡಗಿದನು.

೩೮. ಅದೇ ಸಮಯದಲ್ಲಿ ನಾನು ಶಿವನ ಅಪ್ಪಣೆಯಿಂದ ಪ್ರಳಯಕಾಲದ ಅಗ್ನಿಯಂತೆ ಹೊಳೆಯುತ್ತಾ ಆ ಶಿಲಾದಮುನಿಗೆ ಶಿವರೂಪದಲ್ಲಿ ಗೋಚರಿಸಿದೆನು.

೩೯ ಆರೀತಿ ನಾನು ಶಿಲಾದಮುನಿಯ ಮಗನಾಗಿ ಅವತರಿಸಿದಾಗ ಪುಷ್ಕರಾವರ್ತಕಾದಿ ಮೇಘಗಳು ಮಳೆಗರೆದುವು. ಅಂತರಿಕ್ಷಸಂಚಾರಿಗಳಾದ ಕಿನ್ನರರೂ ಸಿದ್ಧರೂ ಸಾಧ್ಯರೂ ಇಂಪಾಗಿ ಹಾಡಿದರು ಆಗ ಸುತ್ತಲೂ ದೇವತೆಗಳೂ ಋಷಿಗಳೂ ಎಲ್ಲರೂ ಹೂಮಳೆಯನ್ನು ಸುರಿಸಿದರು.

೪೦ ಅನಂತರ ಬ್ರಹ್ಮಾದಿದೇವತೆಗಳೂ, ಆ ದೇವತೆಗಳ ಪತ್ನಿಯರೂ, ಶ್ರೀ ಹರಿಯೂ, ಪರಶಿವನೂ, ಜಗಜ್ಜನನಿಯೂ ಅತಿಶಯವಾದ ಪ್ರೀತಿಯಿಂದ ಅಲ್ಲಿಗೆ ಬಂದರು.

ತದೋತ್ಸವೋ ಮಹಾನಾಸೀನ್ನನೃತುಶ್ಚಾಪ್ಸರೋಗಣಾಃ ।
ಆದೃತ್ಯ ಮಾಂ ತಥಾ ಲಿಂಗಂ ತುಷ್ಟುವುರ್ಹರ್ಷಿತಾಶ್ಚ ತೇ ॥ ೪೧ ॥

ಸುಪ್ರಶಸ್ಯ ಶಿಲಾದಂ ತಂ ಸ್ತುತ್ವಾ ಚ ಸುಸ್ತವೈಃ ಶಿವೌ ।
ಸರ್ವೇ ಜಗ್ಮುಶ್ಚ ಧಾಮಾನಿ ಶಿವಾವಪ್ಯಖಿಲೇಶ್ವರೌ ॥ ೪೨ ॥

ಶಿಲಾದೋಽಪಿ ಚ ಮಾಂ ದೃಷ್ಟ್ವಾ ಕಾಲಸೂರ್ಯಾನಲಪ್ರಭಂ ।
ತ್ರ್ಯಕ್ಷಂ ಚತುರ್ಭುಜಂ ಬಾಲಂ ಜಟಾಮುಕುಟಧಾರಿಣಂ ॥ ೪೩ ॥

ತ್ರಿಶೂಲಾದ್ಯಾಯುಧಂ ದೀಪ್ತಂ ಸರ್ವಥಾ ರುದ್ರರೂಪಿಣಂ ।
ಮಹಾನಂದಭರಃ ಪ್ರೀತ್ಯಾ ಪ್ರಣಮ್ಯಂ ಪ್ರಣನಾಮ ಚ ॥ ೪೪ ॥

---

೪೧. ಆಗ ಬಹು ವಿಜೃಂಭಣೆಯಿಂದ ಉತ್ಸವವು ಬೆಳೆಯಿತು. ಅಪ್ಸರಸ್ತ್ರೀಯರು ಆನಂದದಿಂದ ನರ್ತಿಸಿದರು. ದೇವತೆಗಳೆಲ್ಲರೂ ಮಹಾಲಿಂಗಸ್ವರೂಪನಾದ ನನ್ನನ್ನು ಆದರದಿಂದ ಕಂಡು ಸಂತೋಷದಿಂದ ಸ್ತೋತ್ರಮಾಡಿದರು.

೪೨. ನನ್ನ ಜನಕನಾದ ಶಿಲಾದನನ್ನು ಬಹುವಾಗಿ ಕೊಂಡಾಡಿ, ಶಿವಪಾರ್ವತಿಯರನ್ನು ಅನೇಕ ಸ್ತೋತ್ರಗಳಿಂದ ಸ್ತುತಿಗೈದು, ಆ ದೇವತೆಗಳೆಲ್ಲರೂ ತಂತಮ್ಮ ಲೋಕಗಳಿಗೆ ತೆರಳಿದರು. ಎಲ್ಲರಿಗೂ ಪ್ರಭುಗಳೆನಿಸಿದ ಆ ಪಾರ್ವತೀಪರಮೇಶ್ವರರೂ ಕೈಲಾಸಕ್ಕೆ ಹಿಂದಿರುಗಿದರು.

೪೩-೪೪. ಆಗ ನಾನು ಆ ಶಿಶುರೂಪದಲ್ಲಿಯೂ ಪ್ರಳಯಕಾಲದ ಸೂರ್ಯ ಮತ್ತು ಅಗ್ನಿಗಳಿಗೆ ಸರಿಸಮವಾದ ಕಾಂತಿಯಿಂದ ಬೆಳಗುತ್ತಿದ್ದೆನು. ನನಗೆ ಮೂರು ಕಣ್ಣುಗಳು, ನಾಲ್ಕು ತೋಳುಗಳು, ತಲೆಯಲ್ಲಿ ಕೂದಲು ಜಟಾಬದ್ಧವಾಗಿ ಕಂಗೊಳಿಸುತ್ತಿತ್ತು. ನನ್ನ ಕೈಗಳಲ್ಲಿ ತ್ರಿಶೂಲ ಮೊದಲಾದ ಆಯುಧಗಳು ಹೊಳೆಯುತ್ತಿದ್ದುವು. ಹೆಚ್ಚೇನು ? ನಾನು ಸರ್ವಾಂಶದಲ್ಲಿಯೂ ಶಿವನನ್ನೇ ಹೋಲುತ್ತಿದ್ದೆನು. ಆಗ ನನ್ನ ಜನಕನಾದ ಶಿಲಾದಮುನಿಯು ಪರಮಾನಂದಭರಿತನಾಗಿ ಅತಿಶಯವಾದ ಪ್ರೀತಿಯಿಂದ ನಮಸ್ಕಾರಾರ್ಹನಾದ ನನಗೆ ನಮಸ್ಕರಿಸಿದನು.

॥ ಶಿಲಾದ ಉವಾಚ ॥

ತ್ವಯಾಹಂ ನಂದಿತೋ ಯಸ್ಮಾನ್ನಂದೀ ನಾಮ್ನಾ ಸುರೇಶ್ವರ ।
ತಸ್ಮಾತ್ತ್ವಾಂ ದೇವಮಾನಂದಂ ನಮಾಮಿ ಜಗದೀಶ್ವರಂ ॥ ೪೫ ॥

॥ ನಂದೀಶ್ವರ ಉವಾಚ ॥

ಮಯಾ ಸಹ ಪಿತಾ ಹೃಷ್ಟಃ ಸುಪ್ರಣಮ್ಯ ಮಹೇಶ್ವರಂ ।
ಉಟಜಂ ಸ್ವಂ ಜಗಾಮಾಶು ನಿಧಿಂ ಲಬ್ಧ್ವೇವ ನಿರ್ಧನಃ ॥ ೪೬ ॥

ಯದಾ ಗತೋಽಹಮುಟಜಂ ಶಿಲಾದಸ್ಯ ಮಹಾಮುನೇ ।
ತದಾಹಂ ತಾದೃಶಂ ರೂಪಂ ತ್ಯಕ್ತ್ವಾ ಮಾನುಷ್ಯಮಾಸ್ಥಿತಃ ॥ ೪೭ ॥

ಮಾನುಷ್ಯಮಾಸ್ಥಿತಂ ದೃಷ್ಟ್ವಾ ಪಿತಾ ಮೇ ಲೋಕಪೂಜಿತಃ ।
ವಿಲಲಾಪಾತಿದುಃಖಾರ್ತಃ ಸ್ವಜನೈಶ್ಚ ಸಮಾವೃತಃ ॥ ೪೮ ॥

---

೪೫. ಶಿಲಾದನು ನುಡಿದನು.—ಎಲೈ ಸುರೇಶ್ವರನೇ, ನೀನು ನನ್ನನ್ನು ಆನಂದಪಡಿಸಿದೆಯಲ್ಲವೇ. ಆದುದರಿಂದಲೇ ನೀನು ನಂದೀ ಎಂಬ ಹೆಸರಿನಿಂದ ಖ್ಯಾತನಾಗು ಓ ಜಗದೀಶ್ವರ, ಆದುದರಿಂದಲೇ ಆನಂದಹೇತುವಾದ ನಿನ್ನನ್ನು ಮತ್ತೊಮ್ಮೆ ನಮಸ್ಕರಿಸುವೆನು.

೪೬. ಓ ಸನತ್ಕುಮಾರ, ಈರೀತಿ ಶಿಲಾದನು ನುಡಿದು ಧನದ ಕೊಪ್ಪರಿಗೆಯೇ ಕೈಗೆ ಸಿಕ್ಕಿದ ಕಡುಬಡವನಂತೆ ಮಹಾಸಂತೋಷಭರಿತನಾಗಿ ನನ್ನೊಡನೆ ತನ್ನ ಆಶ್ರಮಕ್ಕೆ ಬಂದನು.

೪೭. ಎಲೈ ಮುನಿಯೇ, ನಾನು ಶಿಲಾದಮಹರ್ಷಿಯ ಆಶ್ರಮಕ್ಕೆ ಬರುತ್ತಲೇ ಹಿಂದೆ ವಿವರಿಸಿದಂತಹ ದಿವ್ಯರೂಪವನ್ನು ಬಿಟ್ಟು ಸಾಮಾನ್ಯ ಮನುಷ್ಯ ಶಿಶುವಿನಂತೆ ಆಗಿಬಿಟ್ಟೆನು.

೪೮. ನಾನು ಆರೀತಿ ಮನುಷ್ಯ ಶಿಶುವಿನಂತಾದಮೇಲೆ ಲೋಕಪೂಜಿತನಾದ ನನ್ನ ತಂದೆಯು ಅತಿಶಯವಾದ ವ್ಯಥೆಯಿಂದ ಬಹುವಾಗಿ ಗೋಳಾಡಿದನು. ಅನಂತರ ತನ್ನ ಬಂಧುಗಳನ್ನೆಲ್ಲಾ ಕರೆದು ಅವರೆಲ್ಲರೊಡನೆ ಕಲೆತು,

ಜಾತಕರ್ಮಾದಿಕಾನ್ಯೇವ ಸರ್ವಾಣ್ಯಪಿ ಚಕಾರ ಮೇ ।
ಶಾಲಂಕಾಯನಪುತ್ರೋ ವೈ ಶಿಲಾದಃ ಪುತ್ರವತ್ಸಲಃ ॥ ೪೯ ॥

ವೇದಾನಧ್ಯಾಪಯಾಮಾಸ ಸಾಂಗೋಪಾಂಗಾನಶೇಷತಃ ।
ಶಾಸ್ತ್ರಾಣ್ಯನ್ಯಾನ್ಯಪಿ ತಥಾ ಪಂಚವರ್ಷೇ ಪಿತಾ ಚ ಮಾಂ ॥ ೫೦ ॥

ಸಂಪೂರ್ಣೇ ಸಪ್ತಮೇ ವರ್ಷೇ ಮಿತ್ರಾವರುಣಸಂಜ್ಞಕೌ ।
ಮುನೀ ತಸ್ಯಾಶ್ರಮಂ ಪ್ರಾಪ್ತೌ ದ್ರಷ್ಟುಂ ಮಾಂ ಚಾಜ್ಞಯಾ ವಿಭೋಃ ॥

ಸತ್ಕೃತೌ ಮುನಿನಾ ತೇನ ಸೂಪವಿಷ್ಟೌ ಮಹಾಮುನೀ ।
ಊಚತುಶ್ಚ ಮಹಾತ್ಮಾನೌ ಮಾಂ ನಿರೀಕ್ಷ್ಯ ಮುಹುರ್ಮುಹುಃ ॥ ೫೨ ॥

॥ ಮಿತ್ರಾವರುಣಾವೂಚತುಃ ॥

ತಾತ ನಂದೀ ತವಾಲ್ಪಾಯುಃ ಸರ್ವಶಾಸ್ತ್ರಾರ್ಥಪಾರಗಃ ।
ನ ದೃಷ್ಟಮೇವ ಚಾಪಶ್ಯಂ ಹ್ಯಾಯುರ್ವರ್ಷಾದತಃ ಪರಂ ॥ ೫೩ ॥

---

೪೯. ಮಕ್ಕಳಲ್ಲಿ ಬಹುವಾಗಿ ಮಮತೆಯುಳ್ಳ ಶಾಲಂಕಾಯನ ಸೂನುವಾದ ನನ್ನ ತಂದೆಯು ಜಾತಕರ್ಮ ಮೊದಲಾದ ಸಂಸ್ಕಾರಗಳನ್ನು ನಡೆಸಿದನು.

೫೦. ನನ್ನ ಐದನೆಯ ವರ್ಷದಲ್ಲಿ ಆ ನನ್ನ ತಂದೆಯು ಸಾಂಗೋಪಾಂಗ ಸಹಿತವಾಗಿ ಸಕಲ ವೇದಗಳನ್ನೂ ಇತರ ಶಾಸ್ತ್ರಗಳನ್ನೂ ನನಗೆ ಕಲಿಸಿದನು.

೫೧. ನನಗೆ ಏಳನೆಯ ವರ್ಷವು ತುಂಬಿದಕೂಡಲೇ ಮಿತ್ರಾವರುಣರೆಂಬ ಇಬ್ಬರು ಮುನಿಗಳು ಪ್ರಭುವಾದ ಶಿವನ ಪ್ರೇರಣೆಯಿಂದ ನನ್ನನ್ನು ನೋಡಬಯಸಿ ಶಿಲಾದಾಶ್ರಮಕ್ಕೆ ಬಂದರು.

೫೨. ಆ ಮಹಾಮುನಿಗಳು ಬಂದುದನ್ನು ಕಂಡು ಆ ಶಿಲಾದಮುನಿಯು ಅವರನ್ನು ಸತ್ಕರಿಸಿದನು. ಆ ಮಹಾತ್ಮರು ಸುಖಾಸೀನರಾದಮೇಲೆ ನನ್ನನ್ನು ಮತ್ತೆಮತ್ತೆ ನೋಡುತ್ತಾ ಇಂತೆಂದರು.

೫೩. ಅಪ್ಪಾ ಶಿಲಾದಮುನಿಯೇ, ಸಕಲ ಶಾಸ್ತ್ರಾರ್ಥಗಳನ್ನೂ ಚೆನ್ನಾಗಿಬಲ್ಲ ನಿನ್ನೀ ನಂದಿಕುಮಾರನು ಆಯುಸ್ಸಿಲ್ಲದವನು. ಇವನಿಗೆ ಇನ್ನೊಂದುವರ್ಷದಮೇಲೆ ಆಯುಸ್ಸಿರುವುದನ್ನೇ ನಾವು ಕಾಣೆವು ಎಂದರು.

ಇತ್ಯುಕ್ತವತೋರ್ವಿಪ್ರಯೋಃ ಶಿಲಾದಃ ಪುತ್ರವತ್ಸಲಃ ।
ತಮಾಲಿಂಗ್ಯ ಚ ದುಃಖಾರ್ತೋ ರುರೋದಾತೀವ ವಿಸ್ವರಂ ॥ ೫೪ ॥

ಮೃತವತ್ಪತಿತಂ ದೃಷ್ಟ್ವಾ ಪಿತರಂ ಚ ಪಿತಾಮಹಂ ।
ಪ್ರತ್ಯವೋಚತ್ಪ್ರಸನ್ನಾತ್ಮಾ ಸ್ಮೃತ್ವಾ ಶಿವಪದಾಂಬುಜಂ ॥ ೫೫ ॥

ಕೇನ ತ್ವಂ ತಾತ ದುಃಖೇನ ವೇಪಮಾನಶ್ಚ ರೋದಿಷಿ ।
ದುಃಖಂ ತೇ ಕುತ ಉತ್ಪನ್ನಂ ಜ್ಞಾತುಮಿಚ್ಛಾಮಿ ತತ್ತ್ವತಃ ॥ ೫೬ ॥

॥ ಪಿತೋವಾಚ ॥

ತವಾಲ್ಪಮೃತ್ಯುದುಃಖೇನ ದುಃಖಿತೋಽತೀವ ಪುತ್ರಕ ।
ಕೋ ಮೇ ದುಃಖಂ ಹರತು ವೈ ಶರಣಂ ತಂ ಪ್ರಯಾಮಿ ಹಿ ॥ ೫೭ ॥

---

೫೪. ಆ ಬ್ರಾಹ್ಮಣರು ಈರೀತಿ ಹೇಳುತ್ತಲೇ ಪುತ್ರವತ್ಸಲನಾದ ನನ್ನ ತಂದೆಯು ನನ್ನನ್ನು ತಬ್ಬಿಕೊಂಡು ಅತಿಶಯವಾದ ವ್ಯಸನದಿಂದ ಬಹುವಾಗಿ ಶೋಕ ಉಕ್ಕಿಸುವ ಧ್ವನಿಯಲ್ಲಿ ಗೋಳಾಡಿದನು.

೫೫. ಸತ್ತುಹೋದವನಂತೆ ಪ್ರಜ್ಞೆಯಿಲ್ಲದೆ ಬಿದ್ದುಬಿಟ್ಟಿದ್ದ ನನ್ನ ತಂದೆಯನ್ನು ಕಂಡು ಪ್ರಶಾಂತವಾದ ಮನಸ್ಸಿನಿಂದ ಶಿವನ ಅಡಿದಾವರೆಗಳನ್ನು ನೆನೆಯುತ್ತಾ ಅವನನ್ನು ಕುರಿತು ,

೫೬. ಅಪ್ಪ, ನಿನಗೀಗ ಒದಗಿರುವ ಸಂಕಟವೇನು ? ಏತಕ್ಕೆ ನಡುನಡುಗುತ್ತಾ ಅಳುತ್ತಿರುವೆ ? ನಿನಗೆ ಈ ದುಃಖವು ಏತರಿಂದ ಉಂಟಾಯಿತು ? ಇದೆಲ್ಲವನ್ನೂ ನಿಜ ವಾಗಿ ನನಗೆ ತಿಳಿಸು ಎನ್ನಲು,

೫೭ ಆಗ ನನ್ನ ತಂದೆಯು ಅಯ್ಯೋ, ಮಗುವೇ, ನಿನಗೆ ಈ ಚಿಕ್ಕವಯಸ್ಸಿ ನಲ್ಲಿಯೇ ಆಯುಸ್ಸು ಮುಗಿದುಹೋಗುವುದೆಂದು ತಿಳಿದು ಬಹುವಾಗಿ ಅಳುತ್ತಿರುವೆನು. ನನ್ನೀ ದುಃಖವನ್ನು ಯಾರು ಪರಿಹರಿಸುವರು ? ನಾನು ಯಾರನ್ನು ಮರೆಹೋಗಲಿ ? ಎಂದು ನುಡಿಯಲು,

॥ ಪುತ್ರ ಉವಾಚ ॥

ದೇವೋ ವಾ ದಾನವೋ ವಾಪಿ ಯಮಃ ಕಾಲೋಽಥ ವಾಪಿ ಹಿ ।
ಋದ್ಧ್ಯೇಯುರ್ಯದ್ಯಪಿ ಹ್ಯೇತೇ ಮಾಮನ್ಯೇಽಪಿ ಜನಾಸ್ತಥಾ ॥ ೫೮ ॥

ಅಥಾಪಿ ಚಾಲ್ಪಮೃತ್ಯುರ್ಮೇ ನ ಭವಿಷ್ಯತಿ ಮಾ ಶುಚಃ ।
ಸತ್ಯಂ ಬ್ರವೀಮಿ ಜನಕಂ ಶಪಥಂ ತೇ ಕರೋಮ್ಯಹಂ ॥ ೫೯ ॥

॥ ಪಿತೋವಾಚ ॥

ಕಿಂ ತಪಃ ಕಿಂ ಪರಿಜ್ಞಾನಂ ಕೋ ಯೋಗಶ್ಚ ಪ್ರಭುಶ್ಚ ತೇ ।
ಯೇನ ತ್ವಂ ದಾರುಣಂ ದುಃಖಂ ವಂಚಯಿಷ್ಯಸಿ ಪುತ್ರ ಮೇ ೬೦ ॥

॥ ಪುತ್ರ ಉವಾಚ ॥

ನ ತಾತ ತಪಸಾ ಮೃತ್ಯುಂ ವಂಚಯಿಷ್ಯೇ ನ ವಿದ್ಯಯಾ ।
ಮಹಾದೇವಸ್ಯ ಭಜನಾನ್ಮೃತ್ಯುಂ ಜೇಷ್ಯಾಮಿ ನಾನ್ಯಥಾ ॥ ೬೧ ॥

---

೫೮-೫೯. ನಾನು ಹೇಳಿದೆನು ;— ದೇವತೆಗಳಾಗಲಿ, ದಾನವರಾಗಲಿ, ಯಮನೋ, ಕಾಲನೋ, ಇತರರೋ, ಯಾರಾದರೂ ಆಗಲಿ, ಇವರೆಲ್ಲರೂ ನನಗಿಂತಲೂ ಮೇಲಾಗಿರಬಹುದು. ಆದರೂ ನನಗೆ ಮಾತ್ರ ಅಲ್ಪಾಯುಸ್ಸು ಎಂದಿಗೂ ಇಲ್ಲ. ನೀನು ದುಃಖಿಸಬೇಡ ಓ ತಂದೆಯೇ, ನಿಶ್ಚಯವಾಗಿ ಹೇಳುತ್ತೇನೆ. ಆಣೆಯಿಟ್ಟು ಹೇಳುತ್ತೇನೆ ಇದು ಸುಳ್ಳಲ್ಲ.

೬೦. ಆಗ ನನ್ನ ತಂದೆಯು ಇಂತೆಂದನು ;—ಮಗು, ನನ್ನೀ ಘೋರವಾದ ದುಃಖವನ್ನು ತಪ್ಪಿಸುವೆನು ಎನ್ನುವೆಯಲ್ಲಾ ಅಂತಹ ತಪಸ್ಸು ಯಾವುದು ? ಅಂತಹ ಸಾಧನವಾದ ಜ್ಞಾನವು ಯಾವುದು ? ಅದೆಂತಹ ಯೋಗವಿರುವುದು ? ಅಂತಹ ಪ್ರಭುವಾದರೂ ಈಗ ಯಾರಿರುವರು ? ಎಂದನು.

೬೧. ಹೀಗೆ ನನ್ನ ತಂದೆಯು ನುಡಿಯಲು ನಾನು ಹೇಳಿದೆನು :—ಅಪ್ಪ, ನಾನು ತಪಸ್ಸಿನಿಂದಾಗಲೀ ಮತ್ತಾವ ವಿದ್ಯೆಯಿಂದಾಗಲೀ ಮೃತ್ಯುವನ್ನು ಮೋಸಗೊಳಿಸಲಾರೆನು. ಶ್ರೀ ಶಂಕರನ ಸೇವೆಯೊಂದರಿಂದಲೇ ಆ ಮೃತ್ಯುವನ್ನು ಗೆಲ್ಲುವೆನಲ್ಲದೆ ಮತ್ತಾವ ವಿಧದಿಂದಲೂ ಅಲ್ಲ ಎಂದೆನು.

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾಹಂ ಪಿತುಃ ಪಾದೌ ಪ್ರಣಮ್ಯ ಶಿರಸಾ ಮುನೇ ।
ಪ್ರದಕ್ಷಿಣೀಕೃತ್ಯ ಚ ತಮಗಚ್ಛಂ ವನಮುತ್ತಮಂ ॥ ೬೨ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ನಂದೀಕೇಶಾವತಾರವರ್ಣನಂ ನಾಮ ಷಷ್ಠೋಽಧ್ಯಾಯಃ

---

೬೨ ಓ ಸನತ್ಕುಮಾರ ಮುನೀಂದ್ರ, ಹೀಗೆ ನಾನು ನುಡಿದು ಆ ನನ್ನ ತಂದೆಯ ಕಾಲ್ಗಳಿಗೆ ತಲೆಮುಟ್ಟಿ ನಮಸ್ಕರಿಸಿ ಆತನಿಗೆ ಪ್ರದಕ್ಷಿಣೆಯನ್ನು ಮಾಡಿ ಶ್ರೇಷ್ಠವಾದ ಅಡವಿಯೊಂದಕ್ಕೆ ತೆರಳಿದೆನು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ನಂದೀಶ್ವರಾವತಾರವರ್ಣನವೆಂಬ ಆರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಸಪ್ತಮೋಽಧ್ಯಾಯಃ

॥ ನಂದೀಶ್ವರ ಉವಾಚ ॥

ತತ್ರ ಗತ್ವಾ ಮುನೇಽಹಂ ವೈ ಸ್ಥಿತ್ವೈಕಾಂತಸ್ಥಲೇ ಸುಧೀಃ ।
ಅತಪಂ ತಪ ಉಗ್ರಂ ಸನ್ಮುನೀನಾಮಪಿ ದುಷ್ಕರಂ ॥ ೧ ॥

ಹೃತ್ಪುಂಡರೀಕಸುಷಿರೇ ಧ್ಯಾತ್ವಾ ದೇವಂ ತ್ರಿಯಂಬಕಂ ।
ತ್ರ್ಯಕ್ಷಂ ದಶಭುಜಂ ಶಾಂತಂ ಪಂಚವಕ್ತ್ರಂ ಸದಾಶಿವಂ ॥ ೨ ॥

---

### ಏಳನೆಯ ಅಧ್ಯಾಯವು.

೧. ಎಲೈ ಸನತ್ಕುಮಾರಮುನಿಯೇ, ನಾನು ಕಾಡಿಗೆ ತೆರಳಿದಮೇಲೆ ಅಲ್ಲಿ ವಿಜನವಾದ ಪ್ರದೇಶವೊಂದರಲ್ಲಿ ಕುಳಿತು ನಿರ್ಮಲವಾದ ಮನಸ್ಸಿನಿಂದ ಮುನಿಶ್ರೇಷ್ಠರಿಗೂ ಅಸಾಧ್ಯವಾದಂತಹ ಉಗ್ರವಾದ ತಪಸ್ಸನ್ನು ಮಾಡಲು ತೊಡಗಿದೆನು.

೨-೩. ಪಾವನವಾದ ನದಿಯೊಂದರ ಉತ್ತರತೀರದಲ್ಲಿ ಕುಳಿತು, ಏಕಾಗ್ರಚಿತ್ತತೆಯಿಂದ ಜಾಗರೂಕನಾಗಿ ಅತಿ ಸೂಕ್ಷ್ಮವಾದ ಧ್ಯಾನದಲ್ಲಿ ತೊಡಗಿ, ನನ್ನ ಹೃದಯ ಕಮಲದ ನಡುವೆ ಮೂರು ಕಣ್ಣುಗಳುಳ್ಳವನೂ ಹತ್ತು ಕೈಗಳುಳ್ಳವನೂ ಶಾಂತಾ

ರುದ್ರಜಾಪ್ಯಮುಕಾರ್ಷಂ ವೈ ಪರಮಧ್ಯಾನಮಾಸ್ಥಿತಃ ।
ಸರಿತಶ್ಶ್ರೋತ್ತರೇ ಪುಣ್ಯೇ ಹ್ಯೇಕಚಿತ್ತಃ ಸಮಾಹಿತಃ ॥ ೩ ॥

ತಸ್ಮಿಞ್ಜಾಪ್ಯೇಽಥ ಸಂಪ್ರೀತಃ ಸ್ಥಿತಂ ಮಾಂ ಪರಮೇಶ್ವರಃ ।
ತುಷ್ಟೋಽಬ್ರವೀನ್ಮಹಾದೇವಃ ಸೋಮಃ ಸೋಮಾರ್ಧಭೂಷಣಃ ॥ ೪ ॥

। ಶಿವ ಉವಾಚ ॥

ಶೈಲಾದೇ ವರದೋಽಹಂ ತೇ ತಪಸಾನೇನ ತೋಷಿತಃ ।
ಸಾಧು ತಪ್ತಂ ತ್ವಯಾ ಧೀಮನ್ಬ್ರೂಹಿ ಯತ್ತೇ ಮನೋಗತಂ ॥ ೫ ॥

ಸ ಏವಮುಕ್ತೋ ದೇವೇನ ಶಿರಸಾ ಪಾದಯೋರ್ನತಃ ।
ಅಸ್ತವಂ ಪರಮೇಶಾನಂ ಜರಾಶೋಕವಿನಾಶನಂ ॥ ೬ ॥

ಅಥ ಮಾಂ ನಂದಿನಂ ಶಂಭುರ್ಭಕ್ತ್ಯಾ ಪರಮಯಾ ಯುತಂ ।
ಅಶ್ರುಪೂರ್ಣೇಕ್ಷಣಂ ಸಮ್ಯಕ್ಪಾದಯೋಃ ಶಿರಸಾ ನತಂ ॥ ೭ ॥

---

ಕಾರನೂ ಐದು ಮುಖಗಳುಳ್ಳವನೂ ಸರ್ವದಾ ಮಂಗಲಸ್ವರೂಪನೂ ಆದ ಶ್ರೀ ಶಂಕರನನ್ನು ನೆನೆಯುತ್ತಾ ಶ್ರೀ ರುದ್ರಜಪವನ್ನು ಮಾಡುತ್ತಿದ್ದೆನು

೪. ಈರೀತಿ ರುದ್ರಜಪದಲ್ಲಿ ನಿರತನಾಗಿರುವ ನನ್ನನ್ನು ನೋಡಿ ಮಹಾದೇವನೂ ಉಮಾದೇಹಾರ್ಧಧಾರಿಯೂ ಚಂದ್ರರೇಖಾಲಂಕೃತನೂ ಆದ ಆ ಪರಶಿವನು ಪ್ರಸನ್ನನಾಗಿ,

೫. ಎಲೈ ಶಿಲಾದಪುತ್ರನೇ, ನಿನ್ನ ಈ ತಪಸ್ಸಿಗೆ ಮೆಚ್ಚಿರುವೆನು. ಆದುದರಿಂದಲೇ ವರವನ್ನು ಕೊಡಲು ಬಂದಿರುವೆನು. ಬಹು ಚೆನ್ನಾಗಿ ತಪಸ್ಸನ್ನು ಮಾಡಿರುವೆ ಎಲೈ ಮೇಧಾವಿಯೇ, ನಿನ್ನ ಮನೋರಥವೇನಿರುವುದು ತಿಳಿಸು ಎಂದನು.

೬. ಈರೀತಿಯಾಗಿ ದೇವದೇವನು ನುಡಿಯುತ್ತಲೇ ಆತನ ಕಾಲ್ಗಳಿಗೆ ತಲೆ ಮುಟ್ಟಿ ನಮಸ್ಕರಿಸಿ ಮುಪ್ಪು ಮೊದಲಾದ ದುಃಖಗಳನ್ನು ನಿರ್ಮೂಲಮಾಡುವ ಆ ಪರಮೇಶ್ವರನನ್ನು ಸ್ತೋತ್ರಮಾಡಿದೆನು.

೭-೮. ಅನಂತರ ದುಸ್ಸಹವಾದ ದುಃಖಗಳನ್ನೂ ನಿವಾರಿಸುವ ವೃಷಭಧ್ವಜನಾದ ಆ ಶಂಕರನು ಭಕ್ತ್ಯತಿಶಯದಿಂದ ಕಣ್ಣುಗಳಲ್ಲಿ ನೀರು ತುಂಬಿಕೊಂಡು ತನ್ನ

ಉತ್ಥಾಪ್ಯ ಪರಮೇಶಾನಃ ಪಸ್ಪರ್ಶ ಪರಮಾರ್ತಿಹಾ ।
ಕರಾಭ್ಯಾಂ ಸಂಮುಖಾಭ್ಯಾಂ ತು ಸಂಗೃಹ್ಯ ವೃಷಭಧ್ವಜಃ ॥ ೮ ॥

ನಿರೀಕ್ಷ್ಯ ಗಣಪಾಂಶ್ಚೈವ ದೇವೀಂ ಹಿಮವತಃ ಸುತಾಂ ।
ಉವಾಚ ಮಾಂ ಕೃಪಾದೃಷ್ಟ್ಯಾ ಸಮೀಕ್ಷ್ಯ ಜಗತಾಂ ಪತಿಃ ॥ ೯ ॥

ವತ್ಸ ನಂದಿನ್ಮಹಾಪ್ರಾಜ್ಞ ಮೃತ್ಯೋರ್ಭೀತಿಃ ಕುತಸ್ತವ ।
ಮಯೈವ ಪ್ರೇಷಿತೌ ವಿಪ್ರೌ ಮತ್ಸಮಸ್ತ್ವಂ ನ ಸಂಶಯಃ ॥ ೧೦ ॥

ಅಮರೋ ಜರಯಾ ತ್ಯಕ್ತೋಽದುಃಖೀ ಗಣಪತಿಃ ಸದಾ ।
ಅವ್ಯಯಶ್ಚಾಕ್ಷಯಶ್ರೇಷ್ಠಃ ಸ ಪಿತಾ ಸ ಸುಹೃಜ್ಜನಃ ॥ ೧೧ ॥

ಮದ್ಬಲಃ ಪಾರ್ಶ್ವಗೋ ನಿತ್ಯಂ ಮಮೇಷ್ಟೋ ಭವಿತಾನಿಶಂ ।
ನ ಜರಾ ಜನ್ಮ ಮೃತ್ಯುರ್ವೈ ಮತ್ಪ್ರಸಾದಾದ್ಭವಿಷ್ಯತಿ ॥ ೧೨ ॥

---

ಕಾಲ್ಗಳಮೇಲೆ ತಲೆಯಿಟ್ಟು ನಮಸ್ಕಾರಮಾಡುತ್ತಿರುವ ನನ್ನನ್ನು (ನಂದಿಯನ್ನು) ಎರಡು ಕೈಗಳಿಂದ ಹಿಡಿದು ಮೇಲೆಬ್ಬಿಸಿ ತನ್ನೆದುರಿಗೆ ನಿಲ್ಲಿಸಿಕೊಂಡನು.

೯. ಆ ಜಗದೀಶನು ಕೃಪಾದೃಷ್ಟಿಯಿಂದ ನನ್ನನ್ನು ನೋಡುತ್ತಾ ತನ್ನ ಪ್ರಮಥರನ್ನೂ ದೇವಿಯಾದ ಹಿಮವತ್ಪುತ್ರಿಯನ್ನೂ ಒಂದುಸಲ ನೋಡಿ ಬಳಿಕ ಇಂತೆಂದನು.

೧೦. ಮಗೂ, ನಂದೀ, ನೀನು ಮಹಾಪ್ರಾಜ್ಞನು, ನಿನಗೇಕೆ ಮೃತ್ಯುವಿನ ಹೆದರಿಕೆ? ಆ ಬ್ರಾಹ್ಮಣರನ್ನು ನಾನೇ ಕಳುಹಿಸಿದ್ದೆನು. ಖಂಡಿತವಾಗಿಯೂ ನೀನು ನನಗೆ ಸರಿಸಮಾನನು.

೧೧-೧೨. ನನ್ನ ಅನುಗ್ರಹದಿಂದ ಹುಟ್ಟೂ ಸಾವೂ ಮುಪ್ಪೂ ಎಂದಿಗೂ ನಿನಗೆ ಬರಲಾರವು. ನೀನು ಅಮರನೂ ಜರಾವರ್ಜಿತನೂ ದುಃಖರಹಿತನೂ ಅವ್ಯಯನೂ ಅಕ್ಷಯನೂ ಆಗಿ ನನಗೆ ಪ್ರಿಯನಾಗಿರುವ ಗಣಾಧಿಪತಿಯಾಗಿ ನಿನ್ನ ತಂದೆಯೊಡನೆಯೂ ಸ್ನೇಹಿತರೊಡನೆಯೂ ಕೂಡಿ ಸರ್ವದಾ ನನ್ನ ಪಾರ್ಶ್ವದಲ್ಲೇ ಇರುತ್ತಾ ಯಾವಾಗಲೂ ನನಗೆ ವಿಶ್ವಾಸಪಾತ್ರನಾಗಿರು ಎಂದನು.

॥ ನಂದೀಶ್ವರ ಉವಾಚ ॥

ಏವಮುಕ್ತ್ವಾ ಶಿರೋಮಾಲಾಂ ಕುಶೇಶಯಮಯೀಂ ನಿಜಾಂ ।
ಸಮುನ್ಮುಚ್ಯ ಬಬಂಧಾಶು ಮಮ ಕಂಠೇ ಕೃಪಾನಿಧಿಃ ॥ ೧೩ ॥

ತಯಾಹಂ ಮಾಲಯಾ ವಿಪ್ರ ಶುಭಯಾ ಕಂಠಸಕ್ತಯಾ ।
ತ್ರ್ಯಕ್ಷೋ ದಶಭುಜಶ್ಚಾಸಂ ದ್ವಿತೀಯ ಇವ ಶಂಕರಃ ॥ ೧೪ ॥

ತತ ಏವ ಸಮಾದಾಯ ಹಸ್ತೇನ ಪರಮೇಶ್ವರಃ ।
ಉವಾಚ ಬ್ರೂಹಿ ಕಿಂ ತೇಽದ್ಯ ದದಾಮಿ ವರಮುತ್ತಮಂ ॥ ೧೫ ॥

ತತೋ ಜಟಾಶ್ರಿತಂ ವಾರಿ ಗೃಹೀತ್ವಾ ಹಾರನಿರ್ಮಲಂ ।
ಉಕ್ತ್ವಾ ನಂದೀ ಭವೇತೀಹ ವಿಸಸರ್ಜ ವೃಷಧ್ವಜಃ ॥ ೧೬ ॥

ತತಃ ಪಂಚಮಿತಾ ನದ್ಯಃ ಪ್ರಾವರ್ತಂತ ಶುಭಾವಹಾಃ ।
ಸುತೋಯಾಶ್ಚ ಮಹಾವೇಗಾ ದಿವ್ಯರೂಪಾ ಚ ಸುಂದರೀ ॥ ೧೭ ॥

---

೧೩. ಓ ಸನತ್ಕುಮಾರ, ಹೀಗೆಂದು ಹೇಳಿ ಆ ಕರುಣಾಸಾಗರನು ತನ್ನ ತಲೆಯಲ್ಲಿದ್ದ ಕಮಲಪುಷ್ಪಗಳ ಹಾರವನ್ನು ತೆಗೆದು ನನ್ನ ಕತ್ತಿಗೆ ಹಾಕಿಬಿಟ್ಟನು.

೧೪. ಎಲೈ ಬ್ರಾಹ್ಮಣೋತ್ತಮನೇ, ಶುಭಕರವಾದ ಆ ಮಾಲೆಯು ನನ್ನ ಕತ್ತಿಗೆ ಬೀಳುತ್ತಲೇ ನಾನು ತ್ರಿನಯನನೂ ದಶಬಾಹುವೂ ಆಗಿ ಎರಡನೆಯ ಶಂಕರನಂತೆ ಆದೆನು

೧೫ ಆಗ ಆ ಪರಮೇಶ್ವರನು ನನ್ನನ್ನು ಕೈಹಿಡಿದು ಬಳಿಗೆ ಕರೆದುಕೊಂಡು, ನಿನಗೆ ಯಾವ ಉತ್ತಮವಾದ ವರವನ್ನು ಕೊಡಲಿ ಹೇಳು ಎಂದು ಕೇಳಿದನು

೧೬. ಹೀಗೆ ಕೇಳಿದನಂತರ ಆ ವೃಷಭಧ್ವಜನು ಮುತ್ತಿನಸರದಂತೆ ಸ್ವಚ್ಛವಾಗಿ ಕಂಗೊಳಿಸುತ್ತಿರುವ ತನ್ನ ಜಟೆಯಲ್ಲಿರುವ ಶುಭ್ರವಾದ ನೀರನ್ನು ತೆಗೆದುಕೊಂಡು ನೀನು ನಂದಿಯಾಗೆಂದು ನನ್ನ ಮೇಲೆ ಚಿಮುಕಿಸಿದನು.

೧೭. ಅನಂತರ ಆ ನೀರಿನಿಂದ ಶುಭಕರವೂ ಶುದ್ಧವಾದ ನೀರುಳ್ಳವೂ ಮಹಾವೇಗವಾಗಿ ಹರಿಯುವಂತಹವೂ ರಮಣೀಯವಾದುವೂ ಆದ ಐದು ನದಿಗಳು ಹುಟ್ಟಿ ಹರಿಯತೊಡಗಿದುವು.

ಜಟೋದಕಾ ತ್ರಿಸ್ರೋತಾಶ್ಚ ವೃಷಧ್ವನಿರಿತೀವ ಹಿ ।
ಸ್ವರ್ಣೋದಕಾ ಜಂಬುನದೀ ಪಂಚನದ್ಯಃ ಪ್ರಕೀರ್ತಿತಾಃ ॥ ೧೮ ॥

ಏತತ್ಪಂಚನದಂ ನಾಮ ಶಿವಪೃಷ್ಠತಮಂ ಶುಭಂ ।
ಜಪೇಶ್ವರಸಮೀಪೇ ತು ಪವಿತ್ರಂ ಪರಮಂ ಮುನೇ ॥ ೧೯ ॥

ಯಃ ಪಂಚನದಮಾಸಾದ್ಯ ಸ್ನಾತ್ವಾ ಜಪ್ತ್ವೇಶ್ವರೇಶ್ವರಂ ।
ಪೂಜಯೇಚ್ಛಿವಸಾಯುಜ್ಯಂ ಪ್ರಯಾತ್ಯೇವ ನ ಸಂಶಯಃ ॥ ೨೦ ॥

ಅಥ ಶಂಭುರುವಾಚೋಮಾಮಭಿಷಿಂಚಾಮಿ ನಂದಿನಂ ।
ಗಣೇಂದ್ರಂ ವ್ಯಾಹರಿಷ್ಯಾಮಿ ಕಿಂ ವಾ ತ್ವಂ ಮನ್ಯಸೇಽವ್ಯಯೇ ॥ ೨೧ ॥

॥ ಉಮೋವಾಚ ॥

ದಾತುಮರ್ಹಸಿ ದೇವೇಶ ನಂದಿನೇ ಪರಮೇಶ್ವರ ।
ಮಹಾಪ್ರಿಯತಮೋ ನಾಥ ಶೈಲಾದಿಸ್ತನಯೋ ಮಮ ॥ ೨೨ ॥

---

೧೮. ಆ ಐದು ನದಿಗಳು, ಜಟೋದಕೆ, ತ್ರಿಸ್ರೋತಸ್ಸು, ವೃಷಧ್ವನಿ, ಸ್ವರ್ಣೋದಕ, ಜಂಬುನದಿ ಎಂಬ ಹೆಸರಿನಿಂದ ಪ್ರಸಿದ್ಧವಾದುವು.

೧೯. ಪರಮ ಪವಿತ್ರವಾದ ಈ ಪಂಚನದವು ಶಿವಪೃಷ್ಠತಮವೆಂಬುವಾಗಿ ಜಪೇಶ್ವರನ ಬಳಿಯಲ್ಲಿ ಇರುವುದು.

೨೦. ಯಾವನು ಪಂಚನದಕ್ಷೇತ್ರಕ್ಕೆ ಹೋಗಿ ಅಲ್ಲಿ ಮಿಂದು ಜಪವನ್ನುಮಾಡಿ ಪರಶಿವನನ್ನು ಪೂಜೆಮಾಡುವನೋ ಅವನು ನಿಸ್ಸಂಶಯವಾಗಿ ಶಿವಸಾಯುಜ್ಯವನ್ನು ಪಡೆಯುತ್ತಾನೆ.

೨೧. ಅನಂತರ ಶಿವನು ತನ್ನ ಸತಿಯಾದ ಶಿವೆಯನ್ನು ಕುರಿತು ಎಲೌ ಅವ್ಯಯಳೇ, ಈ ನಂದಿಗೆ ಗಣಾಧಿಪತ್ಯದಲ್ಲಿ ಅಭಿಷೇಕವನ್ನು ಮಾಡುವೆನು. ಈತನನ್ನು ಪ್ರಮಥಗಣಗಳಿಗೆ ಅಧಿಪತಿಯೆಂದು ಕರೆಯುವೆನು. ನಿನ್ನ ಅಭಿಪ್ರಾಯವೇನು ? ಎಂದನು.

೨೨. ಆಗ ಉಮಾದೇವಿಯು ಶಿವನನ್ನು ಕುರಿತು, ನಾಥ, ಈ ನಂದಿಗೆ ನೀನು ಗಣಾಧಿಪತ್ಯವನ್ನು ಖಂಡಿತವಾಗಿಯೂ ನೀಡಬಹುದು. ಈ ಶಿಲಾದಪುತ್ರನು ನನಗೆ ಪರಮಪ್ರೇಮಾಸ್ಪದನಾದ ಅಕ್ಕರೆಯ ಮಗನು ಎಂದಳು.

॥ ನಂದೀಶ್ವರ ಉವಾಚ ॥

ತತಸ್ಸ ಶಂಕರಃ ಸ್ವೀಯಾನ್ಸಸ್ಮಾರ ಗಣಪಾನ್ವರಾನ್ ।
ಸ್ವತಂತ್ರಃ ಪರಮೇಶಾನಸ್ಸರ್ವದೋ ಭಕ್ತವತ್ಸಲಃ ॥ ೨೩ ॥

ಸ್ಮರಣಾದೇವ ರುದ್ರಸ್ಯ ಸಂಪ್ರಾಪ್ತಾಶ್ಚ ಗಣೇಶ್ವರಾಃ ।
ಅಸಂಖ್ಯಾತಾ ಮಹಾಮೋದಾಶ್ಶಂಕರಾಕೃತಯೋಽಖಿಲಾಃ ॥ ೨೪ ॥

ತೇ ಗಣೇಶಾಶ್ಶಿವಂ ದೇವೀಂ ಪ್ರಣಮ್ಯಾಹುಃ ಶುಭಂ ವಚಃ ।
ತೇ ಪ್ರಣಮ್ಯ ಕರೌ ಬಧ್ವಾ ನತಸ್ಕಂಧಾ ಮಹಾಬಲಾಃ ॥ ೨೫ ॥

॥ ಗಣೇಶಾ ಊಚುಃ ॥

ಕಿಮರ್ಥಂ ಚ ಸ್ಮೃತಾ ದೇವ ಹ್ಯಾಜ್ಞಾಪಯ ಮಹಾಪ್ರಭೋ ।
ಕಿಂಕರಾನ್ನಃ ಸಮಾಯಾತಾಂಸ್ತ್ರಿಪುರಾರ್ದನ ಕಾಮದ ॥ ೨೬ ॥

---

೨೩. ಓ ಮುನೀಂದ್ರ, ಒಳಿಕ ಭಕ್ತವತ್ಸಲನೂ ಸಕಲೇಷ್ಟಾರ್ಥದಾಯಕನೂ ಸರ್ವಸ್ವತಂತ್ರನೂ ಆದ ಆ ಪರಶಿವನು ತನ್ನ ಪ್ರಮಥಾಧಿಪತಿಗಳೆಲ್ಲರನ್ನೂ ಸ್ಮರಿಸಿದನು.

೨೪. ಆ ಶಿವನು ಸ್ಮರಿಸುತ್ತಲೇ ಆ ಗಣಾಧಿಪತಿಗಳೆಲ್ಲರೂ ಬಂದೇಬಿಟ್ಟರು. ಏನುಹೇಳಲಿ ? ಅವರಿಗೆ ಲೆಕ್ಕವೇ ಇರಲಿಲ್ಲ. ಅವರೆಲ್ಲರೂ ಸದಾ ಸಂತೋಷದಿಂದ ಇರುತ್ತಿದ್ದರು. ಅವರೆಲ್ಲರೂ ಶಿವನ ಆಕೃತಿಯನ್ನೇ ಹೋಲುತ್ತಿದ್ದರು.

೨೫. ಮಹಾಬಲಾಢ್ಯರಾದ ಆ ಶಿವಗಣಪ್ರಧಾನರೆಲ್ಲರೂ ಶಿವನಿಗೂ ಶಿವೆಗೂ ನಮಸ್ಕರಿಸಿ, ವಿನಯದಿಂದ ಕೈಗಳನ್ನು ಕಟ್ಟಿಕೊಂಡು ತಲೆವಾಗಿ, ಇಂತು ಬಿನ್ನವಿಸಿದರು.

೨೬. ಹೇ ಮಹಾಪ್ರಭು, ನಮ್ಮನ್ನು ಸ್ಮರಿಸುದುದೇಕೆ ? ಎಲೈ ತ್ರಿಪುರ ಸಂಹಾರಿಯೇ, ನಿನ್ನ ಸೇವೆಗೆಂದು ಬಂದ ಈ ಕಿಂಕರರಿಗೆ ಅಪ್ಪಣೆಯನ್ನು ನೀಡುವವನಾಗು.

ಕಿಂ ಸಾಗರಾನ್ಶೋಷಯಾಮೋ ಯಮಂ ವಾ ಸಹ ಕಿನ್ನರೈಃ ।
ಹನ್ಮೋ ಮೃತ್ಯುಂ ಮಹಾಮೃತ್ಯುಂ ವಿಶೇಷಂ ವೃದ್ಧಪದ್ಮಜಂ ॥ ೨೭ ॥

ಬಧ್ವೇಂದ್ರಂ ಸಹ ದೇವೈಶ್ಚ ವಿಷ್ಣುಂ ವಾ ಪಾರ್ಷದೈಃ ಸಹ ।
ಆನಯಾಮಃ ಸುಸಂಕ್ರುದ್ಧಾನ್ದೈತ್ಯಾನ್ವಾ ದಾನವೈಃ ಸಹ ॥ ೨೮ ॥

ಕಸ್ಯಾದ್ಯ ವ್ಯಸನಂ ಘೋರಂ ಕರಿಷ್ಯಾಮಸ್ತವಾಜ್ಞಯಾ ।
ಕಸ್ಯ ವಾದ್ಯೋತ್ಸವೋ ದೇವ ಸರ್ವಕಾಮಸಮೃದ್ಧಯೇ ॥ ೨೯ ॥

॥ ನಂದೀಶ್ವರ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಗಣಾನಾಂ ವೀರವಾದಿನಾಂ ।
ಉವಾಚ ತಾನ್ಸ ಪ್ರಶಂಸ್ಯ ಗಣೇಶಾನ್ಪರಮೇಶ್ವರಃ ॥ ೩೦ ॥

---

೨೭. ಸಾಗರಗಳನ್ನೇ ಒಣಗಿಸಬಿಡಬೇಕೇ ಅಥವಾ ಸೇವಕರೊಡನೆ ಆ ಯಮನನ್ನು ಸಂಹರಿಸಿಬಿಡೋಣವೇ ? ಇಲ್ಲವೇ ಮೃತ್ಯು, ಮಹಾಮೃತ್ಯು, ಈ ಮುದಿ ಬ್ರಹ್ಮ ಇವರನ್ನೇನಾದರೂ ನುಚ್ಚುನೂರುಮಾಡಿಬಿಡೋಣವೇ ?

೨೮. ಇಂದ್ರನನ್ನು ದೇವತೆಗಳೊಡನೆ ಹಿಂಗಟ್ಟುಮುರಿಕಟ್ಟಿ ತಂದು ಕೆಡಹೋಣವೇ? ಇಲ್ಲವೇ ವಿಷ್ಣುವನ್ನು ಅವನ ಅನುಚರರೊಡನೆ ಇಲ್ಲಿಗೆ ಕಟ್ಟಿತರೋಣವೇ? ಅಥವಾ ಕ್ರೋಧಾಂಧರಾದ ದೈತ್ಯರನ್ನು ದಾನವರೊಡನೆ ಇಲ್ಲಿ ತಂದು ಕೆಡಹೋಣವೇ?

೨೯. ದೇವ, ನಿನ್ನ ಆಜ್ಞೆಯಂತೆ ಯಾರಿಗೆ ಈದಿನ ಘೋರವಾದ ದುಃಖ ವುಂಟಾಗುವಂತೆ ಮಾಡೋಣ. ಇಲ್ಲವೇ ಯಾವಾತನಿಗೆ ಸಕಲೇಷ್ಟಾರ್ಥಗಳೂ ಸಮೃದ್ಧಿಯನ್ನು ಹೊಂದಲು ಉತ್ಸವವು ಉಂಟಾಗಿರುವುದು.

೩೦. ಓ ಮುನೀಂದ್ರ, ಈರೀತಿಯಾಗಿ ವೀರವಾದಗಳನ್ನು ಆಡುತ್ತಿರುವ ಆ ಪ್ರಮಥರ ಮಾತನ್ನು ಕೇಳಿ ಪರಶಿವನು ಅವರನ್ನು ಹೊಗಳಿ ಈರೀತಿ ಹೇಳಿದನು.

॥ ಶಿವ ಉವಾಚ ॥

ನಂದೀಶ್ವರೋಽಯಂ ಪುತ್ರೋ ಮೇ ಸರ್ವೇಷಾಮೀಶ್ವರೇಶ್ವರಃ ।
ಪ್ರಿಯೋ ಗಣಾಗ್ರಣೀಸ್ಸರ್ವೈಃ ಕ್ರಿಯತಾಂ ವಚನಂ ಮಮ ॥ ೩೧ ॥

ಸರ್ವೇ ಪ್ರೀತ್ಯಾಭಿಷಿಂಚಧ್ವಂ ಮದ್ಗಣಾನಾಂ ಗತಿಂ ಪತಿಂ ।
ಅದ್ಯಪ್ರಭೃತಿ ಯುಷ್ಮಾಕಮಯಂ ನಂದೀಶ್ವರಃ ಪ್ರಭುಃ ॥ ೩೨ ॥

॥ ನಂದೀಶ್ವರ ಉವಾಚ ॥

ಏವಮುಕ್ತಾಃ ಶಂಕರೇಣ ಗಣಪಾಸ್ಸರ್ವ ಏವ ತೇ ।
ಏವಮಸ್ತ್ವಿತಿ ಸಂಪ್ರೋಚ್ಯ ಸಂಭಾರಾನಹರಂಸ್ತತಃ ॥ ೩೩ ॥

ತತೋ ದೇವಾಶ್ಚ ಸೇಂದ್ರಾಶ್ಚ ನಾರಾಯಣಮುಖಾಸ್ತಥಾ ।
ಮುನಯಃ ಸರ್ವತೋ ಲೋಕಾ ಆಜಗ್ಮುರ್ಮುದಿತಾನನಾಃ ॥ ೩೪ ॥

ಪಿತಾಮಹೋಽಪಿ ಭಗವನ್ನಿಯೋಗಾಚ್ಛಂಕರಸ್ಯ ವೈ ।
ಚಕಾರ ನಂದಿನಸ್ಸರ್ವಮಭಿಷೇಕಂ ಸಮಾಹಿತಃ ॥ ೩೫ ॥

---

೩೧. ಈ ನಂದೀಶ್ವರನು ನನ್ನ ಮಗನು ನಿಮ್ಮೆಲ್ಲ ಪ್ರಮಥಾದಿಪತಿಗಳಿಗೂ ಅಧಿಪತಿಯು. ನನಗೆ ಪ್ರಿಯನಾದ ಗಣಾಧಿಪತಿಯು ನೀವೆಲ್ಲರೂ ನನ್ನ ಮಾತನ್ನು ಪಾಲಿಸಿರಿ.

೩೨. ನನ್ನ ಪಾರಿಷದರೆಲ್ಲರಿಗೂ ಶರಣ್ಯನೂ ಒಡೆಯನೂ ಆದ ಈತನಿಗೆ ನೀವೆಲ್ಲರೂ ಸಂತೋಷದಿಂದ ಅಭಿಷೇಕವನ್ನು ಮಾಡಿರಿ. ಇಂದಿನಿಂದ ಈ ನಂದೀಶ್ವರನು ನಿಮ್ಮೆಲ್ಲರಿಗೂ ಒಡೆಯನು ಎಂದನು.

೩೩. ಎಲೈ ಸನತ್ಕುಮಾರಮುನಿಯೇ, ಈರೀತಿ ಶಿವನು ಹೇಳುತ್ತಲೇ ಆ ಪ್ರಮಥಾದಿಗಣಗಳೆಲ್ಲರೂ ಹಾಗೆಯೇ ಆಗಲೆಂದು ಒಪ್ಪಿ ಅಭಿಷೇಕ ಸಾಮಗ್ರಿಗಳನ್ನು ತಂದರು.

೩೪. ಬಳಿಕ ವಿಷ್ಣುವೇ ಮೊದಲಾದ ಇಂದ್ರಾದಿ ದೇವತೆಗಳೂ ಋಷಿಗಳೂ ನಾನಾ ಲೋಕಗಳಿಂದ ಮಹಾಸಂತೋಷಭರಿತರಾಗಿ ಆಗಮಿಸಿದರು.

೩೫. ಭಗವಂತನಾದ ಬ್ರಹ್ಮನು ಶ್ರೀ ಶಂಕರನ ಆಜ್ಞೆಯಂತೆ ಮಹಾ ಎಚ್ಚರಿಕೆಯಿಂದ ನಂದಿಯ ಗಣಾಧಿಪತ್ಯಾಭಿಷೇಕವನ್ನು ಸಾಂಗವಾಗಿ ನೆರವೇರಿಸಿದನು.

ತತೋ ವಿಷ್ಣುಸ್ತತಶ್ಶಕ್ರೋ ಲೋಕಪಾಲಾಸ್ತಥೈವ ಚ ।
ಋಷಯಸ್ತುಷ್ಟುವುಶ್ಚೈವ ಪಿತಾಮಹಪುರೋಗಮಾಃ ॥ ೩೬ ॥

ಸ್ತುತಿಮತ್ಸು ತತಸ್ತೇಷು ವಿಷ್ಣುಃ ಸರ್ವಜಗತ್ಪತಿಃ ।
ಶಿರಸ್ಯಂಜಲಿಮಾಧಾಯ ತುಷ್ಟಾವ ಚ ಸಮಾಹಿತಃ ॥ ೩೭ ॥

ಪ್ರಾಂಜಲಿಃ ಪ್ರಣತೋ ಭೂತ್ವಾ ಜಯಶಬ್ದಂ ಚಕಾರ ಚ ।
ತತೋ ಗಣಾಧಿಪಾಸ್ಸರ್ವೇ ತತೋ ದೇವಾಸ್ತತೋಽಸುರಾಃ ॥ ೩೮ ॥

ಏವಂ ಸ್ತುತಶ್ಚಾಭಿಷಿಕ್ತೋ ದೇವೈಸ್ಸಬ್ರಹ್ಮಕೈಸ್ತದಾ ।
ನಂದೀಶ್ವರೋಽಹಂ ವಿಪ್ರೇಂದ್ರ ನಿಯೋಗಾತ್ಪರಮೇಶಿತುಃ ॥ ೩೯ ॥

ಉದ್ವಾಹಶ್ಚ ಕೃತಸ್ತತ್ರ ನಿಯೋಗಾತ್ಪರಮೇಷ್ಠಿನಃ ।
ಮಹೋತ್ಸವಯುತಃ ಪ್ರೀತ್ಯಾ ವಿಷ್ಣುಬ್ರಹ್ಮಾದಿಭಿರ್ಮಮ ॥ ೪೦ ॥

---

೩೬. ಅನಂತರ ವಿಷ್ಣುವೂ, ಆಮೇಲೆ ಇಂದ್ರನೂ, ಅವನಾದಮೇಲೆ ಒಬ್ಬೊಬ್ಬರಾಗಿ ಲೋಕಪಾಲಕರೂ ನಂದಿಗೆ ಅಭಿಷೇಕಮಾಡಿದರು. ಆಗ ಬ್ರಹ್ಮಾದಿದೇವತೆಗಳೂ ಋಷಿಗಳೂ ಸ್ತೋತ್ರಮಾಡಿದರು.

೩೭. ಇವರೆಲ್ಲರೂ ಸ್ತೋತ್ರಮಾಡಿದ ಬಳಿಕ ಎಲ್ಲ ಜಗತ್ತುಗಳಿಗೂ ಪಾಲಕನಾದ ವಿಷ್ಣುವು ತನ್ನ ತಲೆಯಮೇಲೆ ಕೈಗಳನ್ನು ಜೋಡಿಸಿಕೊಂಡು ಸ್ತೋತ್ರಮಾಡಿ, ಅನಂತರ ಮತ್ತೊಮ್ಮೆ ಕೈಮುಗಿದು ನಮಸ್ಕರಿಸಿ, ಜಯಜಯಕಾರವನ್ನು ಮಾಡಿದನು.

೩೮. ಬಳಿಕ ಪ್ರಮಥಾಧಿಪತಿಗಳೂ, ಅನಂತರ ದೇವತೆಗಳೂ, ಆಮೇಲೆ ಅಸುರರೂ ಜಯಜಯ ಶಬ್ದವನ್ನು ಮಾಡಿದರು.

೩೯. ಎಲೈ ಬ್ರಾಹ್ಮಣಶ್ರೇಷ್ಠನೇ, ಆ ಪರಮೇಶ್ವರನ ಅಪ್ಪಣೆಯಂತೆ ಈರೀತಿ ಬ್ರಹ್ಮಾದಿ ದೇವತೆಗಳು ನನ್ನನ್ನು ಸ್ತೋತ್ರಮಾಡಿ ಅಭಿಷೇಕಮಾಡಿದರು.

೪೦. ಆಗಲೇ ಆ ಪರಶಿವನ ಅಪ್ಪಣೆಯಂತೆ ವಿಷ್ಣು ಬ್ರಹ್ಮ ಮುಂತಾದವರೆಲ್ಲರೂ ಸೇರಿ ಮಹಾವಿಜೃಂಭಣೆಯಿಂದ ನನ್ನ ಮದುವೆಯನ್ನೂ ನೆರವೇರಿಸಿದರು.

ಮರುತಾಂ ಚ ಸುತಾ ದೇವೀ ಸುಯಶಾಸ್ತು ಮನೋಹರಾ ।
ಪತ್ನೀ ಸಾ ಮೇಽಭವದ್ದಿವ್ಯಾ ಮನೋನಯನನಂದಿನೀ ॥ ೪೧ ॥

ಲಬ್ಧಂ ಶಶಿಪ್ರಭಂ ಛತ್ರಂ ತಯಾ ತತ್ರ ವಿಭೂಷಿತಂ ।
ಚಾಮರೈಶ್ಚಾಮರಾಸಕ್ತಹಸ್ತಾಗ್ರೈಃ ಸ್ತ್ರೀಗಣೈರ್ಯುತಂ ॥ ೪೨ ॥

ಸಿಂಹಾಸನಂ ಚ ಪರಮಂ ತಯಾ ಚಾಧಿಷ್ಠಿತಂ ಮಯಾ ।
ಅಲಂಕೃತೋ ಮಹಾಲಕ್ಷ್ಮ್ಯಾ ಮುಕುಟಾದ್ಯೈಸ್ಸುಭೂಷಣೈಃ ॥ ೪೩ ॥

ಲಬ್ಧೋ ಹಾರಶ್ಚ ಪರಮೋ ದೇವ್ಯಾಃ ಕಂಠಗತಸ್ತಥಾ ।
ವೃಷೇಂದ್ರಶ್ಚ ಶಿತೋ ನಾಗಸ್ಸಿಂಹಸ್ಸಿಂಹಧ್ವಜಸ್ತಥಾ ॥ ೪೪ ॥

ರಥಶ್ಚ ಹೇಮಹಾರಶ್ಚ ಚಂದ್ರಬಿಂಬಸಮಃ ಶುಭಃ ।
ಅನ್ಯಾನ್ಯಪಿ ಚ ವಸ್ತೂನಿ ಲಬ್ಧಾನಿ ಹಿ ಮಯಾ ಪ್ರಭೋ ॥ ೪೫ ॥

---

೪೧. ಸಪ್ತಮರುತ್ತುಗಳ ಮಗಳೂ, ನೋಡಿದೊಡನೆಯೇ ಮನಸ್ಸಿಗೂ ಕಂಗಳಿಗೂ ಆನಂದವನ್ನುಂಟುಮಾಡುವವಳೂ, ಮಹಾರೂಪವತಿಯೂ ಆದ ಸುಯಶಸ್ಸೆಂಬುವಳು ನನ್ನನ್ನು ವರಿಸಿದಳು.

೪೨. ಆಗ ಅವಳೊಡನೆ ನನಗೆ, ಚಂದ್ರನಂತೆ ಶುಭ್ರವಾದ ಕಾಂತಿಯುಳ್ಳ ಶ್ವೇತಚ್ಛತ್ರವೂ ದೊರೆಯಿತು. ಮತ್ತು ಅಕ್ಕಪಕ್ಕದಲ್ಲಿ ಸ್ತ್ರೀಯರು ಕೈಗಳಲ್ಲಿ ಹಿಡಿದು ಮೃದುವಾಗಿ ಬೀಸುತ್ತಲಿರುವ ಚಾಮರಗಳೂ ದೊರೆತುವು.

೪೩. ದಿವ್ಯವಾದ ಸಿಂಹಾಸನವನ್ನು ಅವಳೊಡನೆ ಏರಿದೆನು. ಕಿರೀಟ ಕುಂಡಲಾದಿ ದಿವ್ಯಾಭರಣಗಳನ್ನು ತೊಟ್ಟು ಮಹಾಕಾಂತಿಯಿಂದ ಮೆರೆಯುತ್ತಿದ್ದೆನು

೪೪-೪೫. ಓ ಸನತ್ಕುಮಾರ ಮುನೀಂದ್ರ, ಆಗ ಜಗಜ್ಜನನಿಯು ತನ್ನ ಕತ್ತಿನಲ್ಲಿರುವ ಮಹಾಶ್ರೇಷ್ಠವಾದ ಹಾರವನ್ನು ನನಗೆ ಇತ್ತಳು. ಇದಲ್ಲದೆ ಬಿಳಿದಾದ ವೃಷಭ, ಬಿಳಿಯಆನೆ, ಸಿಂಹ, ಸಿಂಹಧ್ವಜ, ದಿವ್ಯವಾದ ರಥ, ಚಂದ್ರಬಿಂಬದಂತೆ ಹೊಳೆಯುತ್ತಿರುವ ಚಿನ್ನದಹಾರ, ಇನ್ನೂ ಅನೇಕ ವಸ್ತುಗಳು ಇವೆಲ್ಲವೂ ಉಡುಗೊರೆಯಾಗಿ ಬಂದುವು

ಏವಂ ಕೃತವಿವಾಹೋऽಹಂ ತಯಾ ಪತ್ನ್ಯಾ ಮಹಾಮುನೇ ।
ಪಾದೌ ವವಂದೇ ಶಂಭೋಶ್ಚ ಶಿವಾಯಾ ಬ್ರಹ್ಮಣೋ ಹರೇಃ ॥ ೪೬ ॥

ತಥಾವಿಧಂ ತ್ರಿಲೋಕೇಶಸ್ಸಪತ್ನೀಕಂ ಚ ಮಾಂ ಪ್ರಭುಃ ।
ಪ್ರೋವಾಚ ಪರಯಾ ಪ್ರೀತ್ಯಾ ಸ ಶಿವೋ ಭಕ್ತವತ್ಸಲಃ ॥ ೪೭ ॥

॥ ಈಶ್ವರ ಉವಾಚ ॥

ಶೃಣು ಸತ್ಪುತ್ರ ತಾತಸ್ತ್ವಂ ಸುಯಶೇಯಂ ತವ ಪ್ರಿಯಾ ।
ದದಾಮಿ ತೇ ವರಂ ಪ್ರೀತ್ಯಾ ಯತ್ತೇ ಮನಸಿ ವಾಂಛಿತಂ ॥ ೪೮ ॥

ಸದಾಹಂ ತವ ನಂದೀಶ ಸಂತೋಷ್ಟೋऽಸ್ಮಿ ಗಣೇಶ್ವರ ।
ದೇವ್ಯಾ ಚ ಸಹಿತೋ ವತ್ಸ ಶೃಣು ಮೇ ಪರಮಂ ವಚಃ ॥ ೪೯ ॥

ಸದೇಷ್ಟಶ್ಚ ವಿಶಿಷ್ಟಶ್ಚ ಪರಮೈಶ್ವರ್ಯಸಂಯುತಃ ।
ಮಹಾಯೋಗೀ ಮಹೇಷ್ವಾಸಃ ಸಪಿತಾ ಸಪಿತಾಮಹಃ ॥ ೫೦ ॥

---

೪೬. ಈ ರೀತಿಯಾಗಿ ಆ ಸುಯಶಸ್ಸಿನೊಡನೆ ನನಗೆ ಮದುವೆಯಾದಮೇಲೆ, ಶಂಕರನಿಗೂ, ಶಿವೆಗೂ, ವಿಷ್ಣುವಿಗೂ, ಬ್ರಹ್ಮನಿಗೂ ನನ್ನ ಪತ್ನಿಯೊಡನೆ ನಮಸ್ಕಾರ ಮಾಡಿದೆನು.

೪೭. ಈ ರೀತಿ ಪತ್ನಿಯೊಡನೆ ನಮಸ್ಕರಿಸಿದ ನನ್ನನ್ನು ಕಂಡು ಜಗತ್ಪ್ರಭುವೂ ಭಕ್ತವತ್ಸಲನೂ ಆದ ಆ ಶಂಕರನು ಅತಿಶಯವಾದ ಪ್ರೀತಿಯಿಂದ ಇಂತು ನುಡಿದನು.

೪೮. ಎಲೈ ಸತ್ಪುತ್ರನೇ ಕೇಳು. ನೀನು ಮಗನಂತೆ ನನ್ನ ಪ್ರೀತಿಗೆ ಪಾತ್ರನಾಗಿರುವೆ. ಈ ಸುಯಶಸ್ಸು ನಿನ್ನ ಪ್ರಿಯೆಯು, ನಿನಗೆ ನಾನು ಸಂತೋಷದಿಂದ ವರವನ್ನೀಯುವೆನು. ನಿನ್ನ ಮನೋರಥವೇನು ? ತಿಳಿಸು.

೪೯. ವತ್ಸ, ನಂದೀಶ್ವರ! ನನ್ನೀಶ್ರೇಷ್ಠವಾದ ಮಾತನ್ನು ಕೇಳು. ನಿನ್ನ ವಿಷಯದಲ್ಲಿ ನಾನೂ ದೇವಿಯೂ, ಬಹುವಾಗಿ ಪ್ರೀತರಾಗಿರುವೆವು.

೫೦. ನೀನು ನನಗೆ ಸರ್ವದಾ ಪ್ರಿಯನಾಗಿರು. ಎಲ್ಲರಿಗಿಂತಲೂ ಚೆನ್ನಾಗಿ ಬಾಳು. ಅತುಲವಾದ ಐಶ್ವರ್ಯವನ್ನು ಅನುಭವಿಸು. ನೀನು ಮಹಾಯೋಗ ನಿರತನಾಗಿರು. ಅಲ್ಲದೆ ಮಹಾಧನುಷ್ಮಂತನಾಗಿರು. ನಿಮ್ಮ ತಂದೆಯೊಡನೆಯೂ ತಾತನೊಡನೆಯೂ ಸುಖವಾಗಿರು.

ಅಜೇಯಸ್ಸರ್ವಜೇತಾ ಚ ಸದಾ ಪೂಜ್ಯೋ ಮಹಾಬಲಃ ।
ಅಹಂ ಯತ್ರ ಭವಾಂಸ್ತತ್ರ ಯತ್ರ ತ್ವಂ ತತ್ರ ಚಾಪ್ಯಹಂ ॥ ೫೧ ॥

ಅಯಂ ಚ ತೇ ಪಿತಾ ಪುತ್ರ ಪರಮೈಶ್ವರ್ಯಸಂಯುತಃ ।
ಭವಿಷ್ಯತಿ ಗಣಾಧ್ಯಕ್ಷೋ ಮಮ ಭಕ್ತೋ ಮಹಾಬಲಃ ॥ ೫೨ ॥

ಪಿತಾಮಹೋಽಪಿ ತೇ ವತ್ಸ ತಥಾಸ್ತು ನಿಯಮಾ ಇಮೇ ।
ಮತ್ಸಮೀಪಂ ಗಮಿಷ್ಯಂತಿ ಮಯಾ ದತ್ತವರಾಸ್ತಥಾ ॥ ೫೩ ॥

॥ ನಂದೀಶ್ವರ ಉವಾಚ ॥

ತತೋ ದೇವೀ ಮಹಾಭಾಗಾ ನಂದಿನಂ ವರದಾಬ್ರವೀತ್ ।
ವರಂ ಬ್ರೂಹೀತಿ ಮಾಂ ಪುತ್ರ ಸರ್ವಾನ್ಕಾಮಾನ್ಯಥೇಪ್ಸಿತಾನ್ ॥ ೫೪ ॥

ತಚ್ಛ್ರುತ್ವಾ ವಚನಂ ದೇವ್ಯಾಃ ಪ್ರಾವೋಚತ್ಸಾಂಜಲಿಸ್ತದಾ ।
ಭಕ್ತಿರ್ಭವತು ಮೇ ದೇವಿ ಪಾದಯೋಸ್ತೇ ಸದಾ ವರಾ ॥ ೫೫ ॥

---

೫೧ ನಿನ್ನನ್ನು ಯಾರೂ ಜಯಿಸಲಾರರು ನೀನೇ ಎಲ್ಲರನ್ನೂ ಗೆಲ್ಲುವೆ. ನಿನ್ನನ್ನು ಎಲ್ಲರೂ ಯಾವಾಗಲೂ ಪೂಜಿಸುವರು. ನೀನು ಮಹಾಬಲಾಢ್ಯನಾಗಿರು. ನೀನೆಲ್ಲಿರುವೆಯೋ ಅಲ್ಲಿ ನಾನೂ ಇರುವೆನು ನಾನೆಲ್ಲಿರುವೆನೋ ಅಲ್ಲಿ ನೀನೂ ಇರು.

೫೨ ವತ್ಸ! ಈ ನಿನ್ನ ತಂದೆಯು ಮಹಾಐಶ್ವರ್ಯಶಾಲಿಯೂ, ಮಹಾ ಬಲಾಢ್ಯನೂ ಆದ ಪ್ರಮಥಾಧಿಪತಿಯೆನಿಸಿ ನನ್ನ ಭಕ್ತನಾಗಿರುವನು.

೫೩. ಮಗು, ನಿನ್ನೀ ಪಿತಾಮಹನೂ ಗಣಾಧ್ಯಕ್ಷಪದವಿಯನ್ನು ಪಡೆಯುವನು ಈ ರೀತಿ ನಿಯಮಪರರಾಗಿರುವವರೆಲ್ಲರೂ ನನ್ನಿಂದ ವರಗಳನ್ನು ಪಡೆದು ನನ್ನ ಬಳಿಗೆ ಬರುವರು ಎಂದನು.

೫೪. ಓ ಸನತ್ಕುಮಾರ! ಅನಂತರ ಮಹಾನುಭಾವಳಾದ ಸರ್ವಮಂಗಳೆಯು ನನ್ನನ್ನು ಕುರಿತು, ವತ್ಸ, ನಿನಗೆ ಬೇಕಾದ ಯಾವ ವರವನ್ನಾದರೂ ಕೇಳು, ಎಂದಳು.

೫೫. ಆ ದೇವಿಯು ಇಂತು ನುಡಿದ ಮಾತುಗಳನ್ನು ಕೇಳಿ, ತಾಯೇ, ನಿನ್ನ ಪಾದಪದ್ಮಗಳಲ್ಲಿ ಯಾವಾಗಲೂ ನನಗೆ ಶ್ರೇಷ್ಠವಾದ ಭಕ್ತಿಯು ನೆಲಸಿರಲಿ ಎಂದು ಕೈಮುಗಿದು ಕೇಳಿಕೊಂಡೆನು

ಶ್ರುತ್ವಾ ಮಮ ವಚೋ ದೇವೀ ಹ್ಯೇವಮಸ್ತ್ವಿತಿ ಸಾಬ್ರವೀತ್ ।
ಸುಯಶಾಂ ತಾಂ ಚ ಸುಪ್ರೀತ್ಯಾ ನಂದಿಪ್ರಿಯತಮಾಂ ಶಿವಾ ॥ ೫೬ ॥

॥ ದೇವ್ಯುವಾಚ ॥

ವತ್ಸೇ ವರಂ ಯಥೇಷ್ಟಂ ಹಿ ತ್ರಿನೇತ್ರಾಜನ್ಮವರ್ಜಿತಾ ।
ಪುತ್ರಪೌತ್ರೈಸ್ತು ಭಕ್ತಿರ್ಮೇ ತಥಾ ಚ ಭರ್ತುರೇವ ಹಿ ॥ ೫೭ ॥

॥ ನಂದ್ಯುವಾಚ ॥

ತದಾ ಬ್ರಹ್ಮಾ ಚ ವಿಷ್ಣುಶ್ಚ ಸರ್ವೇ ದೇವಗಣಾಶ್ಚ ವೈ ।
ತಾಭ್ಯಾಂ ವರಾನ್ದದುಃ ಪ್ರೀತ್ಯಾ ಸುಪ್ರಸನ್ನಾಶ್ಶಿವಾಜ್ಞಯಾ ॥ ೫೮ ॥

ಸಾನ್ವಯಂ ಮಾಂ ಗೃಹೀತ್ವೇಶಸ್ತತಸ್ಸಂಬಂಧಿಬಾಂಧವೈಃ ।
ಆರುಹ್ಯ ವೃಷಮೀಶಾನೋ ಗತೋ ದೇವ್ಯಾ ನಿಜಂ ಗೃಹಂ ॥ ೫೯ ॥

ವಿಷ್ಣ್ವಾದಯಃ ಸುರಾಸ್ಸರ್ವೇ ಪ್ರಶಂಸಂತೋ ಹ್ಯುಮಾ ತದಾ ।
ಸ್ವಧಾಮಾನಿ ಯಯುಃ ಪ್ರೀತ್ಯಾ ಸಂಸ್ತುವಂತಃ ಶಿವಂ ಶಿವಂ ॥ ೬೦ ॥

---

೫೬. ಆಗ ನನ್ನ ಮಾತನ್ನು ಕೇಳಿ ಆ ದೇವಿಯು, ಹಾಗೆಯೇ ಆಗಲೆಂದು ಹರಸಿದಳು. ನನ್ನ ಪ್ರಿಯತಮೆಯಾದ ಸುಯಶಸ್ಸನ್ನೂ ಸಹ ಮಹಾಪ್ರೀತಿಯಿಂದ ಆ ಶಿವೆಯು ಅನುಗ್ರಹಿಸಿದಳು.

೫೭. ಮಗಳೇ, ನಿನಗೆ ಬೇಕಾದ ವರವನ್ನು ಕೇಳು. ನೀನು ತ್ರಿಣೇತ್ರ ಗಳಿಂದ ಕೂಡಿ ಜನ್ಮವರ್ಜಿತಳಾಗು. ನೀನು ಮಕ್ಕಳು ಮೊಮ್ಮಕ್ಕಳೊಡನೆ ಸೇರಿ ಸುಖವಾಗಿರು. ನನ್ನಲ್ಲಿಯೂ, ನಿನ್ನ ಗಂಡನಲ್ಲಿಯೂ ನಿನಗೆ ಭಕ್ತಿಯು ನೆಲಸಿರಲಿ ಎಂದಳು.

೫೮. ಎಲೈ ಸನತ್ಕುಮಾರನೇ, ಆಗ ಶಿವನ ಅಪ್ಪಣೆಯಂತೆ ಬ್ರಹ್ಮನೂ, ವಿಷ್ಣುವೂ ಮತ್ತು ಎಲ್ಲಾದೇವತೆಗಳೂ ಅತಿಶಯವಾದ ಸಂತೋಷದಿಂದ ನಮ್ಮಿಬ್ಬ ರಿಗೂ ವರಗಳನ್ನು ಕೊಟ್ಟರು.

೫೯. ಅನಂತರ ಪರಶಿವನು, ನನ್ನ ಬಂಧುಬಾಂಧವರೊಡನೆ ನನ್ನನ್ನೂ ಕರೆದು ಕೊಂಡು ಮಹಾದೇವಿಯೊಡಗೂಡಿ ವೃಷಭವನ್ನೇರಿ ತನ್ನ ಲೋಕಕ್ಕೆ ತೆರಳಿದನು.

೬೦. ಬಳಿಕ ವಿಷ್ಣ್ವಾದಿನಿಖಿಲದೇವತೆಗಳೂ ಪ್ರೀತಿಯಿಂದ ಶಿವನನ್ನೂ ಶಿವೆಯನ್ನೂ ಸ್ತೋತ್ರಮಾಡುತ್ತಲೂ ಕೊಂಡಾಡುತ್ತಲೂ ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಇತಿ ತೇ ಕಥಿತೋ ವತ್ಸ ಸ್ವಾವತಾರೋ ಮಹಾಮುನೇ ।
ಸದಾನಂದಕರಃ ಪುಂಸಾಂ ಶಿವಭಕ್ತಿಪ್ರವರ್ಧನಃ ॥ ೬೧ ॥

ಯ ಇದಂ ನಂದಿನೋ ಜನ್ಮ ವರದಾನಂ ತಥಾ ಮಮ ।
ಅಭಿಷೇಕಂ ವಿವಾಹಂ ಚ ಶೃಣುಯಾಚ್ಛ್ರಾವಯೇತ್ತಥಾ ॥ ೬೨ ॥

ಪಠೇದ್ವಾ ಪಾಠಯೇದ್ವಾಪಿ ಶ್ರದ್ಧಾವಾನ್ಭಕ್ತಿಸಂಯುತಃ ।
ಇಹ ಸರ್ವಸುಖಂ ಭುಕ್ತ್ವಾ ಪರತ್ರ ಲಭತೇ ಗತಿಂ ॥ ೬೩ ॥

ಇತಿ ತ್ರಿಚತ್ವಾರಿಂಶಾವತಾರಃ

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ನಂದೀಶ್ವರಾವತಾರವರ್ಣನಂ ನಾಮ ಸಪ್ತಮೋಽಧ್ಯಾಯಃ

---

೬೧ ವತ್ಸ ಸನತ್ಕುಮಾರ, ಓ ಮುನೀಂದ್ರ, ಈ ರೀತಿಯಾಗಿ ನನ್ನ ನಂದೀಶ್ವರರೂಪವಾದ ಶಿವನ ಅವತಾರವನ್ನು ನಿನಗೆ ವಿವರಿಸಿದೆನು ಇದು ಪುರುಷರಿಗೆ ಯಾವಾಗಲೂ ಆನಂದದಾಯಕವೂ ಶಿವಭಕ್ತಿಯನ್ನು ಹೆಚ್ಚಿಸುವುದೂ ಆಗಿರುವುದು.

೬೨-೬೩ ಯಾವಾತನು ಶ್ರದ್ಧಾಭಕ್ತಿಸಮನ್ವಿತನಾಗಿ ಈ ನಂದೀಶ್ವರಾವತಾರ ವೃತ್ತಾಂತವನ್ನೂ, ಆ ನಂದೀಶ್ವರನಾದ ನನಗೆ ಜರುಗಿದ ಗಣಾಪತ್ಯಾಭಿಷೇಕ, ವಿವಾಹ, ಮೊದಲಾದ ಚರಿತ್ರವನ್ನೂ ಕೇಳುವನೋ ಅಥವಾ ಕೇಳುವಂತೆಮಾಡುವನೋ ಮತ್ತು ಯಾವಾತನು ಭಕ್ತಿಶ್ರದ್ಧೆಗಳಿಂದ ಓದುವನೋ ಅಥವಾ ಓದಿಸುವನೋ ಅವನು ಈ ಲೋಕದಲ್ಲಿ ಸಕಲ ಸುಖಗಳನ್ನೂ ಅನುಭವಿಸಿ ಕೊನೆಗೆ ಪರಲೋಕದಲ್ಲಿ ಸದ್ಗತಿಯನ್ನೂ ಪಡೆಯುವನು

**ಇದು ಶಿವನ ನಲ್ವತ್ತಮೂರನೆಯ ಅವತಾರವು.**

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ ಶಿವನ
ನಂದಿಕೇಶ್ವರಚರಿತ್ರವರ್ಣನವೆಂಬ ಏಳನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಅಷ್ಟಮೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಸನತ್ಕುಮಾರ ಸರ್ವಜ್ಞ ಶೃಣು ತ್ವಂ ಭೈರವೀಂ ಕಥಾಂ ।
ಯಸ್ಯಾಃ ಶ್ರವಣಮಾತ್ರೇಣ ಶೈವೀ ಭಕ್ತಿರ್ದೃಢಾ ಭವೇತ್ ॥ ೧ ॥

ಭೈರವಃ ಪೂರ್ಣರೂಪೋ ಹಿ ಶಂಕರಸ್ಯ ಪರಾತ್ಮನಃ ।
ಮೂಢಾಸ್ತಂ ವೈ ನ ಜಾನಂತಿ ಮೋಹಿತಾಶ್ಶಿವಮಾಯಯಾ ॥ ೨ ॥

---

## ಎಂಟನೆಯ ಅಧ್ಯಾಯವು.

೧. ಎಲೈ ಸರ್ವಜ್ಞನಾದ ಸನತ್ಕುಮಾರಮುನಿಯೇ! ಯಾವ ಚರಿತವನ್ನು ಶ್ರವಣಮಾಡಿದಮಾತ್ರದಿಂದಲೇ ಶಿವಭಕ್ತಿಯು ದೃಢವಾಗಿ ಬೇರೂರಿ ನೆಲೆಸುವುದೋ ಆ ಭೈರವಾವತಾರಚರಿತವನ್ನು ನಿನಗೆ ಹೇಳುವೆನು ಕೇಳು.

೨. ಭೈರವನು ಪರಮಪುರುಷನಾದ ಶಿವನ ಪೂರ್ಣಾವತಾರವು. ಶಿವನ ಮಾಯೆಯಿಂದ ಮೋಹಿತರಾದ ಮೂಢರು ಈ ಭೈರವನನ್ನು ಚೆನ್ನಾಗಿ ಅರಿಯಲಾರರು.*

ಸನತ್ಕುಮಾರ ನೋ ವೇತ್ತಿ ಮಹಿಮಾನಂ ಮಹೇಶಿತುಃ ।
ಚತುರ್ಭುಜೋऽಪಿ ವಿಷ್ಣುರ್ವೈ ಚತುರ್ವಕ್ತ್ರೋऽಪಿ ವೈ ವಿಧಿಃ ॥ ೩ ॥

ಚಿತ್ರಮತ್ರ ನ ಕಿಂಚಿದ್ವೈ ದುರ್ಜ್ಞೇಯಾ ಖಲು ಶಾಂಭವೀ ।
ತಯಾ ಸಂಮೋಹಿತಾಸ್ಸರ್ವೇ ನಾರ್ಚಯಂತ್ಯಪಿ ತಂ ಪರಂ ॥ ೪ ॥

ವೇದ ಚೇದ್ಯದಿ ವಾತ್ಮಾನಂ ಸ ಏವ ಪರಮೇಶ್ವರಃ ।
ತದಾ ವಿದಂತಿ ತೇ ಸರ್ವೇ ಸ್ವೇಚ್ಛಯಾ ನ ಹಿ ಕೇऽಪಿ ತಂ ॥ ೫ ॥

ಸರ್ವಗೋऽಪಿ ಮಹೇಶಾನೋ ನೇಕ್ಷ್ಯತೇ ಮೂಢಬುದ್ಧಿಭಿಃ ।
ದೇವವದ್ಬುಧ್ಯತೇ ಲೋಕೇ ಯೋऽತೀತೋ ಮನಸಾಂ ಗಿರಾಂ ॥ ೬ ॥

ಅತ್ರೇऽತಿಹಾಸಂ ವಕ್ಷ್ಯೇऽಹಂ ಪರಮರ್ಷೇ ಪುರಾತನಂ ।
ಶೃಣು ತಂ ಶ್ರದ್ಧಯಾ ತಾತ ಪರಮಂ ಜ್ಞಾನಕಾರಣಂ ॥ ೭ ॥

---

೩ ಓ ಸನತ್ಕುಮಾರ! ನಾಲ್ಕು ತೋಳುಗಳನ್ನುಳ್ಳ ವಿಷ್ಣುವೂ, ನಾಲ್ಕು ಮುಖಗಳನ್ನುಳ್ಳ ಬ್ರಹ್ಮನೂ ಆ ಮಹೇಶ್ವರನ ಮಹಿಮೆಯನ್ನು ತಿಳಿಯಲಾರರು.

೪. ಇದರಲ್ಲಿ ಸ್ವಲ್ಪವೂ ಆಶ್ಚರ್ಯವಿಲ್ಲ ಆ ಶಿವನ ಮಾಯೆಯನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಆ ಮಾಯೆಗೆ ಸಿಲುಕಿ ಮೋಹಿತರಾಗಿಯೇ ಆ ಪರಮಪುರುಷನನ್ನು ಪೂಜೆಯೂ ಮಾಡದೆ ಇರುವರು

೫ ಆ ಪರಮೇಶ್ವರನನ್ನು ಸರಿಯಾಗಿ ತಿಳಿಯಬೇಕಾದರೆ ಆ ಪರಮೇಶ್ವರನಿಗೊಬ್ಬನಿಗೇ ಸಾಧ್ಯ ಆತನ ದಯೆಯು ಇದ್ದರೆಮಾತ್ರ ಆತನನ್ನು ತಿಳಿಯಬಹುದೇ ಹೊರತು ಸ್ವೇಚ್ಛೆಯಿಂದ ಯಾರೂ ಆತನನ್ನು ಅರಿಯಲು ಸಾಧ್ಯವಿಲ್ಲ.

೬ ಆ ಮಹೇಶ್ವರನು ಎಲ್ಲಕಡೆಗಳಲ್ಲೂ ಇದ್ದರೂ ಮಂದಬುದ್ಧಿಗಳಾದ ಜನರು ಆತನನ್ನು ಕಾಣಲಾರರು. ಯಾವಾತನು ಮನಸ್ಸಿಗೂ ಮಾತುಗಳಿಗೂ ಸಿಲುಕದೆ ಇರುವನೋ ಆ ಪರಮಾತ್ಮನನ್ನು ಸಾಮಾನ್ಯದೇವತೆಯಂತೆ ಭಾವಿಸುವರು.

೭. ಎಲೈ ಮಹರ್ಷಿಯೇ, ಈ ವಿಷಯದಲ್ಲಿ ಪುರಾತನವಾದ ಇತಿಹಾಸವೊಂದನ್ನು ನಿನಗೆ ತಿಳಿಸುವೆನು. ಅಪ್ಪ, ಅದನ್ನು ಶ್ರದ್ಧೆಯಿಂದ ಕೇಳು. ಅದು ಮಹಾಜ್ಞಾನಸಾಧನವಾದುದು.

ಮೇರುಶೃಂಗೇऽದ್ಭುತೇ ರಮ್ಯೇ ಸ್ಥಿತಂ ಬ್ರಹ್ಮಾಣಮೀಶ್ವರಂ ।
ಜಗ್ಮುರ್ದೇವರ್ಷಯಃ ಸರ್ವೇ ಸುತತ್ತ್ವಂ ಜ್ಞಾತುಮಿಚ್ಛಯಾ ॥ ೮ ॥

ತತ್ರಾಗತ್ಯ ವಿಧಿಂ ನತ್ವಾ ಪಪ್ರಚ್ಛುಸ್ತೇ ಮಹಾದರಾತ್ ।
ಕೃತಾಂಜಲಿಪುಟಾಸ್ಸರ್ವೇ ನತಸ್ಕಂಧಾ ಮುನೀಶ್ವರಾಃ ॥ ೯ ॥

॥ ದೇವರ್ಷಯ ಊಚುಃ ॥

ದೇವದೇವ ಪ್ರಜಾನಾಥ ಸೃಷ್ಟಿಕೃಲ್ಲೋಕನಾಯಕ ।
ತತ್ತ್ವತೋ ವದ ಚಾಸ್ಮಭ್ಯಂ ಕಿಮೇಕಂ ತತ್ತ್ವಮವ್ಯಯಂ ॥ ೧೦ ॥

॥ ನಂದೀಶ್ವರ ಉವಾಚ ॥

ಸ ಮಾಯಯಾ ಮಹೇಶಸ್ಯ ಮೋಹಿತಃ ಪದ್ಮಸಂಭವಃ ।
ಅವಿಜ್ಞಾಯ ಪರಂ ಭಾವಂ ಸಂಭಾವಂ ಪ್ರತ್ಯುವಾಚ ಹ ॥ ೧೧ ॥

॥ ಬ್ರಹ್ಮೋವಾಚ ॥

ಹೇ ಸುರಾ ಋಷಯಃ ಸರ್ವೇ ಸುಮತ್ಯಾ ಶೃಣುತಾದರಾತ್ ।
ವಚ್ಮ್ಯಹಂ ಪರಮಂ ತತ್ತ್ವಮವ್ಯಯಂ ವೈ ಯಥಾರ್ಥತಃ ॥ ೧೨ ॥

---

೮. ಒಂದಾನೊಂದುಸಲ ಆಶ್ಚರ್ಯಕರವಾಗಿಯೂ ರಮಣೀಯವಾಗಿಯೂ ಇರುವ ಮೇರುಪರ್ವತದ ಶಿಖರದಲ್ಲಿ ಸುಖಾಸೀನನಾಗಿರುವ ಬ್ರಹ್ಮನ ಬಳಿಗೆ ತತ್ತ್ವಾರ್ಥವನ್ನು ತಿಳಿದುಕೊಳ್ಳಬೇಕೆಂದು ದೇವತೆಗಳೂ ಋಷಿಗಳೂ ಬಂದರು.

೯. ಆಗ ಆ ದೇವತೆಗಳೂ ಋಷಿಗಳೂ ಬ್ರಹ್ಮನಿಗೆ ನಮಸ್ಕರಿಸಿ, ವಿನಯದಿಂದ ತಲೆಬಾಗಿ ಕೈಗಳನ್ನು ಜೋಡಿಸಿಕೊಂಡು ಆದರದಿಂದ ಪ್ರಶ್ನೆಮಾಡಿದರು.

೧೦. ಎಲೈ ದೇವದೇವನಾದ ಪ್ರಜಾಪತಿಯೇ, ಓ ಸೃಷ್ಟಿಕರ್ತ, ಲೋಕನಾಯಕ, ನಮಗೆ ನಿಶ್ಚಯಾಂಶವನ್ನು ತಿಳಿಸು. ನಾಶರಹಿತವೂ ಏಕೈಕವೂ ಆದ ಆ ಪರಬ್ರಹ್ಮವಸ್ತುವೆನ್ನುವುದು ಯಾವುದು ? ಎಂದರು

೧೧. ಅಯ್ಯಾ ಮುನೀಂದ್ರನೇ, ಶಿವಮಾಯಾಮೋಹಿತನಾದ ಆ ಬ್ರಹ್ಮನು ಪರಮಪುರುಷನಿರುವನೆಂಬುದನ್ನೇ ಮರೆತು ಈರೀತಿ ಉತ್ತರವನ್ನಿತ್ತನು.

೧೨. ಎಲೈ ದೇವತೆಗಳಿರಾ, ಋಷಿಗಳಿರಾ, ನೀವೆಲ್ಲರೂ ಎಚ್ಚರಿಕೆಯಿಂದಲೂ ಆದರದಿಂದಲೂ ಆಲಿಸಿರಿ. ನಿಮಗೀಗ ಯಥಾರ್ಥವಾಗಿ ನಾಶರಹಿತವಾದ ಆ ಪರತತ್ತ್ವವು ಯಾವುದೆಂಬುದನ್ನು ತಿಳಿಸುವೆನು.

ಜಗದ್ಯೋನಿರಹಂ ಧಾತಾ ಸ್ವಯಂಭೂರಜ ಈಶ್ವರಃ ।
ಅನಾದಿಭಾಗಹಂ ಬ್ರಹ್ಮ ಹ್ಯೇಕ ಆತ್ಮಾ ನಿರಂಜನಃ　　॥ ೧೩ ॥

ಪ್ರವರ್ತಕೋ ಹಿ ಜಗತಾಮಹಮೇವ ನಿವರ್ತಕಃ ।
ಸಂವರ್ತಕೋ ಮದಧಿಕೋ ನಾನ್ಯಃ ಕಶ್ಚಿತ್ಸುರೋತ್ತಮಾಃ　　॥ ೧೪ ॥

॥ ನಂದೀಶ್ವರ ಉವಾಚ ॥

ತಸ್ಯೈವಂ ವದತೋ ಧಾತುರ್ವಿಷ್ಣುಸ್ತತ್ರ ಸ್ಥಿತೋ ಮುನೇ ।
ಪ್ರೋವಾಚ ಪ್ರಹಸನ್ವಾಕ್ಯಂ ಸಂಕ್ರುದ್ಧೋ ಮೋಹಿತೋಽಜಯಾ ॥ ೧೫ ॥

ನ ಚೈತದುಚಿತಾ ಬ್ರಹ್ಮನ್ಯೋಗಯುಕ್ತಸ್ಯ ಮೂರ್ಖತಾ ।
ಅವಿಜ್ಞಾಯ ಪರಂ ತತ್ತ್ವಂ ವೃಥೈತತ್ತೇ ನಿಗದ್ಯತೇ　　॥ ೧೬ ॥

---

೧೩. ನಾನೇ ಜಗತ್ಕಾರಣನು, ನಾನೇ ಪ್ರಜೆಗಳಿಗೆ ಮೂಲಪುರುಷನು, ನಾನು ಸ್ವಯಂವ್ಯಕ್ತನು ನನಗೆ ಹುಟ್ಟೇ ಇಲ್ಲವು. ನಾನೇ ಎಲ್ಲರಿಗೂ ಅಧಿಪತಿಯು. ಆದಿಯೇ ಇಲ್ಲದ ನಿತ್ಯಭೊಕ್ತೃವೂ ನಾನೇ. ನಾನೊಬ್ಬನೇ ನಿರ್ಲೇಪನೂ, ಏಕೈಕನೂ ಆದ ಪರಬ್ರಹ್ಮವು

೧೪. ಎಲೈ ದೇವರ್ಷಿಗಳಿರಾ, ಈ ಜಗತ್ತನ್ನು ಸೃಷ್ಟಿಸುವವನೂ ನಾನೇ, ಸಂಹರಿಸುವವನೂ ನಾನೇ. ಇವನ್ನು ನಡೆಸಿಕೊಂಡುಬರುವವನೂ ನಾನಲ್ಲದೆ ಮತ್ತೆ ಬೇರೆಯಿಲ್ಲ. ನನಗಿಂತ ಮೇಲಾದವನು ಬೇರೆ ಯಾವನೂ ಇಲ್ಲ ಎಂದನು.

೧೫. ಎಲೈ ಮುನೀಂದ್ರನೇ, ಈರೀತಿ ಬ್ರಹ್ಮನು ನುಡಿಯುತ್ತಿರುವಷ್ಟರಲ್ಲಿಯೇ ಅಲ್ಲಿ ಇದ್ದ ವಿಷ್ಣುವು ಶಿವಮಾಯೆಗೆ ಕಟ್ಟುಬಿದ್ದು, ಮಿತಿಮೀರಿ ಕುಪಿತನಾಗಿ ನಗುತ್ತಾ ಇಂತು ಹೇಳತೊಡಗಿದನು

೧೬. ಓ ಬ್ರಹ್ಮದೇವ, ಯೋಗನಿರತನಾದ ನಿನಗೆ ಈ ಮೂರ್ಖತನವು ಸರಿಯಲ್ಲ. ಪರತತ್ತ್ವವಾವುದೆಂಬುದನ್ನು ತಿಳಿಯದೆಯೇ ವ್ಯರ್ಥವಾಗಿ ಏಕೆ ಹರಟುವೆ ?

**ಕರ್ತಾಹಂ ಸರ್ವಲೋಕಾನಾಂ ಪರಮಾತ್ಮಾ ಪರಃ ಪುಮಾನ್ ।**
**ಯಜ್ಞೋ ನಾರಾಯಣೋ ದೇವೋ ಮಾಯಾಧೀಶಃ ಪರಾ ಗತಿಃ ॥ ೧೭ ॥**

**ಮಮಾಜ್ಞಯಾ ತ್ವಯಾ ಬ್ರಹ್ಮನ್ಸೃಷ್ಟಿರೇಷಾ ವಿಧೀಯತೇ ।**
**ಜಗತಾಂ ಜೀವನಂ ನೈವ ಮಾಮನಾದೃತ್ಯ ಚೇಶ್ವರಂ ॥ ೧೮ ॥**

**ಏವಂ ತ್ರಿಪ್ರಕೃತೌ ಮೋಹಾತ್ಪರಸ್ಪರಜಯೈಷಿಣೌ ।**
**ಪ್ರೋಚತುರ್ನಿಗಮಾಂಶ್ಚಾತ್ರ ಪ್ರಮಾಣೇ ಸರ್ವಥಾ ತನೌ ॥ ೧೯ ॥**

**ಪ್ರಷ್ಟವ್ಯಾಸ್ತೇ ವಿಶೇಷೇಣ ಸ್ಥಿತಾ ಮೂರ್ತಿಧರಾಶ್ಚ ತೇ ।**
**ಪಪ್ರಚ್ಛತುಃ ಪ್ರಮಾಣಜ್ಞಾನಿತ್ಯುಕ್ತ್ವಾ ಚತುರೋಽಪಿ ತಾನ್ ॥ ೨೦ ॥**

**॥ ವಿಧಿವಿಷ್ಣೂ ಊಚತುಃ**

**ವೇದಾಃ ಪ್ರಮಾಣಂ ಸರ್ವತ್ರ ಪ್ರತಿಷ್ಠಾ ಪರಮಾಮಿತಾಃ ।**
**ಯೂಯಂ ವದತ ವಿಶ್ರಬ್ಧಂ ಕಿಮೇಕಂ ತತ್ತ್ವಮವ್ಯಯಂ ॥ ೨೧ ॥**

---

೧೭ ನಾನು ಈ ಎಲ್ಲಾ ಲೋಕಗಳಿಗೂ ಕರ್ತೃವು. ಪರಮಾತ್ಮನೂ ಪರಮ ಪುರುಷನೂ ನಾನೇ. ಯಜ್ಞನೂ ನಾರಾಯಣನೂ ಆದ ದೇವನೂ ನಾನೇ. ಮಾಯೆಗೆ ಪ್ರಭುವೂ ದಿವ್ಯಜ್ಞಾನಸ್ವರೂಪನೂ ನಾನಲ್ಲದೆ ಬೇರೆಯಿಲ್ಲ.

೧೮. ನನ್ನ ಅಪ್ಪಣೆಯಿಂದಲೇ ನೀನೀ ಸೃಷ್ಟಿಯನ್ನು ನಡೆಸುತ್ತಿರುವೆ ಪ್ರಭುವಾದ ನನ್ನನ್ನು ಆದರಿಸದಿದ್ದರೆ ಈ ಪ್ರಪಂಚದ ಜೀವಿತವೇ ಇಲ್ಲವಾಗುವುದು.

೧೯-೨೦. ಈರೀತಿ ಮೋಹಾವಿಷ್ಟರಾಗಿ ಆ ಬ್ರಹ್ಮವಿಷ್ಣುಗಳು ಪರಸ್ಪರ ವಿರೋಧವನ್ನು ತಾಳಿ ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಆಸೆಯುಳ್ಳವರಾಗಿ, ನಮ್ಮಿಮ್ಮರಿಗೆ ಈಗ ಉಂಟಾಗಿರುವ ಜಗಳವನ್ನು ಬಗೆಹರಿಸಲು ಇಲ್ಲಿ ಸಾಕ್ಷಾತ್ ಮೂರ್ತಿಮಂತರಾಗಿ ನಿಂತಿರುವ ಚತುರ್ವೇದಗಳನ್ನೇ ಪ್ರಮಾಣವನ್ನಾಗಿ ಕೇಳೋಣ ಎಂದು ನಿಶ್ಚಯಿಸಿಕೊಂಡು, ಅವರೀರ್ವರೂ ಪ್ರಮಾಣಪುರುಷರಾದ ಚತುರ್ವೇದಗಳನ್ನು ಕೇಳ ಬಂದರು.

೨೧ ಎಲೈ ವೇದಪುರುಷರಿರಾ, ನೀವು ಹೇಳಿದುದೇ ನಿಜವೆಂದು ಎಲ್ಲಕಡೆಯಲ್ಲೂ ನಿಮಗೆ ಶ್ರೇಷ್ಠವಾದ ಪ್ರಶಸ್ತಿಯು ದೊರೆತಿರುವುದು. ಆದುದರಿಂದ ನೀವು ಯಾವೊಂದೂ ಅಡೆಯಿಲ್ಲದೆ ಅವಿನಾಶಿಯೂ ಅದ್ವಿತೀಯವೂ ಆದ ಆ ತತ್ತ್ವವು ಯಾವುದೆಂದು ತಿಳಿಸಿರಿ ಎಂದು ಪ್ರಶ್ನಿಸಿದರು.

॥ ನಂದೀಶ್ವರ ಉವಾಚ ॥

ಇತ್ಯಾಕರ್ಣ್ಯ ತಯೋರ್ವಾಚಂ ಪುನಸ್ತೇ ಹಿ ಋಗಾದಯಃ ।
ಅವದಂಸ್ತತ್ತ್ವತಃ ಸರ್ವೇ ಪರೇಶಂ ಸಂಸ್ಮರನ್ ಪ್ರಭುಂ ॥ ೨೨ ॥

ಯದಿ ಮಾನ್ಯಾ ವಯಂ ದೇವೌ ಸೃಷ್ಟಿಸ್ಥಿತಿಕರೌ ವಿಭೂ ।
ತದಾ ಪ್ರಮಾಣಂ ವಕ್ಷ್ಯಾಮೋ ಭವತ್ಸಂದೇಹಭೇದಕಂ ॥ ೨೩ ॥

॥ ನಂದೀಶ್ವರ ಉವಾಚ ॥

ಶ್ರುತ್ಯುಕ್ತವಿಧಿಮಾಕರ್ಣ್ಯ ಪ್ರೋಚತುಸ್ತೌ ಸುರೌ ಶ್ರುತೀಃ ।
ಯುಷ್ಮದುಕ್ತಂ ಪ್ರಮಾಣಂ ನೌ ಕಿಂ ತತ್ತ್ವಂ ಸಮ್ಯಗುಚ್ಯತಾಂ ॥ ೨೪ ॥

॥ ಋಗ್ವೇದ ಉವಾಚ ॥

ಯದಂತಸ್ಸ್ಥಾನಿ ಭೂತಾನಿ ಯತಸ್ಸರ್ವಂ ಪ್ರವರ್ತತೇ ।
ಯದಾಹುಃ ಪರಮಂ ತತ್ತ್ವಂ ಸ ರುದ್ರಸ್ತ್ವೇಕ ಏವ ಹಿ ॥ ೨೫ ॥

---

೨೨ ಓ ಮುನೀಂದ್ರ, ಅವರ ಮಾತನ್ನು ಕೇಳಿ ಆ ಋಗಾದಿಚತುರ್ವೇದಗಳು ಪ್ರಭುವಾದ ಪರಮೇಶ್ವರನನ್ನು ಸ್ಮರಿಸುತ್ತಾ ನಿಶ್ಚಯಾಂಶವನ್ನು ವಿವರಿಸತೊಡಗಿದರು

೨೩. ಸೃಷ್ಟಿಕರ್ತನೂ ಪಾಲನ ಕರ್ತೃವೂ ಆದ ಎಲೈ ದೇವಪ್ರಭುಗಳಿರಾ, ನಾವು ನಿಮಗೆ ಮಾನ್ಯರಾಗಿದ್ದ ಪಕ್ಷಕ್ಕೆ ನಿಮ್ಮ ಸಂಶಯವನ್ನು ನಿವಾರಿಸುವಂತಹ ಪ್ರಮಾಣವನ್ನು ನಿಮಗೆ ತಿಳಿಸುವೆವು.

೨೪ ಓ ಮುನೀಂದ್ರ, ಹೀಗೆ ಶ್ರುತಿಗಳು ನುಡಿದ ವಿಧಿಯನ್ನು ಕೇಳಿ ಆ ಬ್ರಹ್ಮವಿಷ್ಣುಗಳಿಬ್ಬರೂ ಆ ಶ್ರುತಿಗಳನ್ನು ಕುರಿತು ನಿಮ್ಮ ಮಾತೇ ನಮಗೆ ಪ್ರಮಾಣ. ಅಂತಹ ತತ್ತ್ವವು ಯಾವುದು? ಸರಿಯಾಗಿ ತಿಳಿಸಿರಿ ಎಂದನು.

೨೫ ಆಗ ಋಗ್ವೇದವು ಹೇಳಿತು,—ಯಾವಾತನ ಒಳಗೇ ಈ ಸಮಸ್ತ ಪ್ರಾಣಿಗಳೂ ನೆಲೆಸಿರುವುವೋ, ಯಾವಾತನಿಂದಲೇ ಸಕಲ ಕಾರ್ಯಗಳೂ ಜರುಗುವುವೋ, ಯಾವಾತನನ್ನೇ ಪರತತ್ತ್ವವೆನ್ನುವರೋ ಅಂತಹವನು ಶ್ರೀ ಶಿವನೊಬ್ಬನೇ ಹೊರತು ಮತ್ತೆ ಯಾರೂ ಅಲ್ಲ.

॥ ಯಜುರ್ವೇದ ಉವಾಚ ॥

ಯೋ ಯಜ್ಞೈರಖಿಲೈರೀಶೋ ಯೋಗೇನ ಚ ಸಮಿಜ್ಯತೇ ।
ಯೇನ ಪ್ರಮಾಣಂ ಖಲು ನಸ್ಸ ಏಕಸ್ಸರ್ವದೃಕ್ಛಿವಃ ॥ ೨೬ ॥

॥ ಸಾಮವೇದ ಉವಾಚ ॥

ಯೇನೇದಂ ಭ್ರಾಮ್ಯತೇ ವಿಶ್ವಂ ಯೋಗಿಭಿರ್ಯೋ ವಿಚಿಂತ್ಯತೇ ।
ಯದ್ಭಾಸಾ ಭಾಸತೇ ವಿಶ್ವಂ ಸ ಏಕಸ್ತ್ರ್ಯಂಬಕಃ ಪರಃ ॥ ೨೭ ॥

॥ ಅಥರ್ವಣವೇದ ಉವಾಚ ॥

ಯಂ ಪ್ರಪಶ್ಯಂತಿ ದೇವೇಶಂ ಭಕ್ತ್ಯಾನುಗ್ರಹಿಣೋ ಜನಾಃ ।
ತಮಾಹುರೇಕಂ ಕೈವಲ್ಯಂ ಶಂಕರಂ ದುಃಖತಃ ಪರಂ ॥ ೨೮ ॥

॥ ನಂದೀಶ್ವರ ಉವಾಚ ॥

ಶ್ರುತ್ಯುಕ್ತಮಿದಮಾಕರ್ಣ್ಯಾತೀವಮಾಯಾವಿಮೋಹಿತೌ ।
ಸ್ಮಿತ್ವಾಹತುರ್ವಿಧಿಹರೀ ನಿಗಮಾಂಸ್ತಾನ್ವಿಚೇತನೌ ॥ ೨೯ ॥

---

೨೬. ಬಳಿಕ ಯಜುರ್ವೇದವು ಹೇಳಿತು :— ಯಾವ ಪ್ರಭುವು ಸಕಲವಿಧವಾದ ಯಜ್ಞಗಳಿಂದಲೂ ಯೋಗಮಾರ್ಗದಿಂದಲೂ ಆರಾಧಿಸಲ್ಪಡುವನೋ ಯಾವಾತನಿಂದಲೇ ನಾವು ಪ್ರಮಾಣವೆನಿಸಿದೆವೋ ಅಂತಹ ಸರ್ವಕರ್ತೃವಾದ ಶಿವನೇ ಏಕೈಕವಾದ ತತ್ತ್ವವು.

೨೭ ಆಮೇಲೆ ಸಾಮವೇದವು ಹೇಳಿತು :- ಯಾವಾತನಿಂದ ಈ ಪ್ರಪಂಚವು ಸ್ತುತಿಸಲ್ಪಡುವುದೋ, ಯಾವಾತನು ಸದಾ ಯೋಗಿಗಳಿಂದ ಧ್ಯಾನಿಸಲ್ಪಡುವನೋ, ಯಾವಾತನ ತೇಜಸ್ಸಿನಿಂದ ಈ ಪ್ರಪಂಚವು ಪ್ರಕಾಶಿಸುವುದೋ ಆ ತ್ರಿಲೋಚನನೇ ಪರವಸ್ತುವು.

೨೮. ಅನಂತರ ಅಥರ್ವಣವೇದವು ನುಡಿಯಿತು :— ಯಾವ ಪ್ರಭುವನ್ನು ಭಕ್ತಿಮಾರ್ಗದಿಂದಲೇ ಸುಲಭವಾಗಿ ಜನರು ಸಾಕ್ಷಾತ್ಕರಿಸುವರೋ ಆ ದುಃಖಾತೀತನೂ ಪರಾತ್ಪರನೂ ಆದ ಶಂಕರನನ್ನೇ ಏಕೈಕವಾದ ಮೋಕ್ಷಸ್ವರೂಪವೆನ್ನುವರು.

೨೯. ಎಲೈ ಸನತ್ಕುಮಾರನೇ, ಈರೀತಿ ವೇದಗಳು ನುಡಿದುದನ್ನು ಕೇಳಿ ಆ ಬ್ರಹ್ಮವಿಷ್ಣುಗಳು ಮಿತಿಮಿರಿ ಶಿವಮಾಯೆಗೊಳಪಟ್ಟು ಪ್ರಜ್ಞಾಹೀನರಾಗಿ ನಗುತ್ತಾ ಆ ವೇದಗಳನ್ನು ಇಂತೆಂದರು.

॥ ವಿಧಿಹರೀ ಊಚತುಃ ॥

ಹೇ ವೇದಾಃ ಕಿಮಿದಂ ಯೂಯಂ ಭಾಷಾಂತೇ ಗತಚೇತನಾಃ ।
ಕಿಂ ಜಾತಂ ವ್ರೋಽದ್ಯ ಸರ್ವಂ ಹಿ ನಷ್ಟಂ ಸುವಯುನಂ ಪರಂ ॥ ೩೦ ॥

ಕಥಂ ಪ್ರಮಥನಾಥೋಽಸೌ ರಮಮಾಣೋ ನಿರಂತರಂ ।
ದಿಗಂಬರಃ ಪೀತವರ್ಣೋ ಶಿವಯಾ ಧೂಲಿಧೂಸರಃ ॥ ೩೧ ॥

ವಿರೂಪವೇಷೋ ಜಟಿಲೋ ವೃಷಗೋ ವ್ಯಾಲಭೂಷಣಃ ।
ಪರಂ ಬ್ರಹ್ಮತ್ವಮಾಪನ್ನಃ ಕ್ವ ಚ ತತ್ಸಂಗವರ್ಜಿತಂ ॥ ೩೨ ॥

ಇತ್ಯುದೀರಿತಮಾಕರ್ಣ್ಯ ಪ್ರಣವಃ ಸರ್ವಗಸ್ತಯೋಃ ।
ಅಮೂರ್ತೋ ಮೂರ್ತಿಮಾನ್ಭೂತ್ವಾ ಜೃಂಭಮಾಣ ಉವಾಚ ತೌ ॥೩೩॥

---

೩೦ ಎಲೈ ವೇದಗಳಿರಾ, ಇದೇನು ಎಚ್ಚರಿಕೆಯಿಲ್ಲದೆ ಮಾತಾಡುತ್ತಿರುವಿರಿ ? ಈಗ ನಿಮಗೇನಾಗಿ ಹೋಗಿದೆ ? ನಿಮ್ಮ ಶ್ರೇಷ್ಠವಾದ ಆ ವಿವೇಕವು ಎಲ್ಲಿ ಹೋಯಿತು ?

೩೧ ಏನು ? ಈ ಪ್ರಮಥಗಣಗಳ ಅಧಿಪತಿಯಾದ ಶಿವನೇ ? ಯಾವಾಗಲೂ ಮೈಮೇಲೆ ಬಟ್ಟೆಯಿಲ್ಲದೆ ಪಾರ್ವತಿಯೊಡನೆ ವಿಹರಿಸುತ್ತಿರುವ ಪಿಂಗಲವಾದ ಶರೀರ ಒಣ್ಣವುಳ್ಳ ಮೈಗೆಲ್ಲಾ ಧೂಳು ಮುಸುಕಿರುವ ಆ ಶಿವನೇ ?

೩೨ ಆಹಾ ! ಅವನ ವಿಕಾರವಾದ ವೇಷವೋ, ಅವನ ಜಟೆಗಟ್ಟಿದ ತಲೆಯೋ, ಮುದಿಯೆತ್ತಿನ ಮೇಲೇರಿ ಅವನು ಹೋಗುವಪರಿಯೋ, ಅವನ ಅಲಂಕಾರವಾದ ಆ ಹಾವುಗಳೋ, ಇಂತಹ ಶಿವನುಶ್ರೇಷ್ಠವಾದ ಪರಬ್ರಹ್ಮತನವನ್ನು ಪಡೆದುಬಿಟ್ಟನೇ ? ಆ ಶಿವನೆಲ್ಲಿ ? ಆ ಸಂಗವರ್ಜಿತವಾದ ಆ ಪರಬ್ರಹ್ಮತತ್ತ್ವವೆಲ್ಲಿ ?

೩೩ ಈ ರೀತಿಯಾಗಿ ಅವರೀರ್ವರೂ ಹೇಳಿದ ಮಾತನ್ನು ಕೇಳಿ ಎಲ್ಲೆಲ್ಲೂ ವ್ಯಾಪಿಸಿಕೊಂಡಿರುವ ಅಗೋಚರವಾದ ಓಂಕಾರವು ಶರೀರವನ್ನು ಧರಿಸಿಬಂದು ಪ್ರೀತಿಯಿಂದ ಅವರನ್ನು ಕುರಿತು ಇಂತೆಂದಿತು.

॥ ಪ್ರಣವ ಉವಾಚ ॥

ನ ಹೀಶೋ ಭಗವಾಂಚ್ಛಕ್ತ್ಯಾ ಹ್ಯಾತ್ಮನೋ ವ್ಯತಿರಿಕ್ತಯಾ ।
ಕದಾಚಿದ್ರಮತೇ ರುದ್ರೋ ಲೀಲಾರೂಪಧರೋ ಹರಃ ॥ ೩೪ ॥

ಅಸೌ ಹಿ ಪರಮೇಶಾನಸ್ಸ್ವಯಂಜ್ಯೋತಿಸ್ಸನಾತನಃ ।
ಆನಂದರೂಪಾ ತಸ್ಯೈಷಾ ಶಕ್ತಿರ್ನಾಗಂತುಕೀ ಶಿವಾ ॥ ೩೫ ॥

॥ ನಂದೀಶ್ವರ ಉವಾಚ ॥

ಇತ್ಯೇವಮುಕ್ತೋಽಪಿ ತದಾ ವಿಧೇರ್ವಿಷ್ಣೋಶ್ಚ ವೈ ತದಾ ।
ನಾಜ್ಞಾನಮಗಮನ್ನಾಶಂ ಶ್ರೀಕಂಠಸ್ಯೈವ ಮಾಯಯಾ ॥ ೩೬ ॥

ಪ್ರಾದುರಾಸೀತ್ತತೋ ಜ್ಯೋತಿರುಭಯೋರಂತರೇ ಮಹತ್ ।
ಪೂರಯನ್ನಿಜಯಾ ಭಾಸಾ ದ್ಯಾವಾಭೂಮ್ಯೋರ್ಯದಂತರಂ ॥ ೩೭ ॥

ಜ್ಯೋತಿರ್ಮಂಡಲಮಧ್ಯಸ್ಥೋ ದದೃಶೇ ಪುರುಷಾಕೃತಿಃ ।
ವಿಧಿಕ್ರತುಭ್ಯಾಂ ತತ್ರೈವ ಮಹಾದ್ಭುತತನುರ್ಮುನೇ ॥ ೩೮ ॥

---

೩೪. ಭಗವಂತನೂ ಪ್ರಭುವೂ ಲೀಲಾಮೂರ್ತಿಯೂ ಆದ ಶಿವನು ತನಗಿಂತಲೂ ಬೇರೆಯಾದ ಶಕ್ತಿಯೊಡನೆ ಎಂದಿಗೂ ವಿಹರಿಸನು

೩೫ ಈತನೇ ಪರಮೇಶ್ವರನು, ಸ್ವಯಂಪ್ರಕಾಶನು, ಆದ್ಯಂತಗಳು ಇಲ್ಲದವನು. ಶಿವೆಯು ಆ ಪರಮಪುರುಷನ ಸಾಕ್ಷಾತ್ ಆನಂದಸ್ವರೂಪಳು. ಹೊಸದಾಗಿ ಹೊರಗಿನಿಂದ ಬಂದ ಬೇರೆಯುವಳಲ್ಲ

೩೬ ಓ ಸನತ್ಕುಮಾರ, ಈರೀತಿಯಾಗಿ ಪ್ರಣವವು ಹೇಳಿದರೂ ಕೂಡ ಶಿವನ ಮಾಯೆಯಿಂದ ಮೋಹಿತರಾದ ಆ ವಿಧಿವಿಷ್ಣುಗಳ ಅಜ್ಞಾನವು ಹೋಗಿ ಅವರಿಗೆ ವಿವೇಕವುಂಟಾಗಲಿಲ್ಲ.

೩೭; ಕೂಡಲೇ ಅವರೀರ್ವರ ನಡುವೆ ತನ್ನ ತೇಜಸ್ಸಿನಿಂದ ಭೂಮಿಗೂ ಆಕಾಶಕ್ಕೂ ನಡುವೆಯಿರುವ ಪ್ರದೇಶವೆಲ್ಲವನ್ನೂ ಆವರಿಸಿ ಪ್ರಕಾಶಿಸುತ್ತಿರುವ ಮಹಾಜ್ಯೋತಿಯೊಂದು ಆವಿರ್ಭವಿಸಿತು.

೩೮. ಓ ಮುನೀಂದ್ರ, ಆ ಜ್ಯೋತಿರ್ಮಂಡಲದ ನಡುವೆ ಅದ್ಭುತಾಕಾರವಾದ ಶರೀರವುಳ್ಳ ಪುರುಷಾಕೃತಿಯೊಂದನ್ನು ವಿಧಿಯೂ ಯಜ್ಞಪುರುಷನಾದ ವಿಷ್ಣುವೂ ಕಂಡರು.

ಪ್ರಜಜ್ವಾಲಾಥ ಕೋಪೇನ ಬ್ರಹ್ಮಣಃ ಪಂಚಮಂ ಶಿರಃ ।
ಆವಯೋರಂತರೇ ಕೋsಸೌ ಬಿಭ್ರಯಾತ್ಪುರುಷಾಕೃತಿಂ ॥ ೩೯ ॥

ವಿಧಿಃ ಸಂಭಾವಯೇದ್ಯಾವತ್ತಾವತ್ಸ ತ್ರಿವಿಲೋಚನಃ ।
ದೃಷ್ಟಃ ಕ್ಷಣೇನ ಚ ಮಹಾಪುರುಷೋ ನೀಲಲೋಹಿತಃ ॥ ೪೦ ॥

ತ್ರಿಶೂಲಪಾಣಿರ್ಭಾಲಾಕ್ಷೋ ನಾಗೋಡುಪವಿಭೂಷಣಃ ।
ಹಿರಣ್ಯಗರ್ಭಸ್ತಂ ದೃಷ್ಟ್ವಾ ವಿಹಸನ್ಪ್ರಾಹ ಮೋಹಿತಃ ॥ ೪೧ ॥

॥ ಬ್ರಹ್ಮೋವಾಚ ॥

ನೀಲಲೋಹಿತ ಜಾನೇ ತ್ವಾಂ ಮಾ ಭೈಷೀಶ್ಚಂದ್ರಶೇಖರ ।
ಭಾಲಸ್ಥಲಾನ್ಮಮ ಪುರಾ ರುದ್ರಃ ಪ್ರಾದುರಭೂದ್ಭವಾನ್ ॥ ೪೨ ॥

---

೩೯. ಆಗ, ನಮ್ಮಿಬ್ಬರ ನಡುವೆ ಪುರುಷಾಕೃತಿಯನ್ನು ತಳೆದುಬಂದ ಇವನಾರು? ಎಂದು ಕೋಪದಿಂದ ಬ್ರಹ್ಮನ ಐದನೆಯ ಮುಖವು ಉರಿಯುತೊಡಗಿತು (ಅದುವರೆಗೆ ಬ್ರಹ್ಮನಿಗೆ ಐದುಮುಖಗಳಿದ್ದುದಾಗಿ ಗ್ರಾಹ್ಯವು.)

೪೦. ಬ್ರಹ್ಮನು ಇನ್ನೂ ಆ ಪುರುಷನನ್ನು ದೃಷ್ಟಿಸಿನೋಡುವಷ್ಟರಲ್ಲಿಯೇ ಕ್ಷಣ ಮಾತ್ರದಲ್ಲಿ ಆ ಅದ್ಭುತಾಕಾರದ ಪುರುಷನು ಕಪ್ಪು ಮತ್ತು ಕೆಂಪುಸಂಮಿಶ್ರವಾದ ಬಣ್ಣವುಳ್ಳವನೂ ಮೂರುಕಣ್ಣುಳ್ಳವನೂ ಆಗಿ ಗೋಚರಿಸಿದನು

೪೧ ಆ ಪುರುಷನು ಕೈಯ್ಯಲ್ಲಿ ತ್ರಿಶೂಲವನ್ನು ಧರಿಸಿದ್ದನು. ಆತನಿಗೆ ಹಣೆಯಲ್ಲಿ ಕಣ್ಣೊಂದು ಹೊಳೆಯುತ್ತಿತ್ತು ಆತನು ತಲೆಯಲ್ಲಿ ಚಂದ್ರನನ್ನೂ ಕೈಲೂ ಕುತ್ತಿಗೆಯಲ್ಲೂ ಹಾವುಗಳನ್ನೂ ಒಡವೆಯಂತೆ ಧರಿಸಿದ್ದನು. ಇಂತಹ ಪುರುಷನನ್ನು ಕಂಡೊಡನೆಯೇ ಮೋಹಪರವಶನಾದ ಬ್ರಹ್ಮನು ನಗುತ್ತಾ ಇಂತೆಂದನು

೪೨. ಎಲೈ ನೀಲಲೋಹಿತನೇ, ನೀನು ನನಗೆ ಗೊತ್ತು ಹೆದರಬೇಡ. ಎಲೈ ಚಂದ್ರಶೇಖರನೇ, ಹಿಂದೆ ನನ್ನ ಹಣೆಯಿಂದ ಹುಟ್ಟಿದ ರುದ್ರನೇ ನೀನಲ್ಲವೇ ?

ರೋದನಾದ್ರುದ್ರನಾಮಾಪಿ ಯೋಜಿತೋಽಸಿ ಮಯಾ ಪುರಾ ।
ಮಾಮೇವ ಶರಣಂ ಯಾಹಿ ಪುತ್ರ ರಕ್ಷಾಂ ಕರೋಮಿ ತೇ ॥ ೪೩ ॥

॥ ನಂದೀಶ್ವರ ಉವಾಚ ॥

ಅಥೇಶ್ವರಃ ಪದ್ಮಯೋನೇಃ ಶ್ರುತ್ವಾ ಗರ್ವವತೀಂ ಗಿರಂ ।
ಚುಕೋಪಾತೀವ ಚ ತದಾ ಕುರ್ವನ್ನಿವ ಲಯಂ ಮುನೇ ॥ ೪೪ ॥

ಸ ಕೋಪತಸ್ಸಮುತ್ಪಾದ್ಯ ಪುರುಷಂ ಭೈರವಂ ಕ್ವಚಿತ್ ।
ಪ್ರಜ್ವಲಂತಂ ಸುಮಹಸಾ ಪ್ರೀತ್ಯಾ ಚ ಪರಮೇಶ್ವರಃ ॥ ೪೫ ॥

॥ ಈಶ್ವರ ಉವಾಚ ॥

ಪ್ರಾಕ್ಚ ಪಂಕಜಜನ್ಮಾಸೌ ಶಾಸ್ಯಸ್ತೇ ಕಾಲಭೈರವಃ ।
ಕಾಲವದ್ರಾಜಸೇ ಸಾಕ್ಷಾತ್ಕಾಲರಾಜಸ್ತತೋ ಭವಾನ್ ॥ ೪೬ ॥

---

೪೩. ನೀನು ಹುಟ್ಟಿದೊಡನೇ ಗಟ್ಟಿಯಾಗಿ ಅತ್ತುಬಿಟ್ಟಿಯಾದುದರಿಂದ ನಾನೇ ನಿನಗೆ ರುದ್ರನೆಂದೂ ಹೆಸರಿಟ್ಟೆ. ವತ್ಸ, ನನ್ನನ್ನೇ ಮರೆಹೊಗು. ನಿನ್ನನ್ನು ಕಾಪಾಡುವೆನು ಎಂದನು.

೪೪. ಓ ಮುನೀಂದ್ರ, ಈರೀತಿ ಗರ್ವದಿಂದ ಪದ್ಮಸಂಭವನಾದ ಬ್ರಹ್ಮನಾಡಿದ ಮಾತನ್ನು ಕೇಳಿ ಆ ಪ್ರಭುವು ಪ್ರಳಯುವನ್ನು ಮಾಡಿಬಿಡುವನೋ ಎಂಬಂತೆ ಬಹುವಾಗಿ ಕೋಪವನ್ನು ತಾಳಿದನು.

೪೫. ಆಗ ಆ ಪರಮೇಶ್ವರನು ಮಹಾಭಯಂಕರಾಕಾರನಾದ ತೇಜಸ್ಸಿನಿಂದ ಬೆಳಗುತ್ತಿರುವ ಪುರುಷನೋರ್ವನನ್ನು ಸೃಷ್ಟಿಸಿ ಪ್ರೀತಿಯಿಂದ ಅವನನ್ನು ಕುರಿತು

೪೬. ಎಲೈ ಕಾಲಭೈರವನೇ, ಮೊದಲು ಈ ಬ್ರಹ್ಮನನ್ನು ದಂಡಿಸು. ನೀನು ಸಾಕ್ಷಾದ್ಯಮನಂತೆ ತೋರುವೆಯಾದ್ದರಿಂದ ಕಾಲರಾಜನೆನಿಸುವೆ.

ವಿಶ್ವಂ ಭರ್ತುಂ ಸಮರ್ಥೋಽಸಿ ಭೀಷಣಾದ್ಭೈರವಃ ಸ್ಮೃತಃ ।
ತ್ವತ್ತೋ ಭೇಷ್ಯತಿ ಕಾಲೋಽಪಿ ತತಸ್ತ್ವಂ ಕಾಲಭೈರವಃ ॥ ೪೭ ॥

ಆಮರ್ದಯಿಷ್ಯತಿ ಭವಾನ್ರುಷ್ಟೋ ದುಷ್ಟಾತ್ಮನೋ ಯತಃ ।
ಆಮರ್ದಕ ಇತಿ ಖ್ಯಾತಿಂ ತತಸ್ಸರ್ವತ್ರ ಯಾಸ್ಯಸಿ ॥ ೪೮ ॥

ಯತಃ ಪಾಪಾನಿ ಭಕ್ತಾನಾಂ ಭಕ್ಷಯಿಷ್ಯಸಿ ತತ್ಕ್ಷಣಾತ್ ।
ಪಾಪಭಕ್ಷಣ ಇತ್ಯೇವ ತವ ನಾಮ ಭವಿಷ್ಯತಿ ॥ ೪೯ ॥

ಯಾ ಮೇ ಮುಕ್ತಿಪುರೀ ಕಾಶೀ ಸರ್ವಾಭ್ಯೋಽಪಿ ಗರೀಯಸೀ ।
ಆಧಿಪತ್ಯಂ ಚ ತಸ್ಯಾಸ್ತೇ ಕಾಲರಾಜ ಸದೈವ ಹಿ ॥ ೫೦ ॥

ತತ್ರ ಯೇ ಪಾತಕಿನರಾಸ್ತೇಷಾಂ ಶಾಸ್ತಾ ತ್ವಮೇವ ಹಿ ।
ಶುಭಾಶುಭಂ ಚ ತತ್ಕರ್ಮ ಚಿತ್ರಗುಪ್ತೋ ಲಿಖಿಷ್ಯತಿ ॥ ೫೧ ॥

---

೪೭. ನೀನು ಈ ಪ್ರಪಂಚವನ್ನೆಲ್ಲಾ ಬೇಕಾದರೆ ಧರಿಸಬಲ್ಲೆ. ನಿನ್ನನ್ನು ನೋಡಿದರೆ ಹೆದರಿಕೆ ಹುಟ್ಟುವುದರಿಂದ ನಿನಗೆ ಭೈರವನೆಂದು ಹೆಸರಾಗುವುದು. ನಿನ್ನನ್ನು ಕಂಡರೆ ಯಮನೂ ಹೆದರುವನು ಆದುದರಿಂದ ನಿನಗೆ ಕಾಲಭೈರವನೆಂದೇ ಹೆಸರಾಗಲಿ

೪೮ ನೀನು ಕುಪಿತನಾಗಿ ದುಷ್ಟರನ್ನೆಲ್ಲಾ ಅಪ್ಪಳಿಸಿ ಅರೆದುಬಿಡುವೆಯಾದುದ ರಿಂದಲೇ ನಿನಗೆ ಆಮರ್ದಕನೆಂಬುದಾಗಿಯೂ ಹೆಸರು ಪ್ರಸಿದ್ಧಿಯಾಗುವುದು

೪೯. ನಿನ್ನ ಭಕ್ತರ ಪಾಪಗಳನ್ನು ತತ್ಕ್ಷಣವೇ ನುಂಗಿಬಿಡುವೆಯಾದುದ ರಿಂದಲೇ ನಿನಗೆ ಪಾಪಭಕ್ಷಣನೆಂಬ ಹೆಸರಾಗುವುದು

೫೦ ಓ ಕಾಲರಾಜ, ಪುರಿಗಳಲ್ಲೆಲ್ಲಾ ಶ್ರೇಷ್ಠವೆನಿಸಿ ಮುಕ್ತಿಪುರಿಯೆಂದು ಪ್ರಸಿದ್ಧವಾದ, ನನ್ನ ನಿವಾಸವಾದ ಕಾಶೀಕ್ಷೇತ್ರಕ್ಕೆ ನೀನು ಸರ್ವದಾ ಅಧಿಪತಿ ಯಾಗಿರು.

೫೧. ಅಲ್ಲಿ ಯಾವ ಮನುಷ್ಯರು ಪಾಪವಮಾಡುವರೋ ಅವರೆಲ್ಲರಿಗೂ ನೀನೇ ದಂಡವಿಧಾತನು ಅವರ ಶುಭಾಶುಭಕರ್ಮಗಳನ್ನು ಚಿತ್ರಗುಪ್ತನು ಲೆಕ್ಕಮಾಡಿ ಬರೆದಿಡುವನು ಎಂದನು.

॥ ನಂದೀಶ್ವರ ಉವಾಚ ॥

ಏತಾನ್ವರಾನ್ಪ್ರಗೃಹ್ಯಾಥ ತತ್ಕ್ಷಣಾತ್ಕಾಲಭೈರವಃ ।
ವಾಮಾಂಗುಲಿನಖಾಗ್ರೇಣ ಚಕರ್ತ ಚ ವಿಧೇಃಶಿರಃ ॥ ೫೨ ॥

ಯದಂಗಮಪರಾಧ್ನೋತಿ ಕಾರ್ಯಂ ತಸ್ಯೈವ ಶಾಸನಂ ।
ಅತೋ ಯೇನ ಕೃತಾ ನಿಂದಾ ತಚ್ಛಿನ್ನಂ ಪಂಚಮಂ ಶಿರಃ ॥ ೫೩ ॥

ಅಥ ಛಿನ್ನಂ ವಿಧಿಶಿರೋ ದೃಷ್ಟ್ವಾ ಭೀತತರೋ ಹರಿಃ ।
ಶಾತರುದ್ರಿಯಮಂತ್ರೈಶ್ಚ ಭಕ್ತ್ಯಾ ತುಷ್ಟಾವ ಶಂಕರಂ ॥ ೫೪ ॥

ಭೀತೋ ಹಿರಣ್ಯಗರ್ಭೋಽಪಿ ಜಜಾಪ ಶತರುದ್ರಿಯಂ ।
ಇತ್ಥಂ ತೌ ಗತಗರ್ವೌ ಹಿ ಸಂಜಾತೌ ತತ್ಕ್ಷಣಾನ್ಮುನೇ ॥ ೫೫ ॥

ಪರಬ್ರಹ್ಮ ಶಿವಃ ಸಾಕ್ಷಾತ್ಸಚ್ಚಿದಾನಂದಲಕ್ಷಣಃ ।
ಪರಮಾತ್ಮಾ ಗುಣಾತೀತ ಇತಿ ಜ್ಞಾನಮವಾಪತುಃ ॥ ೫೬ ॥

---

೫೨. ಎಲೈ ಮುನೀಂದ್ರನೇ, ಕಾಲಭೈರವನು ಈ ವರಗಳನ್ನೆಲ್ಲಾ ಪಡೆದು ಕೂಡಲೇ ತನ್ನ ಎಡಗೈ ಬೆರಳಿನ ಉಗುರ್ನೆಯಿಂದ ಬ್ರಹ್ಮನ ಆ ಐದನೆಯ ತಲೆಯನ್ನು ಕತ್ತರಿಸಿಬಿಟ್ಟನು.

೫೩. ಯಾವ ಅಂಗವು ತಪ್ಪುಮಾಡುವುದೋ ಅದಕ್ಕೇ ಶಿಕ್ಷೆಯನ್ನು ಮಾಡಬೇಕಷ್ಟೆ? ಆದುದರಿಂದಲೇ ನಿಂದೆಯನ್ನು ಮಾಡಿದ ಐದನೆಯ ಶಿರಸ್ಸನ್ನು ಕತ್ತರಿಸಿ ಬಿಟ್ಟುದಾಯಿತು.

೫೪. ಅನಂತರ ಶ್ರೀಹರಿಯು ಬ್ರಹ್ಮನ ತಲೆಯು ಕತ್ತರಿಸಲ್ಪಟ್ಟುದುದನ್ನು ಕಂಡು ಮಹಾಭೀತನಾಗಿ, ಶತರುದ್ರೀಯಮಂತ್ರಗಳಿಂದ ಶ್ರೀ ಶಂಕರನನ್ನು ಭಕ್ತಿಯಿಂದ ಸ್ತೋತ್ರಮಾಡಿದನು.

೫೫. ಆಗ ಬ್ರಹ್ಮನೂ ಸಹ ಹೆದರಿ ಶತರುದ್ರೀಯವನ್ನು ಜಪಿಸಿದನು. ಓ ಮುನೀಂದ್ರ, ಈರೀತಿ ಅವರಿಬ್ಬರೂ ಕ್ಷಣಮಾತ್ರದಲ್ಲಿ ತಮ್ಮ ಅಹಂಕಾರವನ್ನು ತೊರೆದರು.

೫೬. ಆಗ ಆ ವಿಧಿವಿಷ್ಣುಗಳು ಶಿವನೇ ಸಾಕ್ಷಾತ್ ಸಚ್ಚಿದಾನಂದಸ್ವರೂಪನೂ ಗುಣಾತೀತನೂ ಆದ ಪರಬ್ರಹ್ಮನೆಂದೂ ಪರಮಾತ್ಮನೆಂದೂ ಚೆನ್ನಾಗಿ ಅರಿತುಕೊಂಡರು.

ಸನತ್ಕುಮಾರ ಸರ್ವಜ್ಞ ಶೃಣು ಮೇ ಪರಮಂ ಶುಭಂ ।
ಯಾವದ್ಗರ್ವೋ ಭವೇತ್ತಾವಜ್ಜ್ಞಾನಗುಪ್ತಿರ್ವಿಶೇಷತಃ ॥ ೫೭ ॥

ತ್ಯಕ್ತ್ವಾಭಿಮಾನಂ ಪುರುಷೋ ಜಾನಾತಿ ಪರಮೇಶ್ವರಂ ।
ಗರ್ವಿಣಂ ಹಂತಿ ವಿಶ್ವೇಶೋ ಜಾತೋ ಗರ್ವಾಪಹಾರಕಃ ॥ ೫೮ ॥

ಅಥ ವಿಷ್ಣುವಿಧೀ ಜ್ಞಾತ್ವಾ ವಿಗರ್ವೌ ಪರಮೇಶ್ವರಃ ।
ಪ್ರಸನ್ನೋಽಭೂನ್ಮಹಾದೇವೋಽಕರೋತ್ತಾವಭಯೌ ಪ್ರಭುಃ ॥ ೫೯ ॥

ಆಶ್ವಾಸ್ಯ ತೌ ಮಹಾದೇವಃ ಪ್ರೀತಃ ಪ್ರಣತವತ್ಸಲಃ ।
ಪ್ರಾಹ ಸ್ವಾಂ ಮೂರ್ತಿಮಪರಾಂ ಭೈರವಂ ತಂ ಕಪರ್ದಿನಂ ॥ ೬೦ ॥

॥ ಮಹಾದೇವ ಉವಾಚ ॥

ತ್ವಯಾ ಮಾನ್ಯೋ ವಿಷ್ಣುರಸೌ ತಥಾ ಶತಧೃತಿಃ ಸ್ವಯಂ ।
ಕಪಾಲಂ ವೈಧಸಂ ಚಾಪಿ ನೀಲಲೋಹಿತ ಧಾರಯ ॥ ೬೧ ॥

---

೫೭ ಎಲೈ ಸರ್ವಜ್ಞನಾದ ಸನತ್ಕುಮಾರನೇ, ಕೇಳು ಶುಭಕರವಾದ ಪರಮರಹಸ್ಯವನ್ನು ತಿಳಿಸುವೆನು. ಎಲ್ಲಿಯವರೆಗೆ ಮನುಷ್ಯನಿಗೆ ಗರ್ವವು ಇರುತ್ತದೆಯೋ ಅಲ್ಲಿಯವರೆಗೂ ವಿವೇಕವು ಮರೆಯಾಗಿ ಹೋಗಿರುವುದು.

೫೮ ಪುರುಷನಾದವನು ಆ ಅಹಂಕಾರವನ್ನು ಬಿಟ್ಟಾಗಲೇ ಪರಮೇಶ್ವರನನ್ನು ಅರಿಯುವನು ಗರ್ವಿಷ್ಠನಾದ ಪುರುಷನನ್ನು ಅಹಂಕಾರಾಪಹಾರಕನಾದ ವಿಶ್ವೇಶ್ವರನು ಶಿಕ್ಷಿಸುವನು.

೫೯. ಬಳಿಕ ಪ್ರಭುವಾದ ಆ ಪರಮೇಶ್ವರನು ವಿಧಿವಿಷ್ಣುಗಳ ಅಹಂಕಾರವು ಅಡಗಿಹೋಯಿತೆಂದು ತಿಳಿದು ಪ್ರಸನ್ನನಾಗಿ ಅವರೀರ್ವರ ಹೆದರಿಕೆಯನ್ನೂ ಹೋಗಲಾಡಿಸಿದನು.

೬೦. ಶರಣಾಗತವತ್ಸಲನಾದ ಆ ಶಂಕರನು ಸುಪ್ರೀತನಾಗಿ ಅವರೀರ್ವರನ್ನೂ ಸಂತೈಸಿ ತನ್ನ ಬೇರೊಂದು ಮೂರ್ತಿಯಾದ ಆ ಭೈರವನನ್ನು ಇಂತೆಂದನು.

೬೧ ಎಲೈ ನೀಲಲೋಹಿತ, ಭೈರವ, ನೀನು ಆ ವಿಷ್ಣುವಿಗೂ ಬ್ರಹ್ಮನಿಗೂ ಮನ್ನಣೆಯನ್ನು ಕೊಡಬೇಕು. ಈ ಬ್ರಹ್ಮನ ತಲೆಯ ಚಿಪ್ಪನ್ನು ಯಾವಾಗಲೂ ಧರಿಸಿಯೇ ಇರು.

ಬ್ರಹ್ಮಹತ್ಯಾಪನೋದಾಯ ವ್ರತಂ ಲೋಕಾಯ ದರ್ಶಯ ।
ಚರ ತ್ವಂ ಸತತಂ ಭಿಕ್ಷಾಂ ಕಪಾಲವ್ರತಮಾಶ್ರಿತಃ ॥ ೬೨ ॥

ಇತ್ಯುಕ್ತ್ವಾ ಪಶ್ಯತಸ್ತಸ್ಯ ತೇಜೋರೂಪಃ ಶಿವೋಽಬ್ರವೀತ್ ।
ಉತ್ಪಾದ್ಯ ಚೈಕಾಂ ಕನ್ಯಾಂ ತು ಬ್ರಹ್ಮಹತ್ಯಾಭಿವಿಶ್ರುತಾಂ ॥ ೬೩ ॥

ಯಾವದ್ವಾರಾಣಸೀಂ ದಿವ್ಯಾಂ ಪುರೀಮೇಷ ಗಮಿಷ್ಯತಿ ।
ತಾವತ್ತ್ವಂ ಭೀಷಣೇ ಕಾಲಮನುಗಚ್ಛೋಗ್ರರೂಪಿಣಂ ॥ ೬೪ ॥

ಸರ್ವತ್ರ ತೇ ಪ್ರವೇಶೋಽಸ್ತಿ ತ್ಯಕ್ತ್ವಾ ವಾರಾಣಸೀಂ ಪುರೀಂ ।
ವಾರಾಣಸೀಂ ಯದಾ ಗಚ್ಛೇತನ್ಮುಕ್ತಾ ಭವ ತತ್ಕ್ಷಣಾತ್ ॥ ೬೫ ॥

---

೬೨. ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳಲೋಸುಗ ವ್ರತವಾಚರಿಸುವಂತೆ ಈ ಪ್ರಪಂಚಕ್ಕೆ ತೋರುವವನಾಗು. ನೀನು ಕಾಪಾಲಿಕವ್ರತಸ್ಥನಾಗಿ ತಲೆಯ ಚಿಪ್ಪಿನಲ್ಲಿ ಸರ್ವದಾ ಭಿಕ್ಷೆಯನ್ನೆತ್ತುತ್ತಾ ಆದರಿಂದ ಜೀವಿಸುತ್ತಿರು

೬೩ ಹೀಗೆಂದು ನುಡಿದು ತೇಜೋಮಯನಾದ ಆ ಶಿವನು ಕಾಲಭೈರವನು ನೋಡುತ್ತಿರುವಂತೆಯೇ ಬ್ರಹ್ಮಹತ್ಯೆಯೆಂದು ಪ್ರಖ್ಯಾತಳಾದ ಕನ್ನಿಕೆಯೊಬ್ಬಳನ್ನು ಸೃಷ್ಟಿಸಿ ಅವಳನ್ನು ಕುರಿತಿಂತೆಂದನು.

೬೪. ಎಲೌ ಭಯಂಕರಾಕಾರೆಯೇ, ಎಲ್ಲಿಯವರೆಗೆ ಈ ಉಗ್ರರೂಪನಾದ ಕಾಲಭೈರವನು ಕಾಶೀಕ್ಷೇತ್ರಕ್ಕೆ ಹೋಗುವನೋ ಅದುವರೆಗೆ ನೀನು ಅವನ ಬೆಂಬಿಡದೆ ತಿರುಗುತ್ತಿರು.

೬೫. ಕಾಶೀಪುರಿಯೊಂದನ್ನು ಬಿಟ್ಟು ಉಳಿದ ಎಲ್ಲಕಡೆಯಲ್ಲಿಯೂ ನಿನಗೆ ಪ್ರವೇಶವಿರುವುದು ಯಾವಾಗ ಇವನು ಕಾಶೀಕ್ಷೇತ್ರಕ್ಕೆ ಹೋಗುವನೋ ಆಗ ಒಡನೆಯೇ ಇವನನ್ನು ಬಿಟ್ಟುಬಿಡು.

॥ ನಂದೀಶ್ವರ ಉವಾಚ ॥

ನಿಯೋಜ್ಯ ತಾಮಿತಿ ತದಾ ಬ್ರಹ್ಮಹತ್ಯಾಂ ಚ ತಾಂ ಪ್ರಭುಃ ।
ಮಹಾದ್ಭುತಶ್ಚ ಸ ಶಿವೋಽಪ್ಯಂತರ್ಧಾನಮಗಾತ್ತತಃ ॥ ೬೬ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಭೈರವಾವತಾರವರ್ಣನಂ ನಾಮಾಷ್ಟಮೋಽಧ್ಯಾಯಃ

---

೬೬　ಎಲೈ ಸನತ್ಕುಮಾರಮುನಿಯೇ, ಈರೀತಿಯಾಗಿ ಆ ಬ್ರಹ್ಮಹತ್ಯೆಯನ್ನು ನಿಯಮಿಸಿ ಅದ್ಭುತಲೀಲಾಕಾರಿಯಾದ, ಪ್ರಭುವಾದ ಆಶಿವನು ಅಲ್ಲಿಯೇ ಅಂತರ್ಧಾನನಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಭೈರವಾವತಾರವರ್ಣನವೆಂಬ ಎಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ನವಮೋಽಧ್ಯಾಯಃ

॥ ನಂದೀಶ್ವರ ಉವಾಚ ॥

**ಸನತ್ಕುಮಾರ ಸರ್ವಜ್ಞ ಭೈರವೀಮುಪರಾಂ ಕಥಾಂ ।**
**ಶೃಣು ಪ್ರೀತ್ಯಾ ಮಹಾದೋಷಸಂಹರ್ತ್ರೀಂ ಭಕ್ತಿವರ್ಧಿನೀಂ ॥ ೧ ॥**

**ತತ್ಸಾನ್ನಿಧ್ಯಂ ಭೈರವೋಽಪಿ ಕಾಲೋಽಭೂತ್ಕಾಲಕಾಲನಃ ।**
**ಸ ದೇವದೇವವಾಕ್ಯೇನ ಬಿಭ್ರತ್ಕಾಪಾಲಿಕಂ ವ್ರತಂ ॥ ೨ ॥**

---

### ಒಂಭತ್ತನೆಯ ಅಧ್ಯಾಯವು.

೧. ಎಲೈ ಸರ್ವಜ್ಞನಾದ ಸನತ್ಕುಮಾರನೇ, ಮಹಾಪಾಪಗಳನ್ನೂ ಪರಿಹರಿಸಿ, ಭಕ್ತಿಯನ್ನು ಹೆಚ್ಚಿಸುವ ಭೈರವನ ಮತ್ತೊಂದು ಚರಿತ್ರವನ್ನು ಹೇಳುವೆನು ಪ್ರೀತಿಯಿಂದ ಕೇಳು.

೨. ಆ ಶಿವನ ಬಳಿಯಲ್ಲಿ ನಿಂತಿದ್ದ ಕಾಲನಿಗೂ ಕಾಲನಾದ (ವಿಶ್ವಾತ್ಮಕನಾದ) ಆ ಕಾಲಭೈರವನು ಕಾಪಾಲಿಕವ್ರತವನ್ನು ಧರಿಸಿ ದೇವದೇವನಾದ ಪರಶಿವನ ಮಾತಿನಂತೆ ಕೈಲಿ ಕಪಾಲವನ್ನು ಹಿಡಿದು ಮೂರು ಲೋಕದಲ್ಲಿಯೂ ಸಂಚರಿಸಿದನು.

ಕಪಾಲಪಾಣಿರ್ವಿಶ್ವಾತ್ಮಾ ಚಚಾರ ಭುವನತ್ರಯಂ ।
ನಾತ್ಯಾಕ್ಷೀಚ್ಚಾಪಿ ತಂ ದೇವಂ ಬ್ರಹ್ಮಹತ್ಯಾಪಿ ದಾರುಣಾ ॥ ೩ ॥

ಪ್ರತಿತೀರ್ಥಂ ಭ್ರಮನ್ನಾಪಿ ವಿಮುಕ್ತೋ ಬ್ರಹ್ಮಹತ್ಯಯಾ ।
ಅತಃ ಕಾಮಾರಿಮಹಿಮಾ ಸರ್ವೋಽಪಿ ಹ್ಯವಗಮ್ಯತಾಂ ॥ ೪ ॥

ಪ್ರಮಥೈಃ ಸೇವ್ಯಮಾನೋಽಪಿ ಹ್ಯೇಕದಾ ವಿಹರನ್ಹರಃ ।
ಕಾಪಾಲಿಕೋ ಯಯೌ ಸ್ವೈರೀ ನಾರಾಯಣನಿಕೇತನಂ ॥ ೫ ॥

ಅಥಾಯಾಂತಂ ಮಹಾಕಾಲಂ ತ್ರಿನೇತ್ರಂ ಸರ್ಪಕುಂಡಲಂ ।
ಮಹಾದೇವಾಂಶಸಂಭೂತಂ ಪೂರ್ಣಾಕಾರಂ ಚ ಭೈರವಂ ॥ ೬ ॥

ಪಪಾತ ದಂಡವದ್ಭೂಮೌ ತಂ ದೃಷ್ಟ್ವಾ ಗರುಡಧ್ವಜಃ ।
ದೇವಾಶ್ಚ ಮುನಯಶ್ಚೈವ ದೇವನಾರ್ಯಃ ಸಮಂತತಃ ॥ ೭ ॥

---

೩-೪ ಆ ಕಾಲಭೈರವನನ್ನು ಭಯಂಕರವಾದ ಬ್ರಹ್ಮಹತ್ಯೆಯು ಬಿಡಲಿಲ್ಲ ಅವನು ಪ್ರತಿಯೊಂದು ತೀರ್ಥವನ್ನೂ ಯಾತ್ರೆಮಾಡಿದನು ಆದರೂ ಬೆಂಬತ್ತಿದ ಬ್ರಹ್ಮಹತ್ಯೆಯು ಬಿಡಲೇ ಇಲ್ಲ. ಆದುದರಿಂದ ಶಿವನ ಮಹಿಮೆಯೆಂತಹುದೆಂಬುದನ್ನು ನೀನೇ ತಿಳಿದುಕೊಳ್ಳುವೆ.

೫ ಒಂದುಸಲ ಆ ಕಾಲಭೈರವಸ್ವರೂಪನಾದ ಶಿವನು ಪ್ರಮಥಗಣಗಳಿಂದ ಸೇವಿಸಲ್ಪಡುತ್ತಿದ್ದರೂ ಅದನ್ನು ಬಿಟ್ಟು ಕಾಪಾಲಿಕವ್ರತಧಾರಿಯಾಗಿ ಸ್ವೇಚ್ಛೆಯಿಂದ ಶ್ರೀಹರಿಯ ಮನೆಗೆ ಬಂದನು

೬. ಆಗ ಮಹಾದೇವಾಂಶಸಂಭೂತನೂ ತ್ರಿನೇತ್ರನೂ ಸರ್ಪಕುಂಡಲಧಾರಿಯೂ ಆದ, ಪೂರ್ಣಾವತಾರನಾದ ಕಾಲಭೈರವನು ಬರುತ್ತಿರುವುದನ್ನು ಕಂಡು,

೭ ಶ್ರೀಹರಿಯು ದಂಡಾಕಾರವಾಗಿ ಭೂಮಿಯಲ್ಲಿ ನಮಸ್ಕಾರಮಾಡಿದನು. ಆಗ ಅಲ್ಲಿ ಸುತ್ತಲೂ ನೆರೆದಿದ್ದ ದೇವತೆಗಳೂ ಮುನಿಗಳೂ ದೇವಾಂಗನೆಯರೂ ಎಲ್ಲರೂ ಹಾಗೆಯೇ ನಮಸ್ಕರಿಸಿದರು.

**ಅಥ ವಿಷ್ಣುಃ ಪ್ರಣಮ್ಯೈನಂ ಪ್ರಯಾತಃ ಕಮಲಾಪತಿಃ ।**
**ಶಿರಸ್ಯಂಜಲಿಮಾಧಾಯ ತುಷ್ಟಾವ ವಿವಿಧೈಃ ಸ್ತವೈಃ ॥ ೮ ॥**

**ಸಾನಂದೋಽಥ ಹರಿಃ ಪ್ರಾಹ ಪ್ರಸನ್ನಾತ್ಮಾ ಮಹಾಮುನೇ ।**
**ಕ್ಷೀರೋದಮಥನೋದ್ಭೂತಾಂ ಪದ್ಮಾಂ ಪದ್ಮಾಲಯಾಂ ಮುದಾ ॥ ೯ ॥**

**॥ ವಿಷ್ಣುರುವಾಚ ॥**

**ಪ್ರಿಯೇ ಪಶ್ಯಾಬ್ಜನಯನೇ ಧನ್ಯಾಸಿ ಸುಭಗೇಽನಘೇ ।**
**ಧನ್ಯೋಽಹಂ ದೇವಿ ಸುಶ್ರೋಣಿ ಯತ್ಪಶ್ಯಾವೋ ಜಗತ್ಪತಿಂ ॥ ೧೦ ॥**

**ಅಯಂ ಧಾತಾ ವಿಧಾತಾ ಚ ಲೋಕಾನಾಂ ಪ್ರಭುರೀಶ್ವರಃ ।**
**ಅನಾದಿಃ ಶರಣಃ ಶಾಂತಃ ಪುರಃ ಷಡ್ವಿಂಶಸಂಮಿತಃ ॥ ೧೧ ॥**

---

೮. ಬಳಿಕ ಶ್ರೀಹರಿಯು ಶುದ್ಧಹೃದಯದಿಂದ ಶಿರಸ್ಸಿನಲ್ಲಿ ಅಂಜಲಿಯನ್ನು ಧರಿಸಿ ನಾನಾವಿಧವಾದ ಸ್ತೋತ್ರಗಳಿಂದ ಆತನನ್ನು ಸ್ತುತಿಸಿದನು.

೯. ಓ ಮುನೀಂದ್ರ, ಅನಂತರ ಪರಮಾನಂದಭರಿತನಾದ ಆ ಶ್ರೀಹರಿಯು ಅಮೃತಮಥನಕಾಲದಲ್ಲಿ ಉದ್ಭವಿಸಿದ ತನ್ನ ಪತ್ನಿಯಾದ ಲಕ್ಷ್ಮಿಯನ್ನು ಕುರಿತು

೧೦. ಪ್ರಿಯೆ, ಪದ್ಮಲೋಚನೆ, ನೋಡು. ನೀನಿಂದು ಧನ್ಯಳಾದೆ. ಎಲೌ ಸೌಭಾಗ್ಯಶಾಲಿನಿಯೇ, ಪಾಪರಹಿತಳಾದ ದೇವಿಯೇ, ನಾನು ಈದಿನ ಧನ್ಯನಾದೆನು. ಎಲೌ ಸುಶ್ರೋಣಿ, ಜಗದೀಶ್ವರನನ್ನು ಇಂದು ನಾವು ನೋಡುತ್ತಿರುವೆವು.

೧೧. ಈತನೇ ಜಗತ್ಕರ್ತನು. ಈತನೇ ಸರ್ವಕಾರ್ಯಗಳಿಗೂ ವಿಧಾಯಕನು. ಈತನೇ ಎಲ್ಲ ಲೋಕಗಳಿಗೂ ಒಡೆಯನು ಈತನಿಗೆ ಆದಿಯಿಲ್ಲವು. ಎಲ್ಲರಿಗೂ ರಕ್ಷಕನೀತನು. ಈತನು ಪರಮಶಾಂತನು. ಇಪ್ಪತ್ತಾರು ತತ್ತ್ವಗಳಿಂದ ಕೂಡಿರುವವನು.

ಸರ್ವಜ್ಞಃ ಸರ್ವಯೋಗೀಶಸ್ಸರ್ವಭೂತೈಕನಾಯಕಃ ।
ಸರ್ವಭೂತಾಂತರಾತ್ಮಾಯಂ ಸರ್ವೇಷಾಂ ಸರ್ವದಃ ಸದಾ ॥ ೧೨ ॥

ಯೋ ವಿನಿದ್ರಾ ವಿನಿಶ್ವಾಸಾಃ ಶಾಂತಾ ಧ್ಯಾನಪರಾಯಣಾಃ ।
ಧಿಯಾ ಪಶ್ಯಂತಿ ಹೃದಯೇ ಸೋಽಯಂ ಪಶ್ಯೇ ಸಮಾಕ್ಷತಾಂ ॥ ೧೩ ॥

ಯಂ ವಿದುರ್ವೇದತತ್ತ್ವಜ್ಞಾ ಯೋಗಿನೋ ಯತಮಾನಸಾಃ ।
ಅರೂಪೋ ರೂಪವಾನ್ಭೂತ್ವಾ ಸೋಽಯಮಾಯಾತಿ ಸರ್ವಗಃ ॥ ೧೪ ॥

ಅಹೋ ವಿಚಿತ್ರಂ ದೇವಸ್ಯ ಚೇಷ್ಟಿತಂ ಪರಮೇಷ್ಠಿನಃ ।
ಯಸ್ಯಾಖ್ಯಾಂ ಬ್ರುವತೋ ನಿತ್ಯಂ ನ ದೇಹಃ ಸೋಽಪಿ ದೇಹಭೃತ್ ॥ ೧೫ ॥

ತಂ ದೃಷ್ಟ್ವಾ ನ ಪುನರ್ಜನ್ಮ ಲಭ್ಯತೇ ಮಾನವೈರ್ಭುವಿ ।
ಸೋಽಯಮಾಯಾತಿ ಭಗವಾಂಸ್ತ್ರ್ಯಂಬಕಶ್ಶಶಿಭೂಷಣಃ ॥ ೧೬ ॥

---

೧೨. ಈತನು ಸರ್ವಜ್ಞನು ಸಕಲ ಯೋಗಿಗಳಿಗೂ ಅಧಿಪತಿಯು. ಎಲ್ಲ ಪ್ರಾಣಿಗಳಿಗೂ ಪ್ರಭುವು ಸಕಲ ಭೂತಗಳಲ್ಲಿಯೂ ಅಂತರಾತ್ಮನಾಗಿ ನೆಲೆಸಿರುವನು ಎಲ್ಲರಿಗೂ ಯಾವಾಗಲೂ ಎಲ್ಲವನ್ನೂ ಈತನೇ ನೀಡುವನು

೧೩ ಯಾವ ಮುನಿಗಳು ನಿದ್ರಾದಿಗಳನ್ನು ತೊರೆದು, ಶ್ವಾಸವನ್ನೂ ತಡೆಗಟ್ಟಿ ಶಾಂತರಾಗಿ ಧ್ಯಾನದಲ್ಲೇ ತೊಡಗಿ, ಹೃದಯದಲ್ಲಿ ಜ್ಞಾನಮಾರ್ಗದಿಂದ ಯಾವಾತನನ್ನು ಕಾಣುವರೋ ಅಂತಹ ಪರಮಪುರುಷನನ್ನು ಈಗ ನೀನು ನೋಡು.

೧೪ ವೇದಾರ್ಥಗಳ ತತ್ತ್ವವನ್ನು ಬಲ್ಲವರೂ ಯೋಗಿಗಳೂ ಜಿತಮನಸ್ಕರೂ ಯಾವಾತನನ್ನು ತಿಳಿಯುವರೋ ಆ ರೂಪರಹಿತನೂ ಸರ್ವವ್ಯಾಪಿಯೂ ಆದ ಪರಮಪುರುಷನು ರೂಪಧಾರಿಯಾಗಿ ಇಂದು ಬಂದಿರುವನು

೧೫. ಆಹಾ ! ಆ ಪರಮೇಶ್ವರನ ಲೀಲೆಯು ಅತ್ಯಾಶ್ಚರ್ಯಕರವಾದುದು ಯಾವಾತನಿಗೆ ಇದುವರೆಗೆ ಆಕಾರವಿಲ್ಲದೆ ಬರಿಯ ಹೆಸರು ಮಾತ್ರವೇ ಇರುತ್ತಿತ್ತೋ ಆತನೂ ಇಂದು ದೇಹವನ್ನು ಧರಿಸಿಬಂದಿರುವನು.

೧೬ ಯಾವಾತನನ್ನು ಕಂಡು ಭೂಮಿಯಲ್ಲಿನ ಮಾನವರು ಮತ್ತೆ ಜನ್ಮವನ್ನು ಧರಿಸರೊ ಆ ಭಗವಂತನಾದ ತ್ರಿಲೋಚನನೂ ಶಶಿಭೂಷಣನೂ ಬಂದಿರುವನು.

ಪುಂಡರೀಕದಲಾಯಾಮೇ ಧನ್ಯೇ ಮೇಽದ್ಯ ವಿಲೋಚನೇ ।
ಯದ್ದೃಶ್ಯತೇ ಮಹಾದೇವೋ ಹ್ಯಾಭ್ಯಾಂ ಲಕ್ಷ್ಮಿ ಮಹೇಶ್ವರಃ ॥ ೧೭ ॥

ಧಿಕ್ಧಿಕ್ಪದಂ ತು ದೇವಾನಾಂ ಪರಂ ದೃಷ್ಟ್ವಾ ನ ಶಂಕರಂ ।
ಲಭ್ಯತೇ ಯತ್ರ ನಿರ್ವಾಣಂ ಸರ್ವದುಃಖಾಂತಕೃತ್ತು ಯತ್ ॥ ೧೮ ॥

ದೇವತ್ವಾದಶುಭಂ ಕಿಂಚಿದ್ದೇವಲೋಕೇ ನ ವಿದ್ಯತೇ ।
ದೃಷ್ಟ್ವಾಪಿ ಸರ್ವೇ ದೇವೇಶಂ ಯನ್ಮುಕ್ತಿಂ ನ ಲಭಾಮಹೇ ॥ ೧೯ ॥

ಏವಮುಕ್ತ್ವಾ ಹೃಷೀಕೇಶಸ್ಸಂಪ್ರಹೃಷ್ಟತನೂರುಹಃ ।
ಪ್ರಣಿಪತ್ಯ ಮಹಾದೇವಮಿದಮಾಹ ವೃಷಧ್ವಜಂ ॥ ೨೦ ॥

॥ ವಿಷ್ಣುರುವಾಚ ॥

ಕಿಮಿದಂ ದೇವದೇವೇನ ಸರ್ವಜ್ಞೇನ ತ್ವಯಾ ವಿಭೋ ।
ಕ್ರಿಯತೇ ಜಗತಾಂ ಧಾತ್ರಾ ಸರ್ವಪಾಪಹರಾವ್ಯಯ ॥ ೨೧ ॥

---

೧೭. ಎಲೌ ಲಕ್ಷ್ಮಿ, ಕಮಲದ ದಲದಂತೆ ವಿಸ್ತಾರವಾಗಿರುವ ನನ್ನೀ ಎರಡು ಕಣ್ಣುಗಳು ಇಂದು ಸಾರ್ಥಕವಾದುವು ಏಕೆಂದರೆ ದೇವತೆಗಳಿಗೆಲ್ಲಾ ದೇವತೆಯೆನಿಸಿದ ಆ ಮಹೇಶ್ವರನನ್ನು ಇಂದು ನೋಡುತ್ತಿರುವೆನು.

೧೮. ಯಾವ ಪದವಿಯಲ್ಲಿ ಪರಮಪುರುಷನಾದ ಶಂಕರನನ್ನು ಕಂಡರೂ ಸರ್ವ ದುಃಖಗಳಿಗೂ ಕೊನೆಯೆನಿಸಿದ ಮೋಕ್ಷವು ಲಭಿಸದೇ ಇರುವುದೋ ಅಂತಹ ದೇವತಾ ಪದವಿಗೆ ಧಿಕ್ಕಾರವಿರಲಿ

೧೯. ಯಾವುದರ ದೆಸೆಯಿಂದ ಆ ದೇವೇಶನನ್ನು ಕಂಡರೂ ನಮಗೆ ಮುಕ್ತಿಯು ದೊರೆಯದೆಹೋಗುವುದೋ ಅಂತಹ ದೇವತ್ವಕ್ಕಿಂತಲೂ ಅಮಂಗಲಕರ ವಾದಂತಹುದು ದೇವಲೋಕದಲ್ಲಿ ಮತ್ತಾವುದೂ ಇಲ್ಲ.

೨೦. ಈರೀತಿಯಾಗಿ ಶ್ರೀಹರಿಯು ನುಡಿದು ಸಂತೋಷದಿಂದ ರೋಮಾಂಚಿತನಾಗಿ ವೃಷಭಧ್ವಜನಾದ ಆ ಮಹಾದೇವನನ್ನು ನಮಸ್ಕರಿಸಿ ಈರೀತಿ ನುಡಿದನು.

೨೧. ಸರ್ವರ ಪಾಪಗಳನ್ನೂ ಪರಿಹರಿಸುವ ನಾಶರಹಿತನಾದ ಓ ಪ್ರಭುವೇ, ದೇವಾದಿದೇವನೂ ಸರ್ವಜ್ಞನೂ ಆದ ನೀನು ಇದೇಕೆ ಈರೀತಿ ಜಗತ್ತುಗಳನ್ನು ಅಳಿಯುತ್ತಾ ಇರುವೆ?

ಕ್ರೀಡೇಯಂ ತವ ದೇವೇಶ ತ್ರಿಲೋಚನ ಮಹಾಮತೇ।
ಕಿಂ ಕಾರಣಂ ವಿರೂಪಾಕ್ಷ ಚೇಷ್ಟಿತಂ ತೇ ಸ್ಮರಾರ್ದನ ॥ ೨೨ ॥

ಕಿಮರ್ಥಂ ಭಗವನ್ ಶಂಭೋ ಭಿಕ್ಷಾಂ ಚರಸಿ ಶಕ್ತಿಪ।
ಸಂಶಯೋ ಮೇ ಜಗನ್ನಾಥ ತತ್ತ್ರೈಲೋಕ್ಯರಾಜ್ಯದ ॥ ೨೩ ॥

॥ ನಂದೀಶ್ವರ ಉವಾಚ ॥

ಏವಮುಕ್ತಸ್ತತಃ ಶಂಭುರ್ವಿಷ್ಣುನಾ ಭೈರವೋ ಹರಃ।
ಪ್ರತ್ಯುವಾಚಾದ್ಭುತೋತಿಸ್ಸ ವಿಷ್ಣುಂ ಹಿ ವಿಹಸನ್ಪ್ರಭುಃ ॥ ೨೪ ॥

॥ ಭೈರವ ಉವಾಚ ॥

ಬ್ರಹ್ಮಣಸ್ತು ಶಿರಶ್ಛಿನ್ನಮಂಗುಲ್ಯಾಗ್ರನಖೇನ ಹ।
ತದಘಂ ಪ್ರತಿಹಂತುಂ ಹಿ ಚರಾಮ್ಯೇತದ್ವ್ರತಂ ಶುಭಂ ॥ ೨೫ ॥

---

೨೨ ಎಲೈ ದೇವೇಶನೇ, ಮಹಾಧೀಮಂತನಾದ ತ್ರಿನೇತ್ರನೇ, ಇದು ನಿನ್ನ ಲೀಲೆಯಲ್ಲದೆ ಬೇರೆಯಲ್ಲ. ಓ ಸ್ಮರವೈರಿ, ವಿರೂಪಾಕ್ಷ, ಇಂತಹ ನಿನ್ನ ಲೀಲೆಗೆ ಕಾರಣವೇನು ?

೨೩. ಹೇ ಭಗವನ್, ಶಕ್ತಿನಾಥ, ಜಗತ್ಪ್ರಭು, ನೀನೇಕೆ ಭಿಕ್ಷವನ್ನು ಎತ್ತುತ್ತ ತಿರುಗುತ್ತಿರುವೆ ? ಮೂರು ಲೋಕಗಳ ಆಧಿಪತ್ಯವನ್ನೂ ಕಟಾಕ್ಷಮಾತ್ರದಿಂದಲೇ ಕರುಣಿಸುವ ಎಲೈ ಸ್ವಾಮಿಯೇ, ನನಗೆ ಈ ಅಂಶದಲ್ಲಿ ಸಂಶಯವುಂಟಾಗಿರುವುದು

೨೪ ಎಲೈ ಸನತ್ಕುಮಾರನೇ, ಈರೀತಿ ವಿಷ್ಣುವು ನುಡಿಯಲು ಅದ್ಭುತಲೀಲಾ ಕಾರನಾದ ಭೈರವಮೂರ್ತಿಯಾದ ಆ ಪ್ರಭುವು ವಿಷ್ಣುವನ್ನು ಕುರಿತು ಈರೀತಿ ಹೇಳಿದನು.

೨೫ ನನ್ನ ಬೆರಳಿನ ತುದಿಯುಗುರಿನಿಂದ ಬ್ರಹ್ಮನ ತಲೆಯನ್ನು ಕತ್ತರಿಸಿಬಿಡ ಲಿಲ್ಲವೇ ? ಆ ಪಾಪವನ್ನು ಕಳೆದುಕೊಳ್ಳಲು ಈ ಶುಭವಾದ ವ್ರತವನ್ನಾಚರಿಸು ತ್ತಿರುವೆನು ಎಂದನು.

॥ ನಂದೀಶ್ವರ ಉವಾಚ ॥

**ಏವಮುಕ್ತೋ ಮಹೇಶೇನ ಭೈರವೇಣ ರಮಾಪತಿಃ ।**
**ಸ್ಮೃತ್ವಾ ಕಿಂಚಿನ್ನತಶಿರಾಃ ಪುನರೇವಮುಜಿಜ್ಞಪತ್ ॥ ೨೬ ॥**

॥ ವಿಷ್ಣುರುವಾಚ ॥

**ಯಥೇಚ್ಛಸಿ ತಥಾ ಕ್ರೀಡ ಸರ್ವವಿಘ್ನೋಪನೋದಕ ।**
**ಮಾಯಯಾ ಮಾಂ ಮಹಾದೇವ ನಾಚ್ಛಾದಯಿತುಮರ್ಹಸಿ ॥ ೨೭ ॥**

**ನಾಭೀಕಮಲಕೋಶಾತ್ತು ಕೋಟಿಶಃ ಕಮಲಾಸನಾಃ ।**
**ಕಲ್ಪೇ ಕಲ್ಪೇ ಪುರಾ ಹ್ಯಾಸನ್ಸ್ತ್ವಂ ಯೋಗಬಲಾದ್ವಿಭೋ ॥ ೨೮ ॥**

**ತ್ಯಜ ಮಾಯಾಮಿಮಾಂ ದೇವ ದುಸ್ತರಾಮಕೃತಾತ್ಮಭಿಃ ।**
**ಬ್ರಹ್ಮಾದಯೋ ಮಹಾದೇವ ಮಾಯಯಾ ತವ ಮೋಹಿತಾಃ ॥ ೨೯ ॥**

**ಯಥಾವದನುಗಚ್ಛಾಮಿ ಚೇಷ್ಟಿತಂ ತೇ ಶಿವಾಪತೇ ।**
**ತವೈವಾನುಗ್ರಹಾಚ್ಛಂಭೋ ಸರ್ವೇಶ್ವರ ಸತಾಂ ಗತೇ ॥ ೩೦ ॥**

---

೨೬. ಓ ಮುನೀಂದ್ರ, ಈರೀತಿ ಮಹೇಶ್ವರನಾದ ಭೈರವನು ನುಡಿಯಲು ಶ್ರೀಹರಿಯು ಏನನ್ನೋ ಜ್ಞಾಪಿಸಿಕೊಂಡು ತಲೆವಾಗಿ ಮತ್ತೊಮ್ಮೆ ಬಿನ್ನವಿಸಿದನು.

೨೭. ಎಲ್ಲ ವಿಘ್ನಗಳನ್ನೂ ಪರಿಹರಿಸುವ ಎಲೈ ಮಹಾದೇವನೇ, ನಿನಗೆ ತೋರಿದಂತೆ ವಿಹರಿಸು ಆದರೆ ಪುನಃ ನನ್ನನ್ನು ನಿನ್ನ ಮಾಯೆಯಿಂದ ಮರುಳು ಗೊಳಿಸಬೇಡ.

೨೮. ಎಲೈ ಪ್ರಭುವೇ, ನಿನ್ನ ಯೋಗಮಹಿಮೆಯಿಂದಲೇ ಹಿಂದೆ ಪ್ರತಿ ಕಲ್ಪದಲ್ಲಿಯೂ ನಾಭಿಕಮಲದಿಂದ ಕೋಟಿಗಟ್ಟಲೆ ಬ್ರಹ್ಮರು ಹುಟ್ಟಿರುವರಲ್ಲವೇ ?

೨೯. ಹೇ ಮಹಾದೇವ, ಅಸಂಸ್ಕೃತಾತ್ಮರು ಬಿಡಿಸಿಕೊಳ್ಳಲಾಗದಂತಹ ಈ ನಿನ್ನ ಮಾಯೆಯನ್ನು ನಿಲ್ಲಿಸು. ಇದರಿಂದ ಬ್ರಹ್ಮಾದಿಗಳೂ ಮರುಳಾಗಿ ಹೋಗಿರುವರು.

೩೦. ಸರ್ವಮಂಗಳೆಯ ಪ್ರಿಯನಾದ ಎಲೈ ಸರ್ವೇಶ್ವರನೇ, ಸತ್ಪುರುಷರಿಗೆ ಗತಿಯೆನಿಸಿದ ಓ ಶಂಭುವೇ, ನಿನ್ನ ಅನುಗ್ರಹದಿಂದಲೇ ನಿನ್ನಲೀಲೆಯನ್ನು ಯಥಾರ್ಥವಾಗಿ (ಸರಿಯಾಗಿ) ಅರಿಯುವೆನು.

**ಸಂಹಾರಕಾಲೇ ಸಂಪ್ರಾಪ್ತೇ ಸ ದೇವಾನ್ನಿಖಿಲಾನ್ಮುನೀನ್ ।**
**ಲೋಕಾನ್ವರ್ಣಾಶ್ರಮವತೋ ಹರಿಷ್ಯಸಿ ಯದಾ ಹರ । ॥ ೩೧ ॥**

**ತದಾ ಕೃತೇ ಮಹಾದೇವ ಪಾಪಂ ಬ್ರಹ್ಮವಧಾದಿಕಂ ।**
**ಪಾರತಂತ್ರ್ಯಂ ನ ತೇ ಶಂಭೋ ಸ್ವೈರಂ ಕ್ರೀಡತ್ಯತೋ ಭವಾನ್ ॥ ೩೨ ॥**

**ಅರ್ಥೀವ ಬ್ರಹ್ಮಣೋ ಹ್ಯಸ್ಥ್ನಾಂ ಸ್ರಕ್ಕಂಠೇ ತವ ಭಾಸತೇ ।**
**ತಥಾದ್ಯನುಗತಾ ಶಂಭೋ ಬ್ರಹ್ಮಹತ್ಯಾ ತವಾನಘ ॥ ೩೩ ॥**

**ಕೃತ್ವಾಪಿ ಸುಮಹತ್ಪಾಪಂ ಯಸ್ತ್ವಾಂ ಸ್ಮರತಿ ಮಾನವಃ ।**
**ಆಧಾರಂ ಜಗತಾಮೀಶ ತಸ್ಯ ಪಾಪಂ ವಿಲೀಯತೇ ॥ ೩೪ ॥**

**ಯಥಾ ತಮೋ ನ ತಿಷ್ಠೇತ ಸನ್ನಿಧಾವಂಶುಮಾಲಿನಃ ।**
**ತಥೈವ ತವ ೧ೂೋ ಭಕ್ತೇಃ ಪಾಪಂ ತಸ್ಯ ವ್ರಜೇತ್ಕ್ಷಯಂ ॥ ೩೫ ॥**

---

೩೧ ಪ್ರಳಯಕಾಲವು ಪ್ರಾಪ್ತವಾದಾಗ ದೇವತೆಗಳನ್ನೂ, ಮುನಿಗಳನ್ನೂ, ಆಯಾ ವರ್ಣಾಶ್ರಮಗಳ ವ್ಯವಸ್ಥೆಯನ್ನು ಕಾಪಾಡಿಕೊಂಡುಬರುತ್ತಿರುವ ಸಮಸ್ತ ಜನರನ್ನೂ ನೀನು ಸಂಹರಿಸುವುದಿಲ್ಲವೇ ?

೩೨ ಎಲೈ ಮಹಾದೇವನೇ, ಆಗ ನಿನಗೆ ಬ್ರಹ್ಮಹತ್ಯಾದಿ ಮಹಾಪಾಪಗಳು ಘಟಿಸುವುವೇನು ? ಹೇ ಶಂಕರ, ನಿನಗೆ ಪಾರತಂತ್ರ್ಯವೆಂಬುದು (ಪರಾಧೀನತೆಯು) ಎಂದಿಗೂ ಇಲ್ಲ ಆದುದರಿಂದಲೇ ನೀನು ಇಷ್ಟಬಂದಂತೆ ವಿಹರಿಸುತ್ತಿರುವೆ.

೩೩. ಎಲೈ ಪಾಪರಹಿತನೇ, ಇದೇನು ಪಾಪಿಗಳಿಗಿರುವಂತೆ ಬ್ರಹ್ಮನ ಮೂಳೆಗಳ ಹಾರವು ನಿನ್ನ ಕತ್ತಿನಲ್ಲಿರುವುದು ? ಅಲ್ಲದೆ ಈ ಬ್ರಹ್ಮಹತ್ಯೆಯು ನಿನ್ನ ಬೆನ್ನು ಹಿಂದೆಯೇ ಬರುತ್ತಿರುವುದು

೩೪. ಅನೇಕವಾದ ಮಹಾಪಾಪಗಳನ್ನು ಮಾಡಿದ್ದರೂ ಯಾವ ಮಾನವನು ಜಗತ್ತಿಗೆ ಆಧಾರನೆನಿಸಿದ ನಿನ್ನನ್ನು ನೆನೆಸುವನೋ ಅವನ ಪಾಪಗಳೆಲ್ಲವೂ ಕರಗಿ ಹೋಗುವುವು.

೩೫ ಸೂರ್ಯನ ಬಳಿಯಲ್ಲಿ ಕತ್ತಲು ನಿಲ್ಲದಿರುವಂತೆ ನಿನ್ನ ಭಕ್ತನ ಬಳಿ ಯಾವ ಪಾಪವೂ ಇಲ್ಲದೆ ನಾಶಹೊಂದುವುದು

ಯಶ್ಚಿಂತಯತಿ ಪುಣ್ಯಾತ್ಮಾ ತವ ಪಾದಾಂಬುಜದ್ವಯಂ ।
ಬ್ರಹ್ಮಹತ್ಯಾಕೃತಮಪಿ ಪಾಪಂ ತಸ್ಯ ವ್ರಜೇತ್ಕ್ಷಯಂ ॥ ೩೬ ॥

ತವ ನಾಮಾನುರಕ್ತಾ ವಾಗ್ಯಸ್ಯ ಪುಂಸೋ ಜಗತ್ಪತೇ ।
ಅಪ್ಯದ್ರಿಕೂಟತುಲಿತಂ ನೈನಸ್ತಮನುಬಾಧತೇ ॥ ೩೭ ॥

ಪರಮಾತ್ಮನ್ಪರಂಧಾಮ ಸ್ವೇಚ್ಛಾಭಿಧೃತವಿಗ್ರಹ ।
ಕುತೂಹಲಂ ತವೇಶೇದಂ ಕೃಪಣಾಧೀನತೇಶ್ವರ ॥ ೩೮ ॥

ಅದ್ಯ ಧನ್ಯೋಽಸ್ಮಿ ದೇವೇಶ ಯನ್ನ ಪಶ್ಯಂತಿ ಯೋಗಿನಃ ।
ಪಶ್ಯಾಮಿ ತಂ ಜಗನ್ಮೂರ್ತಿಂ ಪರಮೇಶ್ವರಮವ್ಯಯಂ ॥ ೩೯ ॥

ಅದ್ಯ ಮೇ ಪರಮೋ ಲಾಭಸ್ತ್ವದ್ಯ ಮೇ ಮಂಗಲಂ ಪರಂ ।
ತಂ ದೃಷ್ಟ್ವಾಮೃತತೃಪ್ತಸ್ಯ ತೃಣಂ ಸ್ವರ್ಗಾಪವರ್ಗಕಂ ॥ ೪೦ ॥

---

೩೬. ಯಾವ ಪುಣ್ಯಶಾಲಿಯು ನಿನ್ನ ಅಡಿದಾವರೆಗಳನ್ನು ನೆನೆಯುವನೋ ಅವನು ಬ್ರಹ್ಮಹತ್ಯೆಯನ್ನೇ ಮಾಡಿರಲಿ, ಆ ಪಾಪವು ನಶಿಸಿಹೋಗುವುದು.

೩೭. ಯಾವ ಮಾನವನ ಮಾತು ನಿನ್ನ ನಾಮಸಂಕೀರ್ತನದಲ್ಲಿ ಆಸಕ್ತವಾಗಿರುವುದೋ ಆ ಮಾನವನು ಮಾಡಿದ ಪಾಪಗಳು ಬೆಟ್ಟದಂತೆ ಎತ್ತರವಾಗಿ ರಾಶಿಹಾಕಲ್ಪಟ್ಟಿದ್ದರೂ ಅವು ಅವನನ್ನು ಬಾಧಿಸಲಾರವು.

೩೮. ಓ ಪರಮಾತ್ಮ, ಪರಂಧಾಮ, ನೀನು ಸ್ವೇಚ್ಛೆಯಿಂದಲೇ ಈರೀತಿ ಶರೀರವನ್ನು ಧರಿಸಿ ನಮ್ಮಗಳಿಗೆ ಕಾಣಿಸಿಕೊಳ್ಳುವೆ. ಹೇ ಈಶ್ವರ, ನಿನ್ನೀ ಕುತೂಹಲವು ನಮ್ಮಂಥ ಬಡಪಾಯಿಗಳನ್ನು ಉದ್ಧರಿಸಬೇಕೆಂಬ ನಿನ್ನ ಅನುಗ್ರಹವೇ ಅಲ್ಲವೇ ?

೩೯. ಎಲೈ ದೇವಾದಿದೇವನೇ, ಯಾರನ್ನು ಯೋಗಿಗಳೂ ಸಹ ಕಾಣಲಾರರೋ ಅಂತಹ ಜಗತ್ಸ್ವರೂಪನೂ ನಾಶರಹಿತನೂ ಆದ ಪರಮೇಶ್ವರನನ್ನು ಇಂದು ಕಾಣುತ್ತಿರುವೆನು. ನಾನು ಧನ್ಯನಾದೆನು.

೪೦. ಈದಿನ ನನಗೆ ಅತ್ಯುತ್ಕೃಷ್ಟವಾದ ಲಾಭವು ದೊರೆಯಿತು. ಇಂದು ನನಗೆ ಮಹಾಮಂಗಲವು ಪ್ರಾಪ್ತವಾಯಿತು. ಆ ಪರಮಪುರುಷನನ್ನು ಕಂಡರೆ ಅಮೃತದಂತ ತೃಪ್ತಿಯುಂಟಾಗಿ ಸ್ವರ್ಗಮೋಕ್ಷಗಳೂ ತೃಣಪ್ರಾಯವೆನಿಸುವುವು ಎಂದನು.

ಇತ್ಥಂ ವದತಿ ಗೋವಿಂದೇ ವಿಮಲಾ ಪದ್ಮಯಾ ತಯಾ ।
ಮನೋರಥವತೀ ನಾಮ ಭಿಕ್ಷಾ ಪಾತ್ರೇ ಸಮರ್ಪಿತಾ　　॥ ೪೧ ॥

ಭಿಕ್ಷಾಟನಾಯ ದೇವೋಽಪಿ ನಿರಗಾತ್ಸರಯಾ ಮುದಾ ।
ಅನ್ಯತ್ರಾಪಿ ಮಹಾದೇವೋ ಭೈರವಶ್ಚಾತ್ತವಿಗ್ರಹಃ　　॥ ೪೨ ॥

ದೃಷ್ಟ್ವಾನುಯಾಯಿನೀಂ ತಾಂ ತು ಸಮಾಹೂಯ ಜನಾರ್ದನಃ ।
ಸಂಪ್ರಾರ್ಥಯದ್ಬ್ರಹ್ಮಹತ್ಯಾಂ ವಿಮುಂಚ ತ್ವಂ ತ್ರಿಶೂಲಿನಂ　　॥ ೪೩ ॥

॥ ಬ್ರಹ್ಮಹತ್ಯೋವಾಚ ॥

ಅನ್ಯೇನಾಪಿ ಮಿಷೇಣಾಹಂ ಸಂಸೇವ್ಯಾಮುಂ ವೃಷಧ್ವಜಂ ।
ಆತ್ಮಾನಂ ಪಾವಯಿಷ್ಯಾಮಿ ತ್ವಪುನರ್ಭವದರ್ಶನಂ　　॥ ೪೪ ॥

॥ ನಂದೀಶ್ವರ ಉವಾಚ ।

ಸಾ ತತ್ಯಾಜ ನ ತತ್ಪಾರ್ಶ್ವಂ ವ್ಯಾಹೃತಾಪಿ ಮುರಾರಿಣಾ ।
ತಮೂಚೇಽಥ ಹರಿಂ ಶಂಭುಃ ಸ್ಮೇರಾಸ್ಯೋ ಭೈರವೋ ವಚಃ　　॥ ೪೫ ॥

---

೪೧　ಈರೀತಿ ಶ್ರೀಹರಿಯು ಹೇಳುತ್ತಿರಲು, ಲಕ್ಷ್ಮಿಯು ಶುಭ್ರವಾದ ಮನೋರಥವತಿಯೆಂಬ ಭಿಕ್ಷೆಯನ್ನು ತಂದು ಆ ಭೈರವಮೂರ್ತಿಯ ಕಪಾಲಪಾತ್ರದಲ್ಲಿ ನೀಡಿದಳು

೪೨　ಬಳಿಕ ಆ ಮಹಾದೇವನಾದ ಭೈರವಮೂರ್ತಿಯು ಮಹಾಸಂತೋಷ ದಿಂದ ಭಿಕ್ಷೆಯನ್ನು ಎತ್ತಲು ಇನ್ನೂ ಬೇರೆಕಡೆಗಳಿಗೆ ಹೊರಟುಹೋದನು

೪೩　ಆಗ ಆ ಭೈರವಮೂರ್ತಿಯ ಹಿಂದೆಯೇ ಅವನನ್ನು ಹಿಂಬಾಲಿಸಿ ಹೋಗುತ್ತಿರುವ ಬ್ರಹ್ಮಹತ್ಯೆಯನ್ನು ಕಂಡು, ವಿಷ್ಣುವು ಶಿವನನ್ನು ಬೆನ್ನಹತ್ತಬೇಡ ವೆಂದು ಅವಳನ್ನು ಪ್ರಾರ್ಥಿಸಿಕೊಂಡನು

೪೪.　ಈ ಒಂದಾದರೂ ನೆಪದಿಂದ ವೃಷಭಧ್ವಜನಾದ ಶಂಕರನನ್ನು ಸೇವಿಸಿ ಮತ್ತೀ ಸಂಸಾರದ ಕೋಟಲೆಗೆ ಸಿಗದಂತೆ ನನ್ನನ್ನು ಪಾವನಗೊಳಿಸಿಕೊಳ್ಳುವೆನು.

೪೫　ಓ ಸನತ್ಕುಮಾರ, ಈರೀತಿ ಮುರವೈರಿಯಾದ ಶ್ರೀಹರಿಯು ಹೇಳಿದರೂ ಕೇಳದೆ ಆ ಬ್ರಹ್ಮಹತ್ಯೆಯು ಭೈರವನ ಪಾರ್ಶ್ವವನ್ನು ಬಿಡಲಿಲ್ಲ. ಆಗ ನಗುನಗುತ್ತಾ ಭೈರವಮೂರ್ತಿಯು ಶ್ರೀಹರಿಯನ್ನು ಕುರಿತು ಇಂತೆಂದನು.

॥ ಭೈರವ ಉವಾಚ ॥

ತ್ವದ್ವಾಕ್ಪೀಯೂಷಪಾನೇನ ತೃಪ್ತೋಽಸ್ಮಿ ಬಹು ಮಾನದ ।
ಸ್ವಭಾವೋಽಯಂ ಹಿ ಸಾಧೂನಾಂ ಯತ್ತ್ವಂ ವದಸಿ ಮಾಪತೇ ॥ ೪೬ ॥

ವರಂ ವೃಣೀಷ್ವ ಗೋವಿಂದ ವರದೋಽಸ್ಮಿ ತವಾನಘ ।
ಅಗ್ರಣೀರ್ಮಮ ಭಕ್ತಾನಾಂ ತ್ವಂ ಹರೇ ನಿರ್ವಿಕಾರವಾನ್ ॥ ೪೭ ॥

ನೋ ಮಾದ್ಯಂತಿ ತಥಾ ಭೈಕ್ಷ್ಯೈರ್ಭಿಕ್ಷವೋಽಪ್ಯತಿಸಂಸ್ಕೃತೈಃ ।
ಯಥಾ ಮಾನಸುಧಾಪಾನೈರ್ನನು ಭಿಕ್ಷಾಟನಜ್ವರಾಃ ॥ ೪೮ ॥

॥ ನಂದೀಶ್ವರ ಉವಾಚ ॥

ಇತ್ಯಾಕರ್ಣ್ಯ ವಚಃ ಶಂಭೋರ್ಭೈರವಸ್ಯ ಪರಾತ್ಮನಃ ।
ಸುಪ್ರಸನ್ನತರೋ ಭೂತ್ವಾ ಸಮುವೋಚನ್ಮಹೇಶ್ವರಂ ॥ ೪೯ ॥

---

೪೬. ಎಲೈ ರಮಾಪತಿಯೇ, ನಿನ್ನ ವಾಣಿಯೆಂಬ ಅಮೃತಪಾನದಿಂದ ಬಹುವಾಗಿ ತೃಪ್ತಿಯನ್ನು ಹೊಂದಿದೆನು. ನೀನು ಹೇಳುವುದೆಲ್ಲಾ ಸರಿಯೇ. ಇದು ಸತ್ಪುರುಷರ ಸ್ವಭಾವ.

೪೭. ಎಲೈ ಪಾಪರಹಿತನಾದ ಗೋವಿಂದನೇ, ನಿನಗೆ ಬೇಕಾದ ವರವನ್ನು ಕೇಳು, ಕೊಡುವೆನು. ಯಾವ ವಿಚಾರಕ್ಕೂ ಈಡಾಗದ ನೀನು ನನ್ನ ಭಕ್ತರಿಗೆಲ್ಲಾ ಶ್ರೇಷ್ಠನಾಗಿರುವೆ.

೪೮. ನನ್ನಂತಹ ಭಿಕ್ಷಾಟನೆಯ ರೋಗಹತ್ತಿದವರು ನೀನಿತ್ತ ಮಾನ್ಯತೆಯಂತಹ ಅಮೃತಪಾನವು ದೊರೆತರೆ, ಅವರು ಭಿಕ್ಷುಕರೇ ಆಗಿದ್ದರೂ ರುಚಿಕರವಾಗಿ ಬಹುಮೇಲಾಗಿ ಪಕ್ವಗೊಳಿಸಿದ ಭಕ್ಷ್ಯಗಳಿಂದಲೂ ಸಹ ತೃಪ್ತಿಯನ್ನು ಹೊಂದರು.

೪೯. ಮುನೀಂದ್ರ, ಈರೀತಿ ಪರಮಾತ್ಮಸ್ವರೂಪನಾದ ಭೈರವಮೂರ್ತಿಯು ಹೇಳಿದ ಮಾತನ್ನು ಕೇಳಿ ಹರಿಯು ಬಹುವಾಗಿ ಪ್ರಸನ್ನತೆಯನ್ನು ತಾಳಿ ಆ ಮಹೇಶ್ವರನನ್ನಿಂತೆಂದನು.

॥ ವಿಷ್ಣುರುವಾಚ ॥

**ಏಷ ಏವ ವರಃ ಶ್ಲಾಘ್ಯೋ ಯದಹಂ ದೇವತಾಧಿಪಂ ।**
**ಪಶ್ಯಾಮಿ ತ್ವಾಂ ದೇವದೇವ ಮನೋವಾಣೀಪಥಾತಿಗಂ ॥ ೫೦ ॥**

**ಅದಭ್ರೇಯಂ ಸುಧಾವೃಷ್ಟಿರನಯಾ ಮೇ ಮಹೋತ್ಸವಃ ।**
**ಅಯತ್ನನಿಧಿಲಾಭೋಽಯಂ ವೀಕ್ಷಣಂ ಹರ ತೇ ಸತಾಂ ॥ ೫೧ ॥**

**ಅವಿಯೋಗೋಽಸ್ತು ಮೇ ದೇವ ತ್ವದಂಘ್ರಿಯುಗಲೇನ ವೈ ।**
**ಏಷ ಏವ ವರಃ ಶಂಭೋ ನಾನ್ಯಂ ಕಂಚಿದ್ವೃಣೇ ವರಂ ॥ ೫೨ ॥**

॥ ಭೈರವ ಉವಾಚ ॥

**ಏವಂ ಭವತು ತೇ ತಾತ ಯತ್ತ್ವಯೋಕ್ತಂ ಮಹಾಮತೇ ।**
**ಸರ್ವೇಷಾಮಪಿ ದೇವಾನಾಂ ವರದಸ್ತ್ವಂ ಭವಿಷ್ಯಸಿ ॥ ೫೩ ॥**

---

೫೦. ಓ ದೇವದೇವ, ಸರ್ವ ದೇವತೆಗಳಿಗೂ ಅಧಿಪತಿಯಾದವನೂ ಮನಸ್ಸಿಗೂ ವಾಕ್ಕಿಗೂ ನಿಲುಕದಿರುವವನೂ ಆದ ನಿನ್ನನ್ನು ನಾನು ಕಂಡುದೇ ಶ್ಲಾಘ್ಯವಾದ ವರವು. ಇದಕ್ಕಿಂತ ಬೇರೆ ವರವಿನ್ನೇಕೆ ?

೫೧. ಎಲೈ ಶಂಕರನೇ, ಇದು ಮಹತ್ತಾದ ಅಮೃತವರ್ಷವೇ ಸರಿ ಇದರಿಂದ ನನಗೆ ಮಹಾ ಉತ್ಸವವು ಲಭಿಸಿದಂತಾಯಿತು ಓ ಈಶ್ವರ, ನಿನ್ನ ದರ್ಶನವು ಸತ್ಪುರುಷರಿಗೆ ದೊರೆಯಿತೆಂದರೆ ಪ್ರಯತ್ನವಿಲ್ಲದೆಯೇ ನಿಧಿಯು ಸಿಕ್ಕಿದಂತಲ್ಲವೇ ?

೫೨ ಹೇ ದೇವ, ನಿನ್ನ ಚರಣಕಮಲಗಳಿಗೂ ನನಗೂ ಎಂದಿಗೂ ವಿಯೋಗವುಂಟಾಗದಿರಲಿ. ಇವೇ ನಾನು ಬೇಡುವ ವರವು ನನಗೆ ಮತ್ತಾವ ವರವೂ ಬೇಡ ಎನ್ನಲು

೫೩ ಆಗ ಭೈರವಸ್ವಾಮಿಯು ವಿಷ್ಣುವನ್ನು ಕುರಿತು, ಎಲೈ ಮಹಾಪ್ರಜ್ಞಾಶಾಲಿಯೇ, ನೀನು ಹೇಳಿದಂತೆಯೇ ಆಗಲಿ ನೀನು ಎಲ್ಲ ದೇವತೆಗಳಿಗೂ ವರಗಳನ್ನು ಕೊಡುವ ಸಾಮರ್ಥ್ಯವನ್ನು ಪಡೆಯುವೆ ಎಂದನು

॥ ನಂದೀಶ್ವರ ಉವಾಚ ॥

ಅನುಗೃಹ್ಯೇತಿ ದೈತ್ಯಾರಿಂ ಕೇಂದ್ರಾದ್ರಿಭುವನೇಚರಂ ।
ಭೇಜೇ ವಿಮುಕ್ತನಗರೀಂ ನಾಮ್ನಾ ವಾರಾಣಸೀಂ ಪುರೀಂ ॥ ೫೪ ॥

ಕ್ಷೇತ್ರೇ ಪ್ರವಿಷ್ಟಮಾತ್ರೇಽಥ ಭೈರವೇ ಭೀಷಣಾಕೃತೌ ।
ಹಾಹೇತ್ಯುಕ್ತ್ವಾ ಬ್ರಹ್ಮಹತ್ಯಾ ಪಾತಾಲಂ ಚಾವಿಶತ್ತದಾ ॥ ೫೫ ॥

ಕಪಾಲಂ ಬ್ರಹ್ಮಣಃ ಸದ್ಯೋ ಭೈರವಸ್ಯ ಕರಾಂಬುಜಾತ್ ।
ಪಪಾತ ಭುವಿ ತತ್ತೀರ್ಥಮಭೂತ್ಕಾಪಾಲಮೋಚನಂ ॥ ೫೬ ॥

ಕಪಾಲಂ ಬ್ರಹ್ಮಣೋ ರುದ್ರಸ್ಸರ್ವೇಷಾಮೇವ ಪಶ್ಯತಾಂ ।
ಹಸ್ತಾತ್ಪತಂತಮಾಲೋಕ್ಯ ನನರ್ತ ಪರಯಾ ಮುದಾ ॥ ೫೭ ॥

ವಿಧೇಃ ಕಪಾಲಂ ನಾಮುಂಚತ್ಕರಮತ್ಯಂತದುಸ್ಸಹಂ ।
ಪರಸ್ಯ ಭ್ರಮತಃ ಕ್ವಾಪಿ ತತ್ಕಾಶ್ಯಾಂ ಕ್ಷಣತೋಽಪತತ್ ॥ ೫೮ ॥

---

೫೪. ಎಲೈ ಸನತ್ಕುಮಾರನೇ, ಹೀಗೆ ಶ್ರೀಹರಿಯನ್ನು ಅನುಗ್ರಹಿಸಿ ಆ ಭೈರವಮೂರ್ತಿಯು ಇಂದ್ರಲೋಕ ಮೊದಲಾದುವುಗಳನ್ನೆಲ್ಲಾ ಬಳಸಿಕೊಂಡು ವಾರಾಣಸೀ ಎಂದು ಪ್ರಸಿದ್ಧವಾದ ಅವಿಮುಕ್ತಕ್ಷೇತ್ರಕ್ಕೆ ಬಂದನು.

೫೫. ಘೋರವಾದ ಆಕೃತಿಯುಳ್ಳ ಆ ಭೈರವನು ವಾರಾಣಸೀಕ್ಷೇತ್ರವನ್ನು ಪ್ರವೇಶಿಸುತ್ತಲೇ ಬ್ರಹ್ಮಹತ್ಯೆಯು ಹಾಹಾಕಾರವನ್ನು ಮಾಡುತ್ತಾ ಪಾತಾಳಕ್ಕೆ ಹೊರಟುಹೋಯಿತು.

೫೬. ಆಗ ಭೈರವನ ಕೈಯಲ್ಲಿದ್ದ ಬ್ರಹ್ಮಕಪಾಲವು ತಟ್ಟನೆ ಕೆಳಗೆ ಬಿದ್ದು ಹೋಯಿತು. ಆಗ ಅಲ್ಲಿ ಕಪಾಲಮೋಚನವೆಂಬ ತೀರ್ಥವುಂಟಾಯಿತು.

೫೭. ಭೈರವನು, ಬ್ರಹ್ಮಕಪಾಲವು ಕೈಯ್ಯಿಂದ ಬೀಳುತ್ತಿರುವುದನ್ನು ಕಂಡು ಮಹಾಸಂತೋಷದಿಂದ ಎಲ್ಲರೂ ನೋಡುತ್ತಿರುವಹಾಗೆಯೇ ನರ್ತನಮಾಡಿದನು.

೫೮. ಕೈಯ್ಯನ್ನು ಎಂದಿಗೂ ಬಿಡದೆ ಅಂಟಿಕೊಂಡಿದ್ದ ದುಃಸಹವಾದ ಆ ಬ್ರಹ್ಮಕಪಾಲವು ಕಾಶೀಕ್ಷೇತ್ರದಲ್ಲಿ ಎಲ್ಲಿಯೋ ಒಂದುಕಡೆ ಬಿದ್ದುಹೋಯಿತು.

ಶೂಲಿನೋ ಬ್ರಹ್ಮಣೋ ಹತ್ಯಾ ನಾಪೈತಿ ಸ್ಮ ಚ ಯಾ ಕ್ವಚಿತ್ ।
ಸಾ ಕಾಶ್ಯಾಂ ಕ್ಷಣತೋ ನಷ್ಟಾ ತಸ್ಮಾತ್ಸೇವ್ಯಾ ಹಿ ಕಾಶಿಕಾ ॥ ೫೯ ॥

ಕಪಾಲಮೋಚನಂ ಕಾಶ್ಯಾಂ ಯಃ ಸ್ಮರೇತ್ತೀರ್ಥಮುತ್ತಮಂ ।
ಇಹಾನ್ಯತ್ರಾಪಿ ಯತ್ಪಾಪಂ ಕ್ಷಿಪ್ರಂ ತಸ್ಯ ಪ್ರಣಶ್ಯತಿ ॥ ೬೦ ॥

ಆಗತ್ಯ ತೀರ್ಥಪ್ರವರೇ ಸ್ನಾನಂ ಕೃತ್ವಾ ವಿಧಾನತಃ ।
ತರ್ಪಯಿತ್ವಾ ಪಿತೄನ್ದೇವಾನ್ಮುಚ್ಯತೇ ಬ್ರಹ್ಮಹತ್ಯಯಾ ॥ ೬೧ ॥

ಕಪಾಲಮೋಚನಂ ತೀರ್ಥಂ ಪುರಸ್ಕೃತ್ವಾ ತು ಭೈರವಃ ।
ತತ್ರೈವ ತಸ್ಥೌ ಭಕ್ತಾನಾಂ ಭಕ್ಷಯನ್ನಘಸಂತತಿಂ ॥ ೬೨ ॥

ಕೃಷ್ಣಾಷ್ಟಮ್ಯಾಂ ತು ಮಾರ್ಗಸ್ಯ ಮಾಸಸ್ಯ ಪರಮೇಶ್ವರಃ ।
ಆವಿರ್ಬಭೂವ ಸಲ್ಲೀಲೋ ಭೈರವಾತ್ಮಾ ಸತಾಂ ಪ್ರಿಯಃ ॥ ೬೩ ॥

---

೫೯ ಪರಾತ್ಪರನಾದ ಆ ಭೈರವನಿಗೆ ಅಂಟಿಕೊಂಡಿದ್ದ, ಮತ್ತಾವ ಕ್ಷೇತ್ರದಲ್ಲಿಯೂ ಕಳೆದುಹೋಗದಿದ್ದ ಆ ಬ್ರಹ್ಮಹತ್ಯೆಯು ಕಾಶೀಕ್ಷೇತ್ರದಲ್ಲಿ ಕ್ಷಣಮಾತ್ರದಲ್ಲಿಯೇ ಎಲ್ಲಿಯೋ ಅಡಗಿಹೋಯಿತು ಆದುದರಿಂದ ಆ ಕಾಶೀಕ್ಷೇತ್ರವನ್ನು ಸರ್ವರೂ ಸೇವಿಸಬೇಕು

೬೦ ಯಾವ ಮನುಜನು ಕಾಶಿಯಲ್ಲಿರುವ ಕಪಾಲಮೋಚನವೆಂಬ ಈ ತೀರ್ಥರಾಜನನ್ನು ಸ್ಮರಿಸುವನೋ ಅವನು ಈ ಜನ್ಮದಲ್ಲಿಯೂ ಜನ್ಮಾಂತರದಲ್ಲಿಯೂ ಮಾಡಿದ ಪಾಪಗಳೆಲ್ಲಪೂ ಬೇಗನೆ ನಾಶವಾಗುವುವು

೬೧ ಉತ್ತಮವಾದ ಈ ತೀರ್ಥಕ್ಕೆ ಬಂದು ವಿಧಿಪೂರ್ವಕವಾಗಿ ಸ್ನಾನಮಾಡಿ, ದೇವತೆಗಳಿಗೂ ಪಿತೃಗಳಿಗೂ ತರ್ಪಣವನ್ನು ಮಾಡಲು, ಅವನು ಬ್ರಹ್ಮಹತ್ಯೆಯಿಂದ ಬಿಡಲ್ಪಡುವನು

೬೨ ಈ ಕಪಾಲಮೋಚನತೀರ್ಥವನ್ನು ಮುಂದೆಮಾಡಿಕೊಂಡು ಭಕ್ತರ ಪಾಪಗಳನ್ನೆಲ್ಲಾ ನಾಶಮಾಡುತ್ತಾ ಭೈರವನು ಕಾಶಿಯಲ್ಲಿಯೇ ನೆಲೆಸಿಬಿಟ್ಟನು.

೬೩. ಸತ್ಪುರುಷರಿಗೆ ಪ್ರಿಯನಾದವನೂ ಲೀಲಾಮೂರ್ತಿಯೂ ಆದ ಶಂಕರನು ಮಾರ್ಗಶಿರ ಬಹುಳ ಅಷ್ಟಮೀದಿವಸ ಭೈರವರೂಪದಿಂದ ಅವತಾರಮಾಡಿದನು.

ಮಾರ್ಗಶೀರ್ಷಾಸಿತಾಷ್ಟಮ್ಯಾಂ ಕಾಲಭೈರವಸನ್ನಿಧೌ ।
ಉಪೋಷ್ಯ ಜಾಗರಾಂ ಕುರ್ವನ್ಮಹಾಪಾಪೈಃ ಪ್ರಮುಚ್ಯತೇ ॥ ೬೪ ॥

ಅನ್ಯತ್ರಾಪಿ ನರೋ ಭಕ್ತ್ಯಾ ತದ್ವ್ರತಂ ಯಃ ಕರಿಷ್ಯತಿ ।
ಸಜಾಗರಂ ಮಹಾಪಾಪೈರ್ಮುಕ್ತೋ ಯಾಸ್ಯತಿ ಸದ್ಗತಿಂ ॥ ೬೫ ॥

ಅನೇಕಜನ್ಮನಿಯುತೈರ್ಯತ್ಕೃತಂ ಜಂತುಭಿಸ್ತ್ವಘಂ ।
ತತ್ಸರ್ವಂ ವಿಲಯಂ ಯಾತಿ ಕಾಲಭೈರವದರ್ಶನಾತ್ ॥ ೬೬ ॥

ಕಾಲಭೈರವಭಕ್ತಾನಾಂ ಪಾತಕಾನಿ ಕರೋತಿ ಯಃ ।
ಸ ಮೂಢೋ ದುಃಖಿತೋ ಭೂತ್ವಾ ಪುನರ್ದುರ್ಗತಿಮಾಪ್ನುಯಾತ್ ॥೬೭॥

ವಿಶ್ವೇಶ್ವರೇಽಪಿ ಯೋ ಭಕ್ತಾ ನೋ ಭಕ್ತಾಃ ಕಾಲಭೈರವೇ ।
ತೇ ಲಭಂತೇ ಮಹಾದುಃಖಂ ಕಾಶ್ಯಾಂ ಚೈವ ವಿಶೇಷತಃ ॥ ೬೮ ॥

---

೬೪. ಕಾಲಭೈರವನ ಸನ್ನಿಧಿಯಲ್ಲಿ ಮಾರ್ಗಶಿರ ಬಹುಳ ಅಷ್ಟಮಿಯದಿವಸ ಯಾವನು ಉಪವಾಸವಿದ್ದು ಜಾಗರಣೆಮಾಡುವನೋ ಅವನು ಎಲ್ಲ ಪಾಪಗಳಿಂದಲೂ ಬಿಡಲ್ಪಡುವನು.

೬೫. ಬೇರೆಲ್ಲಿಯಾದರೂ ಆಗಲಿ ಯಾವನು ಭಕ್ತಿಯಿಂದ ಜಾಗರಣೆಸಹಿತವಾಗಿ ಆ ಭೈರವವ್ರತವನ್ನು ಆಚರಿಸುವನೋ ಅವನು ಮಹಾಪಾಪಗಳನ್ನೇ ಮಾಡಿದ್ದರೂ ಅವುಗಳಿಂದ ಬಿಡುಗಡೆಹೊಂದಿ ಸದ್ಗತಿಯನ್ನು ಪಡೆಯುವನು.

೬೬. ಪ್ರಾಣಿಮಾತ್ರದವರು ಅನೇಕ ಜನ್ಮಗಳಿಂದ ಮಾಡಿದ ಪಾಪವೆಲ್ಲವೂ ಕಾಲಭೈರವನ ದರ್ಶನಮಾತ್ರದಿಂದಲೇ ನಾಶವನ್ನು ಹೊಂದುವುದು.

೬೭. ಯಾವ ಮೂಢಾತ್ಮನು ಕಾಲಭೈರವನ ಭಕ್ತರಿಗೆ ಕೇಡನ್ನು ಮಾಡುವನೋ ಅವನು ಬಹು ದುಃಖಕ್ಕೀಡಾಗಿ ಮತ್ತೆ ದುರ್ಗತಿಗೀಡಾಗುವನು

೬೮. ಯಾರು ವಿಶ್ವೇಶ್ವರನಲ್ಲಿ ಮಾತ್ರ ಭಕ್ತಿಯನ್ನಿಟ್ಟು ಕಾಲಭೈರವನಲ್ಲಿ ಭಕ್ತಿಯನ್ನು ಇಡದಿರುವರೋ ಅವರು ಮಹತ್ತಾದ ದುಃಖವನ್ನು ಪಡೆಯುವರು. ಕಾಶಿಯಲ್ಲಿದ್ದವರು ಈರೀತಿ ಮಾಡಿದರೆ ಅವರು ಮತ್ತಷ್ಟು ದುಃಖವನ್ನು ಅನುಭವಿಸುವರು.

ವಾರಾಣಸ್ಯಾಮುಷಿತ್ವಾ ಯೋ ಭೈರವಂ ನ ಭಜೇನ್ನರಃ ।
ತಸ್ಯ ಪಾಪಾನಿ ವರ್ಧಂತೇ ಶುಕ್ಲಪಕ್ಷೇ ಯಥಾ ಶಶೀ ॥ ೧೯ ॥

ಕಾಲರಾಜಂ ನ ಯಃ ಕಾಶ್ಯಾಂ ಪ್ರತಿಭೂತಾಷ್ಟಮೀಕುಜಂ ।
ಭಜೇತ್ತಸ್ಯ ಕ್ಷಯಂ ಪುಣ್ಯಂ ಕೃಷ್ಣಪಕ್ಷೇ ಯಥಾ ಶಶೀ ॥ ೨೦ ॥

ಶ್ರುತ್ವಾಖ್ಯಾನಮಿದಂ ಪುಣ್ಯಂ ಬ್ರಹ್ಮಹತ್ಯಾಪನೋದಕಂ ।
ಭೈರವೋತ್ಪತ್ತಿಸಂಜ್ಞಂ ಚ ಸರ್ವಪಾಪೈಃ ಪ್ರಮುಚ್ಯತೇ ॥ ೨೧ ॥

ಬಂಧನಾಗಾರಸಂಸ್ಥೋಽಪಿ ಪ್ರಾಪ್ತೋಽಪಿ ವಿಪದಂ ಪರಾಂ ।
ಪ್ರಾದುರ್ಭಾವಂ ಭೈರವಸ್ಯ ಶ್ರುತ್ವಾ ಮುಚ್ಯೇತ ಸಂಕಟಾತ್ ॥ ೨೨ ॥

ಇತಿ ಶ್ರೀ ಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಭೈರವಾವತಾರಲೀಲಾವರ್ಣನಂ ನಾಮ ನವಮೋಽಧ್ಯಾಯಃ

---

೧೯. ಯಾವ ಮಾನವನು ಕಾಶೀಕ್ಷೇತ್ರದಲ್ಲಿಯೇ ವಾಸವಾಗಿದ್ದರೂ ಕಾಲಭೈರವನನ್ನು ಭಜಿಸದಿರುವನೋ ಅವನ ಪಾಪಗಳು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತೊಡಗುವುವು

೨೦. ಯಾವಾತನು ಕೃಷ್ಣಾಷ್ಟಮೀ ಮಂಗಳವಾರದದಿನ ಕಾಲರಾಜನಾದ ಭೈರವನನ್ನು ಕಾಶೀಕ್ಷೇತ್ರದಲ್ಲಿದ್ದೂ ಸೇವಿಸದಿರುವನೋ ಅವನ ಪುಣ್ಯವು ಕಷ್ಣಪಕ್ಷದ ಚಂದ್ರನಂತೆ ಕ್ಷೀಣಿಸುತ್ತಾ ಬರುವುದು

೨೧. ಕಾಲಭೈರವಾವತಾರೋಪಾಖ್ಯಾನವೆಂಬ ಈ ಪುಣ್ಯಕರವಾದ, ಬ್ರಹ್ಮಹತ್ಯಾಪರಿಹಾರಕವಾದ ಆಖ್ಯಾನವನ್ನು ಕೇಳಿದವನು ಎಲ್ಲ ಪಾಪಗಳಿಂದಲೂ ಬಿಡಲ್ಪಡುವನು

೨೨ ಈ ಭೈರವಾವತಾರಚರಿತ್ರವನ್ನು ಕೇಳಿದ ಮಾನವನು ಸೆರೆಯಲ್ಲಿ ಕೊಳೆಯುತ್ತಿದ್ದರೂ ಮಹತ್ತಾದ ವಿಪತ್ತಿಗೆ ಗುರಿಯಾಗಿದ್ದರೂ ಸಹ ಆ ತೊಂದರೆಗಳಿಂದ ಬಿಡುಗಡೆಯನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಭೈರವಾವತಾರಲೀಲಾವರ್ಣನವೆಂಬ ಒಂಭತ್ತನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ದಶಮೋऽಧ್ಯಾಯಃ

॥ ನಂದೀಶ್ವರ ಉವಾಚ ॥

**ವಿಧ್ವಂಸೀ ದಕ್ಷಯಜ್ಞಸ್ಯ ವೀರಭದ್ರಾಹ್ವಯಃ ಪ್ರಭೋ ।**
**ಅವತಾರಶ್ಚ ವಿಜ್ಞೇಯಃ ಶಿವಸ್ಯ ಪರಮಾತ್ಮನಃ ॥ ೧ ॥**

**ಸತೀಚರಿತ್ರೇ ಕಥಿತಂ ಚರಿತಂ ತಸ್ಯ ಕೃತ್ಸ್ನಶಃ ।**
**ಶ್ರುತಂ ತ್ವಯಾಪಿ ಬಹುಧಾ ನಾತಃ ಪ್ರೋಕ್ತಂ ಸುವಿಸ್ತರಾತ್ ॥ ೨ ॥**

---

## ಹತ್ತನೆಯ ಅಧ್ಯಾಯವು.

೧. ಎಲೈ ಸನತ್ಕುಮಾರಮುನಿಯೇ, ದಕ್ಷಯಜ್ಞವನ್ನು ಧ್ವಂಸಗೊಳಿಸಿದ ವೀರಭದ್ರನೆಂಬುವನು ಪರಮಾತ್ಮನಾದ ಆ ಶಿವನ ಅವತಾರವೆಂದು ತಿಳಿ.

೨. ಆ ವೀರಭದ್ರನ ಚರಿತ್ರೆಯನ್ನು ವಿಸ್ತಾರವಾಗಿ ಸತೀದೇವಿಯ ಚರಿತದಲ್ಲಿ ಸಮಗ್ರವಾಗಿ ತಿಳಿಸಿಯಾಯಿತು. ನೀನೂ ಸಹ ಅನೇಕಸಲ ಅದನ್ನು ಕೇಳಿರುವೆ ಆದುದರಿಂದ ವಿಸ್ತಾರವಾಗಿ ಈಗ ಅದನ್ನು ತಿಳಿಸಲಿಲ್ಲ.

ಅತಃ ಪರಂ ಮುನಿಶ್ರೇಷ್ಠ ಭವತ್ಸ್ನೇಹಾದ್ಬ್ರವೀಮಿ ತತ್ ।
ಶಾರ್ದೂಲಾಖ್ಯಾವತಾರಂ ಚ ಶಂಕರಸ್ಯ ಪ್ರಭೋಃ ಶೃಣು ॥ ೩ ॥

ಸದಾಶಿವೇನ ದೇವಾನಾಂ ಹಿತಾರ್ಥಂ ರೂಪಮುದ್ಭೃತಂ ।
ಶಾರಭಂ ಚ ಧೃತಂ ದಿವ್ಯಂ ಜ್ವಲಜ್ಜ್ವಾಲಾಸಮಪ್ರಭಂ ॥ ೪ ॥

ಶಿವಾವತಾರಾ ಅಮಿತಾಃ ಸದ್ಭಕ್ತಹಿತಕಾರಕಾಃ ।
ಸಂಖ್ಯಾ ನ ಶಕ್ಯತೇ ಕರ್ತುಂ ತೇಷಾಂ ಚ ಮುನಿಸತ್ತಮಾಃ ॥ ೫ ॥

ಆಕಾಶಸ್ಯ ಚ ತಾರಾಣಾಂ ರೇಣುಕಾನಾಂ ಕ್ಷಿತೇಸ್ತಥಾ ।
ಆಸಾರಾಣಾಂ ಚ ವೃಷ್ಟೇನ ಬಹುಕಲ್ಪೈಃ ಕದಾಪಿ ಹಿ ॥ ೬ ॥

ಸಂಖ್ಯಾ ವಿಶಕ್ಯತೇ ಕರ್ತುಂ ಸುಪ್ರಾಜ್ಞೈರ್ಬಹುಜನ್ಮಭಿಃ ।
ಶಿವಾವತಾರಾಣಾಂ ನೈವ ಸತ್ಯಂ ಜಾನೀಹಿ ಮದ್ವಚಃ ॥ ೭ ॥

---

೩ ಎಲೈ ಮುನಿಶ್ರೇಷ್ಠನೇ, ಈಗ ನಿನ್ನಮೇಲೆ ನನಗಿರುವ ಪ್ರೀತಿಯಿಂದ ಪ್ರಭುವಾದ ಶಿವನ ಶಾರ್ದೂಲಾವತಾರವನ್ನು ಇನ್ನುಮುಂದೆ ವಿವರಿಸುವೆನು ಅದನ್ನು ಕೇಳು.

೪ ದೇವತೆಗಳ ಕ್ಷೇಮಾಭ್ಯುದಯಗಳಿಗಾಗಿ ಆ ಸದಾಶಿವನು ಮಹಾ ಆಶ್ಚರ್ಯ ಕರವಾದುದೂ ಅಗ್ನಿಜ್ವಾಲೆಯಂತೆ ಹೊಳೆಯುತ್ತಿರುವುದೂ ಆದ ದಿವ್ಯವಾದ ಶರಭಾವ ತಾರವನ್ನು ಎತ್ತಿದನು.

೫. ಎಲೈ ಮುನಿಶ್ರೇಷ್ಠನೇ, ಸಾಧುಚರಿತರಾದ ಭಕ್ತರಿಗೆ ಹಿತವನ್ನೇ ಉಂಟು ಮಾಡುವ ಆ ಶಿವನ ಅವತಾರಗಳು ಮೇರೆ ಮೀರಿದುವು. ಅವುಗಳನ್ನು ಎಣಿಸು ವುದಕ್ಕೇ ಸಾಧ್ಯವಿಲ್ಲ

೬-೭ ಆಕಾಶದಲ್ಲಿರುವ ನಕ್ಷತ್ರಗಳನ್ನೂ ಭೂಮಿಯಲ್ಲಿನ ಧೂಳಿನ ಕಣಗಳನ್ನೂ ಮಳೆಯನೀರಿನ ಹನಿಗಳನ್ನೂ ಮಹಾಕುಶಲರೆನಿಸಿದವರು ಅನೇಕ ಜನ್ಮಗಳನ್ನೆತ್ತಿ ಅನೇಕ ಪ್ರಳಯಗಳೂ ಕಳೆದ ಮೇಲೆ ಎಂದಾದರೂ ಒಮ್ಮೆ ಎಣಿಸಿಯಾದರೂ ಎಣಿಸ ಬಹುದು. ಆದರೆ ಶ್ರೀ ಶಂಕರನ ಅವತಾರಗಳನ್ನು ಮಾತ್ರ ಎಣಿಸಲು ಸಾಧ್ಯವೇ ಇಲ್ಲ. ಈ ನನ್ನ ಮಾತು ನಿಜವೆಂದು ತಿಳಿ.

ತಥಾಪಿ ಚ ಯಥಾಬುದ್ಧ್ಯಾ ಕಥಯಾಮಿ ಯಥಾಶ್ರುತಂ ।
ಚರಿತ್ರಂ ಶಾರಭಂ ದಿವ್ಯಂ ಪರಮೈಶ್ವರ್ಯಸೂಚಕಂ ॥ ೮ ॥

ಜಯಶ್ಚ ವಿಜಯಶ್ಚೈವ ಭವದ್ಭಿಃ ಶಾಪಿತೌ ಯದಾ ।
ತದಾ ದಿತಿಸುತೌ ದ್ವೌ ತಾವಭೂತಾಂ ಕಶ್ಯಪಾನ್ಮುನೇ ॥ ೯ ॥

ಹಿರಣ್ಯಕಶಿಪುಶ್ಚಾದ್ಯೋ ಹಿರಣ್ಯಾಕ್ಷೋಽನುಜೋ ಬಲೀ ।
ದೇವರ್ಷಿಪಾರ್ಷದೌ ಜಾತೌ ತೌ ದ್ವಾವಪಿ ದಿತೇಸ್ಸುತೌ ॥ ೧೦ ॥

ಪೃಥ್ವ್ಯುದ್ಧಾರೇ ವಿಧಾತ್ರಾ ವೈ ಪ್ರಾರ್ಥಿತೋ ಹಿ ಪುರಾ ಪ್ರಭುಃ ।
ಹಿರಣ್ಯಾಕ್ಷಂ ಜಘಾನಾಸೌ ವಿಷ್ಣುರ್ವಾರಾಹರೂಪಧೃಕ್ ॥ ೧೧ ॥

ತಂ ಶ್ರುತ್ವಾ ಭ್ರಾತರಂ ವೀರಂ ನಿಹತಂ ಪ್ರಾಣಸನ್ನಿಭಂ ।
ಚುಕೋಪ ಹರಯೇಽತೀವ ಹಿರಣ್ಯಕಶಿಪುರ್ಮುನೇ ॥ ೧೨ ॥

---

೮ ಆದರೂ ಸಹ ನಾನು ಕೇಳಿರುವಂತೆ ನನ್ನ ಬುದ್ಧಿಶಕ್ತಿಯಿದ್ದಷ್ಟು ಆ ಪ್ರಭುವಿನ ಪರಮೇಶ್ವರತ್ವವನ್ನು ವ್ಯಕ್ತಪಡಿಸಲು, ದೃಷ್ಟಾಂತವಾಗಿ ದಿವ್ಯವಾದ ಶರಭಾವತಾರಚರಿತವನ್ನು ತಿಳಿಸುವೆನು.

೯. ಎಲೈ ಮುನೀಂದ್ರನೇ, ನಿಮ್ಮ ಸಹೋದರರು ನಾಲ್ವರೂ ಜಯವಿಜಯರನ್ನು ಶಪಿಸಿದರಷ್ಟೆ. ಆಗ ಅವರೀರ್ವರೂ ಕಶ್ಯಪನಿಗೆ ಮಡದಿಯಾದ ದಿತಿಯಲ್ಲಿ ಮಕ್ಕಳಾಗಿ ಹುಟ್ಟಿದರು.

೧೦. ಎಲೈ ದೇವಮುನಿಯೇ, ವಿಷ್ಣುವಿನ ಪಾರಿಷದರಾದ ಅವರು ದಿತಿಯ ಮಕ್ಕಳಾಗಿ ಹುಟ್ಟಿವರಷ್ಟೆ? ಅವರಲ್ಲಿ ಹಿರಣ್ಯಕಶಿಪು ಮೊದಲನೆಯವನು. ಬಲಾಢ್ಯನಾದ ಹಿರಣ್ಯಾಕ್ಷನು ಅವನಿಗೆ ತಮ್ಮನು

೧೧. ಹಿಂದೆ ಹಿರಣ್ಯಾಕ್ಷನು ಭೂಮಿಯನ್ನು ಎತ್ತಿಕೊಂಡು ಪಾತಾಳಕ್ಕೆ ಓಡಿ ಹೋದಾಗ ಬ್ರಹ್ಮನು ಪ್ರಾರ್ಥಿಸಲು ಪ್ರಭುವಾದ ಶ್ರೀಹರಿಯು ವರಾಹರೂಪವನ್ನು ಧರಿಸಿ ಅವನನ್ನು ಸಂಹರಿಸಿದನು.

೧೨. ತನ್ನ ಪ್ರಾಣಗಳಂತೆ ಪ್ರಿಯನಾಗಿದ್ದ ವೀರನಾದ ಹಿರಣ್ಯಾಕ್ಷನು ಸಂಹೃತನಾದುದನ್ನು ಕಂಡು ಹಿರಣ್ಯಕಶಿಪುವು ವಿಷ್ಣುವಿನಮೇಲೆ ಬಹುವಾಗಿ ಕ್ರೋಧವನ್ನು ತಾಳಿದನು.

ವರ್ಷಾಣಾಮಯುತಂ ತಪ್ತ್ವಾ ಬ್ರಹ್ಮಣೋ ವರಮಾಪ ಸಃ ।
ನ ಕಶ್ಚಿನ್ಮಾರಯೇನ್ಮಾಂ ವೈ ತ್ವತ್ಸೃಷ್ಟಾವಿತಿ ತುಷ್ಟತಃ ॥ ೧೩ ॥

ಶೋಣಿತಾಖ್ಯಪುರಂ ಗತ್ವಾ ದೇವಾನಾಹೂಯ ಸರ್ವತಃ ।
ತ್ರಿಲೋಕೀಂ ಸ್ವವಶೇ ಕೃತ್ವಾ ಚಕ್ರೇ ರಾಜ್ಯಮಕಂಟಕಂ ॥ ೧೪ ॥

ದೇವರ್ಷಿಕದನಂ ಚಕ್ರೇ ಸರ್ವಧರ್ಮವಿಲೋಪಕಃ ।
ದ್ವಿಜಪೀಡಾಕರಃ ಪಾಪೀ ಹಿರಣ್ಯಕಶಿಪುರ್ಮುನೇ ॥ ೧೫ ॥

ಪ್ರಹ್ಲಾದೇನ ಸ್ವಪುತ್ರೇಣ ಹರಿಭಕ್ತೇನ ದೈತ್ಯರಾಟ್ ।
ಯದಾ ವಿದ್ವೇಷಮಕರೋದ್ಧರಿವೈರೀ ವಿಶೇಷತಃ ॥ ೧೬ ॥

ಸಭಾಸ್ತಂಭಾತ್ತದಾ ವಿಷ್ಣುರಭೂದಾವಿರ್ಭೃತಂ ಮುನೇ ।
ಸಂಧ್ಯಾಯಾಂ ಕ್ರೋಧಮಾಪನ್ನೋ ನೃಸಿಂಹವಪುಷಾ ತತಃ ॥ ೧೭ ॥

---

೧೩. ಆಗ ಅವನು ಹತ್ತುಸಾವಿರ ವರ್ಷಗಳಕಾಲ ತಪಸ್ಸುಮಾಡಿ ಬ್ರಹ್ಮನನ್ನು ಸಂತೋಷಪಡಿಸಿ, ನಿನ್ನಿಂದ ಸೃಷ್ಟಿಸಲ್ಪಟ್ಟ ಯಾವ ಪ್ರಾಣಿಯಿಂದಲೂ ತನಗೆ ಸಾವು ಉಂಟಾಗದಿರಲಿ ಎಂದು ವರವನ್ನು ಪಡೆದನು

೧೪. ಬಳಿಕ ದೇವತೆಗಳನ್ನೆಲ್ಲಾ ಯುದ್ಧಕ್ಕೆ ಕರೆದು ಅವರನ್ನೆಲ್ಲಾ ಸೋಲಿಸಿ ಮೂರು ಲೋಕವನ್ನೂ ವಶಪಡಿಸಿಕೊಂಡು, ಶತ್ರುಕೀಟವೂ ಇಲ್ಲದಂತೆ ಶೋಣಿತಪುರವೆಂಬ ಪಟ್ಟಣದಲ್ಲಿ ರಾಜ್ಯಭಾರಮಾಡುತ್ತಿದ್ದನು.

೧೫. ಎಲೈ ಮುನಿಯೇ, ಆ ಪಾಪಿಯಾದ ಹಿರಣ್ಯಕಶಿಪುವು, ನಡೆಯುತ್ತಿದ ಎಲ್ಲ ಧರ್ಮಕಾರ್ಯಗಳನ್ನೂ ನಿಲ್ಲಿಸಿಬಿಟ್ಟು, ದೇವತೆಗಳಿಗೂ ಋಷಿಗಳಿಗೂ ಕಿರುಕುಳವನು ಕೊಡುತ್ತಾ ಬ್ರಾಹ್ಮಣರನ್ನೂ ಹಿಂಸಿಸುತ್ತಿದ್ದನು

೧೬ ವಿಶೇಷವಾಗಿ ವಿಷ್ಣುವಿನಮೇಲೆ ವಿಷವನ್ನು ಕಾರುತ್ತಿದ್ದ ಆ ದೈತ್ಯರಾಜನು ವಿಷ್ಣುಭಕ್ತನಾದ ತನ್ನ ಕುಮಾರ ಪ್ರಹ್ಲಾದನೊಡನೆ ಯಾವಾಗ ದ್ವೇಷವನ್ನು ಸಾಧಿಸತೊಡಗಿದನೋ,

೧೭ ಆಗ ವಿಷ್ಣುವು ಮಹಾಕೋಪವನ್ನು ತಾಳಿ ನರಸಿಂಹರೂಪವಾದ ದೇಹವನ್ನು ಧರಿಸಿ ಒಂದಾನೊಂದು ಸಂಜೆಯ ಸಮಯದಲ್ಲಿ ಆ ದೈತ್ಯರಾಜನ ಸಭೆಯ ಸ್ತಂಭವೊಂದರಿಂದ ಹಠಾತ್ತಾಗಿ ಆವಿರ್ಭವಿಸಿದನು.

ಸರ್ವಥಾ ಮುನಿಶಾರ್ದೂಲ ಕರಾಲಂ ನೃಹರೇರ್ವಪುಃ ।
ಪ್ರಜಜ್ವಾಲಾತಿಭಯದಂ ತ್ರಾಸಯನ್ದೈತ್ಯಸತ್ತಮಾನ್ ॥ ೧೮ ॥

ನೃಸಿಂಹೇನ ತದಾ ದೈತ್ಯಾ ನಿಹತಾಶ್ಚೈವ ತತ್ಕ್ಷಣಂ ।
ಹಿರಣ್ಯಕಶಿಪುಶ್ಚಾಥ ಯುದ್ಧಂ ಚಕ್ರೇ ಸುದಾರುಣಂ ॥ ೧೯ ॥

ಮಹಾಯುದ್ಧಂ ತಯೋರಾಸೀನ್ಮುಹೂರ್ತಂ ಮುನಿಸತ್ತಮಾಃ ।
ವಿಕರಾಲಂ ಚ ಭಯದಂ ಸರ್ವೇಷಾಂ ರೋಮಹರ್ಷಣಂ ॥ ೨೦ ॥

ಸಾಯಂ ಚಕರ್ಷ ದೇವೇಶೋ ದೇಹಲ್ಯಾಂದೈತ್ಯಪುಂಗವಂ ।
ವ್ಯೋಮ್ನಿ ದೇವೇಷು ಪಶ್ಯತ್ಸು ನೃಸಿಂಹಶ್ಚ ರಮೇಶ್ವರಃ ॥ ೨೧ ॥

---

೧೮. ಎಲೈ ಮುನಿಸತ್ತಮನೆ, ಆ ನರಸಿಂಹಮೂರ್ತಿಯ ಉಗ್ರವಾದ ಆಕೃತಿಯು ದೈತ್ಯವೀರರಿಗೆಲ್ಲಾ ಹೆದರಿಕೆಯನ್ನು ಹುಟ್ಟಿಸುತ್ತಾ ಬಹುವಾಗಿ ಜ್ವಲಿಸ ತೊಡಗಿತು.

೧೯. ಕ್ಷಣಮಾತ್ರದಲ್ಲಿ ಆ ನರಸಿಂಹನು ದೈತ್ಯವೀರರನ್ನೆಲ್ಲಾ ಸಂಹರಿಸಿ ಬಿಟ್ಟನು. ಅನಂತರ ಹಿರಣ್ಯಕಶಿಪುವು ಬಹು ಭಯಂಕರವಾದ ಯುದ್ಧವನ್ನು ಮಾಡಿದನು.

೨೦. ಎಲೈ ಮುನಿಶ್ರೇಷ್ಠನೇ, ಅವರೀರ್ವರಿಗೂ ಒಂದು ಮುಹೂರ್ತದಷ್ಟು ಕಾಲದಲ್ಲಿ ಅತಿ ಘೋರವಾದ ದೊಡ್ಡ ಯುದ್ಧವೇ ಜರುಗಿತು. ಅದನ್ನು ಕಂಡರೆ ಎಲ್ಲರಿಗೂ ಭಯವು ಹುಟ್ಟುತ್ತಿತ್ತು. ಮೈಯೆಲ್ಲಾ ಜುಮ್ಮೆಂದು ರೋಮಾಂಚ ವಾಗುತ್ತಿತ್ತು.

೨೧. ದೇವಪ್ರಭುವೂ ನೃಸಿಂಹರೂಪಧಾರಿಯೂ ಆದ ಆ ಶ್ರೀಹರಿಯು ಮೇಲ್ಗಡೆ ಅಂತರಿಕ್ಷದಲ್ಲಿ ದೇವತೆಗಳು ನೋಡುತ್ತಿರುವಂತೆಯೇ ದೈತ್ಯವೀರಾಗ್ರಣಿ ಯಾದ ಆ ಹಿರಣ್ಯಕಶಿಪುವನ್ನು ಸಂಜೆಯಾಗುತ್ತಿರುವಾಗ ಹೊಸಲಿನ ಮೇಲಕ್ಕೆಳೆ ತಂದನು.

ಅಥೋತ್ಸಂಗೇ ಚ ತಂ ಕೃತ್ವಾ ನಖೈಸ್ತದುದರಂ ದ್ರುತಂ ।
ವಿದಾರ್ಯ ಮಾರಯಾಮಾಸ ಪಶ್ಯತಾಂ ತ್ರಿದಿವೌಕಸಾಂ ॥ ೨೨ ॥

ಹತೇ ಹಿರಣ್ಯಕಶಿಪೌ ನೃಸಿಂಹೇನೈವ ವಿಷ್ಣುನಾ ।
ಜಗತ್ಸ್ವಾಸ್ಥ್ಯಂ ತದಾ ಲೇಭೇ ನ ವೈ ದೇವಾ ವಿಶೇಷತಃ ॥ ೨೩ ॥

ದೇವದುಂದುಭಯೋ ನೇದುಃ ಪ್ರಹ್ಲಾದೋ ವಿಸ್ಮಯಂ ಗತಃ ।
ಲಕ್ಷ್ಮೀಶ್ಚ ವಿಸ್ಮಯಂ ಪ್ರಾಪ್ತಾ ರೂಪಂ ದೃಷ್ಟ್ವಾದ್ಭುತಂ ಹರೇಃ ॥ ೨೪ ॥

ಹತೋ ಯದ್ಯಪಿ ದೈತ್ಯೇಂದ್ರಸ್ತಥಾಪಿ ನ ಪರಂ ಸುಖಂ ।
ಯಯುರ್ದೇವಾ ನೃಸಿಂಹಸ್ಯ ಜ್ವಾಲಾ ಸಾ ನ ನಿವರ್ತಿತಾ ॥ ೨೫ ॥

ತಯಾ ಚ ವ್ಯಾಕುಲಂ ಜಾತಂ ಸರ್ವಂ ಚೈವ ಜಗತ್ಪುನಃ ।
ದೇವಾಶ್ಚ ದುಃಖಮಾಪನ್ನಾಃ ಕಿಂ ಭವಿಷ್ಯತಿ ವಾ ಪುನಃ ॥ ೨೬ ॥

---

೨೨. ಬಳಿಕ ಅವನನ್ನು ತನ್ನ ತೊಡೆಯಮೇಲೆಯೇ ಕೆಡವಿಕೊಂಡು ದೇವತೆಗಳೆಲ್ಲರೂ ನೋಡುತ್ತಿರುವಂತೆಯೇ ತನ್ನ ಉಗುರುಗಳಿಂದ ಅವನ ಹೊಟ್ಟೆಯನ್ನು ಕ್ಷಣಮಾತ್ರದಲ್ಲಿ ಸೀಳಿಬಿಟ್ಟು ಸಂಹರಿಸಿದನು

೨೩ ನೃಸಿಂಹರೂಪನಾದ ವಿಷ್ಣುವಿನಿಂದ ಹಿರಣ್ಯಕಶಿಪುವು ಸಂಹೃತನಾದ ಮೇಲೆ ಜಗತ್ತು ಸುಖವನ್ನು ಪಡೆಯಿತು. ಆದರೆ ದೇವತೆಗಳಿಗೆ ನೆಮ್ಮದಿಯು ಉಂಟಾಗಲಿಲ್ಲ

೨೪. ಆ ಹರಿಯ ಅದ್ಭುತವಾದ ಆಕೃತಿಯನ್ನು ಕಂಡು ದೇವದುಂದುಭಿಗಳು ಮೊಳಗಿದುವು ಪ್ರಹ್ಲಾದನು ಆಶ್ಚರ್ಯವನ್ನು ಹೊಂದಿದನು. ಲಕ್ಷ್ಮಿಯು ಚಕಿತಳಾದಳು

೨೫ ಆ ದೈತ್ಯೇಂದ್ರನೇನೋ ಸಂಹರಿಸಲ್ಪಟ್ಟನು. ಆದರೂ ದೇವತೆಗಳು ಮಾತ್ರ ಸುಖವನ್ನು ಹೊಂದಲಿಲ್ಲ. ನರಸಿಂಹನ ಆ ಘೋರಜ್ವಾಲೆಯು ಮಾತ್ರ ಅಡಗಲಿಲ್ಲ

೨೬ ಅದರಿಂದ ಜಗತ್ತೆಲ್ಲವೂ ಮತ್ತೆ ತಳಮಳಗೊಳ್ಳಲಾರಂಭಿಸಿತು ಮತ್ತೆ ಇನ್ನೇನು ಸಂಭವಿಸುವುದೋ ಎಂದು ಪರಸ್ಪರ ಮಾತಾಡಿಕೊಳ್ಳುತ್ತಾ ದುಃಖಿತರಾಗಿರುವ ಆ ದೇವತೆಗಳು ಭಯದಿಂದ ದೂರದೂರ ಸರಿದರು

ಇತ್ಯೇವಂ ಚ ವದಂತಸ್ತೇ ಭಯಾದ್ದೂರಮುಪಸ್ಥಿತಾಃ ।
ನೃಸಿಂಹಕ್ರೋಧಜಜ್ವಾಲಾವ್ಯಾಕುಲಾಃ ಪದ್ಮಭೂಮುಖಾಃ ॥ ೨೭ ॥

ಪ್ರಹ್ಲಾದಂ ಪ್ರೇಷಯಾಮಾಸುಸ್ತಚ್ಛಾಂತ್ಯೈ ನಿಕಟಂ ಹರೇಃ ।
ಸರ್ವಾನ್ಮಿಲಿತ್ವಾ ಪ್ರಹ್ಲಾದಃ ಪ್ರಾರ್ಥಿತೋ ಗತವಾಂಸ್ತದಾ ॥ ೨೮ ॥

ಉರಸಾ ಲಿಂಗಯಾಮಾಸ ತಂ ನೃಸಿಂಹಃ ಕೃಪಾನಿಧಿಃ ।
ಹೃದಯಂ ಶೀತಲಂ ಜಾತಂ ರುಡ್ಜ್ವಾಲಾ ನ ನಿವರ್ತಿತಾ ॥ ೨೯ ॥

ತಥಾಪಿ ನ ನಿವೃತ್ತಾ ರುಡ್ಜ್ವಾಲಾ ನರಹರೇರ್ಯದಾ ।
ದುಃಖಂ ಪ್ರಾಪ್ತಾಸ್ತತೋ ದೇವಾಶ್ಶಂಕರಂ ಶರಣಂ ಯಯುಃ ॥ ೩೦ ॥

ತತ್ರ ಗತ್ವಾ ಸುರಾಃ ಸರ್ವೇ ಬ್ರಹ್ಮಾದ್ಯಾ ಮುನಯಸ್ತಥಾ ।
ಶಂಕರಂ ಸ್ತವಯಾಮಾಸುರ್ಲೋಕಾನಾಂ ಸುಖಹೇತವೇ ॥ ೩೧ ॥

---

೨೭. ಆ ನರಸಿಂಹನ ಕೋಪಜ್ವಾಲೆಯಿಂದ ತಲ್ಲಣಿಸುತ್ತಿರುವ ಬ್ರಹ್ಮಾದಿ ದೇವತೆಗಳು ಆ ಕೋಪಶಮನಕ್ಕಾಗಿ ಪ್ರಹ್ಲಾದನನ್ನು ಕಳುಹಿಸಿದರು.

೨೮. ಹೀಗೆ ದೇವತೆಗಳೆಲ್ಲರಿಂದ ಪ್ರಾರ್ಥಿಸಲ್ಪಟ್ಟ ಆ ಪ್ರಹ್ಲಾದನು ನರಸಿಂಹನ ಬಳಿಗೆ ಹೋಗಲು ಆ ಕರುಣಾಸಾಗರನು ಅವನನ್ನು ಎದೆಗಪ್ಪಿಕೊಂಡನು.

೨೯. ಆಗ ನರಸಿಂಹನ ಹೃದಯವು ಶೀತಲವಾಯಿತು. ಕೋಪಜ್ವಾಲೆಯು ಮಾತ್ರ ಶಾಂತವಾಗಲಿಲ್ಲ.

೩೦. ಪ್ರಹ್ಲಾದನನ್ನು ಕಳುಹಿಸಿದರೂ ಆ ನರಹರಿಯ ಕೋಪಜ್ವಾಲೆಯು ಅಡಗದೆಯೇ ಇರಲು, ದೇವತೆಗಳೆಲ್ಲರೂ ಬಹು ದುಃಖವನ್ನು ತಾಳಿ ಕೊನೆಗೆ ಶಂಕರನನ್ನು ಮರೆಹೊಕ್ಕು ಅವನ ಬಳಿಗೆ ತೆರಳಿದರು.

೩೧. ಅಲ್ಲಿ ಸೇರಿದಮೇಲೆ ಆ ಬ್ರಹ್ಮಾದಿದೇವತೆಗಳೂ ಮತ್ತು ಮುನಿಗಳೂ ಜಗತ್ಕಲ್ಯಾಣಕ್ಕೋಸ್ಕರವಾಗಿ ಆ ಶಂಕರನನ್ನು ಸ್ತುತಿಸತೊಡಗಿದರು.

॥ ದೇವಾ ಊಚುಃ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಪಾಹಿ ನಃ ಶರಣಾಪನ್ನಾನ್ಸರ್ವಾನ್ದೇವಾಞ್ಜಗಂತಿ ಚ ॥ ೩೨ ॥

ನಮಸ್ತೇಽಸ್ತು ನಮಸ್ತೇಽಸ್ತು ನಮಸ್ತೇಽಸ್ತು ಸದಾಶಿವ ।
ಪೂರ್ವಂ ದುಃಖಂ ಯದಾ ಜಾತಂ ತದಾ ತೇ ರಕ್ಷಿತಾ ವಯಂ ॥ ೩೩ ॥

ಸಮುದ್ರೋ ಮಥಿತಶ್ಚೈವ ರತ್ನಾನಾಂ ಚ ವಿಭಾಗಶಃ ।
ಕೃತೇ ದೈವೈಸ್ತದಾ ಶಂಭೋ ಗೃಹೀತಂ ಗರಲಂ ತ್ವಯಾ ॥ ೩೪ ॥

ರಕ್ಷಿತಾಃ ಸ್ಮ ತದಾ ನಾಥ ನೀಲಕಂಠ ಇತಿ ಶ್ರುತಃ ।
ವಿಷಂ ಪಾಸ್ಯಸಿ ನೋ ಚೇತ್ತ್ವಂ ಭಸ್ಮೀಭೂತಾಸ್ತದಾಖಿಲಾಃ ॥ ೩೫ ॥

ಪ್ರಸಿದ್ಧಂ ಚ ಯದಾ ಯಸ್ಯ ದುಃಖಂ ಚ ಜಾಯತೇ ಪ್ರಭೋ ।
ತದಾ ತ್ವನ್ನಾಮಮಾತ್ರೇಣ ಸರ್ವದುಃಖಂ ವಿಲೀಯತೇ ॥ ೩೬ ॥

---

೩೨ ಎಲೈ ದೇವಾದಿದೇವನೇ, ಮಹಾದೇವನೇ, ಶರಣಾಗತವತ್ಸಲನೇ, ನಿನ್ನನ್ನು ಮರೆಹೊಕ್ಕಿರುವ ನಮ್ಮೆಲ್ಲರನ್ನೂ, ಜಗತ್ತುಗಳನ್ನೂ ಕಾಪಾಡು.

೩೩ ಎಲೈ ಸದಾಶಿವನೇ, ನಿನಗೆ ನಮಸ್ಕಾರವು. ಮತ್ತೆಮತ್ತೆ ನಮಸ್ಕಾರವು. ಹಿಂದೆ ನಮಗೆ ತೊಂದರೆಯುಂಟಾದಾಗಲೆಲ್ಲಾ ನೀನೇ ನಮ್ಮನ್ನು ಕಾಪಾಡಿರುವೆ.

೩೪ ನಾವು ದೇವತೆಗಳೆಲ್ಲರೂ ಸಮುದ್ರವನ್ನು ಮಥನಮಾಡಿದೆವು. ಉತ್ಕೃಷ್ಟವಾದ ರತ್ನಗಳನ್ನು ಹಂಚಿಕೊಂಡೆವು. ಎಲೈ ಶಂಭುವೇ, ಆಗ ನೀನು ವಿಷವನ್ನು ಪರಿಗ್ರಹಿಸಿದೆ.

೩೫. ಎಲೈ ಪ್ರಭುವೇ, ಆಗ ನಾವು ಸಂರಕ್ಷಿಸಲ್ಪಟ್ಟೆವು. ನೀನು ನೀಲಕಂಠನೆಂಬುದಾಗಿಯೇ ಪ್ರಖ್ಯಾತನಾದೆ. ನೀನೊಂದುವೇಳೆ ವಿಷವನ್ನು ಕುಡಿಯದೆ ಹೋಗಿದ್ದರೆ ನಾವೆಲ್ಲರೂ ಸುಟ್ಟು ಬೂದಿಯಾಗುತ್ತಿದ್ದೆವು.

೩೬. ಹೇ ಸ್ವಾಮಿಯೇ, ಯಾವನಿಗಾದರೂ ಎಂತಹ ಭಾರಿ ದುಃಖವೊದಗಿದರೂ ನಿನ್ನ ಹೆಸರನ್ನು ನೆನೆದರೆ ಸಾಕು, ಎಲ್ಲ ದುಃಖಗಳೂ ಅಡಗಿಹೋಗುತ್ತವೆ.

ಇದಾನೀಂ ನೃಹರಿಜ್ವಾಲಾಪೀಡಿತಾನ್ನಸ್ಸದಾಶಿವ ।
ತಾಂ ತ್ವಂ ಶಮಯಿತುಂ ದೇವ ಶಕ್ತೋಽಸೀತಿ ಸುನಿಶ್ಚಿತಂ ॥ ೩೭ ॥

॥ ನಂದೀಶ್ವರ ಉವಾಚ ॥

ಇತಿ ಸ್ತುತಸ್ತದಾ ದೇವೈಶ್ಶಂಕರೋ ಭಕ್ತವತ್ಸಲಃ ।
ಪ್ರತ್ಯುವಾಚ ಪ್ರಸನ್ನಾತ್ಮಾಽಭಯಂ ದತ್ವಾ ಪರಂ ಪ್ರಭುಃ ॥ ೩೮ ॥

॥ ಶಂಕರ ಉವಾಚ ॥

ಸ್ವಸ್ಥಾನಂ ಗಚ್ಛತ ಸುರಾಸ್ಸರ್ವೇ ಬ್ರಹ್ಮಾದಯೋಽಭಯಾಃ ।
ಶಮಯಿಷ್ಯಾಮಿ ಯದ್ದುಃಖಂ ಸರ್ವಥಾ ಹಿ ವ್ರತಂ ಮಮ ॥ ೩೯ ॥

ಗತೋ ಮಚ್ಛರಣಂ ಯಸ್ತು ತಸ್ಯ ದುಃಖಂ ಕ್ಷಯಂ ಗತಂ ।
ಮತ್ಪ್ರಿಯಃ ಶರಣಾಪನ್ನಃ ಪ್ರಾಣೇಭ್ಯೋಽಪಿ ನ ಸಂಶಯ ॥ ೪೦ ॥

---

೩೭. ಎಲೈ ಸದಾಶಿವನೇ, ಈಗ ನಾವೆಲ್ಲರೂ ನರಸಿಂಹನ ಕ್ರೋಧಜ್ವಾಲೆಯಿಂದ ತಲ್ಲಣಿಸುತ್ತಿದ್ದೇವೆ. ಓ ಸ್ವಾಮಿಯೇ, ಅದನ್ನು ಅಡಗಿಸಲು ನೀನು ಸಮರ್ಥನೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇದು ಖಂಡಿತ ಎಂದರು.

೩೮. ಎಲೈ ಸನತ್ಕುಮಾರನೇ, ಈರೀತಿ ದೇವತೆಗಳು ಸ್ತುತಿಸಲು, ಭಕ್ತವತ್ಸಲನೂ ಪ್ರಭುವೂ ಆದ ಆ ಶಂಕರನು ಪ್ರಸನ್ನನಾಗಿ ಅವರಿಗೆ ಅಭಯವನ್ನಿತ್ತು ಈರೀತಿ ನುಡಿದನು.

೩೯. ಎಲೈ ಬ್ರಹ್ಮಾದಿದೇವತೆಗಳಿರಾ, ನಿಮ್ಮನಿಮ್ಮ ಸ್ಥಾನಗಳಿಗೆ ನಿರ್ಭಯರಾಗಿ ತೆರಳಿರಿ. ನಿಮ್ಮ ದುಃಖವನ್ನು ಪರಿಹರಿಸುವೆನು. ನಿಮ್ಮ ದುಃಖನಿವಾರಣವೇ ನನ್ನ ವ್ರತವು.

೪೦. ಯಾವನು ನನ್ನನ್ನು ಮರೆಹೊಗುವನೋ ಅವನ ದುಃಖವು ನಾಶವಾದಂತೆಯೇ. ನನಗೆ ಶರಣಾಗತನಾದವನು ನನ್ನ ಪ್ರಾಣಗಳಿಗಿಂತಲೂ ಹೆಚ್ಚು ಪ್ರಿಯನಾದವನೆಂದು ಖಂಡಿತವಾಗಿ ತಿಳಿಯಿರಿ.

॥ ನಂದೀಶ್ವರ ಉವಾಚ ॥

ಇತಿ ಶ್ರುತ್ವಾ ತದಾ ದೇವಾ ಹ್ಯಾನಂದಂ ಪರಮಂ ಗತಾಃ ।
ಯಥಾಗತಂ ತಥಾ ಜಗ್ಮುಸ್ಸ್ಮರಂತಶ್ಶಂಕರಂ ಮುದಾ　　॥ ೪೧ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಶಾರ್ದೂಲಾವತಾರೇ ನೃಸಿಂಹಚರಿತವರ್ಣನಂ ನಾಮ
ದಶಮೋಽಧ್ಯಾಯಃ

---

೪೧　ಓ ಸನತ್ಕುಮಾರಮುನೀಂದ್ರ, ಈರೀತಿ ಶಿವನು ನುಡಿದ ಮಾತನ್ನು ಕೇಳಿ ಆ ದೇವತೆಗಳೆಲ್ಲರೂ ಬಹುಸಂತೋಷವನ್ನು ತಾಳಿ ಶಂಕರನನ್ನೇ ಸ್ಮರಿಸುತ್ತಾ ತಾವೆಲ್ಲೆಲ್ಲಿಂದ ಬಂದಿದ್ದರೋ ಅಲ್ಲಲ್ಲಿಗೆ ತೆರಳಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ನೃಸಿಂಹಚರಿತವರ್ಣನವೆಂಬ ಹತ್ತನೆಯ ಅಧ್ಯಾಯವು
ಮುಗಿದುದು.



॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಏಕಾದಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

**ಏವಮಭ್ಯರ್ಥಿತೋ ದೇವೈರ್ಮತಿಂ ಚಕ್ರೇ ಕೃಪಾಲಯಃ ।**
**ಮಹಾತೇಜೋ ನೃಸಿಂಹಾಖ್ಯಂ ಸಂಹರ್ತುಂ ಪರಮೇಶ್ವರಃ ॥ ೧ ॥**

**ತದೂರ್ಧ್ವಂ ಸ್ಮೃತವಾನ್ರುದ್ರೋ ವೀರಭದ್ರಂ ಮಹಾಬಲಂ ।**
**ಆತ್ಮನೋ ಭೈರವಂ ರೂಪಂ ಪ್ರಾಹ ಪ್ರಲಯಕಾರಕಂ ॥ ೨ ॥**

---

## ಹನ್ನೊಂದನೆಯ ಅಧ್ಯಾಯವು.

೧. ಓ ಸನತ್ಕುಮಾರ, ಈರೀತಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಕೃಪಾನಿಧಿಯಾದ ಪರಮೇಶ್ವರನು, ನೃಸಿಂಹಸ್ವರೂಪನಾದ ಆ ಮಹಾತೇಜಸ್ಸನ್ನು ಉಪಸಂಹರಿಸಲು ಮನಸ್ಸುಮಾಡಿದನು.

೨. ಅನಂತರ ತನ್ನ ಭಯಂಕರಸ್ವರೂಪವೆನಿಸಿದ, ಪ್ರಲಯಕಾರಕನೂ ಮಹಾಬಲಿಷ್ಠನೂ ಆದ ವೀರಭದ್ರನನ್ನು ಆ ಶಿವನು ಸ್ಮರಿಸಿದನು.

ಆಜಗಾಮ ತತಸ್ಸದ್ಯೋ ಗಣಾನಾಮಗ್ರಣೀರ್ಹಸನ್ ।
ಸಾಟ್ಟಹಾಸ್ಯೈರ್ಗಣವರ್ಯೈರುತ್ಪತದ್ಭಿರಿತಸ್ತತಃ ॥ ೩ ॥

ನೃಸಿಂಹರೂಪೈರತ್ಯುಗ್ರೈಃ ಕೋಟಿಭಿಃ ಪರಿವಾರಿತಃ ।
ಮಾದ್ಯದ್ಭಿರಭಿತೋ ವೀರೈರ್ನೃತ್ಯದ್ಭಿಶ್ಚ ಮುದಾನ್ವಿತೈಃ ॥ ೪ ॥

ಕ್ರೀಡದ್ಭಿಶ್ಚ ಮಹಾವೀರೈರ್ಬ್ರಹ್ಮಾದ್ಯೈಃ ಕಂದುಕೈರಿವ ।
ಅದೃಷ್ಟಪೂರ್ವೈರನ್ಯೈಶ್ಚ ವೇಷ್ಟಿತೋ ವೀರವಂದಿತಃ ॥ ೫ ॥

ಕಲ್ಪಾಂತಜ್ವಲನಜ್ವಾಲೋ ವಿಲಸಲ್ಲೋಚನತ್ರಯಃ ।
ಅಶಸ್ತ್ರೋ ಹಿ ಜಟಾಜೂಟೇ ಜ್ವಲದ್ಬಾಲೇಂದುಮಂಡಿತಃ ॥ ೬ ॥

---

೩ ಕೂಡಲೇ ಗಣಗಳಿಗೆಲ್ಲಾ ಮುಂದಾಳೆನಿಸಿದ ವೀರಭದ್ರನು ನಗುನಗುತ್ತಾ ತನ್ನ ಪರಿವಾರದವರಾದ ಗಣಶ್ರೇಷ್ಠರೊಡನೆ ಶಿವನ ಬಳಿಗೆ ಬಂದನು ಆ ಗಣಶ್ರೇಷ್ಠರು ಪ್ರತಿಯೊಬ್ಬರೂ ಅಟ್ಟಹಾಸವನ್ನು ಮಾಡುತ್ತಿದ್ದರು. ಇತ್ತಲಿಂದತ್ತ ನೆಗೆದಾಡುತ್ತಿದ್ದರು

೪ ಕೋಟಿಸಂಖ್ಯಾತರಾದ ಆ ಗಣಶ್ರೇಷ್ಠರಲ್ಲಿ ಒಬ್ಬೊಬ್ಬರೂ ನರಸಿಂಹನ ರೂಪವುಳ್ಳವರು, ಮಹಾಭಯಂಕರರು. ಆ ವೀರರು ಮಹಾಮದದಿಂದಲೂ ಸಂತೋಷದಿಂದಲೂ ಸುತ್ತಲೂ ನರ್ತನಮಾಡುತ್ತಿದ್ದರು.

೫ ಅಲ್ಲದೆ ಅವರು ಬ್ರಹ್ಮಾದಿದೇವತೆಗಳನ್ನೂ ಚೆಂಡಿನಂತೆ ಆಟವಾಡಿಸುತ್ತಿದ್ದರು. ಹಿಂದೆ ಎಂದೂ ನೋಡದಿದ್ದಂತಹ ಇಂತಹ ವೀರರೊಡನೆಯೂ ಇತರ ಬೇರೆ ವೀರರೊಡನೆಯೂ ಕೂಡಿಕೊಂಡು ವೀರಪುರುಷರಿಗೆ ಮಾನ್ಯನಾದ ಆ ವೀರಭದ್ರನು ಶಿವನಬಳಿಗೆ ಬಂದನು.

೬ ಆತನು ಪ್ರಳಯಕಾಲದ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದನು. ಆತನ ಮೂರು ಕಣ್ಣುಗಳೂ ಥಳಥಳನೆ ಹೊಳೆಯುತ್ತಿದ್ದುವು ಅವನು ಯಾವ ಶಸ್ತ್ರವನ್ನೂ ಧರಿಸಿರಲಿಲ್ಲ. ತಲೆಯಲ್ಲಿ ಜಟೆಯು ಶೋಭಿಸುತ್ತಿತ್ತು ಬಾಲಶಶಿಯು ಆತನ ಜಟೆಯ ಮೇಲೆ ಕಂಗೊಳಿಸುತ್ತಿತ್ತು

**ಬಾಲೇಂದುವಲಯಾಕಾರತೀಕ್ಷ್ಣದಂಷ್ಟ್ರಾಂಕುರುದ್ವಯಃ ।**
**ಆಖಂಡಲಧನುಃ ಖಂಡಾಶನಿಭಭ್ರೂಲತಾನ್ವಿತಃ ॥ ೭ ॥**

**ಮಹಾಪ್ರಚಂಡಹುಂಕಾರಬಧಿರೀಕೃತದಿಙ್ಮುಖಃ ।**
**ನೀಲಮೇಘಾಂಜನಶ್ಯಾಮೋ ಭೀಷಣಃ ಶ್ಮಶ್ರುಲೋಽದ್ಭುತಃ ॥ ೮ ॥**

**ವಾದ್ಯಖಂಡಮಖಂಡಾಭ್ಯಾಂ ಭ್ರಾಮಯಂಸ್ತ್ರಿಶಿಖಂ ಮುಹುಃ ।**
**ವೀರಭದ್ರೋಽಪಿ ಭಗವಾನ್ವೀರಶಕ್ತಿವಿಜೃಂಭಿತಃ ॥ ೯ ॥**

**ಸ್ವಯಂ ವಿಜ್ಞಾಪಯಾಮಾಸ ಕಿಮತ್ರ ಸ್ಮೃತಿಕಾರಣಂ ।**
**ಆಜ್ಞಾಪಯ ಜಗತ್ಸ್ವಾಮಿನ್ಪ್ರಸಾದಃ ಕ್ರಿಯತಾಂ ಮಯಿ ॥ ೧೦ ॥**

**॥ ನಂದೀಶ್ವರ ಉವಾಚ ॥**

**ಇತ್ಯಾಕರ್ಣ್ಯ ಮಹೇಶಾನೋ ವೀರಭದ್ರೋಕ್ತಮಾದರಾತ್ ।**
**ವಿಲೋಕ್ಯ ವಚನಂ ಪ್ರೀತ್ಯಾ ಪ್ರೋವಾಚ ಖಲದಂಡಧೃಕ್ ॥ ೧೧ ॥**

---

೭. ಕೂರಾಗಿ ಹೊಳೆಯುತ್ತಿರುವ ಆತನ ಕೋರೆದಾಡೆಗಳೆರಡು ಎಳೆಯ ಚಂದ್ರನರೇಖೆಯಂತೆ ತೋರುತ್ತಿದ್ದುವು. ಆತನ ಹುಬ್ಬುಗಳು ಮುರಿದುಹೋದ ಕಾಮನಬಿಲ್ಲಿನ ಎರಡುಭಾಗಗಳಂತೆ ಕಂಗೊಳಿಸುತ್ತಿದ್ದುವು.

೮. ಆತನ ಪ್ರಚಂಡವಾದ ಹೂಂಕಾರದಿಂದ ದಿಕ್ತಟಗಳೆಲ್ಲವೂ ಕಿವುಡುಗೆಡುತ್ತಿದ್ದುವು. ಮಹಾಭಯಂಕರಾಕಾರನೂ ಅದ್ಭುತಾಕೃತಿಯೂ ಆದ ಆತನು ಕಾರ್ಮೋಡದಂತೆಯೂ ಕಾಡಿಗೆಯಂತೆಯೂ ಕಪ್ಪಗಿದ್ದನು. ಆತನ ಮೈಮೇಲೆಲ್ಲಾ ಬಹುವಾಗಿ ಕೂದಲು ಬೆಳೆದಿದ್ದುವು.

೯. ಆತನು ತನ್ನ ನಿಡಿದಾದ ತುಂಬಿದ ತೋಳುಗಳಲ್ಲಿ ಒಂದರಿಂದ ತ್ರಿಶೂಲವನ್ನು ಹಿಡಿದು ತಿರುವುತ್ತಲೂ, ಮತ್ತೊಂದರಿಂದ ಖಂಡವಾದ್ಯವನ್ನು ಹಿಡಿದೂ ಇದ್ದನು. ಇಂತಹ ವೀರಭದ್ರನು ವೀರಶಕ್ತಿಯಿಂದ ಉಬ್ಬುತ್ತಾ ಅಲ್ಲಿಗೆ ಬಂದನು.

೧೦. ಅನಂತರ ಶಂಕರನನ್ನು ಕುರಿತು ಎಲೈ ಜಗತ್ಪ್ರಭುವೇ, ನನ್ನನ್ನು ಸ್ಮರಿಸಿದ ಕಾರಣವೇನು ? ಅಪ್ಪಣೆಯಿತ್ತು ನನ್ನಲ್ಲಿ ಕೃಪೆಯನ್ನು ತೋರು ಎಂದನು.

೧೧. ಎಲೈ ಮುನಿಯೇ, ಆ ಶಂಕರನು ವೀರಭದ್ರನ ಬಿನ್ನಹವನ್ನು ಆದರದಿಂದ ಆಲಿಸಿ ಅವನನ್ನು ವಿಶ್ವಾಸದಿಂದ ನೋಡಿದನು. ಅನಂತರ ದುಷ್ಟಶಿಕ್ಷಕನಾದ ಆ ಸ್ವಾಮಿಯು ಅವನನ್ನಿಂತೆಂದನು.

॥ ಶಂಕರ ಉವಾಚ ॥

ಅಕಾಲೇ ಭಯಮುತ್ಪನ್ನಂ ದೇವಾನಾಮಪಿ ಭೈರವಂ ।
ಜ್ವಲಿತಸ್ಸ ನೃಸಿಂಹಾಗ್ನಿಶ್ಶಮಯ್ಯೈನಂ ದುರಾಸದಂ ॥ ೧೨ ॥

ಸಾಂತ್ವಯನ್ಬೋಧಯಾದೌ ತಂ ತೇನ ಕಿನ್ನೋಪಶಾಮ್ಯತಿ ।
ತತೋ ಮತ್ಪರಮಂ ಭಾವಂ ಭೈರವಂ ಸಂಪ್ರದರ್ಶಯ ॥ ೧೩ ॥

ಸೂಕ್ಷ್ಮಂ ಸಂಹೃತ್ಯ ಸೂಕ್ಷ್ಮೇಣ ಸ್ಥೂಲಂ ಸ್ಥೂಲೇನ ತೇಜಸಾ ।
ವಕ್ತ್ರಮಾನಯ ಕೃತ್ತಿಂ ಚ ವೀರಭದ್ರ ಮಮಾಜ್ಞಯಾ ॥ ೧೪ ॥

॥ ನಂದೀಶ್ವರ ಉವಾಚ ॥

ಇತಿ ನಿಷ್ಟೋ ಗಣಾಧ್ಯಕ್ಷೋ ಪ್ರಶಾಂತಂ ವಪುರಾಸ್ಥಿತಃ ।
ಜಗಾಮ ರಂಹಸಾ ತತ್ರ ಯತ್ರಾಸ್ತೇ ನರಕೇಸರೀ ॥ ೧೫ ॥

---

೧೨ ಈ ಅಕಾಲದಲ್ಲಿ ದೇವತೆಗಳಿಗೆ ಬಹು ಹೆದರಿಕೆಯುಂಟಾಗಿದೆ. ನರಸಿಂಹನೆಂಬ ತೇಜಸ್ಸು ಅವರನ್ನು ಸುಡುತ್ತಿದೆ ಅಸಾಧ್ಯವಾದ ಆ ತೇಜಸ್ಸನ್ನು ಅಡಗಿಸಿಬಿಡು.

೧೩. ಮೊದಲು ಸಾಮವಾಕ್ಯಗಳಿಂದ ಆತನಿಗೆ ತಿಳಿಸು ಸಾಮೋಪಾಯದಿಂದ ಯಾವುದುತಾನೇ ಉಪಶಮನವನ್ನು ಪಡೆಯದೆ ಇದ್ದೀತು ? ಅದಕ್ಕೆ ಬಗ್ಗದಿದ್ದರೆ ಆಗ ನನ್ನ ಪರಸ್ವರೂಪವಾದ ಪ್ರಲಯಾಕೃತಿಯನ್ನು ಪ್ರದರ್ಶಿಸು

೧೪. ಎಲೈ ವೀರಭದ್ರನೇ, ಸೂಕ್ಷ್ಮವಾದ ತೇಜಸ್ಸನ್ನು ಸೂಕ್ಷ್ಮತೇಜಸ್ಸಿನಿಂದಲೂ, ಸ್ಥೂಲತೇಜಸ್ಸನ್ನು ಸ್ಥೂಲತೇಜಸ್ಸಿನಿಂದಲೂ ನಿಗ್ರಹಿಸಿ ನನ್ನ ಅಪ್ಪಣೆಯಂತೆ ಆತನ ಮುಖವನ್ನೂ ಚರ್ಮವನ್ನೂ ತೆಗೆದುಕೊಂಡು ಬಾ ಎಂದನು.

೧೫. ಎಲೈ ಮುನೀಂದ್ರನೇ, ಈರೀತಿ ಆಜ್ಞಪ್ತನಾದ ಆ ಗಣಾಧಿಪತಿಯು ಸೌಮ್ಯವಾದ ದೇಹವನ್ನು ಧಾರಣೆಮಾಡಿ ನರಸಿಂಹನು ಇದ್ದಬಳಿಗೆ ಬೇಗನೆ ಬಂದನು.

**ತತಸ್ತಂ ಬೋಧಯಾಮಾಸ ವೀರಭದ್ರೋ ಹರೋ ಹರಿಂ ।**
**ಉವಾಚ ವಾಕ್ಯಮೀಶಾನಃ ಪಿತಾ ಪುತ್ರಮಿವೌರಸಂ ॥ ೧೬ ॥**

**॥ ವೀರಭದ್ರ ಉವಾಚ ॥**

**ಜಗತ್ಸುಖಾಯ ಭಗವನ್ನವತೀರ್ಣೋಽಸಿ ಮಾಧವ ।**
**ಸ್ಥಿತ್ಯರ್ಥಂ ತ್ವಂ ಪ್ರಯುಕ್ತೋಽಸಿ ಪರೇಶಃ ಪರಮೇಷ್ಠಿನಾ ॥ ೧೭ ॥**

**ಜಂತುಚಕ್ರಂ ಭಗವತಾ ಪ್ರಚ್ಛಿನ್ನಂ ಮತ್ಸ್ಯರೂಪಿಣಾ ।**
**ಪುಚ್ಛೇನೈವ ಸಮಾಬಧ್ಯ ಭ್ರಮನ್ನೇಕಾರ್ಣವೇ ಪುರಾ ॥ ೧೮ ॥**

**ಬಿಭರ್ಷಿ ಕೂರ್ಮರೂಪೇಣ ವಾರಾಹೇಣೋದ್ಧೃತಾ ಮಹೀ ।**
**ಅನೇನ ಹರಿರೂಪೇಣ ಹಿರಣ್ಯಕಶಿಪುರ್ಹತಃ ॥ ೧೯ ॥**

**ವಾಮನೇನ ಬಲಿರ್ಬದ್ಧಸ್ತ್ವಯಾ ವಿಕ್ರಮತಾ ಪುನಃ ।**
**ತ್ವಮೇವ ಸರ್ವಭೂತಾನಾಂ ಪ್ರಭವಃ ಪ್ರಭುರವ್ಯಯಃ ॥ ೨೦ ॥**

---

೧೬. ಅನಂತರ ಆ ವೀರಭದ್ರನು, ತಂದೆಯು ತನ್ನ ಮಗನಿಗೆ ಹೇಳುವಂತೆ ಆ ನರಸಿಂಹನಿಗೆ ಈರೀತಿ ನುಡಿದನು

೧೭. ಎಲೈ ಭಗವದಂಶಸಂಭೂತನಾದ ರಮಾಪತಿಯೇ, ನೀನು ಜಗತ್ಕಲ್ಯಾಣಕ್ಕೋಸ್ಕರಲೇ ಅವತರಿಸಿರುವೆ ಪರಮಪುರುಷನು ನಿನ್ನನ್ನು ಜಗತ್ಪರಿಪಾಲನೆಗಾಗಿ ನಿಯಮಿಸಿರುವನು.

೧೮. ಹಿಂದೆ ನೀನು ಪ್ರಳಯಕಾಲದಲ್ಲಿ ಮತ್ಸ್ಯಾಕೃತಿಯನ್ನು ತಾಳಿ ಆ ಮಹಾ ಸಮುದ್ರದಲ್ಲಿ ತಿರುಗುತ್ತಾ ಪ್ರಪಂಚವನ್ನು ಪುಚ್ಛ (ಬಾಲ) ದಿಂದ ಸೆಳೆದುಕೊಂಡು ಬಂದು ಸಂರಕ್ಷಿಸಿದೆ.

೧೯. ಕೂರ್ಮಸ್ವರೂಪದಿಂದ ಈ ಜಗತ್ತನ್ನೇ ಹೊತ್ತಿರುವೆ. ಅಲ್ಲದೆ ವರಾಹ ರೂಪವನ್ನು ಧರಿಸಿ ಮುಳುಗಿಹೋಗಿದ್ದ ಭೂಮಿಯನ್ನು ಮೇಲಕ್ಕೆತ್ತಿದೆ. ಈಗ ಈ ಸಿಂಹಾಕಾರವನ್ನು ತಾಳಿ ಹಿರಣ್ಯಕಶಿಪುವನ್ನು ಸಂಹಾರಮಾಡಿದೆ

೨೦. ಮೊದಲು ವಾಮನ (ಕುಳ್ಳ) ನಂತೆ ಗೋಚರನಾಗಿ ಬಳಿಕ ಬಹುವಾಗಿ ಬೆಳೆಯುತ್ತಾ ತ್ರಿವಿಕ್ರಮನೆನಿಸಿ ಬಲಿಯನ್ನು ಬಂಧಿಸಿದೆ. ನೀನೇ ಎಲ್ಲ ಪ್ರಾಣಿಗಳಿಗೂ ಮೂಲಕಾರಣನಾಗಿರುವೆ. ನೀನೇ ನಾಶರಹಿತನಾದ ಪ್ರಭುವಾಗಿರುವೆ.

**ಯದಾ ಯದಾ ಹಿ ಲೋಕಸ್ಯ ದುಃಖಂ ಕಿಂಚಿತ್ಪ್ರಜಾಯತೇ ।**
**ತದಾ ತದಾವತೀರ್ಣಸ್ತ್ವಂ ಕರಿಷ್ಯಸಿ ನಿರಾಮಯಂ ॥ ೨೧ ॥**

**ನಾಧಿಕಸ್ತ್ವತ್ಸಮೋಽಪ್ಯಸ್ತಿ ಹರೇ ಶಿವಪರಾಯಣಃ ।**
**ತ್ವಯಾ ವೇದಾಶ್ಚ ಧರ್ಮಾಶ್ಚ ಶುಭಮಾರ್ಗೇ ಪ್ರತಿಷ್ಠಿತಾಃ ॥ ೨೨ ॥**

**ಯದರ್ಥಮವತಾರೋಽಯಂ ನಿಹತಸ್ಸ ಹಿ ದಾನವಃ ।**
**ಹಿರಣ್ಯಕಶಿಪುಶ್ಚೈವ ಪ್ರಹ್ಲಾದೋಽಪಿ ಸುರಕ್ಷಿತಃ ॥ ೨೩ ॥**

**ಅತೀವ ಘೋರಂ ಭಗವನ್ನರಸಿಂಹವಪುಸ್ತವ ।**
**ಉಪಸಂಹರ ವಿಶ್ವಾತ್ಮಂಸ್ತ್ವಮೇವ ಮಮ ಸನ್ನಿಧೌ ॥ ೨೪ ॥**

**॥ ನಂದೀಶ್ವರ ಉವಾಚ ॥**

**ಇತ್ಯುಕ್ತೋ ವೀರಭದ್ರೇಣ ನೃಸಿಂಹಃ ಶಾಂತಯಾ ಗಿರಾ ।**
**ತತೋಽಧಿಕಂ ಮಹಾಘೋರಂ ಕೋಪಂ ಚಕ್ರೇ ಮಹಾಮದಃ ॥ ೨೫ ॥**

---

೨೧. ಯಾವಾಗಾವಾಗ ಪ್ರಪಂಚಕ್ಕೆ ಸ್ವಲ್ಪ ತೊಂದರೆಯಾದರೂ ಆಗೆಲ್ಲಾ ನೀನವತರಿಸಿ ಅದೆಲ್ಲವನ್ನೂ ಪರಿಹರಿಸಿ ಸುಖಪಡಿಸಿರುವೆ

೨೨ ಎಲೈ ಹರಿಯೇ, ಶಿವಭಕ್ತರಲ್ಲಿ ನಿನ್ನನ್ನು ಮೀರಿಸಿದವನೂ ಸಮಾನನಾದವನೂ ಯಾರೂ ಇಲ್ಲ. ನಿನ್ನಿಂದಲೇ ವೇದಗಳೂ ಧರ್ಮಗಳೂ ಶುಭವಾದ ಮಾರ್ಗದಲ್ಲಿ ನಡೆಸಲ್ಪಡುತ್ತಿವೆ.

೨೩. ಏತಕ್ಕೋಸ್ಕರ ನೀನೀ ಅವತಾರವನ್ನು ಎತ್ತಬೇಕಾಯಿತೋ ಆ ಹಿರಣ್ಯಕಶಿಪುವನ್ನು ಸಂಹರಿಸಿ ಪ್ರಹ್ಲಾದನನ್ನು ರಕ್ಷಿಸಿದುದಾಯಿತು.

೨೪. ಎಲೈ ಭಗವದಂಶಸಂಭೂತನೇ, ನಿನ್ನೀ ನರಸಿಂಹಸ್ವರೂಪವು ಬಹು ಭಯಂಕರವಾದುದು ಆದುದರಿಂದ ಎಲೈ ವಿಶ್ವಾತ್ಮನೇ, ನೀನಾಗಿಯೇ ಈ ಸ್ವರೂಪವನ್ನು ನನ್ನೆದುರಿನಲ್ಲಿ ಉಪಸಂಹಾರಮಾಡು ಎಂದನು

೨೫. ಎಲೈ ಮುನಿಯೇ, ಈರೀತಿ ಸಾಮವಾಕ್ಯಗಳಿಂದ ವೀರಭದ್ರನು ಬೋಧಿಸಿದನೋ ಇಲ್ಲವೋ ಆಗ ಮದೋನ್ಮತ್ತನಾದ ಆ ನರಸಿಂಹನು ಅದಕ್ಕಿಂತಲೂ ಹೆಚ್ಚು ಘೋರವಾದ ಕೋಪವನ್ನು ತಾಳಿದನು.

ಉವಾಚ ಚ ಮಹಾಘೋರಂ ಕಠಿನಂ ವಚನಂ ತದಾ ।
ವೀರಭದ್ರಂ ಮಹಾವೀರಂ ದಂಷ್ಟ್ರಾಭಿರ್ಭೀಷಯನ್ಮುನೇ ॥ ೨೬ ॥

॥ ನೃಸಿಂಹ ಉವಾಚ ॥

ಆಗತೋಽಸಿ ಯತಸ್ತತ್ರ ಗಚ್ಛ ತ್ವಂ ಮಾ ಹಿತಂ ತದಾ ।
ಇದಾನೀಂ ಸಂಹರಿಷ್ಯಾಮಿ ಜಗದೇತಚ್ಚರಾಚರಂ ॥ ೨೭ ॥

ಸಂಹರ್ತುರ್ನ ಹಿ ಸಂಹಾರಃ ಸ್ವತೋ ವಾ ಪರತೋಽಪಿ ವಾ ।
ಶಾಸಿತಂ ಮಮ ಸರ್ವತ್ರ ಶಾಸ್ತಾ ಕೋಽಪಿ ನ ವಿದ್ಯತೇ ॥ ೨೮ ॥

ಮತ್ಪ್ರಸಾದೇನ ಸಕಲಮಭಯಂ ಹಿ ಪ್ರವರ್ತತೇ ।
ಅಹಂ ಹಿ ಸರ್ವಶಕ್ತೀನಾಂ ಪ್ರವರ್ತಕನಿವರ್ತಕಃ ॥ ೨೯ ॥

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದ್ವಿದ್ಧಿ ಗಣಾಧ್ಯಕ್ಷ ಮಮ ತೇಜೋವಿಜೃಂಭಿತಂ ॥ ೩೦ ॥

---

೨೬. ಆಗ ನರಸಿಂಹನು ಮಹಾವೀರನಾದ ವೀರಭದ್ರನನ್ನು ಕೋರೆದಾಡೆಗಳಿಂದ ಹೆದರಿಸುತ್ತಾ ಕ್ರೂರವಾದ ಮಾತುಗಳನ್ನು ಆಡಿದನು.

೨೭. ನೀನೆತ್ತಲಿಂದಬಂದೆಯೋ ಅತ್ತಕಡಗೇ ಹಿಂದಿರುಗು. ನನಗೆ ಹಿತವಾದ ಮಾತುಗಳನ್ನು ಹೇಳಲು ಬರಬೇಡ ಈಗಲೇ ಈ ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವನ್ನೂ ಸಂಹರಿಸಿಬಿಡುವೆನು.

೨೮. ಸಂಹಾರಕರ್ತೃವಾದ ನನಗೆ ಸಂಹಾರವನ್ನುಂಟುಮಾಡಲು ಸ್ವಯಂ ಆಗಲೀ ಮತ್ತೊಬನಿಂದಲೇ ಆಗಲಿ ಸಾಧ್ಯವಿಲ್ಲ. ಎಲ್ಲೆಲ್ಲಿಯೂ ನನ್ನ ಅಪ್ಪಣೆಯೇ ನಡೆಯುವುದು. ನನಗೆ ಅಪ್ಪಣೆಮಾಡುವವನು ಈ ಜಗತ್ತಿನಲ್ಲಿ ಯಾರೂ ಇಲ್ಲ.

೨೯. ನನ್ನ ಅನುಗ್ರಹದಿಂದಲೇ ಎಲ್ಲವೂ ನಿರ್ಭಯವಾಗಿ ನೆರವೇರುವುದು. ನಾನೇ ಎಲ್ಲ ಶಕ್ತಿಗಳಿಗೂ ಪ್ರವರ್ತಕನು ಮತ್ತು ನಿವರ್ತಕನು.

೩೦. ಎಲೈ ಗಣಾಧಿಪತಿಯೇ, ಯಾವುದು ವಿಭೂತಿಗೆ ಆಶ್ರಯವಾದುದೂ ಸತ್ತ್ವಮಯವಾದುದೂ ಶೋಭಾಯಮಾನವಾದುದೂ ವರ್ಧಿಷ್ಣುವಾದುದೂ ಆಗಿರುವುದೋ ಅದೆಲ್ಲವೂ ನನ್ನ ತೇಜಸ್ಸಿನ ಅಂಶವೆಂದೇ ತಿಳಿ.

ದೇವತಾಪರಮಾರ್ಥಜ್ಞಾ ಮಾಮೇವ ಪರಮಂ ವಿದುಃ ।
ಮದಂಶಾಶ್ಶಕ್ತಿಸಂಪನ್ನಾ ಬ್ರಹ್ಮಶಕ್ರಾದಯಸ್ಸುರಾಃ ॥ ೩೧ ॥

ಮನ್ನಾಭಿಕಮಲಾಜ್ಜಾತಃ ಪುರಾ ಬ್ರಹ್ಮಾ ಜಗತ್ಕರಃ ।
ಸರ್ವಾಧಿಕಸ್ಸ್ವತಂತ್ರಶ್ಚ ಕರ್ತಾ ಹರ್ತಾಖಿಲೇಶ್ವರಃ ॥ ೩೨ ॥

ಇದಂ ತು ಮತ್ಪರಂ ತೇಜಃ ಕಿಂ ಪುನಃ ಶ್ರೋತುಮಿಚ್ಛಸಿ ।
ಅತೋ ಮಾಂ ಶರಣಂ ಪ್ರಾಪ್ಯ ಗಚ್ಛ ತ್ವಂ ವಿಗತಜ್ವರಃ ॥ ೩೩ ॥

ಅವೇಹಿ ಪರಮಂ ಭಾವಮಿದಂ ಭೂತಂ ಗಣೇಶ್ವರ ।
ಮಾಮಕಂ ಸಕಲಂ ವಿಶ್ವಂ ಸದೇವಾಸುರಮಾನುಷಂ ॥ ೩೪ ॥

ಕಾಲೋಽಸ್ಮ್ಯಹಂ ಲೋಕವಿನಾಶಹೇತು-
ರ್ಲೋಕಾನ್ಸಮಾಹರ್ತುಮಹಂ ಪ್ರವೃತ್ತಃ ।

---

೩೧. ದೇವತೆಗಳೆಲ್ಲರೂ ನನ್ನನ್ನೇ ಪರಮಾರ್ಥವನ್ನು ಬಲ್ಲವನಾದ ಪರಮ ಪುರುಷನೆಂದು ತಿಳಿದಿರುವರು. ಶಕ್ತರಾದ ಬ್ರಹ್ಮೇಂದ್ರಾದಿಗಳು ನನ್ನ ಅಂಶ ಭೂತರು

೩೨ ಹಿಂದೆ ಈ ಜಗತ್ಸೃಷ್ಟ್ಯವಾದ ಬ್ರಹ್ಮನು ನನ್ನ ನಾಭಿಕಮಲದಿಂದಲೇ ಹುಟ್ಟಿದನು ನಾನೇ ಎಲ್ಲರಿಗಿಂತಲೂ ಮೇಲಾದವನು, ನಾನೇ ಸ್ವತಂತ್ರನು, ನಾನೇ ಕರ್ತೃವು, ಹರ್ತೃವು ನಾನೇ ಸರ್ವೇಶ್ವರನು

೩೩ ಈ ನೃಸಿಂಹಸ್ವರೂಪವು ನನ್ನ ಪರಿಪೂರ್ಣವಾದ ತೇಜಸ್ಸೆಂದು ತಿಳಿ. ಮತ್ತೆ ನೀನು ಕೇಳಬೇಕಾದುದೇನು ? ಆದುದರಿಂದ ನನ್ನನ್ನು ಮರೆಹೊಕ್ಕು ಅಹಂಕಾರವನ್ನು ಬಿಟ್ಟು ಹಿಂದಿರುಗು.

೩೪. ಎಲೈ ಪ್ರಮಥಾಧೀಶ್ವರನೇ, ಈ ಸ್ವರೂಪವನ್ನು ನನ್ನ ಪರಮಸ್ವರೂಪವೆಂದು ತಿಳಿ. ದೇವತೆಗಳೂ ಅಸುರರೂ ಮನುಷ್ಯರೂ ಇವರುಗಳಿಂದ ತುಂಬಿದ ಈ ನಿಖಿಲಪ್ರಪಂಚವೂ ನನ್ನದ್ದೇ ಎಂದು ತಿಳಿ

೩೫. ಎಲೈ ವೀರಭದ್ರನೇ, ಪ್ರಪಂಚದ ಲಯಕ್ಕೆ ಕಾರಣನಾದ ಕಾಲ ಪುರುಷನು ನಾನೇ. ಈ ಲೋಕಗಳೆಲ್ಲವನ್ನೂ ಸಂಹರಿಸಲು ನಾನು ಪ್ರವೃತ್ತನಾಗಿ

ಮೃತ್ಯೋರ್ಮೃತ್ಯುಂ ವಿದ್ಧಿ ಮಾಂ ವೀರಭದ್ರ
ಜೀವಂತ್ಯೇತೇ ಮತ್ಪ್ರಸಾದೇನ ದೇವಾಃ ॥ ೩೫ ॥

॥ ನಂದೀಶ್ವರ ಉವಾಚ ॥

ಸಾಹಂಕಾರಂ ವಚಃ ಶ್ರುತ್ವಾ ಹರೇರಮಿತವಿಕ್ರಮಃ ।
ವಿಹಸ್ಯೋವಾಚ ಸಾವಜ್ಞಂ ತತೋ ವಿಸ್ಫುರಿತಾಧರಃ ॥ ೩೬ ॥

॥ ವೀರಭದ್ರ ಉವಾಚ ॥

ಕಿಂ ನ ಜಾನಾಮಿ ವಿಶ್ವೇಶಂ ಸಂಹರ್ತಾರಂ ಪಿನಾಕಿನಂ ।
ಅಸದ್ವಾದೋ ವಿವಾದಶ್ಚ ವಿನಾಶಸ್ತ್ವಯಿ ಕೇವಲಃ ॥ ೩೭ ॥

ತವಾನ್ಯೋನ್ಯಾವತಾರಾಣಿ ಕಾನಿ ಶೇಷಾಣಿ ಸಾಂಪ್ರತಂ ।
ಕೃತಾನಿ ಯೇನ ಕೇನ್ನೈವ ಕಥಾಶೇಷೋ ಭವಿಷ್ಯತಿ ॥ ೩೮ ॥

ದೋಷಂ ತಂ ವದ ಯೇನ ತ್ವಮವಸ್ಥಾಮೀದೃಶೀಂ ಗತಃ ।
ತೇನ ಸಂಹಾರದಕ್ಷೇಣ ದಕ್ಷಿಣಾಶೇಷಮೇಷ್ಯಸಿ ॥ ೩೯ ॥

---

ರುವೆನು. ನಾನು ಮೃತ್ಯುವಿಗೂ ಮೃತ್ಯುವೆಂದು ತಿಳಿ. ಈ ದೇವತೆಗಳೆಲ್ಲರೂ ನನ್ನ ದಯೆಯಿಂದಲೇ ಜೀವಿಸಿರುವರು ಎಂದು ನುಡಿದನು.

೩೬. ಎಲೈ ಸನತ್ಕುಮಾರನೇ, ಈರೀತಿ ಅಹಂಕಾರದಿಂದ ವಿಷ್ಣುವು ನುಡಿದ ಮಾತನ್ನು ಕೇಳಿ ಮಹಾಪರಾಕ್ರಮಶಾಲಿಯಾದ ವೀರಭದ್ರನು ತಿರಸ್ಕಾರದಿಂದ ನಗುತ್ತ ತುಟಿಗಳು ನಡುಗುತ್ತಿರಲು ಇಂತೆಂದು ನುಡಿದನು.

೩೭. ಎಲೈ ನರಸಿಂಹನೇ, ಸರ್ವರಿಗೂ ಪ್ರಭುವೂ ಸರ್ವಸಂಹರ್ತೃವೂ ಆದ ಜಗದೀಶನಾದ ಪಿನಾಕಧಾರಿಯನ್ನು ನೀನರಿಯೆಯಾ? ನಿನ್ನೊಡನೆ ಆಗುವ ಸಲ್ಲದ ಮಾತುಕತೆಯೂ ಜಗಳವೂ ನಿನ್ನ ವಿನಾಶಕ್ಕೇ ಕಾರಣವಾಗುವುದೆಂದು ತಿಳಿ.

೩೮. ನೀನು ಎಷ್ಟು ಅವತಾರಗಳನ್ನು ಎತ್ತಿರುವೆ? ಇನ್ನೂ ಎಷ್ಟು ಉಳಿದಿವೆ? ಅವೆಲ್ಲವೂ ಈಗ ಕಥಾಮಾತ್ರಶೇಷವಾಗಿ ನಿಲ್ಲುವುದು.

೩೯. ನಿನಗೆ ಯಾವ ದೋಷದಿಂದ ಇಂತಹ ಅವಸ್ಥೆ ಪ್ರಾಪ್ತವಾಯಿತು? ಅದನ್ನು ಹೇಳು. ಸಂಹಾರಕುಶಲನಾದ ಆತನಿಂದ ಸ್ವಲ್ಪ ದಕ್ಷಿಣೆಯನ್ನು ಪಡೆಯುವಿಯಂತೆ.

ಪ್ರಕೃತಿಸ್ತ್ವಂ ಪುಮಾನ್ರುದ್ರಸ್ತ್ವಯಿ ವೀರ್ಯಂ ಸಮಾಹಿತಂ ।
ತ್ವನ್ನಾಭಿಪಂಕಜಾಜ್ಜಾತಃ ಪಂಚವಕ್ತ್ರಃ ಪಿತಾಮಹಃ ॥ ೪೦ ॥

ಜಗತ್ತ್ರಯೀಸರ್ಜನಾರ್ಥಂ ಶಂಕರಂ ನೀಲಲೋಹಿತಂ ।
ಲಲಾಟೇಽಚಿಂತಯತ್ಸೋಽಯಂ ತಪಸ್ಯುಗ್ರೇ ಚ ಸಂಸ್ಥಿತಃ ॥ ೪೧ ॥

ತಲ್ಲಲಾಟಾದಭೂಚ್ಛಂಭುಃ ಸೃಷ್ಟ್ಯರ್ಥೇ ತೇನ ಭೂಷಣಂ ।
ಅತೋಽಹಂ ದೇವದೇವಸ್ಯ ತಸ್ಯ ಭೈರವರೂಪಿಣಃ ॥ ೪೨ ॥

ತ್ವತ್ಸಂಹಾರೇ ನಿಯುಕ್ತೋಽಸ್ಮಿ ವಿನಯೇನ ಬಲೇನ ಚ ।
ದೇವದೇವೇನ ರುದ್ರೇಣ ಸಕಲಪ್ರಭುಣಾ ಹರೇ ॥ ೪೩ ॥

ಏಕಂ ರಕ್ಷೋ ವಿದಾರ್ಯೈವ ತಚ್ಛಕ್ತಿಕಲಯಾ ಯುತಃ ।
ಅಹಂಕಾರಾವಲೇಪೇನ ಗರ್ಜಸಿ ತ್ವಮತಂದ್ರಿತಃ ॥ ೪೪ ॥

---

೪೦. ನೀನು ಪ್ರಕೃತಿಯು. ಶಂಕರನು ಪುರುಷನು ಆತನು ನಿನ್ನಲ್ಲಿ ತನ್ನ ತೇಜಸ್ಸನ್ನು ಇಟ್ಟನು. ಐದುಮುಖವುಳ್ಳ ಆ ಬ್ರಹ್ಮನು ನಿನ್ನ ನಾಭಿಕಮಲದಿಂದ ಹುಟ್ಟಿದನು

೪೧ ಅವನು ಮೂರು ಲೋಕವನ್ನೂ ಸೃಷ್ಟಿಸಬೇಕೆಂಬಾಸೆಯಿಂದ ನೀಲಲೋಹಿತನಾದ ಆ ಶಂಕರನನ್ನು ಕುರಿತು, ಕಠಿಣವಾದ ತಪಸ್ಸನ್ನು ಆಚರಿಸುತ್ತಾ ತನ್ನ ಲಲಾಟಪ್ರದೇಶದಲ್ಲಿ ಆತನನ್ನು ಧ್ಯಾನಿಸಿದನು.

೪೨. ಸೃಷ್ಟಿಕಾರ್ಯದ ಸಲುವಾಗಿ ಆ ಬ್ರಹ್ಮನ ಲಲಾಟಪ್ರದೇಶದಿಂದ ಶಂಭುವು ಅವತರಿಸಿದನು. ದೇವದೇವನೂ ಉಗ್ರಸ್ವರೂಪನೂ ಆದ ಆ ಶಿವನಿಂದ ನಾನು ಹುಟ್ಟಿದೆನು.

೪೩ ಎಲೈ ಹರಿಯೇ, ದೇವಾದಿದೇವನೂ ಸರ್ವೇಶ್ವರನೂ ಆದ ಆ ರುದ್ರನು ನಿನ್ನನ್ನು ವಿನಯದಿಂದಲಾಗಲೀ ಬಲಪ್ರದರ್ಶನದಿಂದಲಾಗಲೀ ಅಡಗಿಸಲು ನನಗೆ ಆಜ್ಞೆಮಾಡಿರುವನು

೪೪. ಆ ಶಿವನ ತಿಲಾಂಶದಷ್ಟು ಶಕ್ತಿಯನ್ನು ಪಡೆದು ಒಬ್ಬ ರಾಕ್ಷಸನನ್ನು ಸೀಳಿಬಿಟ್ಟಮಾತ್ರಕ್ಕೇ ಸ್ವಲ್ಪವೂ ಹಿಂಜರಿಯದೆ ಮಹಾಅಹಂಕಾರದಿಂದ ಮೆರೆಯುತ್ತಿರುವೆ.

ಉಪಕಾರೋ ಹಿ ಸಾಧೂನಾಂ ಸುಖಾಯ ಕಿಲ ಸಂಮತಃ ।
ಉಪಕಾರೋ ಹ್ಯಸಾಧೂನಾಮುಪಕಾರಾಯ ಕೇವಲಂ ॥ ೪೫ ॥

ಯನ್ನೃಸಿಂಹ ಮಹೇಶಾನಂ ಪುನರ್ಭೂತಂ ತು ಮನ್ಯಸೇ ।
ತರ್ಹ್ಯಜ್ಞಾನೀ ಮಹಾಗರ್ವೀ ವಿಕಾರೀ ಸರ್ವಥಾ ಭವಾನ್ ॥ ೪೬ ॥

ನ ತ್ವಂ ಸ್ರಷ್ಟಾ ನ ಸಂಹರ್ತಾ ಭರ್ತಾಪಿ ನ ನೃಸಿಂಹಕ ।
ಪರತಂತ್ರೋ ವಿಮೂಢಾತ್ಮಾ ನ ಸ್ವತಂತ್ರೋ ಹಿ ಕುತ್ರಚಿತ್ ॥ ೪೭ ॥

ಕುಲಾಲಚಕ್ರವಚ್ಚಕ್ರ್ಯಾ ಪ್ರೇರಿತೋಽಸಿ ಪಿನಾಕಿನಾ ।
ನಾನಾವತಾರಕರ್ತಾ ತ್ವಂ ತದಧೀನಸ್ಸದಾ ಹರೇ ॥ ೪೮ ॥

ಅದ್ಯಾಪಿ ತವ ನಿಕ್ಷಿಪ್ತಂ ಕಪಾಲಂ ಕೂರ್ಮರೂಪಿಣಾ ।
ಹರಹಾರಲತಾಮಧ್ಯೇ ದಗ್ಧಃ ಕಚ್ಚಿನ್ನ ಬಧ್ಯತೇ ॥ ೪೯ ॥

---

೪೫. ಒಳ್ಳೆಯವರಿಗೆ ಉಪಕಾರಮಾಡಿದರೆ ಅದರಿಂದ ಸುಖವೇ ಉಂಟಾಗುವುದು. ದುಷ್ಟರಿಗೆ ಉಪಕಾರಮಾಡಿದರೆ ಅದರಿಂದ ಅಪಕಾರವೇ ಉಂಟಾಗುವುದು.

೪೬. ಎಲೈ ನರಸಿಂಹನೇ, ಆ ಮಹೇಶ್ವರನನ್ನು ನೀನು ಸಾಮಾನ್ಯವಾದ ಪ್ರಾಣಿಯಂತೆ ಭಾವಿಸಿರುವುದನ್ನು ನೋಡಿದರೆ ನೀನೆಂತಹ ಮೂಢನೆಂದೂ, ಮಹಾ ಗರ್ವಿಷ್ಠನೆಂದೂ, ವಿಕಾರಶೀಲನೆಂದೂ ನಿಸ್ಸಂಶಯವಾಗಿ ಗೊತ್ತಾಗುವುದು.

೪೭. ನೀನು ಸೃಷ್ಟಿಸುವವನೂ ಅಲ್ಲ, ಪಾಲಿಸುವವನೂ ಅಲ್ಲ. ಸಂಹರಿಸುವವನೂ ಅಲ್ಲ ಎಲೈ ನರಸಿಂಹನೇ, ನೀನು ಭ್ರಾಂತನಾಗಿರುವೆ. ನೀನು ನಿಜವಾಗಿ ಪರಾಧೀನನು, ಯಾವುದರಲ್ಲಿಯೂ ನಿನಗೆ ಸ್ವಾತಂತ್ರ್ಯವಿಲ್ಲ.

೪೮. ಎಲೈ ಹರಿಯೇ, ಸರ್ವದಾ ಅವನಿಗೆ ಅಧೀನನಾಗಿ ನಾನಾಬಗೆಯ ಅವತಾರಗಳನ್ನೆತ್ತಿದ ನೀನು ಆ ಪಿನಾಕಪಾಣಿಯ ಶಕ್ತಿಯಿಂದಲೇ ಕುಂಬಾರನ ಚಕ್ರದಂತೆ ಪ್ರೇರಿಸಲ್ಪಟ್ಟಿರುವೆ.

೪೯. ಈಗಲೂ ಸಹ ಕೂರ್ಮರೂಪಧಾರಿಯಾದ ನಿನ್ನ ಚಿಪ್ಪು ಶಿವನ ರುಂಡಮಾಲೆಯ ನಡುವೆ ಪೋಣಿಸಲ್ಪಟ್ಟಿದೆ. ಸುಟ್ಟುಹೋದುದನ್ನು ಎಲ್ಲಿಯಾದರೂ ಕಟ್ಟಲು ಬರುತ್ತದೆಯೇ ?

ವಿಸ್ಮೃತಿಃ ಕಿಂ ತದಂಶೇನ ದಂಷ್ಟ್ರೋತ್ಪಾತನಪೀಡಿತಂ ।
ವಾರಾಹ ವಿಷ್ಣುಹಸ್ತೇಽದ್ಯ ಯಾಕ್ರೋಶಂ ತಾರಕಾರಿಣಾ ॥ ೫೦ ॥

ದಗ್ಧೋಽಸಿ ಪಶ್ಯ ಶೂಲಾಗ್ನೇರ್ವಿಷ್ವಕ್ಸೇನಚ್ಛಲಾದ್ಭವಾನ್ ।
ದಕ್ಷಯಜ್ಞೇ ಶಿರಶ್ಛಿನ್ನಂ ಮಯಾ ತೇಜಃಸ್ವರೂಪಿಣಾ ॥ ೫೧ ॥

ಅದ್ಯಾಪಿ ತವ ಪುತ್ರಸ್ಯ ಬ್ರಹ್ಮಣಃ ಪಂಚಮಂ ಶಿರಃ ।
ಛಿನ್ನಂ ನ ಸಜ್ಜಿತಂ ಭೂಯೋ ಹರೇ ತದ್ವಿಸ್ಮೃತಂ ತ್ವಯಾ ॥ ೫೨ ॥

ನಿರ್ಜಿತಸ್ತ್ವಂ ದಧೀಚೇನ ಸಂಗ್ರಾಮೇ ಸಮರುದ್ಗಣಃ ।
ಕಂಡೂಯಮಾನೇ ಶಿರಸಿ ಕಥಂ ತದ್ವಿಸ್ಮೃತಂ ತ್ವಯಾ ॥ ೫೩ ॥

ಚಕ್ರಂ ವಿಕ್ರಮತೋ ಯಸ್ಯ ಚಕ್ರಪಾಣೇ ತವ ಪ್ರಿಯಂ ।
ಕುತಃ ಪ್ರಾಪ್ತಂ ಕೃತಂ ಕೇನ ತ್ವಯಾ ತದಪಿ ವಿಸ್ಮೃತಂ ॥ ೫೪ ॥

---

೫೦ ಎಲೈ ಹರಿಯೇ, ನೀನು ವರಾಹಾವತಾರವನ್ನು ಎತ್ತಿದಾಗ ತಾರಕಾಸುರ ವೈರಿಯಾದ ಷಣ್ಮುಖನು, ನಿನ್ನ ಕೋರದಾಡೆಯನ್ನು ಕಿತ್ತು ನೋವುಂಟುಮಾಡಿದುದೂ ನೀನು ಅರಿಚಿದುದೂ ಮರೆತುಹೋಯಿತೇ ?

೫೧. ಅದೂ ಅಲ್ಲದೆ ನೀನು ವಿಷ್ವಕ್ಸೇನರೂಪದಲ್ಲಿರುವಾಗ ಶಿವನ ತ್ರಿಶೂಲಾಗ್ನಿಯಿಂದ ದಹಿಸಿಹೋಪೆಯಲ್ಲವೇ ಮತ್ತು ದಕ್ಷಬ್ರಹ್ಮನ ಯಜ್ಞದಲ್ಲಿ ತೇಜೋರೂಪದಿಂದ ಇದ್ದ ನಾನು ನಿನ್ನ ಶಿರಸ್ಸನ್ನು ಕತ್ತರಿಸಿದುದು ನೆನಪಿದಯೇ ?

೫೨. ಈಗಲೂ ಕೂಡ ನಿನ್ನ ಮಗನಾದ ಬ್ರಹ್ಮನ ಐದನೆಯ ತಲೆಯು ಕತ್ತರಿಸಲ್ಪಟ್ಟು ಮತ್ತೆ ಅದು ಸೇರದೇಯಿರುವುದೂ ನಿನಗೆ ಮರೆತೇಹೋಗಿದೆಯಲ್ಲಾ

೫೩. ಮತ್ತು ದೇವತೆಗಳ ತಂಡಗಳ ಬೆಂಬಲದೊಡನೆ ನೀನು ದಧೀಚನ ಮೇಲೆ ಯುದ್ಧಕ್ಕೆ ನಿಂತಾಗ ತಲೆಯನ್ನು ಕೆರೆದುಕೊಳ್ಳುವಷ್ಟುಹೊತ್ತಿನಲ್ಲೇ ಅವನಿಂದ ಸಂಪೂರ್ಣವಾಗಿ ಸೋಲಿಸಲ್ಪಟ್ಟುದು ಮರೆತುಹೋಯಿತೇ ?

೫೪ ಎಲೈ ಚಕ್ರಪಾಣಿಯೇ, ತ್ರಿವಿಕ್ರಮನಾದ ನಿನಗೆ ಅತಿ ಪ್ರಿಯವಾದ ಆ ಸುದರ್ಶನಚಕ್ರವನ್ನು ನೀನೆಲ್ಲಿಂದ ಪಡೆದೆ, ಹೇಗೆ ಪಡೆದೆ, ಯಾರಿಂದ ಪಡೆದೆ ಎಂಬುದನ್ನೂ ಮರೆತುಬಿಟ್ಟೆಯೇನು ?

ಯೇ ಮಯಾ ಸಕಲಾ ಲೋಕಾ ಗೃಹೀತಾಸ್ತ್ವಂ ಪಯೋನಿಧೌ ।
ನಿದ್ರಾಪರವಶಶ್ಶೇಷೇ ಸ ಕಥಂ ಸಾತ್ತ್ವಿಕೋ ಭವಾನ್ ॥ ೫೫ ॥

ತೃದಾದಿಸ್ತಂಬಪರ್ಯಂತಂ ರುದ್ರಶಕ್ತಿನಿಜೃಂಭಿತಂ ।
ಶಕ್ತಿಮಾನಭಿತಸ್ತ್ವಂ ಚ ಹ್ಯನಲಾತ್ತ್ವಂ ವಿಮೋಹಿತಃ ॥ ೫೬ ॥

ತತ್ತೇಜಸೋ ಹಿ ಮಾಹಾತ್ಮ್ಯಂ ಪುಮಾನ್ದ್ರಷ್ಟುಂ ನ ಹಿ ಕ್ಷಮಃ ।
ಅಸ್ಥೂಲಾ ಯೇ ಪ್ರಪಶ್ಯಂತಿ ತದ್ವಿಷ್ಣೋಃ ಪರಮಂ ಪದಂ ॥ ೫೭ ॥

ದ್ಯಾವಾಪೃಥಿವ್ಯಾ ಇಂದ್ರಾಗ್ನ್ಯೋರ್ಯಮಸ್ಯ ವರುಣಸ್ಯ ಚ ।
ಧ್ವಾಂತೋದರೇ ಶಶಾಂಕೇ ಚ ಜನಿತ್ವಾ ಪರಮೇಶ್ವರಃ ॥ ೫೮ ॥

ಕಾಲೋಽಸಿ ತ್ವಂ ಮಹಾಕಾಲಃ ಕಾಲಕಾಲೋ ಮಹೇಶ್ವರಃ ।
ಅತಸ್ತ್ವಮುಗ್ರಕಲಯಾ ಮೃತ್ಯೋರ್ಮೃತ್ಯುರ್ಭವಿಷ್ಯಸಿ ॥ ೫೯ ॥

---

೫೫. ನಾನು ಎಲ್ಲ ಲೋಕಗಳನ್ನೂ ಉಪಸಂಹರಿಸಿದಮೇಲೆ ನೀನುನಿದ್ರಾಪರವಶನಾಗಿ ಸಮುದ್ರದಲ್ಲಿ ಮಲಗಿಬಿಡುವೆಯಲ್ಲಾ. ಇಂತಹ ನೀನ್ನನ್ನು ಸಾತ್ತ್ವಿಕನೆನ್ನುವುದು ಹೇಗೆ ?

೫೬. ನಿನ್ನಿಂದ ಹಿಡಿದು ಹುಲ್ಲುಕಡ್ಡಿಯವರೆಗೆ ಪ್ರತಿಯೊಂದೂ ಶಿವನ ಶಕ್ತಿಯ ವಿಲಾಸವೆಂದು ತಿಳಿ. ಆದರಿಂದಲೇ ನೀನು ಶಕ್ತನಾಗಿರುವೆ. ಸುತ್ತಲೂ ವ್ಯಾಪಿಸಿರುವ ಆ ತೇಜಸ್ಸಿನಿಂದಲೇ ನೀನೀರೀತಿ ಮೋಹಿತನಾಗಿರುವೆ.

೫೭. ಆ ಶಿವನ ತೇಜಸ್ಸಿನ ಪ್ರಭಾವವನ್ನು ಅರಿಯಲು ಯಾವ ಪುರುಷನಿಗೂ ಸಾಧ್ಯವಿಲ್ಲ. ಸರ್ವತ್ರ ವ್ಯಾಪಿಸಿರುವ ಪರಮಶ್ರೇಷ್ಠವಾದ ಆ ಶಿವನ ಮಹಿಮೆಯನ್ನು ಸೂಕ್ಷ್ಮದೃಷ್ಟಿಯುಳ್ಳವರು ಮಾತ್ರ ತಿಳಿಯಬಲ್ಲರು.

೫೮. ಆ ಪರಮೇಶ್ವರನು ಅಂತರಿಕ್ಷ, ಭೂಮಿ, ಇಂದ್ರ, ಅಗ್ನಿ, ಯಮ, ವರುಣ, ಅಂಧಕಾರ, ಚಂದ್ರ, ಮೊದಲಾದುವುಗಳಲ್ಲಿ ಇದ್ದು, ಅವೆಲ್ಲಕ್ಕೂ ವ್ಯಾಪಕನಾಗಿರುವನು.

೫೯. ನೀನು ಕ್ಷಣಮುಹೂರ್ತಕಾಲರೂಪನಾಗಿದ್ದರೆ ಕಾಲನಿಗೂ ಕಾಲನಾದ ಆ ಶಿವನು ಮಹಾಕಾಲವಾಗಿರುವನು. ಆದುದರಿಂದ ನಿನಗಿಂತಲೂ ಉಗ್ರವಾದ ಆ ಮೃತ್ಯುವಿನಿಂದ ಸಾವಿಗೀಡಾಗುವೆ.

ಸ್ಥಿರೋದ್ಯ ತ್ವಕ್ಷರೋ ವೀರೋ ವೀರೋ ವಿಶ್ವಾವಕಃ ಪ್ರಭುಃ ।
ಉಪಹಂತಾ ಜ್ವರಂ ಭೀಮೋ ಮೃಗಃ ಪಕ್ಷೀ ಹಿರಣ್ಮಯಃ ॥ ೬೦ ॥

ಶಾಸ್ತಾ ಶೇಷಸ್ಯ ಜಗತಸ್ತತ್ತ್ವಂ ನೈವ ಚತುರ್ಮುಖಃ ।
ನಾನ್ಯೇ ಚ ಕೇವಲಂ ಶಂಭುಸ್ಸರ್ವಶಾಸ್ತಾ ನ ಸಂಶಯಃ ॥ ೬೧ ॥

ಇತ್ಥಂ ಸರ್ವಂ ಸಮಾಲೋಕ್ಯ ಸಂಹರಾತ್ಮಾನಮಾತ್ಮನಾ ।
ನ ವಿನಷ್ಟಂ ತ್ವಮಾತ್ಮಾನಂ ಕುರು ಹೇ ನೃಹರೇ ಬುಧ ॥ ೬೨ ॥

ನೋ ಚೇದಿದಾನೀಂ ಕ್ರೋಧಸ್ಯ ಮಹಾಭೈರವರೂಪಿಣಃ ।
ವಜ್ರಾಶನಿರಿವ ಸ್ಥಾಣೌ ತ್ವಯಿ ಮೃತ್ಯುಃ ಪತಿಷ್ಯತಿ ॥ ೬೩ ॥

---

೬೦ ಪ್ರಪಂಚವನ್ನ ಸಂರಕ್ಷಿಸುವವನೂ ಜ್ವರವನ್ನು ನಾಶಮಾಡುವವನೂ ಸುವರ್ಣಮಯವಾದ ಮೃಗ, ಪಕ್ಷಿಸ್ವರೂಪನೂ ಆದ ಆ ಪ್ರಭುವೊಬ್ಬನು ಮಾತ್ರ ಸ್ಥಿರನು, ನಾಶರಹಿತನು

೬೧ ಆದುದರಿಂದ ಈ ಸಮಸ್ತ ಜಗತ್ತನ್ನೂ ಆಳುವವನು ನೀನಲ್ಲ. ಚತುರ್ಮುಖಬ್ರಹ್ಮನೂ ಅಲ್ಲ ಇನ್ನೂ ಬೇರೆಯವರೂ ಅಲ್ಲ ಎಲ್ಲರಿಗೂ ಒಡೆಯ ನಾದ ಆ ಶಿವನೊಬ್ಬನು ಮಾತ್ರ ಇವೆಲ್ಲಕ್ಕೂ ಒಡೆಯನು ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

೬೨. ಹೀಗೆ ಈ ಅಂಶವೆಲ್ಲವನ್ನೂ ಪರ್ಯಾಲೋಚಿಸಿ ನೀನಾಗಿಯೇ ನಿನ್ನ ಈ ಉಗ್ರರೂಪವನ್ನು ಉಪಸಂಹರಿಸು. ಎಲೈ ವಿವೇಕಿಯಾದ ನರಹರಿಯೇ, ನಿನ್ನನ್ನು ನಾಶಕ್ಕೆ ಗುರಿಪಡಿಸಿಕೊಳ್ಳಬೇಡ

೬೩. ಇಲ್ಲದಿದ್ದರೆ ಅತಿಯಾಗಿ ಕುಪಿತನಾಗಿರುವ ಮಹಾಭೈರವಸ್ವರೂಪನಾದ ಆತನಿಂದ ಮೋಟುಮರದಮೇಲೆ ಸಿಡಿಲೆರಗುವಂತೆ ನಿನಗೆ ಮೃತ್ಯುವುಂಟಾಗುವುದು.

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ವೀರಭದ್ರೋಽಪಿ ವಿರರಾಮಾಕುತೋಭಯಃ ।
ದೃಷ್ಟ್ವಾ ನೃಸಿಂಹಾಭಿಪ್ರಾಯಂ ಕ್ರೋಧಮೂರ್ತಿಶ್ಶಿವಸ್ಯ ಸಃ ॥ ೬೪ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಶರಭಾವತಾರವರ್ಣನಂ ನಾಮ್ನೈಕಾದಶೋಽಧ್ಯಾಯಃ

---

೬೪. ಎಲೈ ಸನತ್ಕುಮಾರನೇ, ಈರೀತಿಯಾಗಿ ನರಸಿಂಹನ ಆಶಯವನ್ನು ತಿಳಿದು ಶಿವನ ಕೋಪವೇ ಆಕೃತಿಯನ್ನು ತಳೆದುಬಂದ, ಯಾರಿಗೂ ಭಯಪಡದ ವೀರಭದ್ರನು ಇಂತು ನುಡಿದು ಬಳಿಕ ಸುಮ್ಮನಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಶರಭಾವತಾರವರ್ಣನವೆಂಬ ಹನ್ನೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ದ್ವಾದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ನಂದೀಶ್ವರ ಮಹಾಪ್ರಾಜ್ಞ ವಿಜ್ಞಾತಂ ತದನಂತರಂ ।
ಮಮೋಪರಿ ಕೃಪಾಂ ಕೃತ್ವಾ ಪ್ರೀತ್ಯಾ ತ್ವಂ ತದ್ವದಾಧುನಾ ॥ ೧ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತೋ ವೀರಭದ್ರೇಣ ನೃಸಿಂಹಃ ಕ್ರೋಧವಿಹ್ವಲಃ ।
ನಿನದನ್ನನುವೇಗೇನ ತಂ ಗ್ರಹೀತುಂ ಪ್ರಚಕ್ರಮೇ ॥ ೨ ॥

## ಹನ್ನೆರಡನೆಯ ಅಧ್ಯಾಯವು.

೧. ಸನತ್ಕುಮಾರನು ಮಹಾಮೇಧಾವಿಯಾದ ನಂದೀಶ್ವರನನ್ನು ಕುರಿತು ಆಮೇಲೆ ಏನು ನಡೆಯಿತೆಂಬುದನ್ನು ನನ್ನಮೇಲೆ ದಯೆಯಿಟ್ಟು ಪ್ರೀತಿಯಿಂದ ಈಗ ನನಗೆ ತಿಳಿಸಬೇಕೆಂದು ಕೇಳಿದನು.

೨ ಆಗ ನಂದೀಶ್ವರನು ಸನತ್ಕುಮಾರನನ್ನು ಕುರಿತು ಹೇಳತೊಡಗಿದನು. ಈರೀತಿ ವೀರಭದ್ರನು ನುಡಿಯಲು ನರಸಿಂಹನು ಮಹಾಕ್ರೋಧಾನ್ವಿತನಾಗಿ ಗರ್ಜಿಸುತ್ತಾ ರಭಸದಿಂದ ಅವನನ್ನು ಹಿಡಿಯಲು ಪ್ರಯತ್ನಿಸಿದನು.

ಅತ್ರಾಂತರೇ ಮಹಾಘೋರಂ ಪ್ರತ್ಯಕ್ಷಭಯಕಾರಣಂ ।
ಗಗನವ್ಯಾಪಿ ದುರ್ಧರ್ಷಂ ಶೈವತೇಜಸ್ಸಮುದ್ಭವಂ ॥ ೩ ॥

ವೀರಭದ್ರಸ್ಯ ತದ್ರೂಪಮದೃಶ್ಯಂ ತು ತತಃ ಕ್ಷಣಾತ್ ।
ತದ್ವೈ ಹಿರಣ್ಮಯಂ ಸೌಮ್ಯಂ ನ ಸೌರಂ ನಾಗ್ನಿಸಂಭವಂ ॥ ೪ ॥

ನ ತಡಿಚ್ಚಂದ್ರಸದೃಶಮನೌಪಮ್ಯಂ ಮಹೇಶ್ವರಂ ।
ತದಾ ತೇಜಾಂಸಿ ಸರ್ವಾಣಿ ತಸ್ಮಿಂಲ್ಲೀನಾನಿ ಶಂಕರೇ ॥ ೫ ॥

ನ ತದ್ವ್ಯೋಮ ಮಹತ್ತೇಜೋ ವ್ಯಕ್ತಾಂತಶ್ಚಾಭವತ್ತತಃ ।
ರುದ್ರಸಾಧಾರಣಂ ಚೈವ ಚಿಹ್ನಿತಂ ವಿಕೃತಾಕೃತಿ ॥ ೬ ॥

ತತಸ್ಸಂಹಾರರೂಪೇಣ ಸುವ್ಯಕ್ತಂ ಪರಮೇಶ್ವರಃ ।
ಪಶ್ಯತಾಂ ಸರ್ವದೇವಾನಾಂ ಜಯಶಬ್ದಾದಿಮಂಗಲೈಃ ॥ ೭ ॥

---

೩. ಆಕ್ಷಣದಲ್ಲಿ ಅತಿ ಭಯಂಕರವಾದುದೂ, ಎದುರಿಸಲು ಅಸಾಧ್ಯವಾದುದೂ ನೋಡಿದರೆ ನಡುಕಹುಟ್ಟುವಂತಹದೂ ಆದ ಶಿವನ ತೇಜಸ್ಸು ಗಗನವನ್ನೆಲ್ಲಾ ವ್ಯಾಪಿಸಿ ನಿಂತುಬಿಟ್ಟಿತು.

೪. ಆಗ ಒಡನೆಯೇ ವೀರಭದ್ರನ ಆ ರೂಪವು ಅದೃಶ್ಯವಾಗಿಬಿಟ್ಟಿತು. ಆ ಶಿವತೇಜಸ್ಸನ್ನು ಏನೆಂದು ಹೇಳಲಿ ? ಸೌಮ್ಯವೂ ಸುವರ್ಣಮಯವೂ ಆದ ಆ ತೇಜಸ್ಸು ಸೂರ್ಯನ ತೇಜಸ್ಸಿನಂತೆ ಅಲ್ಲ. ಅಗ್ನಿಯ ತೇಜಸ್ಸಿನಂತೆಯೂ ಅಲ್ಲ.

೫. ಅದು ಮಿಂಚನ್ನೂ ಹೋಲಲಾರದು. ಚಂದ್ರನನ್ನೂ ಹೋಲಲಾರದು. ಆ ಮಹೇಶ್ವರನ ತೇಜಸ್ಸು ಉಪಮಾತೀತವಾದುದು. ಆಗ ಸೂರ್ಯಾದಿ ಸರ್ವ ತೇಜಸ್ಸುಗಳೂ ಆ ಶಂಕರನಲ್ಲಿಯೇ ಲೀನವಾಗಿಹೋದುವು.

೬. ಆ ಮಹಾತೇಜಸ್ಸು ಆಕಾಶವನ್ನೆಲ್ಲಾ ವ್ಯಾಪಿಸಿಬಿಟ್ಟು ಅದರಲ್ಲಿ ಅಡಗದೆಯೇ ಹೋಯಿತು. ಅನಂತರ ಶಿವನಿಗೆ ಮಾತ್ರ ಸಲ್ಲುವ ಚಿಹ್ನೆಗಳಿಂದ ಒಪ್ಪುತ್ತಾ ವಿಕಾರವಾದ ಆಕಾರವನ್ನು ತಾಳಿ ನಿಂತಿತು.

೭. ಅನಂತರ ಸುತ್ತಲೂ ನೆರೆದುನಿಂತು ನೋಡುತ್ತಿರುವ ದೇವತೆಗಳು ಜಯ ಜಯ ಎಂಬುದಾಗಿ ಮಂಗಲಶಬ್ದಗಳನ್ನು ಉಚ್ಚರಿಸುತ್ತಿರಲು, ಆ ಪರಮೇಶ್ವರನು ತನ್ನ ಸಂಹಾರಕಾಲದ ರೂಪದಿಂದ ಸ್ಪಷ್ಟವಾಗಿ ಗೋಚರನಾದನು.

ಸಹಸ್ರಬಾಹುರ್ಜಟಿಲಶ್ಚಂದ್ರಾರ್ಧಕೃತಶೇಖರಃ ।
ಸವೃದ್ಧೋಗ್ರಶರೀರೇಣ ಪಕ್ಷಾಭ್ಯಾಂ ಚಂಚುನಾ ದ್ವಿಜಃ ॥ ೮

ಅತಿತೀಕ್ಷ್ಣೋ ಮಹಾದಂಷ್ಟ್ರೋ ವಜ್ರತುಲ್ಯನಖಾಯುಧಃ ।
ಕಂಠೇ ಕಾಲೋ ಮಹಾಬಾಹುಶ್ಚತುಷ್ಪಾದ್ವಹ್ನಿಸನ್ನಿಭಃ ॥ ೯

ಯುಗಾಂತೋದ್ಯತಜೀಮೂತಭೀಮಗಂಭೀರನಿಸ್ವನಃ ।
ಮಹಾಕುಪಿತಕೃತ್ಯಾಗ್ನಿವ್ಯಾವೃತ್ತನಯನತ್ರಯಃ ॥ ೧೦

ಸ್ಪಷ್ಟದಂಷ್ಟ್ರಾಧರೋಷ್ಠಶ್ಚ ಹುಂಕಾರಸಂಯುತೋ ಹರಃ ।
ಈದೃಗ್ವಿಧಸ್ವರೂಪಶ್ಚ ಹ್ಯುಗ್ರ ಆವಿರ್ಬಭೂವ ಹ ॥ ೧೧

---

೮ ಆತನಿಗೆ ಸಾವಿರತೋಳುಗಳು, ತಲೆಯ ತುಂಬಾ ಜಡೆಗಳು, ತಲೆಯ ಮೇಲೆ ಅರ್ಧಚಂದ್ರರೇಖೆಯು ಒಡವೆಯಂತೆ ಕಂಗೊಳಿಸುತ್ತಿತ್ತು. ಶರೀರವು ಬಹು ದೊಡ್ಡದಾಗಿ ಬೆಳೆದು ಘೋರವಾಗಿತ್ತು. ಅದಕ್ಕೆ ಹಕ್ಕಿಯಂತೆ ಎರಡು ರೆಕ್ಕೆಗಳ ಕೊಕ್ಕೂ ಇದ್ದುವು

೯. ಅಲ್ಲದೆ ಬಹು ಮೊನಚಾಗಿರುವ ದೊಡ್ಡದೊಡ್ಡ ಕೋರೆದಾಡೆಗಳು ಬೇ ಇದ್ದುವು. ವಜ್ರಾಯುಧಕ್ಕೆಣೆಯಾದ ಕೂರಾದ ಉಗುರುಗಳೇ ಆತನಿಗೆ ಆಯು ವಾಗಿದ್ದುವು. ಆತನ ಕತ್ತು ಕಪ್ಪಗಿತ್ತು. ತೋಳುಗಳು ನೀಳವಾಗಿದ್ದುವು. ಮೂರ್ತಿಗೆ ನಾಲ್ಕು ಕಾಲುಗಳಿದ್ದುವು ಮತ್ತು ಬೆಂಕಿಯಂತೆ ಜ್ವಲಿಸುತ್ತಿದ್ದನು.

೧೦. ಆತನ ಧ್ವನಿಯು ಪ್ರಳಯಸಮಯದಲ್ಲಿ ಒಟ್ಟಾಗಿ ನೇರಿಬಂದ ಪುಷ್ಕ ವರ್ತಕಾದಿ ಮೇಘಗಳ ಮೊಳಗಿನಂತೆ ಭಯಂಕರವಾಗಿಯೂ ಗಂಭೀರವಾಗಿಯ ಇದ್ದಿತು. ಮತ್ತು ಆತನ ಹೊರಳುತ್ತಿದ್ದ ಮೂರು ಕಣ್ಣುಗಳು ಮಹಾಕೋಪದಿಂ ಉರಿಯ ನಾಲಗೆಯನ್ನು ಚಾಚುತ್ತಿರುವ ಅಭಿಚಾರದ ಅಗ್ನಿಗಳಂತೆ ಭೀಕರವಾಗಿದ್ದುವ

೧೧ ಆತನು ಒಮ್ಮೆ ಕೋಪದಿಂದ ಜೋರಾಗಿ ತುಟಿಯನ್ನು ಕಡಿದುಕೊಳ ವನು. ಮತ್ತೊಮ್ಮೆ ಹೂಂಕಾರಮಾಡುವನು. ಇಂತಹ ಕರಾಳರೂಪದಿಂದ ಉಗ್ರನ (ಶಿವನು) ಆವಿರ್ಭವಿಸಿದನು.

ಹರಿಸ್ತದ್ದರ್ಶನಾದೇವ ವಿನಷ್ಟಬಲವಿಕ್ರಮಃ ।
ಬಿಭ್ರದ್ಧಾಮ ಸಹಸ್ರಾಂಶೋರಧಃ ಖದ್ಯೋತವಿಭ್ರಮಂ ॥ ೧೨ ॥

ಅಥ ವಿಭ್ರಮ್ಯ ಪಕ್ಷಾಭ್ಯಾಂ ನಾಭಿಪಾದಾನ್ವಿದಾರಯನ್ ।
ಪಾದಾನ್ಬಬಂಧ ಪುಚ್ಛೇನ ಬಾಹುಭ್ಯಾಂ ಬಾಹುಮಂಡಲಂ ॥ ೧೩ ॥

ಭಿಂದನ್ನುರಸಿ ಬಾಹುಭ್ಯಾಂ ನಿಜಗ್ರಾಹ ಹರೋ ಹರಿಂ ।
ತತೋ ಜಗಾಮ ಗಗನಂ ದೇವೈಸ್ಸಹ ಮಹರ್ಷಿಭಿಃ ॥ ೧೪ ॥

ಸಹಸೈವಾಭಯಾದ್ವಿಷ್ಣುಂ ಸ ಹಿ ಶ್ಯೇನ ಇವೋರಗಂ ।
ಉತ್ಕ್ಷಿಪ್ಯೋತ್ಕ್ಷಿಪ್ಯ ಸಂಗೃಹ್ಯ ನಿಪಾತ್ಯ ಚ ನಿಪತ್ಯ ಚ ॥ ೧೫ ॥

ಉಡ್ಡೀಯೋಡ್ಡೀಯ ಭಗವಾನ್ಪಕ್ಷಘಾತವಿಮೋಹಿತಂ ।
ಹರಿಂ ಹರಸ್ತಂ ವೃಷಭಂ ವಿವೇಶಾನಂತ ಈಶ್ವರಃ ॥ ೧೬ ॥

---

೧೨. ನರಸಿಂಹರೂಪಧಾರಿಯಾದ ಹರಿಯು ಇಂತಹ ಉಗ್ರಮೂರ್ತಿಯನ್ನು ನೋಡುತ್ತಲೇ ಬಲವೂ ಸಾಹಸವೂ ಉಡುಗಿಹೋಗಿ ಸೂರ್ಯನ ಮುಂದಿನ ಮಿಂಚು ಹುಳುವಿನಂತೆ ನಿಸ್ತೇಜಸ್ಕನಾಗಿಬಿಟ್ಟನು.

೧೩-೧೪. ಅನಂತರ ಆ ಶರಭಮೂರ್ತಿಯು ನರಸಿಂಹರೂಪಧಾರಿಯಾದ ಹರಿಯನ್ನು ಗರಗರನೆ ತಿರುಗಿಸಿಬಿಟ್ಟನು. ಹೊಕ್ಕಳನ್ನೂ ಕಾಲ್ಗಳನ್ನೂ ಉಗುರುಗಳಿಂದ ಸೀಳಿದನು. ಬಾಲದಿಂದ ಕಾಲ್ಗಳನ್ನು ಬಿಗಿದನು. ತನ್ನೆರಡು ಕೈಗಳಿಂದ ಆತನ ಕೈಗಳನ್ನು ಕಟ್ಟಿದನು. ಅನಂತರ ತನ್ನೆರಡು ಮುಷ್ಟಿಗಳಿಂದಲೂ ಅವನ ಎದೆಯನ್ನು ಗುದ್ದುತ್ತಾ ತಟ್ಟನೆ ಅವನನ್ನೆತ್ತಿಕೊಂಡು ಆಕಾಶಕ್ಕೆ ನೆಗೆದುಬಿಟ್ಟನು. ಅನಂತರ ದೇವತೆಗಳೂ ಮಹರ್ಷಿಗಳೂ ಆತನನ್ನು ಹಿಂಬಾಲಿಸಿದರು.

೧೫-೧೬. ಆ ಶಿವನು ಒಮ್ಮೆ ಗಿಡುಗನು ಹಾವನ್ನು ಅಟ್ಟಿಸಿಕೊಂಡುಹೋಗುವಂತೆ ತಟ್ಟನೆ ಹರಿಯನ್ನು ಹಿಂಬಾಲಿಸುವನು. ಒಮ್ಮೊಮ್ಮೆ ಮೇಲಕ್ಕೆಸೆಯುವನು. ಹಿಡಿಯುವನು. ಇನ್ನೊಮ್ಮೆ ಅವನನ್ನು ಬೀಳಿಸುವನು. ತಾನೂ ಬೀಳುವನು. ಮತ್ತೊಮ್ಮೆ ಮೇಲೆಮೇಲೆ ಹಾರುಹಾರುತ್ತಾ ರೆಕ್ಕೆಗಳ ಬಡಿತದಿಂದ ಪ್ರಜ್ಞೆ ತಪ್ಪುವಂತೆ ಮಾಡುವನು. ಈರೀತಿ ಭಗವಂತನೂ ನಾಶರಹಿತನೂ ಆದ ಆ ಶಿವನು ಹರಿಯನ್ನು ಗೋಳಾಡಿಸಿ ಬಳಿಕ ತನ್ನ ವಾಹನವಾದ ವೃಷಭವನ್ನೇರಿ ಹೊರಟನು.

ಅನುಯಾಂತಂ ಸುರಾಸ್ಸರ್ವೇ ನಮೋವಾಕ್ಯೇನ ತುಷ್ಟುವುಃ ।
ಪ್ರಣೇಮುಸ್ಸಾದರಂ ಪ್ರೀತ್ಯಾ ಬ್ರಹ್ಮಾದ್ಯಾಶ್ಚ ಮುನೀಶ್ವರಾಃ ॥ ೧೭ ॥

ನೀಯಮಾನಃ ಪರವಶೋ ದೀನವಕ್ತ್ರಃ ಕೃತಾಂಜಲಿಃ ।
ತುಷ್ಟಾವ ಪರಮೇಶಾನಂ ಹರಿಸ್ತಂ ಲಲಿತಾಕ್ಷರೈಃ ॥ ೧೮ ॥

ನಾಮ್ನಾಮಷ್ಟಶತೇನೈವ ಸ್ತುತ್ವಾ ತಂ ಮೃಡಮೇವ ಚ ।
ಪುನಶ್ಚ ಪ್ರಾರ್ಥಯಾಮಾಸ ನೃಸಿಂಹಃ ಶರಭೇಶ್ವರಂ ॥ ೧೯ ॥

ಯದಾ ಯದಾ ಮಮಾಜ್ಞೇಯಂ ಮತಿಸ್ಸ್ಯಾದ್ಗರ್ವದೂಷಿತಾ ।
ತದಾ ತದಾಽಪನೇತವ್ಯಾ ತ್ವಯೈವ ಪರಮೇಶ್ವರ ॥ ೨೦ ॥

॥ ನಂದೀಶ್ವರ ಉವಾಚ ॥

ಏವಂ ವಿಜ್ಞಾಪಯನ್ಪ್ರೀತ್ಯಾ ಶಂಕರಂ ನರಕೇಸರೀ ।
ನತ್ವಾ ಶಕ್ತೋಽಭವದ್ವಿಷ್ಣುರ್ಜೀವಿತಾಂತಪರಾಜಿತಃ ॥ ೨೧ ॥

---

೧೭ ಆಗ ಅವನನ್ನು ಹಿಂಬಾಲಿಸುತ್ತಿದ್ದ ಬ್ರಹ್ಮಾದಿದೇವತೆಗಳೂ ಮುನಿಗಳೂ ನಮೋನಮಃ ನಮೋನಮಃ ಎಂಬುದಾಗಿ ಅಂತ್ಯವುಳ್ಳ ಶ್ರೀ ರುದ್ರಸೂಕ್ತದಿಂದ ಸ್ತೋತ್ರಮಾಡಿದರು ಪ್ರೀತಿಯಿಂದಲೂ ಆದರದಿಂದಲೂ ನಮಸ್ಕಾರಮಾಡಿದರು.

೧೮ ಅನಂತರ ಶಿವನಿಂದ ನೆಳೆಯೊಯ್ಯಲ್ಪಡುತ್ತಿದ್ದ ಆ ಹರಿಯು ಸೋತು ಹೋಗಿ ಮುಖದಲ್ಲಿ ದೈನ್ಯವನ್ನು ತೋರುತ್ತಾ ಕೈಗಳನ್ನು ಮುಗಿದುಕೊಂಡು ಮಧುರವಾದ ಮಾತುಗಳಿಂದ ಆ ಪರಮೇಶ್ವರನನ್ನು ಸ್ತೋತ್ರಮಾಡಿದನು

೧೯ ಅಷ್ಟೋತ್ತರ ಶತನಾಮ (ನೂರೆಂಟು) ಗಳಿಂದ ಆ ಶರಭೇಶ್ವರನನ್ನು ಸ್ತೋತ್ರಮಾಡಿದ ಬಳಿಕ ಮತ್ತೆ ನರಸಿಂಹನು ಈರೀತಿ ಪ್ರಾರ್ಥಿಸಿದನು

೨೦. ಎಲೈ ಪರಮೇಶ್ವರನೇ, ತಿಳುವಳಿಕೆಯಿಲ್ಲದ ನನ್ನೀ ಬುದ್ಧಿಯು ಯಾವಾಗಾವಾಗ ಅಹಂಕಾರದಿಂದ ದೂಷಿತವಾಗುವುದೋ ಆವಾಗಾವಾಗ ನೀನೇ ಆ ಕುತ್ಸಿತವಾದ ಬುದ್ಧಿಯನ್ನು ಹೋಗಲಾಡಿಸಬೇಕು

೨೧. ಎಲೈ ಸನತ್ಕುಮಾರನೇ, ಈರೀತಿ ಪ್ರಾಣವೊಂದು ಮಾತ್ರ ಉಳಿದು ಸೋತುಹೋಗಿದ್ದ ಆ ನರಸಿಂಹನು ಶಂಕರನನ್ನು ಪ್ರೀತಿಯಿಂದ ಬಿನ್ನವಿಸಿಕೊಂಡು ನಮಸ್ಕರಿಸಿ ಶಕ್ತಿಹೀನನಾಗಿಬಿಟ್ಟನು

ತದ್ವಕ್ತ್ರಂ ಶೇಷಗಾತ್ರಾಂತಂ ಕೃತ್ವಾ ಸರ್ವಸ್ವನಿಗ್ರಹಂ ।
ಶಕ್ತಿಯುಕ್ತಂ ತದೀಯಾಂಗಂ ವೀರಭದ್ರಃ ಕ್ಷಣಾತ್ತತಃ ॥ ೨೨ ॥

॥ ನಂದೀಶ್ವರ ಉವಾಚ ॥

ಅಥ ಬ್ರಹ್ಮಾದಯೋ ದೇವಾಶ್ಶಾರಭಂ ರೂಪಮಾಸ್ಥಿತಂ ।
ತುಷ್ಟುವುಃ ಶಂಕರಂ ದೇವಂ ಸರ್ವಲೋಕೈಕಶಂಕರಂ ॥ ೨೩ ॥

॥ ದೇವಾ ಊಚುಃ ॥

ಬ್ರಹ್ಮವಿಷ್ಣ್ವಿಂದ್ರಚಂದ್ರಾದಿಸುರಾಃ ಸರ್ವೇ ಮಹರ್ಷಯಃ ।
ದಿತಿಜಾದ್ಯಾಃ ಸಂಪ್ರಸೂತಾಸ್ತ್ವತ್ತಸ್ಸರ್ವೇ ಮಹೇಶ್ವರ ॥ ೨೪ ॥

ಬ್ರಹ್ಮವಿಷ್ಣುಮಹೇಂದ್ರಾಂಶ್ಚ ಸೂರ್ಯಾದ್ಯಾನಸುರಾನ್ಸುರಾನ್ ।
ತ್ವಂ ವೈ ಸೃಜಸಿ ಪಾಸ್ಯತ್ಸಿ ತ್ವಮೇವ ಸಕಲೇಶ್ವರ ॥ ೨೫ ॥

ಯತೋ ಹರಸಿ ಸಂಸಾರಂ ಹರ ಇತ್ಯುಚ್ಯತೇ ಬುಧೈಃ ।
ನಿಗೃಹೀತೋ ಹರಿರ್ಯಸ್ಮಾದ್ಧರ ಇತ್ಯುಚ್ಯತೇ ಬುಧೈಃ ॥ ೨೬ ॥

---

೨೨. ಬಳಿಕ ಆ ವೀರಭದ್ರನು ಕ್ಷಣಮಾತ್ರದಲ್ಲಿ ಆ ನರಸಿಂಹನ ದೇಹವೆಲ್ಲವನ್ನೂ ಹಿಂಡಿ ಮುಖವೊಂದು ಮಾತ್ರ ಉಳಿಯುವಂತೆ ಮಾಡಿದನು.

೨೩. ಎಲೈ ಸನತ್ಕುಮಾರನೇ, ಅನಂತರ ಬ್ರಹ್ಮಾದಿದೇವತೆಗಳು ಶರಭರೂಪಧಾರಿಯೂ ಸರ್ವಲೋಕಹಿತಕರನೂ ಆದ ಶಂಕರನನ್ನು ಭಕ್ತಿಯಿಂದ ಸ್ತೋತ್ರ ಮಾಡಿದರು.

೨೪. ಹೇ ಮಹೇಶ, ಬ್ರಹ್ಮ, ವಿಷ್ಣು, ಇಂದ್ರ, ಚಂದ್ರ ಮೊದಲಾದ ದೇವತೆಗಳೂ ಮಹರ್ಷಿಗಳೂ ದೈತ್ಯದಾನವರೂ ಎಲ್ಲರೂ ನಿನ್ನ ದೆಸೆಯಿಂದಲೇ ಹುಟ್ಟಿದರು.

೨೫. ಎಲೈ ಸರ್ವೇಶ್ವರನೆ, ಈ ಬ್ರಹ್ಮ, ವಿಷ್ಣು, ಮಹೇಂದ್ರ, ಸೂರ್ಯ ಮೊದಲಾದ ಸುರರನ್ನೂ ಅಸುರರನ್ನೂ ನೀನೇ ಸೃಷ್ಟಿಸುವೆ, ನೀನೇ ಪಾಲಿಸುವೆ, ನೀನೇ ಸಂಹರಿಸುವೆ.

೨೬. ನೀನು ಈ ಸಂಸಾರವನ್ನು ಪರಿಹರಿಸುವುದರಿಂದ ಅಥವಾ ಈರೀತಿ ಹರಿಯನ್ನು ನಿಗ್ರಹಿಸಿದೆಯಾದುದರಿಂದ ತಿಳಿದವರಾದ ವಿದ್ವಾಂಸರು ನಿನ್ನನ್ನು ಹರನೆಂದು ಕರೆಯುವರು.

ಯತೋ ಬಿಭರ್ಷಿ ಸಕಲಂ ವಿಭಜ್ಯ ತನುಮಷ್ಟಧಾ ।
ಅತೋಽಸ್ಮಾನ್ಪಾಹಿ ಭಗವನ್ಸುರಾನಾನ್ಯೈರಭೀಪ್ಸಿತೈಃ ॥ ೨೭ ॥

ತ್ವಂ ಮಹಾಪುರುಷಃ ಶಂಭುಃ ಸರ್ವೇಶಸ್ಸುರನಾಯಕಃ ।
ನಿಃಸ್ವಾತ್ಮಾ ನಿರ್ವಿಕಾರಾತ್ಮಾ ಪರಬ್ರಹ್ಮ ಸತಾಂ ಗತಿಃ ॥ ೨೮ ॥

ದೀನಬಂಧುರ್ದಯಾಸಿಂಧುರದ್ಭುತೋತಿಃ ಪರಾತ್ಮದೃಕ್ ।
ಪ್ರಾಜ್ಞೋ ವಿರಾಡ್ವಿಭುಸ್ಸತ್ಯಃ ಸಚ್ಚಿದಾನಂದಲಕ್ಷಣಃ ॥ ೨೯ ॥

॥ ನಂದೀಶ್ವರ ಉವಾಚ ॥

ಇತ್ಯಾಕರ್ಣ್ಯ ವಚಃ ಶಂಭುರ್ದೇವಾನಾಂ ಪರಮೇಶ್ವರಃ ।
ಉವಾಚ ತಾನ್ಸುರಾನ್ದೇವಮಹರ್ಷೀಂಶ್ಚ ಪುರಾತನಾನ್ ॥ ೩೦ ॥

ಯಥಾ ಜಲಂ ಜಲೇ ಕ್ಷಿಪ್ತಂ ಕ್ಷೀರೇ ಕ್ಷೀರಂ ಘೃತೇ ಘೃತಂ ।
ಏಕ ಏವ ತದಾ ವಿಷ್ಣುಃ ಶಿವೇ ಲೀನೋ ನ ಚಾನ್ಯಥಾ ॥ ೩೧ ॥

---

೨೭. ನೀನು ನಿನ್ನ ದೇಹವನ್ನೇ ಎಂಟುಭಾಗವಾಗಿ ವಿಭಾಗಿಸಿ ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವನ್ನೂ ಧರಿಸುವೆಯಲ್ಲವೇ ಆದುದರಿಂದ ನಮ್ಮಿಷ್ಟವಾದ ವರಗಳನ್ನಿತ್ತು ನಮ್ಮನ್ನು ಕಾಪಾಡು.

೨೮ ನೀನು ಮಹಾಪುರುಷನು, ಸರ್ವೇಶ್ವರನು, ದೇವತೆಗಳಿಗೆಲ್ಲಾ ಅಧಿಪತಿಯು, ಪಕ್ಷಪಾತವಿಲ್ಲದವನು, ವಿಕಾರರಹಿತನು, ಸತ್ಪುರುಷರಿಗೆಲ್ಲಾ ಏಕಮಾತ್ರಗತಿಯು, ನೀನೇ ಪರಬ್ರಹ್ಮನು

೨೯. ನೀನು ದೀನಬಂಧುವು, ಕರುಣಾಸಾಗರನು, ಅದ್ಭುತವಾದ ಲೀಲೆಗಳುಳ್ಳವನು, ಪರಾತ್ಮದರ್ಶಿಯು, ಪ್ರಾಜ್ಞನು, ವಿರಾಟ್ಪುರುಷನು, ವ್ಯಾಪಕನು, ತ್ರಿಕಾಲಾಬಾಧಿತನು, ಸಚ್ಚಿದಾನಂದಸ್ವರೂಪನು ಎಂದರು

೩೦. ಎಲೈ ಸನತ್ಕುಮಾರನೇ, ಹೀಗೆ ದೇವತೆಗಳು ಹೇಳಿದ ನುಡಿಯನ್ನು ಕೇಳಿ ಆ ಶಂಕರನು ಅವರೆಲ್ಲರನ್ನೂ ಕುರಿತು ಇಂತೆಂದು ನುಡಿದನು

೩೧. ನೀರಿನಲ್ಲಿ ಸೇರಿದ ನೀರೂ, ಹಾಲಿನಲ್ಲಿ ಬೆರೆವ ಹಾಲೂ, ತುಪ್ಪದಲ್ಲಿ ಬಿದ್ದ ತುಪ್ಪವೂ ಹೇಗೆ ಒಂದೇ ಎನಿಸುವುದೋ ಅದೇರೀತಿ ಶಿವನಲ್ಲಿ ಸೇರಿಹೋಗಿ ವಿಷ್ಣುವೂ ಐಕ್ಯವನ್ನೇ ಹೊಂದಿಬಿಟ್ಟನಲ್ಲದೆ ಬೇರೆಯಲ್ಲ

ಏಕೋ ವಿಷ್ಣುರ್ನೃಸಿಂಹಾತ್ಮಾ ಸದರ್ಪಶ್ಚ ಮಹಾಬಲಃ ।
ಜಗತ್ಸಂಹಾರಕರಣೇ ಪ್ರವೃತ್ತೋ ನರಕೇಸರೀ ॥ ೩೨ ।

ಪ್ರಾರ್ಥನೀಯೋ ನಮಸ್ತಸ್ಮೈ ಮದ್ಭಕ್ತೈಃ ಸಿದ್ಧಿಕಾರಿಭಿಃ ।
ಮದ್ಭಕ್ತಪ್ರವರಶ್ಚೈವ ಮದ್ಭಕ್ತವರದಾಯಕಃ ॥ ೩೩ ॥

॥ ನಂದೀಶ್ವರ ಉವಾಚ ॥

ಏತಾವದುಕ್ತ್ವಾ ಭಗವಾನ್ಪಕ್ಷಿರಾಜೋ ಮಹಾಬಲಃ ।
ಪಶ್ಯತಾಂ ಸರ್ವದೇವಾನಾಂ ತತ್ರೈವಾಂತರಧೀಯತ ॥ ೩೪ ॥

ವೀರಭದ್ರೋಽಪಿ ಭಗವಾನ್ಗಣಾಧ್ಯಕ್ಷೋ ಮಹಾಬಲಃ ।
ನೃಸಿಂಹಕೃತ್ತಿಂ ನಿಷ್ಕೃಷ್ಯ ಸಮಾದಾಯ ಯಯೌ ಗಿರಿಂ ॥ ೩೫ ॥

ನೃಸಿಂಹಕೃತ್ತಿವಸನಸ್ತದಾಪ್ರಭೃತಿ ಶಂಕರಃ ।
ತದ್ವಕ್ತ್ರಂ ಮುಂಡಮಾಲಾಯಾಂ ನಾಯಕತ್ವೇನ ಕಲ್ಪಿತಂ ॥ ೩೬ ॥

---

೩೨. ಅದೇ ವಿಷ್ಣುವೇ ದರ್ಪಶೀಲನಾಗಿಯೂ ಮಹಾಬಲಿಷ್ಠನಾಗಿಯೂ ನೃಸಿಂಹರೂಪವನ್ನು ತಾಳಿ ಜಗತ್ಸಂಹಾರದಲ್ಲಿ ತೊಡಗಿದ್ದನು.

೩೩. ನನ್ನ ಭಕ್ತರಲ್ಲೆಲ್ಲಾ ಶ್ರೇಷ್ಠನೂ ನನ್ನ ಭಕ್ತರಿಗೆ ವರಗಳನ್ನು ಈಯುವವನೂ ಆದ ಆ ವಿಷ್ಣುವನ್ನು, ಸಿದ್ಧಿಯನ್ನು ಅಪೇಕ್ಷಿಸುವಂತಹ ನನ್ನ ಭಕ್ತರೆಲ್ಲರೂ ಪ್ರಾರ್ಥಿಸಬೇಕು, ನಮಸ್ಕರಿಸಬೇಕು.

೩೪. ಎಲೈ ಮುನಿಯೇ, ಹೀಗೆಂದು ನುಡಿದು ಮಹಾಬಲಾಢ್ಯನೂ ಭಗವಂತನೂ ಆದ ಆ ಶರಭಮೂರ್ತಿಯು, ಎಲ್ಲ ದೇವತೆಗಳೂ ನೋಡುತ್ತಿರುವಂತೆ ಅಲ್ಲಿಯೇ ಅಂತರ್ಧಾನನಾದನು.

೩೫ ಪ್ರಮಥರಿಗೆ ಮುಂದಾಳಾದವನೂ ಬಲಶಾಲಿಯೂ ಆದ ವೀರಭದ್ರನು ನರಸಿಂಹನ ಚರ್ಮವನ್ನು ಸುಲಿದು ಅದನ್ನು ತೆಗೆದುಕೊಂಡು ಕೈಲಾಸಪರ್ವತಕ್ಕೆ ತೆರಳಿದನು.

೩೬. ಅದು ಮೊದಲುಗೊಂಡು ಶಿವನು ನರಸಿಂಹನ ಚರ್ಮವನ್ನು ಹೊದಿಯುತ್ತಾಬಂದನು. ಆ ನರಸಿಂಹನ ಮುಖವು ಶಿವನ ರುಂಡಮಾಲೆಯಲ್ಲಿ ಪದಕದಂತೆ ಮಧ್ಯಮಣಿಯಾಗಿ ಪೋಣಿಸಲ್ಪಟ್ಟಿತು.

ತತೋ ದೇವಾ ನಿರಾತಂಕಾಃ ಕೀರ್ತಯಂತಃ ಕಥಾಮಿಮಾಂ ।
ವಿಸ್ಮಯೋತ್ಫುಲ್ಲನಯನಾ ಜಗ್ಮುಃ ಸರ್ವೇ ಯಥಾಗತಂ ॥ ೩೭ ॥

ಯ ಇದಂ ಪರಮಾಖ್ಯಾನಂ ಪುಣ್ಯಂ ವೇದರಸಾನ್ವಿತಂ ।
ಪಠತಿ ಶೃಣುಯಾಚ್ಚೈವ ಸರ್ವಾನ್ಕಾಮಾನವಾಪ್ನುಯಾತ್ ॥ ೩೮ ॥

ಧನ್ಯಂ ಯಶಸ್ಯಮಾಯುಷ್ಯಮಾರೋಗ್ಯಂ ಪುಷ್ಟಿವರ್ಧನಂ ।
ಸರ್ವವಿಘ್ನಪ್ರಶಮನಂ ಸರ್ವವ್ಯಾಧಿವಿನಾಶನಂ ॥ ೩೯ ॥

ದುಃಖಪ್ರಶಮನಂ ವಾಂಛಾಸಿದ್ಧಿದಂ ಮಂಗಲಾಲಯಂ ।
ಅಪಮೃತ್ಯುಹರಂ ಬುದ್ಧಿಪ್ರದಂ ಶತ್ರುವಿನಾಶನಂ ॥ ೪೦ ॥

ಇದಂ ತು ಶರಭಾಕಾರಂ ಪರಂ ರೂಪಂ ಪಿನಾಕಿನಃ ।
ಪ್ರಕಾಶನೀಯಂ ಭಕ್ತೇಷು ಶಂಕರಸ್ಯ ಚರೇಷು ವೈ ॥ ೪೧ ॥

---

೩೭. ಬಳಿಕ ದೇವತೆಗಳೆಲ್ಲರೂ ತಮ್ಮ ಕಳವಳವನ್ನೆಲ್ಲಾ ತೊರೆದು ಈ ಕಥೆಯನ್ನೇ ಹೇಳಿಕೊಳ್ಳುತ್ತಾ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವರಾಗಿ ತಾವುತಾವು ಬಂದಂತೆ ಹೊರಟುಹೋದರು

೩೮ ಯಾವನು ಈ ಪುಣ್ಯಕರವೂ ವೇದಸಾರವನ್ನೊಳಗೊಂಡ ಶ್ರೇಷ್ಠವೂ ಆದ ಉಪಾಖ್ಯಾನವನ್ನು ಓದುವನೋ ಅಥವಾ ಕೇಳುವನೋ ಅವನು ಎಲ್ಲಾ ಇಷ್ಟಾರ್ಥಗಳನ್ನೂ ಪಡೆಯುವನು.

೩೯. ಈ ಚರಿತ್ರವು ಧನ್ಯವಾದುದು. ಯಶಸ್ಸನ್ನೂ ಆಯುಸ್ಸನ್ನೂ ಹೆಚ್ಚಿಸುವುದು ಆರೋಗ್ಯವನ್ನಿತ್ತು ಪುಷ್ಟಿಯನ್ನೂ ಕೊಡುವುದು. ಎಲ್ಲ ವಿಘ್ನಗಳನ್ನೂ ಪರಿಹರಿಸುವುದು ಎಲ್ಲ ರೋಗಗಳನ್ನೂ ನಿವಾರಣೆಮಾಡುವುದು

೪೦. ಈ ಚರಿತ್ರದಿಂದ ದುಃಖಗಳು ಕೊನೆಗಾಣುವುವು. ಆಸೆಪಟ್ಟ ವಸ್ತುವು ಸಿದ್ಧಿಸುವುದು ಮಂಗಲಗಳು ಉಂಟಾಗುವುವು ಅಪಮೃತ್ಯುವು ನಾಶವಾಗುವುದು. ಬುದ್ಧಿಯು ಬೆಳೆಯುವುದು. ಶತ್ರುಗಳು ವಿನಾಶವನ್ನು ಹೊಂದುವರು.

೪೧. ಶಿವನ ನಾನಾರೂಪಗಳಲ್ಲಿ ಶ್ರೇಷ್ಠವೆನಿಸಿದ ಈ ಶರಭಸ್ವರೂಪವನ್ನು ಆ ಶಂಕರನ ಭಕ್ತರಲ್ಲಿಯೂ ಚರರಲ್ಲಿಯೂ ವಿಶೇಷವಾಗಿ ಪ್ರಚಾರಪಡಿಸಬೇಕು.

ತೈರೇವ ಪಠಿತವ್ಯಂ ಚ ಶ್ರೋತವ್ಯಂ ಚ ಶಿವಾತ್ಮಭಿಃ ।
ನವಧಾ ಭಕ್ತಿದಂ ದಿವ್ಯಮಂತಃಕರಣಬುದ್ಧಿದಂ ॥ ೪೨ ॥

ಶಿವೋತ್ಸವೇಷು ಸರ್ವೇಷು ಚತುರ್ದಶ್ಯಷ್ಟಮೀಷು ಚ ।
ಪಠೇತ್ಪ್ರತಿಷ್ಠಾಕಾಲೇ ತು ಶಿವಸನ್ನಿಧಿಕಾರಣಂ ॥ ೪೩ ॥

ಚೌರವ್ಯಾಘ್ರನೃಸಿಂಹಾತ್ಮಕೃತರಾಜಭಯೇಷು ಚ ।
ಅನ್ಯೇಷೂತ್ಪಾತಭೂಕಂಪದಸ್ಯ್ವಾದಿಪಾಂಶುವೃಷ್ಟಿಷು ॥ ೪೪ ॥

ಉಲ್ಕಾಪಾತೇ ಮಹಾವಾತೇ ವಿನಾವೃಷ್ಟ್ಯತಿ ವೃಷ್ಟಿಷು ।
ಪಠೇದ್ಯಃ ಪ್ರಯತೋ ವಿದ್ವಾಂಚ್ಛಿವಭಕ್ತೋ ದೃಢವ್ರತಃ ॥ ೪೫ ॥

---

೪೨. ಅವರೂ ಸಹ ಸರ್ವದಾ ಶಿವನನ್ನೇ ನೆನೆಯುತ್ತಾ ಈ ಚರಿತವನ್ನು ಓದಬೇಕು, ಕೇಳಬೇಕು. ಈ ಚರಿತವು ಒಂಭತ್ತುವಿಧವಾಗಿ ಭಕ್ತಿಯನ್ನು ಬೆಳೆಸುವುದು ಮತ್ತು ದಿವ್ಯವಾದುದು. ಮನಸ್ಸಿಗೆ ನಿರ್ಮಲವಾದ ಜ್ಞಾನವನ್ನು ನೀಡುವುದು.

೪೩. ಈ ಚರಿತ್ರವನ್ನು ಎಲ್ಲಿ ಕೀರ್ತನೆಮಾಡುವರೋ ಅಲ್ಲಿ ಶಿವನು ಸನ್ನಿಹಿತನಾಗಿರುವನು. ಆದುದರಿಂದ ಎಲ್ಲಾ ಶಿವೋತ್ಸವಗಳಲ್ಲಿಯೂ ಶಿವಪ್ರತಿಷ್ಠಾಸಮಯದಲ್ಲಿಯೂ ಮತ್ತು ಚತುರ್ದಶೀ ಅಷ್ಟಮೀದಿನಗಳಲ್ಲಿಯೂ ಇದನ್ನು ಕೀರ್ತಿಸಬೇಕು.

೪೪. ಕಳ್ಳಕಾಕರರು, ಹುಲಿ, ಸಿಂಹ, ಮನುಷ್ಯ, ತಾನು ಮತ್ತು ಅರಸು ಇವರುಗಳಿಂದ ಹೆದರಿಕೆಯು ಉಂಟಾದರೂ ಬೇರೆರೀತಿಯ ಉತ್ಪಾತಗಳು ಎಂದರೆ ಭೂಕಂಪ, ದರೋಡೆಗಾರರು, ಧೂಳಿನ ಮಳೆ ಮುಂತಾದುವು ಸಂಭವಿಸಿದಾಗಲೂ,

೪೫. ಮತ್ತು ಉಲ್ಕಾಪಾತ (ಕೊಳ್ಳಿಗಳು ಉದುರುವುದು) ಬಿರುಗಾಳಿ, ಅನಾವೃಷ್ಟಿ, ಮಿತಿಮೀರಿದ ಮಳೆ ಮುಂತಾದ ಸಮಯಗಳಲ್ಲಿಯೂ ಯಾವ ವಿವೇಕಿಯು ಶುಚಿಯಾಗಿ ಶಿವನಲ್ಲಿ ಭಕ್ತಿಯಿಟ್ಟು ನಿಷ್ಠೆಯಿಂದ ಪಾರಾಯಣಮಾಡುವನೋ ಆತನಿಗೆ ಯಾವೊಂದು ಭಯವೂ ಆಗುವುದಿಲ್ಲ

ಯಃ ಪಠೇಚ್ಛೃಣುಯಾದ್ವಾಪಿ ನಿಷ್ಕಾಮೋ ವ್ರತನ್ಯೈಶ್ವರಂ ।
ರುದ್ರಲೋಕಂ ಸಮಾಸಾದ್ಯ ರುದ್ರಸ್ಯಾನುಚರೋ ಭವೇತ್ ॥ ೪೬ ॥

ರುದ್ರಲೋಕಮನುಪ್ರಾಪ್ಯ ರುದ್ರೇಣ ಸಹ ಮೋದತೇ ।
ತತಸ್ಸಾಯುಜ್ಯಮಾಪ್ನೋತಿ ಶಿವಸ್ಯ ಕೃಪಯಾ ಮುನೇ ॥ ೪೭ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಶರಭಾವತಾರವರ್ಣನಂ ನಾಮ ದ್ವಾದಶೋಽಧ್ಯಾಯಃ

---

೪೬-೪೭. ಎಲೈ ಮುನಿಯೇ, ಯಾವನು ನಿಷ್ಕಾಮನಾಗಿ ಈಶಿವಚರಿತ್ರವನ್ನು ಓದುವನೋ ಅಥವಾ ಕೇಳುವನೋ ಅವನು ಶಿವಲೋಕಕ್ಕೆ ಹೋಗಿ ಶಿವನ ಅನುಚರನಾಗಿ ಆ ಶಿವನೊಡನೆಯೇ ಸಂತೋಷದಿಂದಿರುತ್ತಾ ಕೊನೆಗೆ ಆ ಶಿವನ ಕೃಪೆಯಿಂದಲೇ ಆ ಶಿವನಲ್ಲೇ ಐಕ್ಯವನ್ನು ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಶರಭಾವತಾರವರ್ಣನವೆಂಬ ಹನ್ನೆರಡನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

# ತ್ರಯೋದಶೋಽಧ್ಯಾಯಃ



|| ನಂದೀಶ್ವರ ಉವಾಚ ||

**ಶೃಣು ಬ್ರಹ್ಮಸುತ ಪ್ರೀತ್ಯಾ ಚರಿತಂ ಶಶಿಮೌಲಿನಃ ।**
**ಸೋಽವತೀರ್ಣೋ ಯಥಾ ಪ್ರೀತ್ಯಾ ವಿಶ್ವಾನರಗೃಹೇ ಶಿವಃ ॥ ೧ ॥**

**ನಾಮ್ನಾ ಗೃಹಪತಿಃ ಸೋಽಭೂದಗ್ನಿಲೋಕಪತಿರ್ಮುನೇ ।**
**ಅಗ್ನಿರೂಪಸ್ತ್ರೈಜಸಶ್ಚ ಸರ್ವಾತ್ಮಾ ಪರಮಃ ಪ್ರಭುಃ ॥ ೨ ॥**

---

## ಹದಿಮೂರನೆಯ ಅಧ್ಯಾಯವು.

೧. ನಂದಿಕೇಶ್ವರನು ಸನತ್ಕುಮಾರನನ್ನು ಕುರಿತು ಹೇಳತೊಡಗಿದನು :— ಎಲೈ ಬ್ರಹ್ಮಪುತ್ರನೇ, ಶಿವನ ಚರಿತವನ್ನು ಪ್ರೀತಿಯಿಂದ ಕೇಳು. ಆ ಶಿವನು ವಿಶ್ವಾನರನ ಮನೆಯಲ್ಲಿ ಪ್ರೀತಿಯಿಂದ ಅವತರಿಸಿದ ಬಗೆಯನ್ನು ನಿನಗೆ ವಿವರಿಸುವೆನು.

೨. ಓ ಮುನೀಂದ್ರ, ಆ ಸರ್ವಸ್ವರೂಪನೂ ಪ್ರಭುವೂ ಆದ ಪರಮ ಪುರುಷನು, ಗೃಹಪತಿಯೆಂಬ ಹೆಸರನ್ನು ಧರಿಸಿ ಅಗ್ನಿಲೋಕಕ್ಕೆ ಅಧಿಪತಿಯಾಗಿ ತೇಜೋಮಯನಾದ ಅಗ್ನಿಸ್ವರೂಪನಾದನು.

ನರ್ಮದಾಯಾಸ್ತಟೇ ರಮ್ಯೇ ಪುರೇ ನರ್ಮಪುರೇ ಪುರಾ ।
ಪುರಾರಿಭಕ್ತಃ ಪುಣ್ಯಾತ್ಮಾಭವದ್ವಿಶ್ವಾನರೋ ಮುನಿಃ ॥ ೩ ॥

ಬ್ರಹ್ಮಚರ್ಯಾಶ್ರಮೇ ನಿಷ್ಠೋ ಬ್ರಹ್ಮಯಜ್ಞರತಸ್ಸದಾ ।
ಶಾಂಡಿಲ್ಯಗೋತ್ರಃ ಶುಚಿಮಾನ್ಬ್ರಹ್ಮತೇಜೋನಿಧಿರ್ವಶೀ ॥ ೪ ॥

ವಿಜ್ಞಾತಾಖಿಲಶಾಸ್ತ್ರಾರ್ಥಸ್ಸದಾಚಾರರತಸ್ಸದಾ ।
ಶೈವಾಚಾರಪ್ರವೀಣೋತಿ ಲೌಕಿಕಾಚಾರವಿದ್ವರಃ ॥ ೫ ॥

ಚಿತ್ತೇ ವಿಚಾರ್ಯ ಗೃಹಿಣೀಗುಣಾನ್ವಿಶ್ವಾನರಃ ಶುಭಾನ್ ।
ಉದುವಾಹ ವಿಧಾನೇನ ಸ್ವೋಚಿತಾಂ ಕಾಲಕನ್ಯಕಾಂ ॥ ೬ ॥

---

೩. ಹಿಂದೆ ನರ್ಮದಾನದಿಯ ದಡದಲ್ಲಿ ನರ್ಮಪುರವೆಂಬ ಪಟ್ಟಣವಿದ್ದಿತು. ಅಲ್ಲಿ ವಿಶ್ವಾನರನೆಂಬ ಮುನಿಯು ಇದ್ದನು. ಅವನು ಶಿವನಲ್ಲಿ ವಿಶೇಷವಾದ ಭಕ್ತಿಯನ್ನಿಟ್ಟಿದ್ದನು. ಮತ್ತು ಪುಣ್ಯಶೀಲನಾಗಿದ್ದನು.

೪. ಆತನು ಬ್ರಹ್ಮಚರ್ಯಾಶ್ರಮದಲ್ಲಿರುತ್ತಾ ಸರ್ವದಾ ವೇದಾಧ್ಯಯನನಿರತನಾಗಿದ್ದನು. ಆ ಮುನಿಯು ಶಾಂಡಿಲ್ಯಗೋತ್ರದಲ್ಲಿ ಉತ್ಪನ್ನನಾಗಿದ್ದನು. ಆತನು ಮಹಾಶುದ್ಧನಾಗಿಯೂ ಜಿತೇಂದ್ರಿಯನಾಗಿಯೂ ಇರುತ್ತಾ ಬ್ರಹ್ಮತೇಜಸ್ಸಿನಿಂದ ಮೆರೆಯುತ್ತಿದ್ದನು.

೫ ಅವನು ಎಲ್ಲಾ ಶಾಸ್ತ್ರಾರ್ಥಗಳನ್ನೂ ಬಲ್ಲವನು. ಯಾವಾಗಲೂ ಸದಾಚಾರದಲ್ಲೇ ಆಸಕ್ತನು ವಿಶೇಷವಾಗಿ ಶೈವಸಂಪ್ರದಾಯದಲ್ಲಿ ಅಭಿಜ್ಞನು ಲೌಕಿಕ ವ್ಯವಹಾರಗಳಲ್ಲೂ ಚತುರನು.

೬. ಆ ವಿಶ್ವಾನರಮುನಿಯು, ಗೃಹಿಣಿಗೆ ಇರಬೇಕಾದ ಒಳ್ಳೆಯ ಗುಣಗಳೆಲ್ಲವನ್ನೂ ಚೆನ್ನಾಗಿ ಪರಿಶೀಲಿಸಿ ತನಗೆ ಒಪ್ಪುವ ಕನ್ಯೆಯೊಬ್ಬಳನ್ನು ವಿಧಿಪೂರ್ವಕವಾಗಿ ಮದುವೆಯಾದನು.

ಅಗ್ನಿಶುಶ್ರೂಷಣರತಃ ಪಂಚಯಜ್ಞಪರಾಯಣಃ ।
ಷಟ್ಕರ್ಮನಿರತೋ ನಿತ್ಯಂ ದೇವಪಿತ್ರತಿಥಿಪ್ರಿಯಃ ॥ ೭ ॥

ಏವಂ ಬಹುತಿಥೇ ಕಾಲೇ ಗತೇ ತಸ್ಯಾಗ್ರಜನ್ಮನಃ ।
ಭಾರ್ಯಾ ಶುಚಿಷ್ಮತೀ ನಾಮ ಭರ್ತಾರಂ ಪ್ರಾಹ ಸುವ್ರತಾ ॥ ೮ ॥

ನಾಥ ಭೋಗಾ ಮಯಾ ಸರ್ವೇ ಭುಕ್ತಾ ವೈ ತ್ವತ್ಪ್ರಸಾದತಃ ।
ಸ್ತ್ರೀಣಾಂ ಸಮುಚಿತಾ ಯೇ ಸ್ಯುಸ್ತ್ವಾಂ ಸಮೇತ್ಯ ಮುದಾವಹಾಃ ॥ ೯ ॥

ಏವಂ ಮೇ ಪ್ರಾರ್ಥಿತಂ ನಾಥ ಚಿರಾಯ ಹೃದಿ ಸಂಸ್ಥಿತಂ ।
ಗೃಹಸ್ಥಾನಾಂ ಸಮುಚಿತಂ ತ್ವಮೇತದ್ದಾತುಮರ್ಹಸಿ ॥ ೧೦ ॥

---

೭. ಅನಂತರ ಗೃಹಸ್ಥನಾದ ಆ ಮುನಿಯು ಪ್ರತಿನಿತ್ಯವೂ ಅಗ್ನ್ಯುಪಾಸನವನ್ನು ಮಾಡುತ್ತಾ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ, ಅತಿಥಿ ಯಜ್ಞಗಳಲ್ಲಿ ಆಸಕ್ತನಾಗಿ, ಯಜನ, ಯಾಜನ ಮುಂತಾದ ಷಟ್ಕರ್ಮಗಳನ್ನು ತಪ್ಪದೆ ನಡೆಸುತ್ತಾ ದೇವತೆಗಳಿಗೂ ಪಿತೃಗಳಿಗೂ ಅತಿಥಿಗಳಿಗೂ ಪ್ರಿಯನೆನಿಸಿದ್ದನು.

೮. ಈರೀತಿ ಅನೇಕ ದಿವಸಗಳು ಕಳೆದುಹೋದುವು. ಒಂದುದಿನ ಆ ಬ್ರಾಹ್ಮಣನ ಪತ್ನಿಯೂ ಮಹಾಪತಿವ್ರತೆಯೂ ಆದ ಶುಚಿಷ್ಮತಿಯೆಂಬುವಳು ಗಂಡನನ್ನು ಕುರಿತು ಇಂತೆಂದಳು.

೯. ನಾಥ, ನಿನ್ನ ಅನುಗ್ರಹದಿಂದ ಸ್ತ್ರೀಯರಿಗೆ ಉಚಿತವೆನಿಸಿದ ಸಂತೋಷ ದಾಯಕವಾದ ಸಕಲ ಭೋಗಗಳನ್ನೂ ನಿನ್ನನ್ನು ಸೇರಿ ನಾನು ಅನುಭವಿಸಿದೆನು.

೧೦. ಎಲೈ ಕಾಂತನೇ, ಬಹುದಿನಗಳಿಂದಲೂ ಒಂದು ಪ್ರಾರ್ಥನೆಯು ನನ್ನ ಹೃದಯದಲ್ಲಿಯೇ ನಿಂತುಬಿಟ್ಟಿದೆ ಅದು ಗೃಹಸ್ಥರಾದವರಿಗೆ ಯೋಗ್ಯವಾದುದೇ. ಆ ಪ್ರಾರ್ಥನೆಯನ್ನು ನೀನು ಸಲ್ಲಿಸಬೇಕಾಗಿದೆ ಎಂದಳು.

। ವಿಶ್ವಾನರ ಉವಾಚ ॥

ಕಿಮದೇಯಂ ಹಿ ಸುಶ್ರೋಣಿ ತವ ಪ್ರಿಯಹಿತೈಷಿಣಿ ।
ತತ್ಪ್ರಾರ್ಥಯ ಮಹಾಭಾಗೇ ಪ್ರಯಚ್ಛಾಮ್ಯವಿಲಂಬಿತಂ ॥ ೧೧ ॥

ಮಹೇಶಿತುಃ ಪ್ರಸಾದೇನ ಮಮ ಕಿಂಚಿನ್ನ ದುರ್ಲಭಂ ।
ಇಹಾಮುತ್ರ ಚ ಕಲ್ಯಾಣಿ ಸರ್ವಕಲ್ಯಾಣಕಾರಿಣಃ ॥ ೧೨ ॥

॥ ನಂದೀಶ್ವರ ಉವಾಚ ॥

ಇತ್ಯಾಕರ್ಣ್ಯ ವಚಃ ಪತ್ಯುಸ್ತಸ್ಯ ಸಾ ಪತಿದೇವತಾ ।
ಉವಾಚ ಹೃಷ್ಯವದನಾ ಕರೌ ಬಧ್ವಾ ವಿನೀತಿಕಾ ॥ ೧೩ ॥

॥ ಶುಚಿಷ್ಮತ್ಯುವಾಚ ॥

ವರಯೋಗ್ಯಾಸ್ಮಿ ಚೇನ್ನಾಥ ಯದಿ ದೇಯೋ ವರೋ ಮಮ ।
ಮಹೇಶಸದೃಶಂ ಪುತ್ರಂ ದೇಹಿ ನಾನ್ಯಂ ವರಂ ವೃಣೇ ॥ ೧೪ ॥

---

೧೧ ಹೀಗೆ ಶುಚಿಷ್ಮತಿಯು ನುಡಿಯಲು ವಿಶ್ವಾನರಮುನಿಯು ಆಕೆಯನ್ನು ಕುರಿತು ಎಲೈ ಸುಶ್ರೋಣಿ (ನಿತಂಬಿನಿ) ಪ್ರಿಯನಿಗೆ ಯಾವಾಗಲೂ ಹಿತವನ್ನೇ ಬಯಸುವ ನಿನಗೆ ನಾನು ಕೊಡಬಾರದಂತಹುದು ಯಾವುದಿದೆ ? ಎಲೌ ಭಾಗ್ಯವತಿಯೇ, ನಿನ್ನ ಮನಸ್ಸಿನಲ್ಲಿರುವ ಕೋರಿಕೆಯೇನು ಕೇಳು, ಸ್ವಲ್ಪವೂ ತಡಮಾಡದೆ ಕೊಟ್ಟುಬಿಡುವೆನು.

೧೨. ಎಲೌ ಮಂಗಲಾಂಗಿಯೇ, ಸರ್ವಮಂಗಲದಾಯಕನಾದ ಆ ಮಹೇಶ್ವರನ ಅನುಗ್ರಹದಿಂದ ಇಹದಲ್ಲಿಯೂ ಪರದಲ್ಲಿಯೂ ನನಗೆ ದುರ್ಲಭವಾದುದು ಯಾವುದೂ ಇಲ್ಲ ಎಂದನು.

೧೩ ಎಲೈ ಮುನಿಯೇ, ಈರೀತಿ ತನ್ನ ಗಂಡನು ನುಡಿದ ಮಾತನ್ನು ಕೇಳಿ ಆ ಪತಿವ್ರತೆಯು ಸಂತೋಷದಿಂದ ಮುಖವರಳಲು, ವಿನಯದಿಂದ ಕೈಮುಗಿದುಕೊಂಡು ಇಂತೆಂದಳು

೧೪. ಎಲೈ ಕಾಂತನೇ, ವರಗಳನ್ನು ಪಡೆಯಲು ನಾನರ್ಹಳಾಗಿದ್ದರೆ ನೀನೂ ಸಹ ವರವನ್ನು ಕೊಡಬೇಕೆಂದು ಇಷ್ಟಪಟ್ಟರೆ ನನಗೆ ಶಿವನಂತಹ ಸುಪುತ್ರನನ್ನು ಕರುಣಿಸು. ಮತ್ತಿನ್ನಾವವರವೂ ಬೇಡ ಎಂದಳು.

॥ ನಂದೀಶ್ವರ ಉವಾಚ ॥

ಇತಿ ತಸ್ಯಾ ವಚಶ್ಶ್ರುತ್ವಾ ಬ್ರಾಹ್ಮಣಸ್ಸ ಶುಚಿವ್ರತಃ ।
ಕ್ಷಣಂ ಸಮಾಧಿಮಾಧಾಯ ಹೃದ್ಯೇತತ್ಸಮಚಿಂತಯತ್ ॥ ೧೫ ॥

ಅಹೋ ಕಿಂ ಮೇ ತಯಾ ತನ್ವ್ಯಾ ಪ್ರಾರ್ಥಿತಂ ಹ್ಯತಿದುರ್ಲಭಂ ।
ಮನೋರಥಪಥಾದ್ದೂರಮಸ್ತು ವಾ ಸ ಹಿ ಸರ್ವಕೃತ್ ॥ ೧೬ ॥

ತೇನೈವಾಸ್ಯಾ ಮುಖೇ ಸ್ಥಿತ್ವಾ ವಾಕ್ಸ್ವರೂಪೇಣ ಶಂಭುನಾ ।
ವ್ಯಾಹೃತಂ ಕೋऽನ್ಯಥಾ ಕರ್ತುಮುತ್ಸಹೇತ ಭವೇದಿದಂ ॥ ೧೭ ॥

॥ ನಂದೀಶ್ವರ ಉವಾಚ ॥

ಇತಿ ಸಂಚಿಂತ್ಯ ಸ ಮುನಿರ್ವಿಶ್ವಾನರ ಉದಾರಧೀಃ ।
ತತಃ ಪ್ರೋವಾಚ ತಾಂ ಪತ್ನೀಮೇಕಪತ್ನೀವ್ರತೇ ಸ್ಥಿತಃ ॥ ೧೮ ॥

---

೧೫. ಎಲೈ ಸನತ್ಕುಮಾರನೇ, ಈರೀತಿ ಶುಚಿಸ್ಮಿತಿಯಾಡಿದ ಮಾತನ್ನು ಕೇಳಿ ಪರಿಶುದ್ಧಚರಿತನಾದ ಆ ವಿಶ್ವಾನರನು ಕ್ಷಣಕಾಲ ಸಮಾಧಿಮಗ್ನನಾಗಿದ್ದು ಬಳಿಕ ಮನಸ್ಸಿನಲ್ಲಿ ಇಂತು ಆಲೋಚಿಸಿದನು.

೧೬. ಅಬ್ಬಾ ! ನನ್ನ ಪ್ರಿಯೆಯಾದ ಈಕೆಯು ಎಂತಹ ಅತಿ ದುರ್ಲಭವಾದುದನ್ನು ಪ್ರಾರ್ಥಿಸಿಬಿಟ್ಟಳು. ಅದು ಮನೋರಥಗಳಿಗೂ ನಿಲುಕದಿರುವುದಲ್ಲಾ, ಇರಲಿ. ಆ ಶಿವನೇ ಎಲ್ಲವನ್ನೂ ನಡೆಸುವನು.

೧೭. ಆ ಶಿವನೇ ಇವಳ ಮುಖದಲ್ಲಿದ್ದು ಈ ವಾಕ್ಯರೂಪವಾಗಿ ಹೇಳಿಸಿರುವನು. ಈ ಮಾತನ್ನು ಯಾವನುತಾನೇ ಬೇರೆವಿಧವಾಗಿ ಮಾಡಲು ಉತ್ಸಾಹ ಪಡುವನು

೧೮. ಎಲೈ ಮುನೀಂದ್ರನೇ, ಏಕಪತ್ನೀವ್ರತನೂ ಉದಾರಹೃದಯನೂ ಆದ ಆ ವಿಶ್ವಾನರಮುನಿಯು ಈರೀತಿ ತನ್ನೊಳಗಾಲೋಚಿಸಿ ಬಳಿಕ ತನ್ನ ಮಡದಿಯನ್ನು ಕುರಿತು ಹಾಗೆಯೇ ಆಗಲೆಂದನು.

॥ ನಂದೀಶ್ವರ ಉವಾಚ ॥

ಇತ್ಥಮಾಶ್ವಾಸ್ಯ ತಾಂ ಪತ್ನೀಂ ಜಗಾಮ ತಪಸೇ ಮುನಿಃ ।
ಯತ್ರ ವಿಶ್ವೇಶ್ವರಃ ಸಾಕ್ಷಾತ್ಕಾಶೀನಾಥೋಽಧಿತಿಷ್ಠತಿ ॥ ೧೯ ॥

ಪ್ರಾಪ್ಯ ವಾರಾಣಸೀಂ ತೂರ್ಣಂ ದೃಷ್ಟ್ವಾ ತಾಂ ಮಣಿಕರ್ಣಿಕಾಂ ।
ತತ್ಯಾಜ ತಾಪತ್ರಿತಯಮಪಿ ಜನ್ಮಶತಾರ್ಜಿತಂ ॥ ೨೦ ॥

ದೃಷ್ಟ್ವಾ ಸರ್ವಾಣಿ ಲಿಂಗಾನಿ ವಿಶ್ವೇಶಪ್ರಮುಖಾನಿ ಚ ।
ಸ್ನಾತ್ವಾ ಸರ್ವೇಷು ಕುಂಡೇಷು ವಾಪೀಕೂಪಸರಸ್ಸು ಚ ॥ ೨೧ ॥

ನತ್ವಾ ವಿನಾಯಕಾನ್ಸರ್ವಾನ್ಗೌರೀಂ ಶರ್ವಾಂ ಪ್ರಣಮ್ಯ ಚ ।
ಸಂಪೂಜ್ಯ ಕಾಲರಾಜಂ ಚ ಭೈರವಂ ಪಾಪಭಕ್ಷಣಂ ॥ ೨೨ ॥

ದಂಡನಾಯಕಮುಖ್ಯಾಂಶ್ಚ ಗಣಾನ್ ಸ್ತುತ್ವಾ ಪ್ರಯತ್ನತಃ ।
ಆದಿಕೇಶವಮುಖ್ಯಾಂಶ್ಚ ಕೇಶವಂ ಪರಿತೋಷ್ಯ ಚ ॥ ೨೩ ॥

---

೧೯. ಈರೀತಿಯಾಗಿ ತನ್ನ ಸತಿಯನ್ನು ಸಂತೈಸಿ ಕಾಶೀನಾಥನಾದ ಆ ವಿಶ್ವೇಶ್ವರನೇ ಸಾಕ್ಷಾತ್ ಎಲ್ಲಿ ನೆಲಸಿರುವನೋ ಆ ಕಾಶೀಕ್ಷೇತ್ರಕ್ಕೆ ವಿಶ್ವಾನರ ಮುನಿಯು ತಪಸ್ಸಿಗೆಂದು ತೆರಳಿದನು

೨೦. ಬೇಗನೆ ಕಾಶಿಯನ್ನು ಸೇರಿ ಪಾವನೆಯಾದ ಮಣಿಕರ್ಣಿಕೆಯನ್ನು ಕಂಡು ನೂರಾರು ಜನ್ಮಗಳಿಂದಲೂ ಗಳಿಸಿದ್ದ ತಾಪತ್ರಯಗಳೆಲ್ಲವನ್ನೂ ಕಳೆದು ಶುದ್ಧನಾಗಿ,

೨೧. ವಿಶ್ವೇಶ್ವರನೇ ಮೊದಲಾದ ಎಲ್ಲ ಲಿಂಗಗಳನ್ನೂ ಸಂದರ್ಶನಮಾಡಿದನು ಎಲ್ಲ ಕುಂಡಗಳಲ್ಲಿಯೂ, ಜ್ಞಾನವಾಪಿ ಮುಂತಾದ ವಾಪಿಗಳಲ್ಲಿಯೂ, ಕೂಪಗಳಲ್ಲಿಯೂ, ಸರಸ್ಸುಗಳಲ್ಲಿಯೂ ಸ್ನಾನಮಾಡಿದನು.

೨೨. ಢುಂಡಿ ಮೊದಲಾದ ಎಲ್ಲ ಗಣಪತಿಗಳನ್ನೂ ಕಂಡನು. ಅನ್ನಪೂರ್ಣೆಯೆಂದು ಪ್ರಸಿದ್ಧಳಾದ ಶಿವೆಯನ್ನು ನಮಸ್ಕರಿಸಿದನು. ಸಕಲರ ಪಾಪಗಳನ್ನೂ ಭಕ್ಷಿಸುವ ಕಾಲಭೈರವನನ್ನು ಅರ್ಚಿಸಿದನು.

೨೩. ದಂಡಪಾಣಿ ಮೊದಲಾದ ಗಣಾಧಿಪತಿಗಳನ್ನು ಸ್ತುತಿಸಿದನು. ಆದಿಕೇಶವ ಮೊದಲಾದ ವಿಷ್ಣುಮೂರ್ತಿಗಳನ್ನು ಪೂಜಾದಿಗಳಿಂದ ಸಂತೋಷಗೊಳಿಸಿದನು.

ಲೋಲಾರ್ಕಮುಖಸೂರ್ಯಾಂಶ್ಚ ಪ್ರಣಮ್ಯ ಸ ಪುನಃ ಪುನಃ ।
ಕೃತ್ವಾ ಚ ಪಿಂಡದಾನಾನಿ ಸರ್ವತೀರ್ಥೇಷ್ವತಂದ್ರಿತಃ ॥ ೨೪ ॥

ಸಹಸ್ರಭೋಜನಾದ್ಯೈಶ್ಚ ಮುನೀನ್ವಿಪ್ರಾನ್ಪ್ರತರ್ಪ್ಯ ಚ ।
ಮಹಾಪೂಜೋಪಚಾರೈಶ್ಚ ಲಿಂಗಾನ್ಯಭ್ಯರ್ಚ್ಯ ಭಕ್ತಿತಃ ॥ ೨೫ ॥

ಅಸಕೃಚ್ಚಿಂತಯಾಮಾಸ ಕಿಂ ಲಿಂಗಂ ಕ್ಷಿಪ್ರಸಿದ್ಧಿದಂ ।
ಯತ್ರ ನಿಶ್ಚಲತಾಮೇತಿ ತಪಸ್ತನಯಕಾಮ್ಯಯಾ ॥ ೨೬ ॥

ಕ್ಷಣಂ ವಿಚಾರ್ಯ ಸ ಮುನಿರಿತಿ ವಿಶ್ವಾನರಸ್ಸುಧೀಃ ।
ಕ್ಷಿಪ್ರಂ ಪುತ್ರಪ್ರದಂ ಲಿಂಗಂ ವೀರೇಶಂ ಪ್ರಶಶಂಸ ಹ ॥ ೨೭ ॥

ಅಸಂಖ್ಯಾತಾಸ್ಸಹಸ್ರಾಣಿ ಸಿದ್ಧಾಃ ಸಿದ್ಧಿಂ ಗತಾಸ್ತತಃ ।
ಸಿದ್ಧಲಿಂಗಮಿತಿ ಖ್ಯಾತಂ ತಸ್ಮಾದ್ವೀರೇಶ್ವರಂ ಪರಂ ॥ ೨೮ ॥

---

೨೪. ಆನಂತರ ಲೋಲಾರ್ಕ ಮೊದಲಾದ ಸೂರ್ಯರನ್ನು ಪುನಃಪುನಃ ನಮಸ್ಕರಿಸಿ ಎಲ್ಲ ತೀರ್ಥಗಳಲ್ಲಿಯೂ ಸ್ವಲ್ಪವೂ ಬೇಸರಪಡದೆ ಶ್ರಾದ್ಧಾದಿಗಳನ್ನು ಮಾಡಿ ಪಿಂಡಪ್ರದಾನಮಾಡಿದನು.

೨೫. ಸಹಸ್ರ ಯತಿಗಳಿಗೂ ಸಹಸ್ರ ಬ್ರಾಹ್ಮಣರಿಗೂ ಸಂತರ್ಪಣೆಗಳನ್ನು ನಡೆಸಿದನು. ಭಕ್ತಿಯಿಂದಲೂ ಅನೇಕ ಉಪಚಾರಗಳಿಂದಲೂ ಅತಿಶಯವಾಗಿ ಲಿಂಗಗಳನ್ನು ಪೂಜಿಸಿದನು.

೨೬. ಯಾವ ಲಿಂಗವು ಬೇಗನೆ ಸಿದ್ಧಿಯನ್ನು ಕೊಡುವುದು ? ಪುತ್ರಕಾಮನೆಯಿಂದ ನಾನು ಮಾಡುವ ತಪಸ್ಸು ಎಲ್ಲಿ ನಿಶ್ಚಿಂತೆಯಿಂದ ಸಾಗುವುದು ? ಎಂದು ಬಾರಿ ಬಾರಿಗೂ ಆಲೋಚಿಸಿದನು.

೨೭. ಈರೀತಿಯಾಗಿ ವಿವೇಕಿಯಾದ ಆ ವಿಶ್ವಾನರನು ಕ್ಷಣಕಾಲ ಆಲೋಚಿಸಿ ಬೇಗನೆ ಮಕ್ಕಳನ್ನು ಕರುಣಿಸಲು ವೀರೇಶ್ವರಲಿಂಗವೇ ಸರಿ ಎಂದು ಅದನ್ನು ಆರಿಸಿಕೊಂಡನು.

೨೮. ಲೆಕ್ಕವಿಲ್ಲದಷ್ಟು ಮಂದಿ ಸಿದ್ಧರು ಸಾವಿರಾರುಗಟ್ಟಲೆ ಬಂದು ಇಲ್ಲಿ ಸಿದ್ಧಿಯನ್ನು ಪಡೆದಿರುವರು ಆದುದರಿಂದ ಈಲಿಂಗವುಸಿದ್ಧಲಿಂಗವೆಂಬುದಾಗಿಯೇ ಪ್ರಖ್ಯಾತವಾಯಿತು. ಆದುದರಿಂದ ಈ ವೀರೇಶ್ವರಲಿಂಗವೇ ಶ್ರೇಷ್ಠವು.

ವೀರೇಶ್ವರಂ ಮಹಾಲಿಂಗಮಬ್ದಮಭ್ಯರ್ಚ್ಯ ಭಕ್ತಿತಃ ।
ಆಯುರ್ಮನೋರಥಂ ಸರ್ವಂ ಪುತ್ರಾದಿಕಮನೇಕಶಃ ॥ ೨೯ ॥

ಅಹಮಪ್ಯತ್ರ ವೀರೇಶಂ ಸಮಾರಾಧ್ಯ ತ್ರಿಕಾಲತಃ ।
ಆಶು ಪುತ್ರಮವಾಪ್ಸ್ಯಾಮಿ ಯಥಾಭಿಲಷಿತಂ ಸ್ತ್ರಿಯಾ ॥ ೩೦ ॥

॥ ನಂದೀಶ್ವರ ಉವಾಚ ॥
ಇತಿ ಕೃತ್ವಾ ಮತಿಂ ಧೀರೋ ವಿಪ್ರೋ ವಿಶ್ವಾನರಃ ಕೃತೀ ।
ಚಂದ್ರಕೂಪಜಲೇ ಸ್ನಾತ್ವಾ ಜಗ್ರಾಹ ನಿಯಮಂ ವ್ರತೀ ॥ ೩೧ ॥

ಏಕಾಹಾರೋಽಭವನ್ಮಾಸಂ ಮಾಸಂ ನಕ್ತಾಶನೋಽಭವತ್ ।
ಅಯಾಚಿತಾಶನೋ ಮಾಸಂ ಮಾಸಂ ತ್ಯಕ್ತಾಶನಃ ಪುನಃ ॥ ೩೨ ॥

---

೨೯. ಒಂದುವರ್ಷಕಾಲ ಮಾತ್ರ ಈ ವೀರೇಶ್ವರ ಮಹಾಲಿಂಗವನ್ನು ಭಕ್ತಿಯಿಂದ ಪೂಜಿಸಿ ಆಯುಸ್ಸು, ಪುತ್ರ ಮೊದಲಾದ ಅನೇಕ ವಾಂಛಿತಾರ್ಥಗಳನ್ನು ಬಹುಮಂದಿ ಪಡದಿರುವರು.

೩೦ ಆದುದರಿಂದ ನಾನೂ ಸಹ ವೀರೇಶ್ವರನನ್ನು ಮೂರು ಕಾಲಗಳಲ್ಲಿಯೂ ಚೆನ್ನಾಗಿ ಸೇವಿಸಿ ನನ್ನ ಪತ್ನಿಗೆ ಅಭಿಲಷಿತವಾದಂತಹ ಪುತ್ರನನ್ನು ಬೇಗನೆ ಪಡೆಯುವೆನು

೩೧ ಎಲೈ ಮುನಿಯೇ, ಈರೀತಿ ಧೀರನಾದ ಆ ವಿಶ್ವಾನರಮುನಿಯು ಮನದಲ್ಲಿ ನಿರ್ಧರಿಸಿ ಚಂದ್ರಕೂಪದಲ್ಲಿ ಸ್ನಾನಮಾಡಿ ವ್ರತಸ್ಥನಾಗಿ ನಿಯಮಪರನಾದನು.

೩೨ ಒಂದು ತಿಂಗಳು ಹಗಲೊಪ್ಪತ್ತು ಆಹಾರ ತೆಗೆದುಕೊಂಡನು. ಮತ್ತೊಂದು ತಿಂಗಳು ರಾತ್ರಿ ಮಾತ್ರ ಒಪ್ಪತ್ತು ಊಟಮಾಡಿದನು. ಇನ್ನೊಂದು ತಿಂಗಳು ಯಾರನ್ನೂ ಭಿಕ್ಷೇಬೇಡದೆ ತನಗೆ ತಾನೇ ಸಿಕ್ಕಿದ ಭಿಕ್ಷವನ್ನುಂಡನು. ಬೇರೊಂದು ತಿಂಗಳು ಆಹಾರವನ್ನೇ ಬಿಟ್ಟಿದ್ದನು.

ಪಯೋವ್ರತೋऽಭವನ್ಮಾಸಂ ಮಾಸಂ ಶಾಕಫಲಾಶನಃ ।
ಮಾಸಂ ಮುಷ್ಟಿತಿಲಾಹಾರೋ ಮಾಸಂ ಪಾನೀಯಭೋಜನಃ ॥ ೩೩ ॥

ಪಂಚಗವ್ಯಾಶನೋ ಮಾಸಂ ಮಾಸಂ ಚಾಂದ್ರಾಯಣವ್ರತೀ ।
ಮಾಸಂ ಕುಶಾಗ್ರಜಲಭುಗ್ಮಾಸಂ ಶ್ವಸನಭಕ್ಷಣಃ ॥ ೩೪ ॥

ಏವಮಬ್ದಮಿತಂ ಕಾಲಂ ತತಾಪ ಸ ತಪೋऽದ್ಭುತಂ ।
ತ್ರಿಕಾಲಮರ್ಚಯದ್ಭಕ್ತ್ಯಾ ವೀರೇಶಂ ಲಿಂಗಮುತ್ತಮಂ ॥ ೩೫ ॥

ಅಥ ತ್ರಯೋದಶೇ ಮಾಸಿ ಸ್ನಾತ್ವಾ ತ್ರಿಪಥಗಾಂಭಸಿ ।
ಪ್ರತ್ಯೂಷ ಏವ ವೀರೇಶಂ ಯಾವದಾಯಾತಿ ಸ ದ್ವಿಜಃ ॥ ೩೬ ॥

---

೩೩. ಒಂದು ತಿಂಗಳು ಹಾಲನ್ನೇ ಕುಡಿದುಕೊಂಡಿದ್ದನು. ಇನ್ನೊಂದು ತಿಂಗಳು ಸೊಪ್ಪುಸೆದೆಗಳನ್ನೂ ಹಣ್ಣುಗಳನ್ನೂ ತಿಂದುಕೊಂಡಿದ್ದನು ಮತ್ತೊಂದು ತಿಂಗಳು ಒಂದುಹಿಡಿ ಎಳ್ಳನ್ನು ತಿಂದು ಜೀವಿಸಿದ್ದನು. ಬೇರೊಂದು ತಿಂಗಳು ಬರಿಯ ನೀರನ್ನೇ ಕುಡಿದುಕೊಂಡಿದ್ದನು.

೩೪. ಆತನಿಗೆ ಒಂದು ತಿಂಗಳು ಪಂಚಗವ್ಯವೇ ಆಹಾರವಾಗಿತ್ತು. ಒಂದು ತಿಂಗಳು ಚಾಂದ್ರಾಯಣವ್ರತವನ್ನು ಅವಲಂಬಿಸಿದ್ದನು. ಇನ್ನೊಂದು ತಿಂಗಳು ದರ್ಭೆಯ ಕೊನೆಯ ನೀರಿನಿಂದ ಆಹಾರಮಾಡಿದನು. ಮತ್ತು ಒಂದು ತಿಂಗಳು ಬರಿಯ ಗಾಳಿಯನ್ನೇ ಸೇವಿಸಿದನು.

೩೫. ಈರೀತಿಯಾಗಿ ಆ ವಿಶ್ವಾನರನು ಒಂದು ವರ್ಷಕಾಲ ನಿಯಮದಿಂದಿದ್ದು ಮೂರುಕಾಲದಲ್ಲಿಯೂ ಭಕ್ತಿಯಿಂದ ಆ ವಿರೇಶ್ವರಲಿಂಗವನ್ನು ಪೂಜಿಸುತ್ತಾ ಅದ್ಭುತವಾದ ತಪಸ್ಸನ್ನು ಆಚರಿಸಿದನು.

೩೬-೩೭. ಅನಂತರ ಹದಿಮೂರನೆಯ ತಿಂಗಳಲ್ಲಿ ಎಂದಿನಂತೆಯೇ ಬೆಳಗ್ಗೆ ಅಷ್ಟುಹೊತ್ತಿಗೇ ಎದ್ದು ಆ ಬ್ರಾಹ್ಮಣನು ಗಂಗಾನದಿಯಲ್ಲಿ ಸ್ನಾನಮಾಡಿ ವೀರೇಶ್ವರನ ಪೂಜೆಗೆಂದು ಬಂದನೋ ಇಲ್ಲವೋ ಆಗ ಆ ವೀರೇಶ್ವರಲಿಂಗದ ಮಧ್ಯದಲ್ಲಿ ವಿಭೂತಿ

ತಾವದ್ವಿಲೋಕಯಾಂಚಕ್ರೇ ಮಧ್ಯೇ ಲಿಂಗಂ ತಪೋಧನಃ ।
ವಿಭೂತಿಭೂಷಣಂ ಬಾಲಮಷ್ಟವರ್ಷಾಕೃತಿಂ ಶಿಶುಂ ॥ ೩೭ ॥

ಆಕರ್ಣಾಯತನೇತ್ರಂ ಚ ಸುರಕ್ತದಶನಚ್ಛದಂ ।
ಚಾರುಪಿಂಗಜಟಾಮೌಲಿಂ ನಗ್ನಂ ಪ್ರಹಸಿತಾನನಂ ॥ ೩೮ ॥

ಶೈಶವೋಚಿತನೇಪಥ್ಯಧಾರಿಣಂ ಚಿತಿಧಾರಿಣಂ ।
ಪಠಂತಂ ಶ್ರುತಿಸೂಕ್ತಾನಿ ಹಸಂತಂ ಚ ಸ್ವಲೀಲಯಾ ॥ ೩೯ ॥

ತಮಾಲೋಕ್ಯ ಮುದಂ ಪ್ರಾಪ್ಯ ರೋಮಕಂಚುಕಿತೋ ಮುನಿಃ ।
ಪ್ರೋಚ್ಚಚಾರ ಹೃದಾಲಾಪಾನ್ನಮೋಽಸ್ತ್ವಿತಿ ಪುನಃ ಪುನಃ ॥ ೪೦ ॥

ಅಭಿಲಾಷಪ್ರದೈಃ ಪದ್ಯೈರಷ್ಟಭಿರ್ಬಾಲರೂಪಿಣಂ ।
ತುಷ್ಟಾವ ಪರಮಾನಂದಂ ಶಂಭುಂ ವಿಶ್ವಾನರಃ ಕೃತೀ ॥ ೪೧ ॥

---

ಯಿಂದ ಅಲಂಕೃತನಾದ ಎಂಟುವರ್ಷ ವಯಸ್ಸಿನ ಒಬ್ಬಾನೊಬ್ಬ ಕುಮಾರನನ್ನು ಕಂಡನು.

೩೮. ಆ ಕುಮಾರನ ಕಣ್ಣುಗಳು ಕಿವಿಯವರೆಗೂ ವ್ಯಾಪಿಸಿ ವಿಶಾಲವಾಗಿದ್ದುವು ತುಟಿಗಳು ಕೆಂಪಗೆ ರಂಜಿಸುತ್ತಿದ್ದುವು. ಅವನ ತಲೆಯಲ್ಲಿ ಹೊಂಬಣ್ಣದ ಜಟೆಯು ಮನೋಹರವಾಗಿ ಬೆಳಗುತ್ತಿತ್ತು ಆತನ ಮುಖದಲ್ಲಿ ಮೇಲುನಗೆಯು ನಲಿಯುತ್ತಿತ್ತು. ಅವನು ನಗ್ನನಾಗಿದ್ದನು.

೩೯. ಅವನು ಬಾಲ್ಯವಯಸ್ಸಿಗೊಪ್ಪುವ ವೇಷವನ್ನು ಧರಿಸಿದ್ದನು. ಕೈಯ್ಯಲ್ಲಿ ಬೆಂಕಿಯನ್ನು ಧರಿಸಿದ್ದನು ಬಾಯಲ್ಲಿ ವೇದಮಂತ್ರಗಳನ್ನು ಹೇಳುತ್ತಿದ್ದನು. ತನ್ನ ಲೀಲೆಗಳಿಗೆ ತಾನೇ ನಗುತ್ತಿದ್ದನು

೪೦. ಆ ಮಗುವನ್ನು ಕಂಡೊಡನೆಯೇ ಆ ವಿಶ್ವಾನರನು ಸಂತೋಷದಿಂದ ಮೈಯ್ಯೆಲ್ಲಾ ರೋಮಾಂಚವನ್ನು ಹೊಂದಿ ಮನಸಾರೆ ಮತ್ತೆಮತ್ತೆ ನಮೋನಮಃ ಎಂದು ಗಟ್ಟಿಯಾಗಿ ಹೇಳತೊಡಗಿದನು.

೪೧. ಕೃತಕೃತ್ಯನಾದ ಆ ವಿಶ್ವಾನರಮುನಿಯು, ಪರಮಾನಂದಸ್ವರೂಪನೂ ಕುಮಾರರೂಪಧಾರಿಯೂ ಆದ ಆ ಶಂಕರನನ್ನು, ಅಭಿಲಷಿತಗಳನ್ನು ಪೂರೈಸುವಂತಹ ಎಂಟು ಶ್ಲೋಕಗಳಿಂದ ಸ್ತೋತ್ರಮಾಡಿದನು.

॥ ವಿಶ್ವಾನರ ಉವಾಚ ॥

ಏಕಂ ಬ್ರಹ್ಮೈವಾದ್ವಿತೀಯಂ ಸಮಸ್ತಂ
ಸತ್ಯಂ ಸತ್ಯಂ ನೇಹ ನಾನಾಸ್ತಿ ಕಿಂಚಿತ್ ।
ಏಕೋ ರುದ್ರೋ ನ ದ್ವಿತೀಯೋಽವತಸ್ಥೇ
ತಸ್ಮಾದೇಕಂ ತ್ವಾಂ ಪ್ರಪದ್ಯೇ ಮಹೇಶಂ ॥ ೪೨ ॥

ಕರ್ತಾ ಹರ್ತಾ ತ್ವಂ ಹಿ ಸರ್ವಸ್ಯ ಶಂಭೋ
ನಾನಾರೂಪೇಷ್ವೇಕರೂಪೋಽಪ್ಯರೂಪಃ ।
ಯದ್ವತ್ಪ್ರತ್ಯಗ್ಧರ್ಮ ಏಕೋಽಪ್ಯನೇಕ-
ಸ್ತಸ್ಮಾನ್ನಾನ್ಯಂ ತ್ವಾಂ ವಿನೇಶಂ ಪ್ರಪದ್ಯೇ ॥ ೪೩ ॥

ರಜ್ಜೌ ಸರ್ಪಶ್ಶುಕ್ತಿಕಾಯಾಂ ಚ ರೌಪ್ಯಂ
ನೈರಃ ಪೂರಸ್ತನ್ಮೃಗಾಖ್ಯೇ ಮರೀಚೌ ।
ಯದ್ವತ್ತದ್ವಿದ್ವಿಷ್ವಗೇವ ಪ್ರಪಂಚೋ
ಯಸ್ಮಿನ್ ಜ್ಞಾತೇ ತಂ ಪ್ರಪದ್ಯೇ ಮಹೇಶಂ ॥ ೪೪ ॥

---

೪೨. ಇದೆಲ್ಲವೂ ಅದ್ವಿತೀಯನಾದ ಆ ಪರಬ್ರಹ್ಮನೊಬ್ಬನೇ. ಅವನೇ ಸತ್ಯಸ್ವರೂಪನು. ಅವನನ್ನು ಬಿಟ್ಟು ಮತ್ತಾವುದೂ ಎರಡನೆಯದಾದ ವಸ್ತುವು ಇಲ್ಲಿ ಇಲ್ಲ. ಅವನು ಮತ್ತಾರೂ ಅಲ್ಲ ಆ ಏಕೈಕನಾದ ಪರಬ್ರಹ್ಮವು ಶಿವನಲ್ಲದೆ ಮತ್ತೆ ಬೇರೆಯಲ್ಲ. ಆದುದರಿಂದ ಅಂತಹ ಮಹೇಶ್ವರನಾದ ನಿನ್ನನ್ನು ಮರೆ ಹೊಗುವೆನು.

೪೩. ಎಲೈ ಶಂಭುವೇ, ನೀನೇ ಎಲ್ಲವನ್ನೂ ಸೃಷ್ಟಿಸುವೆ. ಎಲ್ಲವನ್ನೂ ಸಂಹರಿಸುವೆ. ಕಣ್ಣಿಗೆ ಬೀಳದಿದ್ದರೂ ನೀನು (ರೂಪರಹಿತನಾದರೂ) ನಮಗೆ ಕಾಣುವ ಸಮಸ್ತ ವಸ್ತುಗಳಲ್ಲಿಯೂ ಚೈತನ್ಯರೂಪದಿಂದ ಕಂಗೊಳಿಸುವೆ. ಸನಾತನವಾದ ಧರ್ಮವು ಒಂದೇ ಆದರೂ ಆಯಾ ದೇಶಕಾಲಾನುಗುಣವಾಗಿ ಬೇರೆಬೇರೆಯಾಗಿ ತೋರುವಂತೆ ಇರುವೆ. ನಿನ್ನ ಹೊರತು ಮತ್ತಾರನ್ನೂ ಮರೆಹೋಗುವುದಿಲ್ಲ

೪೪. ಯಾವ ಪ್ರಭುವನ್ನು ಸಾಕ್ಷಾತ್ಕರಿಸಲು ಈ ವಿಶಾಲವಾದ ಪ್ರಪಂಚವು ರಜ್ಜುವಿನಲ್ಲಿ ಸರ್ಪದಂತೆಯೂ, ಶುಕ್ತಿಯಲ್ಲಿ ರಜತದಂತೆಯೂ, ಮರೀಚಿಕೆಯಲ್ಲಿ ನೀರಿನಪ್ರವಾಹದಂತೆಯೂ ಕಂಗೊಳಿಸುವುದೋ ಅಂತಹ ಮಹೇಶ್ವರನನ್ನು ಮರೆ ಹೊಗುವೆನು.

ತೋಯೇ ಶೈತ್ಯಂ ದಾಹಕತ್ವಂ ಚ ವಹ್ನೌ
ತಾಪೋ ಭಾನೌ ಶೀತಭಾನೌ ಪ್ರಸಾದಃ ।
ಪುಷ್ಪೇ ಗಂಧೋ ದುಗ್ಧಮಧ್ಯೇಽಪಿ ಸರ್ಪಿ-
ರ್ಯತ್ತಚ್ಛಂಭೋ ತ್ವಂ ತತಸ್ತ್ವಾಂ ಪ್ರಪದ್ಯೇ ॥ ೪೫ ॥

ಶಬ್ದಂ ಗೃಹ್ಣಾಸ್ಯಶ್ರವಾಸ್ತ್ವಂ ಹಿ ಜಿಘ್ರಸ್ಯ-
ಘ್ರಾಣಸ್ತ್ವಂ ವ್ಯಂಘ್ರಿರಾಯಾಸಿ ದೂರಾತ್ ।
ವ್ಯಕ್ಷಃ ಪಶ್ಯೇಸ್ತ್ವಂ ರಸಜ್ಞೋಽಪ್ಯಜಿಹ್ವಃ
ಕಸ್ತ್ವಾಂ ಸಮ್ಯಗ್ವೇತ್ತ್ಯತಸ್ತ್ವಾಂ ಪ್ರಪದ್ಯೇ ॥ ೪೬ ॥

ನೋ ವೇದ ತ್ವಾಮೀಶ ಸಾಕ್ಷಾದ್ಧಿ ವೇದೋ
ನೋ ವಾ ವಿಷ್ಣುರ್ನೋ ವಿಧಾತಾಖಿಲಸ್ಯ ।
ನೋ ಯೋಗೀಂದ್ರಾ ನೇಂದ್ರಮುಖ್ಯಾಶ್ಚ ದೇವಾ
ಭಕ್ತೋ ವೇದ ತ್ವಾಮತಸ್ತ್ವಾಂ ಪ್ರಪದ್ಯೇ ॥ ೪೭ ॥

---

೪೫ ನೀರಿನಲ್ಲಿ ಶೈತ್ಯವೂ, ಬೆಂಕಿಯಲ್ಲಿ ಸುಡುವ ಗುಣವೂ, ಸೂರ್ಯನಲ್ಲಿ ಕಾವೂ ಚಂದ್ರನಲ್ಲಿ ಪ್ರಸನ್ನತೆಯೂ, ಹೂವಿನಲ್ಲಿ ಸುವಾಸನೆಯೂ, ಹಾಲಿನಲ್ಲಿ ತುಪ್ಪವೂ ನೀನೇಆಗಿರುವೆ. ಆದುದರಿಂದ ಎಲೈ ಶಂಭುವೇ, ನಾನು ನಿನ್ನನ್ನು ಮರೆಹೊಗುವೆನು

೪೬ ಎಲೈ ಪ್ರಭುವೇ, ಕಿವಿಯೇ ಇಲ್ಲದಿದ್ದರೂ ಶಬ್ದವನ್ನು ಕೇಳುವೆ ಮೂಗಿಲ್ಲದಿದ್ದರೂ ವಾಸನೆಯನ್ನು ಹಿಡಿಯುವೆ. ಕಾಲುಗಳಿಲ್ಲದಿದ್ದರೂ ದೂರದಿಂದ ಬರುವೆ ಕಣ್ಣಿಲ್ಲದಿದ್ದರೂ ಎಲ್ಲವನ್ನೂ ಕಾಣುವೆ. ನಾಲಿಗೆಯಿಲ್ಲದಿದ್ದರೂ ಎಲ್ಲ ರಸವನ್ನೂ ರುಚಿನೋಡುವೆ. ಇಂತಹ ನಿನ್ನನ್ನು ಸರಿಯಾಗಿ ಅರಿಯಬಲ್ಲವರು ಯಾರು ? ಆದುದರಿಂದ ನಿನ್ನನ್ನು ಮರೆಹೊಗುವೆನು

೪೭. ಎಲೈ ಈಶನೇ, ನಿನ್ನನ್ನು ಸಾಕ್ಷಾದ್ವೇದವೂ ತಿಳಿಯಲಾರದು. ವಿಷ್ಣುವೂ ಅರಿಯನು. ಸಕಲ ಪ್ರಪಂಚವನ್ನೂ ಸೃಷ್ಟಿಸಿದ ಬ್ರಹ್ಮನು ತಿಳಿಯನು. ಯೋಗಿಶ್ರೇಷ್ಠರೂ ತಿಳಿಯಲಾರರು ಇಂದ್ರಾದಿದೇವತೆಗಳೂ ತಿಳಿಯರು ಭಕ್ತನೊಬ್ಬನು ಮಾತ್ರ ನಿನ್ನನ್ನು ಚೆನ್ನಾಗಿ ತಿಳಿಯುವನು ಆದುದರಿಂದ ನಿನ್ನನ್ನು ನಾನು ಮರೆಹೊಗುವೆನು.

ನೋ ತೇ ಗೋತ್ರಂ ನೋ ಸಜನ್ಮಾಪಿ ನಾತೋ
ನೋ ವಾ ರೂಪಂ ನೈವ ಶೀಲಂ ನ ದೇಶಃ ।
ಇತ್ಥಂಭೂತೋಽಪೀಶ್ವರಸ್ತ್ವಂ ತ್ರಿಲೋಕ್ಯಾ-
ಸ್ಸರ್ವಾನ್ಕಾಮಾನ್ಪೂರಯೇಸ್ತ್ವಂ ಭಜೇ ತ್ವಾಂ ॥ ೪೮ ॥

ತ್ವತ್ತಸ್ಸರ್ವಂ ತ್ವಂ ಹಿ ಸರ್ವಂ ಸ್ಮರಾರೇ
ತ್ವಂ ಗೌರೀಶಸ್ತ್ವಂ ಚ ನಗ್ನೋಽತಿಶಾಂತಃ ।
ತ್ವಂ ವೈ ವೃದ್ಧಸ್ತ್ವಂ ಯುವಾ ತ್ವಂ ಚ ಬಾಲ-
ಸ್ತತ್ತ್ವಂ ಯತ್ಕಿಂ ನಾನ್ಯತಸ್ತ್ವಾಂ ನತೋಽಹಂ ॥ ೪೯ ॥

॥ ನಂದೀಶ್ವರ ಉವಾಚ ॥

ಸ್ತುತ್ವೇತಿ ವಿಪ್ರೋ ನಿಪಪಾತ ಭೂಮೌ
ಸಂಬದ್ಧಪಾಣಿರ್ಭವತೀಹ ಯಾವತ್ ।
ತಾವತ್ಸ ಬಾಲೋಽಖಿಲವೃದ್ಧವೃದ್ಧಃ
ಪ್ರೋವಾಚ ಭೂದೇವಮತೀವ ಹೃಷ್ಟಃ ॥ ೫೦ ॥

---

೪೮. ನಿನಗೆ ವಂಶವಿಲ್ಲ. ಹುಟ್ಟು ಮೊದಲೇ ಇಲ್ಲ. ಸಾವಂತೂ ಇಲ್ಲವೇ ಇಲ್ಲ. ರೂಪವೂ ಸಹ ನಿನಗೆ ಇಲ್ಲ. ಶೀಲವಾಗಲೀ ಕಾಲದೇಶಗಳಾಗಲೀ ಒಂದೂ ಇಲ್ಲ. ಹೀಗಿದ್ದರೂ ನೀನು ಈಶ್ವರನಾಗಿರುವೆ ಮೂರು ಲೋಕಗಳಿಗೂ ಅವರು ಬಯಸಿದ ಇಷ್ಟಾರ್ಥಗಳೆಲ್ಲವನ್ನೂ ನೆರವೇರಿಸಿಕೊಡುವೆ. ಆದುದರಿಂದ ನಿನ್ನನ್ನು ಸೇವಿಸುವೆನು.

೪೯. ಎಲೈ ಸ್ಮರವೈರಿಯೇ, ನಿನ್ನಿಂದಲೇ ಎಲ್ಲವೂ ಆಗುವುದು. ಅದೆಲ್ಲವೂ ಸಹ ನೀನಲ್ಲದೆ ಬೇರೆಯಲ್ಲ ನೀನೇ ಗೌರೀದೇವಿಯ ಪ್ರಿಯನು. ನೀನೇ ದಿಗಂಬರನು. ನೀನೇ ಪರಮಶಾಂತನು. ನೀನು ವೃದ್ಧನೂ ಹೌದು. ತರುಣನೂ ಹೌದು. ಶಿಶುವೂ ಹೌದು. ಯಾವಾವುದು ಇವೆಯೋ ಅದೆಲ್ಲವೂ ನೀನೇ ಅಲ್ಲದೆ ಬೇರೆಯೊಂದೂ ಅಲ್ಲ. ಆದುದರಿಂದ ನಿನಗೆ ನಮಸ್ಕರಿಸುವೆನು.

೫೦. ಎಲೈ ಸನತ್ಕುಮಾರನೇ, ಹೀಗೆ ಆ ವಿಶ್ವಾನರಮುನಿಯು ಸ್ತುತಿಮಾಡಿ ಕೈಮುಗಿದುಕೊಂಡು ನೆಲದಮೇಲೆ ದಂಡವತ್ಪ್ರಣಾಮಮಾಡಲು ತೊಡಗುವಷ್ಟರೊಳಗೆ, ಎಲ್ಲ ಹಿರಿಯರಿಗೂ ಹಿರಿಯನಾದ ಆ ಕುಮಾರನು ಬಹು ಸಂತಸದಿಂದ ಆ ಬ್ರಾಹ್ಮಣನನ್ನಿಂತೆಂದನು.

॥ ಬಾಲ ಉವಾಚ ॥

ವಿಶ್ವಾನರ ಮುನಿಶ್ರೇಷ್ಠ ಭೂದೇವಾಹಂ ತ್ವಯಾದ್ಯ ವೈ ।
ತೋಷಿತಸ್ಸುಪ್ರಸನ್ನಾತ್ಮಾ ವೃಣೀಷ್ವ ವರಮುತ್ತಮಂ ॥ ೫೧ ॥

ತತ ಉತ್ಥಾಯ ಹೃಷ್ಟಾತ್ಮಾ ಮುನಿರ್ವಿಶ್ವಾನರಃ ಕೃತೀ ।
ಪ್ರತ್ಯಬ್ರವೀನ್ಮುನಿಶ್ರೇಷ್ಠಃ ಶಂಕರಂ ಬಾಲರೂಪಿಣಂ ॥ ೫೨ ॥

॥ ವಿಶ್ವಾನರ ಉವಾಚ ॥

ಮಹೇಶ್ವರ ಕಿಮಜ್ಞಾತಂ ಸರ್ವಜ್ಞಸ್ಯ ತವ ಪ್ರಭೋ ।
ಸರ್ವಾಂತರಾತ್ಮಾ ಭಗವಾಂಛರ್ವಸ್ಸರ್ವಪ್ರದೋ ಭವಾನ್ ॥ ೫೩ ॥

ಯಾಚ್ಞಾಂ ಪ್ರತಿ ನಿಯುಕ್ತಂ ಮಾಂ ಕಿಂ ಬ್ರೂಷೇ ದೈನ್ಯಕಾರಿಣೀಂ ।
ಇತಿ ಜ್ಞಾತ್ವಾ ಮಹೇಶಾನ ಯಥೇಚ್ಛಸಿ ತಥಾ ಕುರು ॥ ೫೪ ॥

---

೫೧. ಎಲೈ ಮುನಿಶ್ರೇಷ್ಠನಾದ ವಿಶ್ವಾನರನೇ, ನಿನ್ನಿಂದ ನಾನು ಸಂತೋಷ ಗೊಳಿಸಲ್ಪಟ್ಟೆನು ನನ್ನ ಮನಸ್ಸು ಪ್ರಸನ್ನವಾಯಿತು ನಿನಗೆ ಬೇಕಾದ ಉತ್ತಮ ವಾದ ವರವನ್ನು ಕೇಳಿಕೋ ಎನಲು,

೫೨ ಕೃತಕೃತ್ಯವಾದ ಆ ವಿಶ್ವಾನರಮಹರ್ಷಿಯು ಬಹು ಸಂತೋಷದಿಂದ ಮೇಲಕ್ಕೆದ್ದು ಬಾಲರೂಪಧಾರಿಯಾದ ಆ ಶಂಕರನನ್ನು ಕುರಿತು

೫೩ ಎಲೈ ಪ್ರಭುವಾದ ಮಹೇಶ್ವರನೇ, ಸರ್ವಜ್ಞನಾದ ನಿನಗೆ ತಿಳಿಯದುದು ಯಾವುದು ? ನೀನು ಸರ್ವಾಂತರ್ಯಾಮಿಯಾದ ಭಗವಂತನಲ್ಲವೇ. ಎಲ್ಲ ಇಷ್ಟಾರ್ಥ ಗಳನ್ನೂ ಕರುಣಿಸುವ ಶರ್ವನಲ್ಲವೇ ?

೫೪. ದೀನತೆಯನ್ನು ತೋರುತ್ತ ನಿನ್ನ ಬಳಿಗೆ ಬೇಡಲು ಬಂದಿರುವ ನನ ನ್ನೀರೀತಿ ಕೇಳುವುದೇಕೆ ? ಎಲೈ ಮಹೇಶ್ವರನೇ, ನೀನೇ ತಿಳಿದು ನಿನಗೆ ತೋರಿದಂತೆ ಮಾಡು ಎಂದನು.

॥ ನಂದೀಶ್ವರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ದೇವೋ ವಿಶ್ವಾನರಸ್ಯ ಹಿ ।
ಶುಚಿಶ್ಶುಚಿವ್ರತಸ್ಯಾಥ ಶುಚಿಂ ಸ್ಮಿತ್ವಾಬ್ರವೀಚ್ಛಿಶುಃ ॥ ೫೫ ॥

ತ್ವಯಾ ಶುಚೇ ಶುಚಿಷ್ಮತ್ಯಾಂ ಯೋಽಭಿಲಾಷಃ ಕೃತೋ ಹೃದಿ ।
ಅಚಿರೇಣೈವ ಕಾಲೇನ ಸ ಭವಿಷ್ಯತ್ಯಸಂಶಯಂ ॥ ೫೬ ॥

ತವ ಪುತ್ರತ್ವಮೇಷ್ಯಾಮಿ ಶುಚಿಷ್ಮತ್ಯಾಂ ಮಹಾಮತೇ ।
ಖ್ಯಾತೋ ಗೃಹಪತಿರ್ನಾಮ್ನಾ ಶುಚಿಸ್ಸರ್ವಾಮರಪ್ರಿಯಃ ॥ ೫೭ ॥

ಅಭಿಲಾಷಾಷ್ಟಕಂ ಪುಣ್ಯಂ ಸ್ತೋತ್ರಮೇತತ್ತ್ವಯೇರಿತಂ ।
ಅಬ್ದತ್ರಿಕಾಲಪಠನಾತ್ಕಾಮದಂ ಶಿವಸನ್ನಿಧೌ ॥ ೫೮ ॥

ಏತತ್ಸ್ತೋತ್ರಪ್ರಪಠನಂ ಪುತ್ರಪೌತ್ರಧನಪ್ರದಂ ।
ಸರ್ವಶಾಂತಿಕರಶ್ಚಾಪಿ ಸರ್ವಾಪತ್ತಿವಿನಾಶನಂ ॥ ೫೯ ॥

---

೫೫. ಎಲೈ ಸನತ್ಕುಮಾರನೇ, ಹೀಗೆಂದು ನುಡಿದ ಶುದ್ಧಾಚಾರನಾದ ವಿಶ್ವಾನರಮಹರ್ಷಿಯ ಮಾತನ್ನು ಕೇಳಿ, ಪಾವನಮೂರ್ತಿಯಾದ ಆ ಶಿಶುವು ಶುದ್ಧವಾದ ತಿಳಿನಗೆಯನ್ನು ನಕ್ಕು ಈರೀತಿ ನುಡಿದನು.

೫೬. ಎಲೈ ಶುದ್ಧಶೀಲನೇ, ನೀನೂ ಶುಚಿಷ್ಮತಿಯೂ ಮನಸ್ಸಿನಲ್ಲಿ ಯಾವ ಅಭಿಲಾಷೆಯನ್ನು ಪಟ್ಟಿರುವಿರೋ ಆ ಅಭಿಲಾಷೆಯು ಬಹುಬೇಗನೇ ಖಂಡಿತವಾಗಿಯೂ ನೆರವೇರುವುದು. ಸಂಶಯಪಡಬೇಡ.

೫೭. ಎಲೈ ಮಹಾಬುದ್ಧಿಶಾಲಿಯೇ, ನಾನು ಶುಚಿಷ್ಮತಿಯಲ್ಲಿ ನಿನ್ನ ಮಗನಾಗಿ ಅವತರಿಸುವೆನು ಗೃಹಪತಿಯೆಂಬ ಹೆಸರಿನಿಂದ ಪ್ರಸಿದ್ಧನಾಗಿ ಎಲ್ಲ ದೇವತೆಗಳಿಗೂ ಪ್ರಿಯನೆನಿಸುವೆನು.

೫೮. ನೀನು ಹೇಳಿದ ಅಭಿಲಾಷಾಷ್ಟಕವೆಂಬ ಈ ಸ್ತೋತ್ರವು ಪುಣ್ಯಕರವಾದುದು. ಇದನ್ನು ಯಾವಾತನು ದಿನಕ್ಕೆ ಮೂರುಸಲದಂತೆ ಒಂದು ವರ್ಷಕಾಲ ಶಿವನ ಸನ್ನಿಧಿಯಲ್ಲಿ ಕೀರ್ತನೆಮಾಡುವನೋ ಅವನು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು.

೫೯. ಈ ಸ್ತೋತ್ರವನ್ನು ಪಠನೆಮಾಡಲು ಪುತ್ರರೂ ಪೌತ್ರರೂ ಧನಸಮೃದ್ಧಿಯೂ ಉಂಟಾಗುವುದು ಇದು ಸರ್ವವಿಧವಾದ ಆಪತ್ತುಗಳನ್ನೂ ಪರಿಹರಿಸುವುದಲ್ಲದೆ ಎಲ್ಲರಿಗೂ ಸಕಲ ಶಾಂತಿಯನ್ನೂ ಉಂಟುಮಾಡುವುದು.

ಸ್ವರ್ಗಾಪವರ್ಗಸಂಪತ್ತಿಕಾರಕಂ ನಾತ್ರ ಸಂಶಯಃ ।
ಸರ್ವಸ್ತೋತ್ರಸಮಂ ಹ್ಯೇತತ್ಸರ್ವಕಾಮಪ್ರದಂ ಸದಾ　　॥ ೬೦ ॥

ಪ್ರಾತರುತ್ಥಾಯ ಸುಸ್ನಾತೋ ಲಿಂಗಮಭ್ಯರ್ಚ್ಯ ಶಾಂಭವಂ ।
ವರ್ಷಂ ಜಪನ್ನಿದಂ ಸ್ತೋತ್ರಮಪುತ್ರಃ ಪುತ್ರವಾನ್ಭವೇತ್　　॥ ೬೧ ॥

ಅಭಿಲಾಷಾಷ್ಟಕಮಿದಂ ನ ದೇಯಂ ಯಸ್ಯ ಕಸ್ಯಚಿತ್ ।
ಗೋಪನೀಯಂ ಪ್ರಯತ್ನೇನ ಮಹಾವಂಧ್ಯಾಪ್ರಸೂತಿಕೃತ್　　॥ ೬೨ ॥

ಸ್ತ್ರಿಯಾ ವಾ ಪುರುಷೇಣಾಪಿ ನಿಯಮಾಲ್ಲಿಂಗಸನ್ನಿಧೌ ।
ಅಬ್ದಂ ಜಪ್ತಮಿದಂ ಸ್ತೋತ್ರಂ ಪುತ್ರದಂ ನಾತ್ರ ಸಂಶಯಃ　　॥ ೬೩ ॥

---

೬೦. ಅಲ್ಲದೆ ಇದು ಸ್ವರ್ಗಸುಖವನ್ನೂ ಮೋಕ್ಷಸಂಪತ್ತನ್ನೂ ಕರುಣಿಸುವುದು. ಇದರಲ್ಲಿ ಸಂಶಯವಿಲ್ಲ ಇದು ಎಲ್ಲ ಸ್ತೋತ್ರಗಳಿಗೂ ಸರಿಸಾಟಿಯಾದುದು. ಸರ್ವದಾ ಸಕಲೇಷ್ಟಾರ್ಥಗಳನ್ನೂ ಪೂರಣಗೊಳಿಸುವುದು

೬೧ ಬೆಳಗ್ಗೆ ಎದ್ದು ಶುದ್ಧವಾಗಿ ಸ್ನಾನಮಾಡಿ ಶಿವಲಿಂಗವನ್ನು ಸಂಪೂಜಿಸಿ ಒಂದು ವರ್ಷಕಾಲ ಮಕ್ಕಳಿಲ್ಲದವನು ಈ ಸ್ತೋತ್ರವನ್ನು ಕೀರ್ತನೆಮಾಡಿದರೆ ಅವನು ಮಕ್ಕಳನ್ನು ಪಡೆಯುವನು

೬೨ ಈ ಅಭಿಲಾಷಾಷ್ಟಕವು ಕಡುಬಂಜೆಗೂ ಕೂಡ ಮಕ್ಕಳಾಗುವಂತೆ ಮಾಡುವುದು. ಆದುದರಿಂದ ಪ್ರಯತ್ನಪೂರ್ವಕವಾಗಿ ಇದನ್ನು ರಹಸ್ಯವಾಗಿರಿಸಬೇಕಲ್ಲದೆ ಸಿಕ್ಕಿದವನಿಗೆ ಕೊಟ್ಟುಬಿಡಬಾರದು.

೬೩. ಸ್ತ್ರೀಯಾಗಲೀ, ಪುರುಷನಾಗಲೀ ನಿಯಮಪೂರ್ವಕವಾಗಿ ಶಿವಲಿಂಗದ ಸನ್ನಿಧಿಯಲ್ಲಿ ಒಂದು ವರ್ಷಕಾಲ ಈ ಅಭಿಲಾಷಾಷ್ಟಕವನ್ನು ಕೀರ್ತಿಸಲು ಪುತ್ರಸಂಪತ್ತು ನಿಸ್ಸಂಶಯವಾಗಿ ಉಂಟಾಗುವುದು.

**॥ ನಂದೀಶ್ವರ ಉವಾಚ ॥**

**ಇತ್ಯುಕ್ತ್ವಾಂತರ್ದಧೇ ಶಂಭುರ್ಬಾಲರೂಪಃ ಸತಾಂ ಗತಿಃ ।**
**ಸೋಽಪಿ ವಿಶ್ವಾನರೋ ವಿಪ್ರೋ ಹೃಷ್ಟಾತ್ಮಾ ಸ್ವಗೃಹಂ ಯಯೌ ॥ ೬೪ ॥**

**ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಗೃಹಪತ್ಯವತಾರವರ್ಣನಂ ನಾಮ ತ್ರಯೋದಶೋಽಧ್ಯಾಯಃ**

---

೬೪. ಎಲೈ ಸನತ್ಕುಮಾರನೇ, ಈರೀತಿಯಾಗಿ ನುಡಿದು ಸತ್ಪುರುಷರ ಸಂರಕ್ಷಕನೂ ಬಾಲರೂಪಧಾರಿಯೂ ಆದ ಆ ಶಂಕರನು ಅಂತರ್ಧಾನವನ್ನು ಹೊಂದಿದನು. ಬ್ರಾಹ್ಮಣೋತ್ತಮನಾದ ಆ ವಿಶ್ವಾನರಮುನಿಯೂ ಸಹ ಬಹು ಸಂತೋಷದಿಂದ ತನ್ನ ಮನೆಗೆ ತೆರಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಗೃಹಪತ್ಯವತಾರಲೀಲಾವರ್ಣನವೆಂಬ ಹದಿಮೂರನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಚತುರ್ದಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಸ ವಿಪ್ರೋ ಗೃಹಮಾಗತ್ಯ ಮಹಾಹರ್ಷಸಮನ್ವಿತಃ ।
ಪ್ರಿಯಾಯೈ ಕಥಯಾಮಾಸ ತದ್ವೃತ್ತಾಂತಮಶೇಷತಃ ॥ ೧ ॥

ತಚ್ಛ್ರುತ್ವಾ ವಿಪ್ರಪತ್ನೀ ಸಾ ಮುದಂ ಪ್ರಾಪ ಶುಚಿಷ್ಮತೀ ।
ಅತೀವ ಪ್ರೇಮಸಂಯುಕ್ತಾ ಪ್ರಶಶಂಸ ವಿಧಿಂ ನಿಜಂ ॥ ೨ ॥

---

### ಹದಿನಾಲ್ಕನೆಯ ಅಧ್ಯಾಯವು.

೧. ಎಲೈ ಸನತ್ಕುಮಾರಮುನಿಯೇ, ಆ ಬ್ರಾಹ್ಮಣನು ಮನೆಗೆ ಬಂದು ಮಹಾಸಂತೋಷದಿಂದ ಒಂದು ಚೂರೂ ಬಿಡದಂತೆ ಆ ಸಂಗತಿಯೆಲ್ಲವನ್ನೂ ತನ್ನ ಪ್ರಿಯೆಗೆ ತಿಳಿಸಿದನು.

೨. ಅದೆಲ್ಲವನ್ನೂ ಕೇಳಿ, ಆ ವಿಶ್ವಾನರಮುನಿಯ ಪತ್ನಿಯಾದ ಶುಚಿಷ್ಮತಿಯು ಬಹುಸಂತೋಷಪಟ್ಟು ತನ್ನ ಅದೃಷ್ಟವೇ ಅದೃಷ್ಟವೆಂದು ಹಿಗ್ಗಿದಳು.

**ಅಥ ಕಾಲೇನ ತದ್ಯೋಷಿದಂತರ್ವತ್ನೀ ಬಭೂವ ಹ ।**
**ವಿಧಿವದ್ವಿಹಿತೇ ತೇನ ಗರ್ಭಾಧಾನಾಖ್ಯಕರ್ಮಣಿ ॥ ೩ ॥**

**ತತಃ ಪುಂಸವನಂ ತೇನ ಸ್ಯಂದನಾತ್ಪ್ರಾಗ್ವಿಪಶ್ಚಿತಾ ।**
**ಗೃಹ್ಯೋಕ್ತವಿಧಿನಾ ಸಮ್ಯಕ್ಕೃತಂ ಪುಂಸ್ತ್ವವಿವೃದ್ಧಯೇ ॥ ೪ ॥**

**ಸೀಮಂತೋಽಥಾಷ್ಟಮೇ ಮಾಸೇ ಗರ್ಭರೂಪಸಮೃದ್ಧಿಕೃತ್ ।**
**ಸುಖಪ್ರಸವಸಿದ್ಧ್ಯೈ ಚ ತೇನಾಕಾರಿ ಕೃಪಾವಿದಾ ॥ ೫ ॥**

**ಅಥಾತಶ್ಶುಭತಾರಾಸು ತಾರಾಧಿಪವರಾನನಃ ।**
**ಕೇಂದ್ರೇ ಗುರೌ ಶುಭೇ ಲಗ್ನೇ ಸುಗ್ರಹೇಷು ಯುಗೇಷು ಚ ॥ ೬ ॥**

**ಅರಿಷ್ಟದೀಪನಿರ್ವಾಣಸ್ಸರ್ವಾರಿಷ್ಟವಿನಾಶಕೃತ್ ।**
**ತನಯೋ ನಾಮ ತಸ್ಯಾಂ ತು ಶುಚಿಷ್ಮತ್ಯಾಂ ಬಭೂವ ಹ ॥ ೭ ॥**

---

೩. ಕೆಲವುಕಾಲ ಕಳೆದಮೇಲೆ ಆ ವಿಪ್ರಪತ್ನಿಯು ಗರ್ಭಿಣಿಯಾದಳು. ಆ ವಿಶ್ವಾನರಮಹರ್ಷಿಯು ವಿಧಿಪೂರ್ವಕವಾಗಿ ಗರ್ಭಾಧಾನಸಂಸ್ಕಾರವನ್ನು ನಡೆಸಿದನು.

೪. ಅನಂತರ ಅಭಿಜ್ಞನಾದ ಆ ವಿಶ್ವಾನರನು, ಗರ್ಭವು ಪಿಂಡಾವಸ್ಥೆಯನ್ನು ತಳೆಯುವಮೊದಲೇ ಪುರುಷಶಿಶುವುಂಟಾಗಲೆಂದು ತನ್ನ ಗೃಹ್ಯಸೂಕ್ತವಿಧಿಗನುಸಾರವಾಗಿ ಪುಂಸವನಕರ್ಮವನ್ನು ಸಾಂಗವಾಗಿ ನೆರವೇರಿಸಿದನು

೫. ಸಂಸ್ಕಾರಜ್ಞನಾದ ಆ ವಿಶ್ವಾತ್ಮನು ಗರ್ಭಸ್ಥವಾದ ಶಿಶುವಿನ ರೂಪವು ಸಮೃದ್ಧಿಯನ್ನು ಪಡೆಯಲೋಸುಗವೂ ಸುಖವಾಗಿ ಪ್ರಸುವವಾಗುವಸಲುವಾಗಿಯೂ ಎಂಟನೆಯ ತಿಂಗಳಿನಲ್ಲಿ ಸೀಮಂತೋನ್ನಯನವನ್ನು ನಡೆಸಿದನು.

೬. ಅನಂತರ ಒಂದಾನೊಂದು ದಿವಸ ಒಳ್ಳೆಯ ನಕ್ಷತ್ರದಲ್ಲಿ ಗುರುವು ಕೇಂದ್ರಗತನಾಗಿರಲು ಒಳ್ಳೆಯ ಶುಭಗ್ರಹಗಳು ಪರಸ್ಪರ ಜೊತೆಯಾಗಿರಲು ಶುಭಲಗ್ನದಲ್ಲಿ ಚಂದ್ರನಂತೆ ಕಾಂತಿಯಿಂದ ಬೆಳಗುತ್ತಿರುವ ಮುಖವುಳ್ಳವನೂ,

೭. ಗರ್ಭಗೃಹದಲ್ಲಿರುವ ದೀಪಗಳನ್ನು ತನ್ನ ತೇಜಸ್ಸಿನಿಂದ ತೇಜೋಹೀನಗಳನ್ನಾಗಿ ಮಾಡುವವನೂ, ಸರ್ವವಿಧವಾದ ಅನಿಷ್ಟಗಳನ್ನೂ ಹೋಗಲಾಡಿಸುವಂತಹನೂ ಆದ ತನಯನು ಶುಚಿಷ್ಮತಿಯಲ್ಲಿ ಜನಿಸಿದನು.

ಶರ್ವಸ್ಸಮಸ್ತಸುಖದೋ ಭೂರ್ಭುವಸ್ಸ್ವರ್ನಿವಾಸಿನಾಂ ।
ಗಂಧವಾಹನವಾಹಾಶ್ಚ ದಿಗ್ವಧೂಮುರ್ಖವಾಸಸಃ ॥ ೮ ॥

ಇಷ್ಟಗಂಧಪ್ರಸೂನೌಘೈರ್ವವೃಷುಸ್ತೇ ಘನಾಘನಾಃ ।
ದೇವದುಂದುಭಯೋ ನೇದುಃ ಪ್ರಸೇದುಸ್ಸರ್ವತೋ ದಿಶಃ ॥ ೯ ॥

ಪರಿತಸ್ಸರಿತಸ್ಸ್ವಚ್ಛಾ ಭೂತಾನಾಂ ಮಾನಸೈಸ್ಸಹ ।
ತಮೋಽತಾಮ್ಯತ್ತು ನಿತರಾಂ ರಜೋಽಪಿ ವಿರಜೋಽಭವತ್ ॥ ೧೦ ॥

ಸತ್ತ್ವಸ್ಸತ್ತ್ವಸಮಾಯುಕ್ತಾಃ ಸುಧಾವೃಷ್ಟಿರ್ಬಭೂವ ವೈ ।
ಕಲ್ಯಾಣೀ ಸರ್ವಥಾ ವಾಣೀ ಪ್ರಾಣಿನಃ ಪ್ರಿಯವತ್ಯಭೂತ್ ॥ ೧೧ ॥

ರಂಭಾಮುಖ್ಯಾ ಅಪ್ಸರಸೋ ಮಂಗಲದ್ರವ್ಯಪಾಣಯಃ ।
ವಿದ್ಯಾಧರ್ಯಶ್ಚ ಕಿನ್ನರ್ಯಸ್ತಥಾಮರ್ಯಸ್ಸಹಸ್ರಶಃ ॥ ೧೨ ॥

೮-೯. ಭೂಲೋಕದಲ್ಲಿಯೂ ಭುವರ್ಲೋಕದಲ್ಲಿಯೂ ಸುವರ್ಲೋಕದಲ್ಲಿಯೂ ಇರುವ ಸಮಸ್ತ ಪ್ರಾಣಿಗಳಿಗೂ ಸುಖದಾಯಕನೆನಿಸಿದ ಶ್ರೀ ಶಂಕರನೇ ಶುಚಿಸ್ಮತೀಸುತನಾಗಿ ಅವತರಿಸಿದನು. ಆಗ ದಿಗಂಗನೆಯರ ಮುಖಾರವಿಂದಗಳಿಂದ ಸುವಾಸನೆಯನ್ನು ಹೊತ್ತು ಗಾಳಿಯಿಂದ ತೇಲಿಬರುತ್ತಿರುವ ಮಹಾಮೇಘಗಳು ಹಿತಕರವಾದ ಕಂಪನ್ನು ಬೀರುವ ಹೂವಿನರಾಶಿಗಳನ್ನು ಮಳೆಗರೆದುವು. ದೇವದುಂದುಭಿಗಳು ಮೊಳಗಿದುವು. ಎಲ್ಲ ದಿಕ್ಕುಗಳೂ ಮೋಡ ಮೊದಲಾದುವುಗಳಿಂದ ಮರೆಯಾಗದೆ ಶುಭ್ರವಾದವು.

೧೦. ಸುತ್ತಲೂ ಹರಿಯುತ್ತಿದ್ದ ನದಿಗಳೆಲ್ಲವೂ ನಿಖಿಲ ಪ್ರಾಣಿಗಳ ಮನಸ್ಸುಗಳೊಡನೆ ನಿರ್ಮಲತೆಯನ್ನು ಪಡೆದುವು. ತಮಸ್ಸು ಸಂಪೂರ್ಣವಾಗಿ ಅಡಗಿಹೋಯಿತು. ರಜೋಗುಣವೂ ಶಾಂತವಾಯಿತು.

೧೧. ಸಕಲ ಪ್ರಾಣಿಗಳೂ ಸತ್ತ್ವಗುಣವನ್ನು ತಾಳಿದುವು. ಅಮೃತವರ್ಷವು ಉಂಟಾಯಿತು. ಪ್ರಾಣಿಗಳೆಲ್ಲರೂ ಮಂಗಲಮಯವಾದ ಪ್ರಿಯಕರವಾದ ಮಾತನ್ನೇ ಆಡತೊಡಗಿದರು.

೧೨. ಆಗ ರಂಭೆ ಮೊದಲಾದ ಅಪ್ಸರಸ್ತ್ರೀಯರೂ ವಿದ್ಯಾಧರಿಯರೂ ಕಿನ್ನರಿಯರೂ ಇತರ ದೇವಾಂಗನೆಯರೂ ಸಾವಿರಾರುಗಟ್ಟಲೆ ಗುಂಪುಗುಂಪಾಗಿ ಅಲ್ಲಿಗೆ ಬಂದರು.

ಗಂಧರ್ವೋರಗಯಕ್ಷಾಣಾಂ ಸುಮಾನಿನ್ಯಃ ಶುಭಸ್ವರಾಃ ।
ಗಾಯಂತ್ಯೋ ಮಂಗಲಂ ಗೀತಂ ತತ್ರಾಜಗ್ಮುರನೇಕಶಃ ॥ ೧೩ ॥

ಮರೀಚಿರತ್ರಿಃ ಪುಲಹಃ ಪುಲಸ್ತ್ಯಃ ಕ್ರತುರಂಗಿರಾಃ ।
ವಸಿಷ್ಠಃ ಕಶ್ಯಪೋಽಗಸ್ತ್ಯೋ ವಿಭಾಂಡೋ ಮಾಂಡವೀಸುತಃ ॥ ೧೪ ॥

ಲೋಮಶೋ ರೋಮಚರಣೋ ಭರದ್ವಾಜೋಽಥ ಗೌತಮಃ ।
ಭೃಗುಸ್ತು ಗಾಲವೋ ಗರ್ಗೋ ಜಾತೂಕರ್ಣಃ ಪರಾಶರಃ ॥ ೧೫ ॥

ಆಪಸ್ತಂಬೋ ಯಾಜ್ಞವಲ್ಕ್ಯೋ ದಕ್ಷವಾಲ್ಮೀಕಿಮುದ್ಗಲಾಃ ।
ಶಾತಾತಪಶ್ಚ ಲಿಖಿತಶ್ಶಿಲಾದಃ ಶಂಖ ಉಂಛಭುಕ್ ॥ ೧೬ ॥

ಜಮದಗ್ನಿಶ್ಚ ಸಂವರ್ತೋ ಮತಂಗೋ ಭರತೋಂಶುಮಾನ್ ।
ವ್ಯಾಸಃ ಕಾತ್ಯಾಯನಃ ಕುತ್ಸಃ ಶೌನಕಸ್ಸುಶ್ರುತಶ್ಶುಕಃ ॥ ೧೭ ॥

ಋಷ್ಯಶೃಂಗೋಽಥ ದುರ್ವಾಸಾಶ್ಶುಚಿರ್ನಾರದತುಂಬುರೂ ।
ಉತ್ತಂಕೋ ವಾಮದೇವಶ್ಚ ಪವನೋಽಸಿತದೇವಲೌ ॥ ೧೮ ॥

ಸಾಲಂಕಾಯನಹಾರೀತೌ ವಿಶ್ವಾಮಿತ್ರೋಽಥ ಭಾರ್ಗವಃ ।
ಮೃಕಂಡುಸ್ಸಹ ಪುತ್ರೇಣ ಪರ್ವತೋ ದಾರುಕಸ್ತಥಾ ॥ ೧೯ ॥

---

೧೩. ಆದರಂತೆ ಗಂಧರ್ವಸ್ತ್ರೀಯರೂ ನಾಗಾಂಗನೆಯರೂ ಯಕ್ಷವನಿತೆಯರೂ ಬಂದರು. ಅವರೆಲ್ಲರೂ ಮಂಗಲದ್ರವ್ಯಗಳನ್ನು ಹಿಡಿದು ಶುಭಕರವಾದ ಧ್ವನಿಯಿಂದ ಮಂಗಲಗೀತಗಳನ್ನು ಹಾಡುತ್ತಾ ಗುಂಪುಗುಂಪಾಗಿ ಬಂದರು.

೧೪-೨೦. ಆಗ ಆ ಕುಮಾರನಿಗೆ ಶಾಂತಿಕರ್ಮಗಳನ್ನು ಬೆಳೆಸಲು ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಕ್ರತು, ಅಂಗಿರಸ್ಸು, ವಸಿಷ್ಠ, ಕಶ್ಯಪ, ಅಗಸ್ತ್ಯ, ವಿಭಾಂಡಕ, ಮಾಂಡವ್ಯ, ಲೋಮಶ, ರೋಮಪಾದ, ಭರದ್ವಾಜ, ಗೌತಮ, ಭೃಗು, ಗಾಲವ, ಗರ್ಗ, ಜಾತೂಕರ್ಣ, ಪರಾಶರ, ಆಪಸ್ತಂಬ, ಯಾಜ್ಞವಲ್ಕ್ಯ, ದಕ್ಷ, ವಾಲ್ಮೀಕಿ, ಮುದ್ಗಲ, ಶಾತಾತಪ, ಲಿಖಿತ, ಶಿಲಾದ, ಶಂಖ, ಉಂಛಭುಕ್, ಜಮದಗ್ನಿ, ಸಂವರ್ತ, ಮತಂಗ, ಭರತ, ಅಂಶುಮಂತ, ವ್ಯಾಸ, ಕಾತ್ಯಾಯನ, ಕುತ್ಸ. ಶೌನಕ, ಸುಶ್ರುತ, ಶುಕ, ಋಷ್ಯಶೃಂಗ, ದುರ್ವಾಸ, ಶುಚಿ, ನಾರದ,

ಧೌಮ್ಯೋಪಮನ್ಯುವತ್ಸಾದ್ಯಾ ಮುನಯೋ ಮುನಿಕನ್ಯಕಾಃ ।
ತಚ್ಛಾಂತ್ಯರ್ಥಂ ಸಮಾಜಗ್ಮುರ್ಧನ್ಯಂ ವಿಶ್ವಾನರಾಶ್ರಮಂ ॥ ೨೦ ॥

ಬ್ರಹ್ಮಾ ಬೃಹಸ್ಪತಿಯುತೋ ದೇವೋ ಗರುಡವಾಹನಃ ।
ನಂದಿಭೃಂಗಿಸಮಾಯುಕ್ತೋ ಗೌರ್ಯಾ ಸಹ ವೃಷಧ್ವಜಃ ॥ ೨೧ ॥

ಮಹೇಂದ್ರಮುಖ್ಯಾ ಗೀರ್ವಾಣಾ ನಾಗಾಃ ಪಾತಾಲವಾಸಿನಃ ।
ರತ್ನಾನ್ಯಾದಾಯ ಬಹುಶಸ್ಸರಿತ್ಕಾ ಮಹಾಬ್ಧಯಃ ॥ ೨೨ ॥

ಸ್ಥಾವರಾ ಜಂಗಮಂ ರೂಪಂ ಧೃತ್ವಾ ಯಾತಾಸ್ಸಹಸ್ರಶಃ ।
ಮಹಾಮಹೋತ್ಸವೇ ತಸ್ಮಿನ್ಪಭೂವಾಕಾಲಕೌಮುದೀ ॥ ೨೩ ॥

---

ತುಂಬುರು, ಉತ್ತಂಕ, ವಾಮದೇವ, ಪವನ, ಅಸಿತ, ದೇವಲ ಸಾಲಂಕಾಯನ, ಹಾರೀತ, ವಿಶ್ವಾಮಿತ್ರ, ಭಾರ್ಗವ, ಮೃಕಂಡು, ಮಾರ್ಕಂಡೇಯ, ಪರ್ವತ, ದಾರುಕ ಧೌಮ್ಯ, ಉಪಮನ್ಯು, ವತ್ಸ ಮೊದಲಾದ ಮುನಿಗಳೂ ಮುನಿಕನ್ನಿಕೆಯರೂ ವಿಶ್ವಾನರ ಮುನಿಯ ಆಶ್ರಮಕ್ಕೆ ಬಂದರು.

೨೧-೨೨ ಅದರಂತೆ ಬೃಹಸ್ಪತಿಯೊಡನೆ ಬ್ರಹ್ಮನೂ, ಗರುಡವಾಹನನಾದ ವಿಷ್ಣುವೂ ನಂದಿ, ಭೃಂಗಿ, ಗೌರೀದೇವಿಯರೊಡಗೂಡಿ ಶಿವನೂ, ಇಂದ್ರಾದಿತಿದೇವತೆಗಳೂ, ಪಾತಾಳಲೋಕವಾಸಿಗಳಾದ ನಾಗರೂ ಬಂದರು ಮಹಾಸಾಗರಗಳು ತಮ್ಮ ಪ್ರಿಯೆಯರಾದ ನದಿಗಳೊಂದಿಗೆ ರತ್ನರಾಶಿಗಳನ್ನು ಕಾಣಿಕೆಯಾಗಿ ತೆಗೆದುಕೊಂಡು ಅಲ್ಲಿಗೆ ಬಂದರು.

೨೩ ಹಿಂದೆ ಹೇಳಿದ ಸಾಗರಾದಿಗಳಾದ ಅಚಲವಾದ ವಸ್ತುಗಳೆಲ್ಲವೂ ಓಡಾಡುವಂತಹ ಆಕೃತಿಯನ್ನು ಧರಿಸಿ, ಸಾವಿರಗಟ್ಟಲೆ ಗುಂಪುಗುಂಪಾಗಿ ಬಂದು ಸೇರಿದುವು. ಈ ಮಹೋತ್ಸವ ಸಮಯದಲ್ಲಿ ಅಕಾಲವಾದರೂ ಬೆಳದಿಂಗಳು ಬೆಳೆಯುತ್ತಿತ್ತು.

ಜಾತಕರ್ಮ ಸ್ವಯಂ ತಸ್ಯ ಕೃತವಾನ್ವಿಧಿರಾನತಃ ।
ಶ್ರುತಿಂ ವಿಚಾರ್ಯ ತದ್ರೂಪಂ ನಾಮ್ನಾ ಗೃಹಪತಿಸ್ತ್ವಯಂ ॥ ೨೪ ॥

ಇತಿ ನಾಮ ದದೌ ತಸ್ಮೈ ದೇಯಮೇಕಾದಶೇಽಹನಿ ।
ನಾಮಕರ್ಮವಿಧಾನೇನ ತದರ್ಥಂ ಶ್ರುತಿಮುಚ್ಚರನ್ ॥ ೨೫ ॥

ಚತುರ್ನಿಗಮಮಂತ್ರೋಕ್ತೈರಾಶೀಭಿರಭಿನಂದ್ಯ ಚ ।
ಸಮಯೋದ್ಧಂಸಮಾರುಹ್ಯ ಸರ್ವೇಷಾಂ ಚ ಪಿತಾಮಹಃ ॥ ೨೬ ॥

ಕೃತ್ವಾ ಬಾಲೋಚಿತಾಂ ರಕ್ಷಾಂ ಲೌಕಿಕೀಂ ಗತಿಮಾಶ್ರಿತಃ ।
ಆರುಹ್ಯ ಯಾನಂ ಸ್ವಂ ಧಾಮ ಹರೋಽಪಿ ಹರಿಣಾ ಯಯೌ ॥ ೨೭ ॥

ಅಹೋ ರೂಪಮಹೋ ತೇಜಸ್ತ್ವಹೋ ಸರ್ವಾಂಗಲಕ್ಷಣಂ ।
ಅಹೋ ಶುಚಿಷ್ಮತೀ ಭಾಗ್ಯಮಾವಿರಾಸೀತ್ಸ್ವಯಂ ಹರಃ ॥ ೨೮ ॥

---

೨೪. ಆಗ ಆ ಕುಮಾರನಿಗೆ ಜಾತಕರ್ಮಸಂಸ್ಕಾರವನ್ನು ಸಾಕ್ಷಾದ್ಬ್ರಹ್ಮನೇ ಪ್ರೀತಿಯಿಂದ ನಡೆಸಿದನು. ಬಳಿಕ ಶ್ರುತ್ಯರ್ಥವನ್ನು ಪರಿಶೀಲಿಸಿ ಆ ಶಿಶುವಿನ ರೂಪವನ್ನು ನೋಡಿ,

೨೫. ಹನ್ನೊಂದನೆಯ ದಿವಸದಲ್ಲಿ ಇಡಬೇಕಾದಂತಹ ಆ ಹೆಸರನ್ನು ಗೃಹಪತಿ ಎಂಬುದಾಗಿ ಇರಲೆಂದು ನಿಶ್ಚಯಿಸಿ, ವೇದಮಂತ್ರಗಳನ್ನು ಉಚ್ಚರಿಸುತ್ತಾ ನಾಮಕರಣವಿಧಿಯಿಂದ ಗೃಹಪತಿ ಎಂಬುದಾಗಿ ಆ ಕುಮಾರನಿಗೆ ಹೆಸರಿಟ್ಟನು.

೨೬. ಎಲ್ಲರಿಗೂ ಪಿತಾಮಹನಾದ ಆ ಬ್ರಹ್ಮನು ನಾಲ್ಕು ವೇದಗಳ ಮಂತ್ರಗಳಿಂದ ಆ ಶಿಶುವನ್ನು ಆಶೀರ್ವದಿಸಿ ಬಳಿಕ ಹಂಸವನ್ನೇರಿ ತನ್ನ ಲೋಕಕ್ಕೆ ತೆರಳಿದನು.

೨೭. ಅನಂತರ ಶ್ರೀ ಶಂಕರನೂ ಸಹ ಲೋಕವ್ಯವಹಾರವನ್ನು ಅನುಸರಿಸಿ, ವಿಷ್ಣುವಿನೊಡನೆ ಆ ಮಗುವಿಗೆ ಉಚಿತವಾದ ರಕ್ಷಾಕರ್ಮವನ್ನು ನೆರವೇರಿಸಿ ತನ್ನ ವಾಹನವನ್ನೇರಿ ತನ್ನ ಲೋಕಕ್ಕೆ ತೆರಳಿದನು.

೨೮. ಅಬ್ಬಾ ! ಆ ಕುಮಾರನ ರೂಪವೆಂತಹುದು ? ಎಂತಹ ತೇಜಸ್ಸು ! ಸರ್ವಾಂಗಗಳಲ್ಲಿಯೂ ಎಂತಹ ಶುಭಲಕ್ಷಣಗಳು ! ಆ ಶುಚಿಷ್ಮತಿಯ ಭಾಗ್ಯವನ್ನು ಏನೆಂದು ಹೇಳೋಣ ! ಸಾಕ್ಷಾತ್ ಶ್ರೀ ಶಂಕರನೇ ಅವಳ ಕುಮಾರನಾಗಿ ಅವತರಿಸಿಬಿಟ್ಟನಲ್ಲಾ !

ಅಥ ವಾ ಕಿಮಿದಂ ಚಿತ್ರಂ ಸರ್ವಭಕ್ತಜನೇಷ್ವಹೋ ।
ಸ್ವಯಮಾವಿರಭೂದ್ರುದ್ರೋ ಯತೋ ರುದ್ರಸ್ತದರ್ಚಿತಃ ॥ ೨೯ ॥

ಇತಿ ಸ್ತುವಂತಸ್ತೇಽನ್ಯೋನ್ಯಂ ಸಂಪ್ರಹೃಷ್ಟತನೂರುಹಾಃ ।
ವಿಶ್ವಾನರಂ ಸಮಾಪೃಚ್ಛ್ಯ ಜಗ್ಮುಃ ಸರ್ವೇ ಯಥಾಗತಂ ॥ ೩೦ ॥

ಅತಃ ಪುತ್ರಂ ಸಮೀಹಂತೇ ಗೃಹಸ್ಥಾಶ್ರಮವಾಸಿನಃ ।
ಪುತ್ರೇಣ ಲೋಕಾಞ್ಜಯತಿ ಶ್ರುತಿರೇಷಾ ಸನಾತನೀ ॥ ೩೧ ॥

ಅಪುತ್ರಸ್ಯ ಗೃಹಂ ಶೂನ್ಯಮಪುತ್ರಸ್ಯಾರ್ಜನಂ ವೃಥಾ ।
ಅಪುತ್ರಸ್ಯ ತಪಶ್ಛಿನ್ನಂ ನೋಪವಿತ್ರತ್ಯಪುತ್ರತಃ ॥ ೩೨ ॥

---

೨೯. ಇರಲಿ, ಒಂದುರೀತಿಯಲ್ಲಿ ಇದೇನೂ ಆಶ್ಚರ್ಯಪಡಬೇಕಾದಂತಹುದೇನೂ ಅಲ್ಲ. ಭಕ್ತರಾದವರಿಗೆ ಇದು ಸಹಜವೇ ಸಾಕ್ಷಾತ್ ಶ್ರೀ ಶಂಕರನೇ ಆ ವಿಶ್ವಾನರಮುನಿಯ ಪೂಜೆಯಿಂದ ಸುಪ್ರೀತನಾಗಿ ತಾನಾಗಿಯೇ ಆವಿರ್ಭವಿಸಿದನು

೩೦. ಹೀಗೆಂದು ಒಬ್ಬರೊಬ್ಬರೊಡನೆ ಆ ದಂಪತಿಗಳನ್ನು ಕೊಂಡಾಡುತ್ತಾ ರೋಮಾಂಚಕಂಚುಕಿತರಾಗಿ ಅಲ್ಲಿಗೆ ಒಂದಿದ್ದವರೆಲ್ಲರೂ ವಿಶ್ವಾನರಮುನಿಯನ್ನು ಬೀಳ್ಕೊಂಡು ತಮ್ಮತಮ್ಮ ಮನೆಗಳಿಗೆ ಹಿಂದುರುಗಿದರು.

೩೧. ಆದುದರಿಂದಲೇ ಗೃಹಸ್ಥರಾದವರು ಪುತ್ರನಿಗೆ ಹಂಬಲಿಸುವರು. ಏಕೆಂದರೆ ತಂದೆಯಾದವನು ಮಗನಿಂದ ಉತ್ತಮವಾದ ಲೋಕಗಳನ್ನು ಪಡೆಯುವನು ಹೀಗೆಂಬುದಾಗಿ ಸನಾತನವಾದ ವೇದವು ಸಾರಿಹೇಳುವುದು.

೩೨. ಮನೆಯು ಧನಕನಕಗಳಿಂದ ಸಮೃದ್ಧವಾಗಿದ್ದರೂ ಮಕ್ಕಳಿಲ್ಲದಿದ್ದರೆ ಅದು ಶೂನ್ಯವೇ ಮಕ್ಕಳಿಲ್ಲದವನು ಸಂಪಾದಿಸುವುದೆಲ್ಲವೂ ವ್ಯರ್ಥವೇ. ಪುತ್ರಹೀನನಾದವನು ಎಷ್ಟು ತಪಸ್ಸುಮಾಡಿದರೇನು ? ಅದು ಮುಗಿದುಹೋದಂತೆಯೇ ಅಪುತ್ರನು ಎಂದಿಗೂ ಶುದ್ಧನಲ್ಲ

ನ ಪುತ್ರಾತ್ಪರಮೋ ಲಾಭೋ ನ ಪುತ್ರಾತ್ಪರಮಂ ಸುಖಂ ।
ನ ಪುತ್ರಾತ್ಪರಮಂ ಮಿತ್ರಂ ಪರತ್ರೇಹ ಚ ಕುತ್ರಚಿತ್ ॥ ೩೩ ॥

ನಿಷ್ಕ್ರಮೋಽಥ ಚತುರ್ಥೇಽಸ್ಯ ಮಾಸಿ ಪಿತ್ರಾ ಕೃತೋ ಗೃಹಾತ್ ।
ಅನ್ನಪ್ರಾಶನಮಬ್ದಾಹೇ ಚೂಡಾರ್ಥೇ ಚಾರ್ಥವತ್ಕೃತಾ ॥ ೩೪ ॥

ಕರ್ಣವೇಧಂ ತತಃ ಕೃತ್ವಾ ಶ್ರವಣರ್ಕ್ಷೇ ಸ ಕರ್ಮವಿತ್ ।
ಬ್ರಹ್ಮತೇಜೋಽಭಿವೃದ್ಧ್ಯರ್ಥಂ ಪಂಚಮೇಽಬ್ದೇ ವ್ರತಂ ದದೌ ॥ ೩೫ ॥

ಉಪಾಕರ್ಮ ತತಃ ಕೃತ್ವಾ ವೇದಾನಧ್ಯಾಪಯತ್ಸುಧೀಃ ।
ಅಬ್ದಂ ವೇದಾನ್ಸ ವಿಧಿನಾಽಧ್ಯೈಷ್ಟ ಸಾಂಗಪದಕ್ರಮಾನ್ ॥ ೩೬ ॥

---

೩೩. ಪುತ್ರನಿಗಿಂತಲೂ ಹೆಚ್ಚಾದ ಬೇರೊಂದು ಲಾಭವೂ ಇಲ್ಲ. ಪುತ್ರನಿಗಿಂತಲೂ ಮೇಲಾದ ಸುಖವು ಮತ್ತೊಂದಿಲ್ಲ. ಪರಲೋಕದಲ್ಲಿಯೂ ಇಹಲೋಕದಲ್ಲಿಯೂ ಪುತ್ರನಿಗಿಂತಲೂ ಶ್ರೇಷ್ಠನಾದ ಸ್ನೇಹಿತನಿನ್ನೊಬ್ಬನು ಇಲ್ಲ.

೩೪. ಆ ವಿಶ್ವಾನರಮುನಿಯು ಆ ಕುಮಾರನಿಗೆ ನಾಲ್ಕುತಿಂಗಳು ತುಂಬಲು ಮನೆಯಿಂದಾಚೆಗೆ ಮಗುವನ್ನು ಕರೆದುಕೊಂಡುಬಂದು ನಿಷ್ಕ್ರಮಣಮಹೋತ್ಸವವನ್ನು ಬೆಳೆಸಿದನು. ಒಂದುವರ್ಷವಾಗಲು ಅನ್ನಪ್ರಾಶನವನ್ನೂ, ಅನಂತರ ಕೆಲವು ಕಾಲವಾದಮೇಲೆ ಚೂಡಾಕರ್ಮವನ್ನೂ ವಿಧಿವತ್ತಾಗಿ ನೆರವೇರಿಸಿದನು.

೩೫. ಮಹಾಕರ್ಮಠನಾದ ಆ ವಿಶ್ವಾನರನು, ಆ ಮಗುವಿಗೆ ಕಿವಿಯನ್ನು ಚುಚ್ಚಿ ಅನಂತರ ಐದನೆಯ ವರ್ಷದಲ್ಲಿ ಆ ಕುಮಾರನಿಗೆ ಬ್ರಹ್ಮತೇಜಸ್ಸು ಅಭಿವೃದ್ಧಿಯಾಗಲೆಂದು ಶ್ರವಣನಕ್ಷತ್ರಯುಕ್ತವಾದ ಶುಭದಿನದಲ್ಲಿ ಉಪನಯನವನ್ನು ನಡೆಸಿದನು.

೩೬. ಬಳಿಕ ಆ ವಿದ್ವಾಂಸನು, ಉಪಾಕರ್ಮವನ್ನು ನೆರವೇರಿಸಿ ಅವನಿಗೆ ವೇದಾಧ್ಯಯನವನ್ನು ಮಾಡಿಸಿದನು. ಆ ಕುಮಾರನು ಒಂದುವರ್ಷದೊಳಗಾಗಿ ಪದಕ್ರಮಗಳೊಡನೆ ನಾಲ್ಕು ವೇದಗಳನ್ನೂ ವೇದಾಂಗಗಳನ್ನೂ ಕಲಿತನು.

ವಿದ್ಯಾಜಾತಂ ಸಮಸ್ತಂ ಚ ಸಾಕ್ಷಿಮಾತ್ರಂ ಗುರೋರ್ಮುಖಾತ್ ।
ವಿನಯಾದಿಗುಣಾನಾವಿಷ್ಕುರ್ವನ್ನಗ್ರಾಹ ಶಕ್ತಿಮಾನ್ ॥ ೩೭ ॥

ತತೋಽಥ ನವಮೇ ವರ್ಷೇ ಪಿತ್ರೋಃಶುಶ್ರೂಷಣೇ ರತಂ ।
ವೈಶ್ವಾನರಂ ಗೃಹಪತಿಂ ದ್ರಷ್ಟುಮಾಯಾಚ್ಚ ನಾರದಃ ॥ ೩೮ ॥

ವಿಶ್ವಾನರೋಟಜಂ ಪ್ರಾಪ್ಯ ದೇವರ್ಷಿಸ್ತಂ ತು ಕೌತುಕೀ ।
ಅಪೃಚ್ಛತ್ಕುಶಲಂ ತತ್ರ ಗೃಹೀತಾರ್ಧ್ಯಾಸನಃ ಕ್ರಮಾತ್ ॥ ೩೯ ॥

ತತಃ ಸರ್ವಂ ಚ ತದ್ಭಾಗ್ಯಂ ಪುತ್ರಧರ್ಮಂ ಚ ಸನ್ಮುಖೇ ।
ವೈಶ್ವಾನರಂ ಸಮುವದತ್ಸ್ಮೃತ್ವಾ ಶಿವಪದಾಂಬುಜಂ ॥ ೪೦ ॥

---

೩೭. ಶಕ್ತಿಶಾಲಿಯಾದ ಆ ಗೃಹಪತಿಯು, ಸಾಕ್ಷಿಮಾತ್ರಕ್ಕಾಗಿ (ನೆಪಕ್ಕಾಗಿ) ಗುರುವೊಬ್ಬನ ಬಳಿಸಾರಿ, ಆತನ ಮುಖದಿಂದ ಸಕಲ ವಿದ್ಯೆಗಳನ್ನೂ ಕಲಿತನು. ವಿನಯಸೌಶೀಲ್ಯಾದಿ ಸದ್ಗುಣಗಳನ್ನು ಜಗತ್ತಿಗೆ ತೋರಿಸಲು ಆತನು ಈರೀತಿ ಸ್ವಯಂಶಕ್ತನಾದರೂ ಕಲಿತನು

೩೮ ಅನಂತರ ಆ ವಿಶ್ವಾನರಮುನಿಯ ಮಗನಾದ ಗೃಹಪತಿಗೆ ಒಂಭತ್ತನೆಯ ವರ್ಷವು ನಡೆಯುತ್ತಿರಲು, ತಾಯಿತಂದೆಗಳ ಶುಶ್ರೂಷೆಯಲ್ಲಿಯೇ ಆಸಕ್ತನಾಗಿದ್ದ ಆ ಕುಮಾರನನ್ನು ಕಾಣಬೇಕೆಂದು ನಾರದಮಹರ್ಷಿಯು ಆಗಮಿಸಿದನು.

೩೯ ಆ ದೇವರ್ಷಿಯು ಕುತೂಹಲಭರಿತನಾಗಿ ವಿಶ್ವಾನರಮುನಿಯ ಪರ್ಣಶಾಲೆಯನ್ನು ಹೊಕ್ಕು ಅಲ್ಲಿ ವಿಶ್ವಾನರಮುನಿಯು ಆದರದಿಂದ ಅರ್ಘ್ಯಾಸನವನ್ನೀಯಲು ಅದನ್ನು ಸ್ವೀಕರಿಸಿ ಕ್ರಮವಾಗಿ ಕ್ಷೇಮಲಾಭಗಳನ್ನು ವಿಚಾರಿಸಿದನು.

೪೦. ಬಳಿಕ ಆತನ ಸಂಪತ್ತೆಲ್ಲವನ್ನೂ ವಿಚಾರಿಸಿ ಅವನ ಮಗನಾದ ಗೃಹಪತಿಯ ನಡೆವಳಿಕೆಗಳನ್ನೂ ವಿಚಾರಿಸಿ, ಅನಂತರ ಆ ಕುಮಾರನನ್ನು ಕರೆದು ಶಿವನ ಚರಣಕಮಲಗಳನ್ನು ಹೃದಯದಲ್ಲಿ ನೆನೆದು ಇತ್ತಬಾರೆಂದು ನುಡಿದನು.

॥ ನಂದೀಶ್ವರ ಉವಾಚ ॥

ಇತ್ಯುಕ್ತೋ ಮುನಿನಾ ಬಾಲಃ ಪಿತ್ರೋರಾಜ್ಞಾಮವಾಪ್ಯ ಸಃ ।
ಪ್ರಣಮ್ಯ ನಾರದಂ ಶ್ರೀಮಾನ್ಭಕ್ತ್ಯಾ ಪ್ರಹ್ವ ಉಪಾವಿಶತ್ ॥ ೪೧ ॥

ವೈಶ್ವಾನರ ಸಮಭ್ಯೇಹಿ ಮಮೋತ್ಸಂಗೇ ನಿಷೀದ ಭೋಃ ।
ಲಕ್ಷಣಾನಿ ಪರೀಕ್ಷೇಽಹಂ ಪಾಣಿಂ ದರ್ಶಯ ದಕ್ಷಿಣಂ ॥ ೪೨ ॥

ತತೋ ದೃಷ್ಟ್ವಾ ತು ಸರ್ವಂ ಹಿ ತಾಲುಜಿಹ್ವಾದಿ ನಾರದಃ ।
ವಿಶ್ವಾನರಂ ಸಮವದಚ್ಛಿವಪ್ರೇರಣಯಾ ಸುಧೀಃ ॥ ೪೩ ॥

॥ ನಾರದ ಉವಾಚ ॥

ವಿಶ್ವಾನರಮುನೇ ವಚ್ಮಿ ಶೃಣು ಪುಂತ್ರಾಂಕಮಾದರಾತ್ ।
ಸರ್ವಾಂಗಸ್ವಂಕವಾನ್ಪುತ್ರೋ ಮಹಾಲಕ್ಷಣವಾನಯಂ ॥ ೪೪ ॥

---

೪೧ ಎಲೈ ಮುನಿಯೇ, ಈರೀತಿಯಾಗಿ ನಾರದಮಹರ್ಷಿಯು ಹೇಳಲು ತಾಯ್ತಂದೆಗಳ ಅಪ್ಪಣೆಯನ್ನು ಪಡೆದು ಆ ಕುಮಾರನು ಬಹುಭಕ್ತಿಯಿಂದ ಆ ಮಹರ್ಷಿಗೆ ನಮಸ್ಕರಿಸಿ ವಿನೀತನಾಗಿ ಬಳಿಯಲ್ಲಿ ಕುಳಿತುಕೊಂಡನು.

೪೨. ಎಲೈ ವಿಶ್ವಾನರಪುತ್ರನೇ, ಇತ್ತಬಾ, ನನ್ನ ತೊಡೆಯಮೇಲೆ ಕುಳಿತುಕೊ. ನಿನ್ನ ಲಕ್ಷಣಗಳೆಲ್ಲವನ್ನೂ ಪರೀಕ್ಷಿಸುವೆನು ನಿನ್ನ ಬಲಗೈಯ್ಯನ್ನು ತೋರಿಸು. ಎಂದು ನಾರದಮಹರ್ಷಿಯು ಕರೆಯಲು ಆ ಗೃಹಪತಿಯು ಆರೀತಿ ಮಾಡಿದನು.

೪೩. ಕುಶಲನಾದ ಆ ನಾರದಮುನಿಯು ಅವನ ತಾಲು (ಕಟುವಾಯಿ) ಜಿಹ್ವೆ ಮೊದಲಾದ ಅವಯವಗಳೆಲ್ಲವನ್ನೂ ಪರೀಕ್ಷಿಸಿ ಶಿವನ ಪ್ರೇರಣೆಯಿಂದ ವಿಶ್ವಾನರ ಮುನಿಯನ್ನು ಕುರಿತು ಇಂತೆಂದನು.

೪೪. ಎಲೈ ವಿಶ್ವಾನರಮಹರ್ಷಿಯೇ, ನಿನ್ನ ಮಗನ ಶುಭಕರವಾದ ಚಿಹ್ನೆಗಳನ್ನು ಹೇಳುವೆನು, ಆದರದಿಂದ ಕೇಳು. ಈ ನಿನ್ನ ಮಗನು ಸರ್ವಾವಯವಗಳಲ್ಲಿಯೂ ಶುಭಕರವಾದ ಚಿಹ್ನೆಗಳನ್ನು ತಾಳಿ ಮಹಾಲಕ್ಷಣವಂತನೆನಿಸಿರುವನು.

ಕಿಂತು ಸರ್ವಗುಣೋಪೇತಂ ಸರ್ವಲಕ್ಷಣಲಕ್ಷಿತಂ ।
ಸಂಪೂರ್ಣನಿರ್ಮಲಕಲಂ ಪಾಲಯೇದ್ವಿಧುವದ್ವಿಧಿಃ ॥ ೪೫ ॥

ತಸ್ಮಾತ್ಸರ್ವಪ್ರಯತ್ನೇನ ರಕ್ಷಣೀಯಸ್ತ್ವಸೌ ಶಿಶುಃ ।
ಗುಣೋಽಪಿ ದೋಷತಾಂ ಯಾತಿ ವಕ್ರೀಭೂತೇ ವಿಧಾತರಿ ॥ ೪೬ ॥

ಶಂಕೇಽಸ್ಯ ದ್ವಾದಶೇ ಮಾಸಿ ಪ್ರತ್ಯೂಹೋ ವಿದ್ಯುದಗ್ನಿತಃ ।
ಇತ್ಯುಕ್ತ್ವಾ ನಾರದೋಽಗಚ್ಛದ್ದೇವಲೋಕಂ ಯಥಾಗತಂ ॥ ೪೭ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಗೃಹಪತ್ಯವತಾರವರ್ಣನಂ ನಾಮ ಚತುರ್ದಶೋಽಧ್ಯಾಯಃ

---

೪೫ ಆದರೆ ಸಕಲಗುಣಗಣಮಂಡಿತನೂ, ಎಲ್ಲಾವಿಧವಾದ ಸುಲಕ್ಷಣ ಶಾಲಿಯೂ, ಸಕಲಕಲಾಪರಿಪೂರ್ಣನೂ, ನಿಷ್ಕಲಂಕನೂ ಆದ ಈ ಮಗುವನ್ನು ಬ್ರಹ್ಮನು ಚಂದ್ರನಂತೆ ರಕ್ಷಿಸುವನು (ಆಯುರ್ಹೀನನೆಂದು ಭಾವವು)

೪೬ ಆದುದರಿಂದ ಸಕಲ ಪ್ರಯತ್ನದಿಂದಲೂ ಈ ಕುಮಾರನನ್ನು ಸಂರಕ್ಷಿಸು ವಿಧಿಯು ವಿಪರೀತವಾಗಿರಲು ಗುಣವೂ ಸಹ ದೋಷವಾಗಿಬಿಡುವುದು.

೪೭ ಇಂದಿಗೆ ಹನ್ನೆರಡನೆಯ ತಿಂಗಳಿನಲ್ಲಿ ಈ ಕುಮಾರನಿಗೆ ಮಿಂಚಿನಿಂದುಂಟಾದ ಬೆಂಕಿಯಿಂದ (ಸಿಡಿಲಿನಿಂದ) ತೊಂದರೆಯಾಗುವಂತಿದೆ, ಎಚ್ಚರಿಕೆ, ಎಂದು ಹೇಳಿ ನಾರದನು ದೇವಲೋಕಕ್ಕೆ ಬಂದಹಾಗೆಯೇ ಹಿಂದಿರುಗಿದನು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಗೃಹಪತ್ಯವತಾರವರ್ಣನವೆಂಬ ಹದಿನಾಲ್ಕನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಪಂಚದಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ವಿಶ್ವಾನರಸ್ಸಪತ್ನೀಕಸ್ತಚ್ಛ್ರುತ್ವಾ ನಾರದೇರಿತಂ ।
ತದೇವಂ ಮನ್ಯಮಾನೋಽಭೂದ್ವಜ್ರಪಾತಂ ಸುದಾರುಣಂ ॥ ೧ ॥

ಹಾ ಹತೋಽಸ್ಮೀತಿ ವಚಸಾ ಹೃದಯಂ ಸಮತಾಡಯತ್ ।
ಮೂರ್ಛಾಮವಾಪ ಮಹತೀಂ ಪುತ್ರಶೋಕಸಮಾಕುಲಃ ॥ ೨ ॥

---

## ಹದಿನೈದನೆಯ ಅಧ್ಯಾಯವು.

೧. ಎಲೈ ಸನತ್ಕುಮಾರಮುನಿಯೇ, ನಾರದಮಹರ್ಷಿಯು ಹೇಳಿದ ಮಾತನ್ನು ಕೇಳಿದೊಡನೆ ಆ ವಿಶ್ವಾನರಮುನಿಯು, ತನ್ನ ಪತ್ನಿಯಾದ ಶುಚಿಸ್ಮತಿಯೊಂದಿಗೆ ಘೋರವಾದ ಸಿಡಿಲುಬಡಿದಂತೆ ಭಾವಿಸಿದನು.

೨. ಅಯ್ಯೋ ! ಸತ್ತೆನು ಎಂದು ಅಳುತ್ತಾ ಎದೆಯನ್ನು ಬಡಿದುಕೊಂಡನು. ಪುತ್ರನು ಕೈಬಿಡುವನೆಂಬ ದುಃಖವು ಮಿತಿಮೀರಲು ಅತಿಯಾದ ಮೂರ್ಛೆಯನ್ನು ಹೊಂದಿದನು.

ಶುಚಿಷ್ಮತ್ಯಪಿ ದುಃಖಾರ್ತಾ ರುರೋದಾತೀವ ದುಸ್ಸಹಂ ।
ಅತಿಸ್ವರೇಣ ಹಾರಾವೈರತ್ಯಂತಂ ವ್ಯಾಕುಲೇಂದ್ರಿಯಾ ॥ ೩ ॥

ಶ್ರುತ್ವಾರ್ತನಾದಮಿತಿ ವಿಶ್ವನರೋಽಪಿ ಮೋಹಂ
ಹಿತ್ವೋತ್ಥಿತಃ ಕಿಮಿತಿ ಕಿಂತ್ವಿತಿ ಕಿಂ ಕಿಮೇತತ್ ।
ಉಚ್ಚೈರ್ವದನ್ಗೃಹಪತಿಃ ಕ್ವ ಸ ಮೇ ಬಹಿಸ್ಥಃ
ಪ್ರಾಣೋಂತರಾತ್ಮನಿಲಯಸ್ಸಕಲೇಂದ್ರಿಯೇಶಃ ॥ ೪ ॥

ತತೋ ದೃಷ್ಟ್ವಾ ಸ ಪಿತರೌ ಬಹುಶೋಕಸಮಾವೃತೌ ।
ಸ್ಮಿತ್ವೋವಾಚ ಗೃಹಪತಿಸ್ಸಬಾಲಶ್ಶಂಕರಾಂಶಜಃ ॥ ೫ ॥

॥ ಗೃಹಪತಿರುವಾಚ ॥

ಹೇ ಮಾತಸ್ತಾತ ಕಿಂ ಜಾತಂ ಕಾರಣಂ ತದ್ವದಾಧುನಾ ।
ಕಿಮರ್ಥಂ ರುದಿತೋಽತ್ಯರ್ಥಂ ತ್ರಾಸಸ್ತಾದೃಕ್ಕುತೋ ಹಿ ವಾಂ ॥ ೬ ॥

---

೩ ಆ ಶುಚಿಷ್ಮತಿಯೂ ಸಹ ಮಹಾದುಃಖವನ್ನು ತಾಳಿ ಇಂದ್ರಿಯಗಳೆಲ್ಲಾ ಮಿತಿಮೀರಿ ವ್ಯಾಕುಲತೆಯನ್ನು ಹೊಂದಲು, ಯಾರಿಗೂ ನೋಡಲು ಸಾಧ್ಯವಿಲ್ಲದಂತೆ ಗಟ್ಟಿಯಾಗಿ ಹಾಹಾಕಾರವನ್ನು ಮಾಡುತ್ತಾ ಗೋಳಾಡಿದಳು.

೪. ಈ ಆರ್ತನಾದವನ್ನು ಕೇಳಿ ವಿಶ್ವಾನರನೂ ಮೂರ್ಛೆಯನ್ನು ತಿಳಿದೆದ್ದು ಏನಿದು, ಏನಾಯಿತು, ಏನು, ಇದೇನು ಎಂಬುದಾಗಿ ಕೂಗುತ್ತಾ ಅಯ್ಯೋ ! ನನ್ನ ಗೃಹಪತಿಯೆಲ್ಲಿರುವನು ? ಸಕಲೇಂದ್ರಿಯಗಳಿಗೂ ಅಧಿಪತಿಯಾದ ಆ ನನ್ನ ಹೊರಗಿನ ಪ್ರಾಣವೆಲ್ಲಿರುವನು ? ಎಂದು ಹಂಬಲಿಸಿದನು

೫ ಹೀಗೆ ಮಹಾದುಃಖದಿಂದ ಪರಿತಪಿಸುತ್ತಿರುವ ತನ್ನ ತಾಯ್ತಂದೆಗಳನ್ನು ಕಂಡು ಶಿವಾಂಶಸಂಭೂತನಾದ ಆ ಬಾಲಕನಾದ ಗೃಹಪತಿಯು ನಸುನಕ್ಕು ಅವರನ್ನು ಕುರಿತು ಇಂತೆಂದನು

೬. ಅಮ್ಮಾ, ಅಪ್ಪಾ, ನೀವೇಕೆ ಇಷ್ಟು ಜೋರಾಗಿ ಅಳುತ್ತಿರುವಿರಿ ? ಏತಕ್ಕೋಸ್ಕರ ಅಳುತ್ತಿರುವಿರಿ ? ಅದನ್ನೀಗಲೇ ತಿಳಿಸಿರಿ. ನಿಮಗೆ ಏತರಿಂದ ಅಂತಹ ಹೆದರಿಕೆಯು ಉಂಟಾಗಿರುವುದು ?

ನ ಮಾಂ ಕೃತವಪುಸ್ತ್ರಾಣಂ ಭವಚ್ಚರಣರೇಣುಭಿಃ ।
ಕಾಲಃ ಕಲಯಿತುಂ ಶಕ್ತೋ ವರಾಕೀಂ ಚಿಂಚಲಾಲ್ಪಿಕಾ ॥ ೭ ॥

ಪ್ರತಿಜ್ಞಾಂ ಶೃಣುತಾಂ ತಾತೌ ಯದಿ ವಾಂ ತನಯೋ ಹ್ಯಹಂ ।
ಕರಿಷ್ಯೇಽಹಂ ತಥಾ ಯೇನ ಮೃತ್ಯುಸ್ತ್ರಸ್ತೋ ಭವಿಷ್ಯತಿ ॥ ೮ ॥

ಮೃತ್ಯುಂಜಯಂ ಸಮಾರಾಧ್ಯ ಸರ್ವಜ್ಞಂ ಸರ್ವದಂ ಸತಾಂ ।
ಜಪಿಷ್ಯಾಮಿ ಮಹಾಕಾಲಂ ಸತ್ಯಂ ತಾತೌ ವದಾಮ್ಯಹಂ ॥ ೯ ॥

॥ ನಂದೀಶ್ವರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಜಾರಿತೌ ದ್ವಿಜದಂಪತೀ ।
ಅಕಾಲಾಮೃತವರ್ಷೌಘೈರ್ಗತತಾಪೌ ತದೋಚತುಃ ॥ ೧೦ ॥

॥ ದ್ವಿಜದಂಪತೀ ಊಚತುಃ ॥

ಪುನರ್ಬ್ರೂಹಿ ಪುನರ್ಬ್ರೂಹಿ ಕೀದೃಕ್ಕೀದೃಕ್ಪುನರ್ವದ ।
ಕಾಲಃ ಕಲಯಿತಂ ನಾಲಂ ವರಾಕೀ ಚಂಚಲಾಸ್ತಿ ಕಾ ॥ ೧೧ ॥

---

೭. ನಿಮ್ಮ ಪಾದಧೂಳಿಯೇ ನನಗೆ ವಜ್ರಕವಚವಾಗಿರಲು ಕಾಲನಾದರೂ ನನ್ನನ್ನು ಮುಟ್ಟಲು ಸಾಧ್ಯವಿಲ್ಲ ಹೀಗಿರಲು ಈ ಅಲ್ಪವಾದ ಮಿಂಚು ನನ್ನನ್ನು ಏನು ಮಾಡೀತು ?

೮. ಎಲೈ ಜನನೀಜನಕರೇ, ನನ್ನೀ ಪ್ರತಿಜ್ಞೆಯನ್ನು ಕೇಳಿರಿ. ನಿಮಗೆ ನಾನು ಮಗನೇ ಆಗಿದ್ದ ಪಕ್ಷದಲ್ಲಿ ಮೃತ್ಯುವೂ ಸಹ ಹೆದರಿ ಓಡುವಂತೆ ಮಾಡುವೆನು.

೯. ಓ ತಾಯ್ತಂದೆಗಳೇ, ಸರ್ವಜ್ಞನೂ, ಸತ್ಪುರುಷರಿಗೆ ಸಕಲೇಷ್ಟಾರ್ಥಗಳನ್ನೂ ಈಯುವವನೂ, ಮೃತ್ಯುವನ್ನು ಜಯಿಸಿದವನೂ ಆದ ಆ ಮಹಾಕಾಲನನ್ನು ಅರ್ಚನೆಮಾಡಿ ಆತನನ್ನೇ ಧ್ಯಾನಿಸುತ್ತಾ ಇರುವೆನು ಎಂದನು.

೧೦. ಎಲೈ ಮುನಿಯೇ, ಈರೀತಿ ಗೃಹಪತಿಯು ನುಡಿದ ಮಾತನ್ನು ಕೇಳಿ ಆ ಬ್ರಾಹ್ಮಣದಂಪತಿಗಳಿಬ್ಬರೂ ಆಕಸ್ಮಿಕವಾಗಿ ಅಮೃತದಮಳೆಯು ಸುರಿದಂತಾಗಿ ತಮ್ಮ ತಾಪವೆಲ್ಲವನ್ನೂ ಕಳೆದುಕೊಂಡು ಈರೀತಿ ನುಡಿದರು

೧೧. ಹೇಳು, ಇನ್ನೊಮ್ಮೆ ಹೇಳು, ಏನು, ಎಂತಹುದು ? ಕಾಲನು ನಿನ್ನನ್ನು ಮುಟ್ಟಲೂ ಆಗಲಾರನೆಂದೆಯಾ ? ಆ ಒಡಪಾಯಿ ಚಂಚಲೆಯಾದ ಮಿಂಚು ನನ್ನನ್ನೇನು ಮಾಡೀತು ಎಂದೆಯಾ, ಮತ್ತೊಮ್ಮೆ ಹೇಳು.

ಆಪಯೋಽಸ್ತಾಪನಾಶಾಯ ಮಹೋಪಾಯಸ್ತ್ವಯೇರಿತಃ ।
ಮೃತ್ಯುಂಜಯಾಖ್ಯದೇವಸ್ಯ ಸಮಾರಾಧನಲಕ್ಷಣಃ ॥ ೧೨ ॥

ತದ್ವಚ್ಛ ಶರಣಂ ಶಂಭೋರ್ನಾತಃ ಪರತರಂ ಹಿ ತತ್ ।
ಮನೋರಥಪಥಾತೀತಕಾರಿಣಃ ಪಾಪಹಾರಿಣಃ ॥ ೧೩ ॥

ಕಿನ್ನ ಶ್ರುತಂ ತ್ವಯಾ ತಾತ ಶ್ವೇತಕೇತುಂ ಯಥಾ ಪುರಾ ।
ಪಾಶಿತಂ ಕಾಲಪಾಶೇನ ರರಕ್ಷ ತ್ರಿಪುರಾಂತಕಃ ॥ ೧೪ ॥

ಶಿಲಾದತನಯಂ ಮೃತ್ಯುಗ್ರಸ್ತಮಷ್ಟಾಬ್ದಮಾತ್ರಕಂ ।
ಶಿವೋ ನಿಜಜನಂ ಚಕ್ರೇ ನಂದಿನಂ ವಿಶ್ವನಂದಿನಂ ॥ ೧೫ ॥

ಕ್ಷೀರೋದಮಥನೋದ್ಭೂತಂ ಪ್ರಲಯಾನಲಸನ್ನಿಭಂ ।
ಪೀತ್ವಾ ಹಾಲಾಹಲಂ ಘೋರಮರಕ್ಷದ್ಭುವನತ್ರಯಂ ॥ ೧೬ ॥

---

೧೨. ನಮ್ಮಿಬ್ಬರ ದುಃಖವನ್ನು ಹೋಗಲಾಡಿಸಲು ಮೃತ್ಯುಂಜಯನೆಂದು ಪ್ರಖ್ಯಾತನಾದ ಆ ಶಂಕರನ ಸೇವೆಯಂತಹ ಶ್ರೇಷ್ಠವಾದ ಉಪಾಯವನ್ನೇ ನೀನು ಹುಡುಕಿಹೇಳಿದೆ

೧೩ ಆದುದರಿಂದ ಆ ಶಿವನನ್ನೇ ಮರೆಹೊಗುವವನಾಗು ಆಸೆಯ ಎಣಿಕೆಗೂ ಮೀರಿದಂತಹ ವಸ್ತುಗಳನ್ನು ಕರುಣಿಸುವ ಪಾಪಪರಿಹಾರಕನಾದ ಆ ಶಂಕರನಿಗಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ

೧೪ ಅಪ್ಪಾ, ಹಿಂದೆ ಯಮನಪಾಶಕ್ಕೆ ಗುರಿಯಾಗಿದ್ದ ಶ್ವೇತಕೇತುವೆಂಬುವನನ್ನು ಆ ತ್ರಿಪುರಾರಿಯು ಸಂರಕ್ಷಿಸಿದನೆಂಬುದನ್ನು ನೀನು ಕೇಳಲಿಲ್ಲವೇ ?

೧೫ ಇನ್ನೂ ಎಂಟುವರ್ಷದ ಹಸುಳೆಯಾಗಿರುವಾಗಲೇ ಮೃತ್ಯುವಿಗೆ ತುತ್ತಾಗಿದ್ದ ಶಿಲಾದಮುನಿಯ ಪುತ್ರನಾದ ವಿಶ್ವಾನಂದಕರ ನಂದಿಯನ್ನು ಶಿವನು ತನ್ನ ಪರಿಜನನ್ನಾಗಿ ಮಾಡಿಕೊಂಡುದು ನಿನಗೆ ತಿಳಿಯದೇ ?

೧೬. ಕ್ಷೀರಸಮುದ್ರವನ್ನು ಮಥಿಸುವಾಗ ಪ್ರಳಯಕಾಲದ ಬೆಂಕಿಯಂತೆ ಸುಡುಸುಡುತ್ತಾ ಹುಟ್ಟಿ ಆವರಿಸುತ್ತಾಬರುತ್ತಿರುವ ಘೋರವಾದ ಹಾಲಾಹಲವನ್ನು ಪಾನಮಾಡಿ ಮೂರು ಲೋಕವನ್ನೂ ಆ ಶಂಕರನು ಸಂರಕ್ಷಿಸಿದುದನ್ನು ನೀನರಿಯೆಯಾ ?

ಜಲಂಧರಂ ಮಹಾದರ್ಪಂ ಹೃತತ್ರೈಲೋಕ್ಯಸಂಪದಂ ।
ರುಚಿರಾಂಗುಷ್ಠರೇಖೋತ್ಥ ಚಕ್ರೇಣ ನಿಜಘಾನ ಯಃ ॥ ೧೭ ॥

ಯ ಏಕೇಷುನಿಪಾತೋತ್ಥ ಜ್ವಲನ್ನೈಸ್ತ್ರಿಪುರಂ ಪುರಾ ।
ತ್ರೈಲೋಕ್ಯೈಶ್ವರ್ಯಸಂಮೂಢಂ ಶೋಷಯಾಮಾಸ ಭಾನುನಾ ॥ ೧೮ ॥

ಕಾಮಂ ದೃಷ್ಟಿನಿಪಾತೇನ ತ್ರೈಲೋಕ್ಯವಿಜಯೋರ್ಜಿತಂ ।
ನಿನಾಯಾನಂಗಪದವೀಂ ವೀಕ್ಷ್ಯಮಾಣೇಷ್ವಜಾದಿಷು ॥ ೧೯ ॥

ತಂ ಬ್ರಹ್ಮಾದ್ಯೈಕಕರ್ತಾರಂ ಮೇಘವಾಹನಮಚ್ಯುತಂ ।
ಪ್ರಯಾಹಿ ಪುತ್ರ ಶರಣಂ ವಿಶ್ವರಕ್ಷಾಮಣಿಂ ಶಿವಂ ॥ ೨೦ ॥

---

೧೭. ಮೂರುಲೋಕಗಳ ಐಶ್ವರ್ಯವೆಲ್ಲವನ್ನೂ ಕೊಳ್ಳೆಹೊಡೆದು ಮಹಾದರ್ಪ ದಿಂದ ಮೆರೆಯುತ್ತಿದ್ದ ಜಲಂಧರನೆಂಬ ದೈತ್ಯನನ್ನು ಆ ಶಿವನು ತನ್ನ ಮುದ್ದಾದ ಕಾಲ್ಬೆರಳಿನಿಂದ ಗುರುತುಮಾಡಿದ ಗೆರೆಯಿಂದುಂಟಾದ ಚಕ್ರದಿಂದಲೇ ಸಂಹರಿಸಿ ದುದನ್ನು ಕೇಳಿ ಅರಿಯೆಯಾ ?

೧೮. ಆ ಶಂಕರನು, ಮೂರು ಲೋಕಗಳ ಐಶ್ವರ್ಯವೆಲ್ಲವನ್ನೂ ದೋಚಿ ಮಹಾಮದದಿಂದ ಮತಿಗೆಟ್ಟಿದ್ದ ಆ ತ್ರಿಪುರಾಸುರರನ್ನು ಒಂದೇ ಒಂದು ಬಾಣದಿಂದ ಉಂಟಾದ ಬೆಂಕಿಯ ಜ್ವಾಲೆಗಳಿಂದ ಹಿಂದೆ ತರಗೆಲೆಯಂತೆ ಸುಟ್ಟುಬಿಟ್ಟುದು ನಿನಗೆ ತಿಳಿಯದೇನು ?

೧೯. ಮೂರು ಲೋಕಗಳನ್ನೂ ವಶಪಡಿಸಿಗೊಂಡೆನೆಂಬ ಹೆಮ್ಮೆಯಿಂದ ಉಬ್ಬುತ್ತಿದ್ದ ಆ ಮನ್ಮಥನನ್ನು ಅದೇ ಶಿವನು ಒಂದೇಒಂದು ನೋಟದಿಂದ ಬ್ರಹ್ಮಾದಿ ದೇವತೆಗಳು ನೋಡುತ್ತಿರುವಂತೆಯೇ ಶರೀರವೇ ಇಲ್ಲದಂತೆ ಮಾಡಿಬಿಟ್ಟುದೂ ನಿನಗೆ ಗೊತ್ತಿಲ್ಲವೇ ?

೨೦. ಎಲೈ ಪುತ್ರನೇ, ಬ್ರಹ್ಮಾದಿಗಳಿಗೂ ಯಾವನು ಸೃಷ್ಟಿಕರ್ತನೋ, ಯಾವನು ನಾಶವೇ ಇಲ್ಲದವನೋ, ಯಾವನು ಮೇಘವನ್ನೇ ವಾಹನನಾಗಿ ಉಳ್ಳವನೋ, ಅಂತಹ ಪ್ರಪಂಚಕ್ಕೇ ರಕ್ಷಾಮಣಿಯೆನಿಸಿದ ಶಿವನನ್ನು ಮರೆಹೊಗುವವನಾಗು.

॥ ನಂದೀಶ್ವರ ಉವಾಚ ॥

ಪಿತ್ರೋರನುಜ್ಞಾಂ ಪ್ರಾಪ್ಯೇತಿ ಪ್ರಣಮ್ಯ ಚರಣೌ ತಯೋಃ ।
ಪ್ರಾದಕ್ಷಿಣ್ಯಮುಪಾವೃತ್ಯ ಬಹ್ವಾಶ್ವಾಸ್ಯ ವಿನಿರ್ಯಯೌ ॥ ೨೧ ॥

ಸಂಪ್ರಾಪ್ಯ ಕಾಶೀಂ ದುಷ್ಪ್ರಾಪಾಂ ಬ್ರಹ್ಮನಾರಾಯಣಾದಿಭಿಃ ।
ಮಹಾಸಂವರ್ತಸಂತಾಪಹಂತ್ರೀಂ ವಿಶ್ವೇಶಪಾಲಿತಾಂ ॥ ೨೨ ॥

ಸ್ವರ್ಧುನ್ಯಾ ಹಾರಯಷ್ಟ್ಯೇವ ರಾಜಿತಾಂ ಕಂಠಭೂಮಿಷು ।
ವಿಚಿತ್ರಗುಣಶಾಲಿನ್ಯಾ ಹರಪತ್ನ್ಯಾ ವಿರಾಜಿತಾಂ ॥ ೨೩ ॥

ತತ್ರ ಪ್ರಾಪ್ಯ ಸ ವಿಪ್ರೇಶಃ ಪ್ರಾಗ್ಯಯೌ ಮಣಿಕರ್ಣಿಕಾಂ ।
ತತ್ರ ಸ್ನಾತ್ವಾ ವಿಧಾನೇನ ದೃಷ್ಟ್ವಾ ವಿಶ್ವೇಶ್ವರಂ ಪ್ರಭುಂ ॥ ೨೪ ॥

ಸಾಂಜಲಿರ್ನತಶೀರ್ಷೋಽಸೌ ಮಹಾನಂದಾನ್ವಿತಸ್ಸುಧೀಃ ।
ತ್ರೈಲೋಕ್ಯಪ್ರಾಣಸಂತ್ರಾಣಕಾರಿಣಂ ಪ್ರಣನಾಮ ಹ ॥ ೨೫ ॥

---

೨೧ ಎಲೈ ಸನತ್ಕುಮಾರಮುನಿಯೇ, ಈರೀತಿ ತಾಯಿತಂದೆಗಳ ಅಪ್ಪಣೆಯನ್ನು ಪಡೆದು ಆ ಗೃಹಪತಿಯು ಅವರನ್ನು ಪ್ರದಕ್ಷಿಣೆಮಾಡಿ ಅವರ ಕಾಲ್ಗಳಿಗೆ ನಮಸ್ಕರಿಸಿ ಅವರನ್ನು ಬಹುವಿಧವಾಗಿ ಸಂತೈಸಿ ಅಲ್ಲಿಂದ ಹೊರಟನು

೨೨ ಬಳಿಕ ಬ್ರಹ್ಮ, ನಾರಾಯಣ ಮೊದಲಾದವರಿಗೂ ಹೊಂದಲು ಅಸಾಧ್ಯವೆನಿಸಿದ, ಮಹಾಪ್ರಳಯಕಾಲದ ಸಂತಾಪವನ್ನು ಪರಿಹರಿಸುವುದಾದ, ವಿಶ್ವೇಶ್ವರನಿಂದ ಸುರಕ್ಷಿತವಾದ ಕಾಶೀನಗರವನ್ನು ಹೊಂದಿದನು

೨೩. ಆ ಕಾಶೀಕ್ಷೇತ್ರದ ಪರಿಸರ (ಬಳಿಯ) ಪ್ರದೇಶದಲ್ಲಿ ಅದ್ಭುತವಾದ ಗುಣಗಳಿಂದ ಪರಿಶೋಭಿತಳಾದ ದೇವನದಿಯು (ಗಂಗೆಯು) ಕೊರಳಹಾರದಂತೆಕಂಗೊಳಿಸುತ್ತಿರುವಳು ಆಕ್ಷೇತ್ರದಲ್ಲಿ ಶಿವಪತ್ನಿಯಾದ ಪಾರ್ವತಿಯೂ ರಾರಾಜಿಸುತ್ತಿರುವಳು.

೨೪-೨೫. ಕಾಶೀಕ್ಷೇತ್ರವನ್ನು ಸೇರಿದಬಳಿಕ ಆ ವಿಪ್ರೋತ್ತಮನು ಮಣಿಕರ್ಣಿಕೆಗೆ ಮೊದಲು ಹೋಗಿ ಅಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ಅನಂತರ ಲೋಕತ್ರಯನಿವಾಸಿಗಳ ಪ್ರಾಣಗಳನ್ನು ಸಂರಕ್ಷಿಸಲು ಸಿದ್ಧನಾಗಿರುವ ಪ್ರಭುವಾದ ವಿಶ್ವೇಶ್ವರನನ್ನು ಕಂಡು ಕೈಗಳನ್ನು ಮುಗಿದುಕೊಂಡು ತಲೆವಾಗಿ ಮಹಾಸಂತೋಷಭರಿತನಾಗಿ ನಮಸ್ಕಾರಮಾಡಿದನು.

ಆಲೋಕ್ಯಾಲೋಕ್ಯ ತಲ್ಲಿಂಗಂ ತುತೋಷ ಹೃದಯೇ ಮುಹುಃ ।
ಪರಮಾನಂದಕಂದಾಢ್ಯಂ ಸ್ಫುಟಮೇತನ್ನ ಸಂಶಯಃ ॥ ೨೬ ॥

ಅಹೋ ನ ಮತ್ತೋ ಧನ್ಯೋಽಸ್ತಿ ತ್ರೈಲೋಕ್ಯೇ ಸಚರಾಚರೇ ।
ಯದದ್ರಾಕ್ಷಿಷಮದ್ಯಾಹಂ ಶ್ರೀಮದ್ವಿಶ್ವೇಶ್ವರಂ ವಿಭುಂ ॥ ೨೭ ॥

ಮಮ ಭಾಗ್ಯೋದಯಾಯೈವ ನಾರದೇನ ಮಹರ್ಷಿಣಾ ।
ಪುರಾಗತ್ಯ ತಥೋಕ್ತಂ ಯತ್ಕೃತಕೃತ್ಯೋಽಸ್ಮ್ಯಹಂ ತತಃ ॥ ೨೮ ॥

॥ ನಂದೀಶ್ವರ ಉವಾಚ ॥

ಇತ್ಯಾನಂದಾಮೃತರಸೈರ್ವಿಧಾಯ ಸ ಹಿ ಪಾರಣಂ ।
ತತಶ್ಶುಭೇಹ್ನಿ ಸಂಸ್ಥಾಪ್ಯ ಲಿಂಗಂ ಸರ್ವಹಿತಪ್ರದಂ ॥ ೨೯ ॥

---

೨೬. ಸಾಕ್ಷಾತ್ ಪರಮಾನಂದದ ಕಂದ (ಗೆಡ್ಡೆ) ದಂತೆ ಕಂಗೊಳಿಸುವ ಆ ವಿಶ್ವೇಶ್ವರಲಿಂಗವನ್ನು ನೋಡಿನೋಡಿ ಹೃದಯದಲ್ಲಿ ಅತಿಶಯವಾದ ಆನಂದವನ್ನು ತಾಳಿದನು.

೨೭. ಭಲೆ, ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ ನನಗಿಂತಲೂ ಬೇರೆ ಧನ್ಯನಾವನೂ ಇಲ್ಲವು. ಏಕೆಂದರೆ, ಈದಿನ ವಿಭುವಾದ ಸಾಕ್ಷಾದ್ವಿಶ್ವೇಶ್ವರನನ್ನು ಸಂದರ್ಶನಮಾಡಿದೆನು.

೨೮. ನನಗೆ ಭಾಗ್ಯಪರಂಪರೆಯುಂಟಾಗಲೆಂದೇ ಹಿಂದೆ ನಾರದಮಹರ್ಷಿಯು ನಮ್ಮಾಶ್ರಮಕ್ಕೆ ಬಂದು ಹಾಗೆ ಹೇಳಿದನು. ಆದುದರಿಂದಲೇ ಅಲ್ಲವೇ ನಾನೀದಿನ ಶ್ರೀ ವಿಶ್ವೇಶ್ವರನನ್ನು ಕಂಡು ಕೃತಾರ್ಥನಾದುದು.

೨೯. ಎಲೈ ಸನತ್ಕುಮಾರನೇ, ಈರೀತಿ ಆನಂದವೆಂಬ ಅಮೃತರಸಪಾನದಿಂದ ಆ ಗೃಹಪತಿಯು ಪಾರಣೆಯನ್ನು ಮಾಡಿ ಬಳಿಕ ಶುಭವಾದ ದಿವಸದಲ್ಲಿ ಸರ್ವಕಾಮ ಫಲಪ್ರದವಾದ ಲಿಂಗವನ್ನು ಸ್ಥಾಪಿಸಿ, ಕೃತಾರ್ಥರಲ್ಲದವರು ಮಾಡಲಸಾಧ್ಯವಾದ ಘೋರವಾದ ನಿಯಮಗಳನ್ನು ಕೈಗೊಂಡನು.

ಜಗ್ರಾಹ ನಿಯಮಾನ್ಘೋರಾನ್ದುಷ್ಕರಾನಕೃತಾತ್ಮಭಿಃ ।
ಅಷ್ಟೋತ್ತರಶತೈಃ ಕುಂಭೈಃ ಪೂರ್ಣೈರ್ಗಂಗಾಂಭಸಾ ಶುಭೈಃ ॥ ೩೦ ॥

ಸಂಸ್ನಾಪ್ಯ ವಾಸಸಾ ಪೂತೈಃ ಪೂತಾತ್ಮಾ ಪ್ರತ್ಯಹಂ ಶಿವಂ ।
ನೀಲೋತ್ಪಲಮಯೀಂ ಮಾಲಾಂ ಸಮರ್ಪಯತಿ ಸೋಽನ್ವಹಂ ॥ ೩೧ ॥

ಅಷ್ಟಾಧಿಕಸಹಸ್ರೈಸ್ತು ಸುಮನೋಭಿರ್ವಿನಿರ್ಮಿತಾಂ
ಸ ಪಕ್ಷೇ ವಾಥ ವಾ ಮಾಸೇ ಕಂದಮೂಲಫಲಾಶನಃ ॥ ೩೨ ॥

ಶೀರ್ಣಪರ್ಣಾಶನೈರ್ಧೀರಃ ಷಣ್ಮಾಸಂ ಸಂಬಭೂವ ಸಃ ।
ಷಣ್ಮಾಸಂ ವಾಯುಭಕ್ಷೋಽಭೂತ್ಷಣ್ಮಾಸಂ ಜಲಬಿಂದುಭುಕ್ ॥ ೩೩ ॥

ಏವಂ ವರ್ಷವಯಸ್ತಸ್ಯ ವ್ಯತಿಕ್ರಾಂತಂ ಮಹಾತ್ಮನಃ ।
ಶಿವೈಕಮನಸೋ ವಿಪ್ರಾಸ್ತಪ್ಯಮಾನಸ್ಯ ನಾರದ ॥ ೩೪ ॥

---

೩೦-೩೧. ಆತನು ಪ್ರತಿನಿತ್ಯವೂ ಶುಭ್ರವಾದ ವಸ್ತ್ರಗಳಿಂದ ಪರಿಪೂತತವಾದ ಗಂಗೋದಕದಿಂದ ಪರಿಪೂರ್ಣವಾದ ನೂರೆಂಟು ಪೂರ್ಣಕಲಶಗಳಿಂದ ಆ ಶಿವಲಿಂಗ ವನ್ನು ಪರಿಶುದ್ಧಹೃದಯದಿಂದ ಸ್ನಾನಮಾಡಿಸಿ ಸಾವಿರದೆಂಟು ಕನ್ನೈದಿಲೆಹೂಗಳನ್ನು ನೇರಿಸಿ ಕಟ್ಟಿದ ಮಾಲೆಯನ್ನು ಆ ಪ್ರಭುವಿನ ಕಂಠಕ್ಕೆ ಅರ್ಪಿಸುತ್ತಿದ್ದನು

೩೨-೩೩ ಆತನು ಹದಿನೈದುದಿನಗಳಿಗೆ ಒಂದುಸಲವೋ ಅಥವಾ ತಿಂಗಳಿಗೆ ಒಂದುಸಲವೋ ಗೆಡ್ಡೆಗೆಣಸುಗಳನ್ನೂ ಹಣ್ಣುಹಂಪಲುಗಳನ್ನೂ ತಿನ್ನುತ್ತಿದ್ದನು ಆಮೇಲೆ ಆ ಧೀರನು ಆರುತಿಂಗಳುಕಾಲ ಒಣಗಿದ ಎಲೆಗಳನ್ನು ತಿನ್ನುತ್ತಲೂ, ಇನ್ನಾರುತಿಂಗಳು ನೀರಿನ ಹನಿಗಳನ್ನು ಕುಡಿಯುತ್ತಲೂ, ಮತ್ತಾರುತಿಂಗಳು ಬರಿಯ ಗಾಳಿಯನ್ನು ಮಾತ್ರ ಸೇವಿಸುತ್ತಲೂ ಬಂದನು.

೩೪. ಈರೀತಿ ಶಿವನಲ್ಲೇ ಮನಸ್ಸು ನೆಲೆಸಿ ತಪಸ್ಸುಮಾಡುತ್ತಿದ್ದ ಆ ಮಹಾತ್ಮ ನಿಗೆ ಒಂದುವರ್ಷ ಕಾಲ ಕಳೆದುಹೋಯಿತು.

ಜನ್ಮತೋ ದ್ವಾದಶೇ ವರ್ಷೇ ತದ್ವಚೋ ನಾರದೇರಿತಂ ।
ಸತ್ಯಂ ಕರಿಷ್ಯನ್ನಿವ ತಮುಭ್ಯಗಾತ್ಕುಲಿಶಾಯುಧಃ ॥ ೩೫ ॥

ಉವಾಚ ಚ ವರಂ ಬ್ರೂಹಿ ದದ್ಮಿ ತ್ವನ್ಮನಸಿ ಸ್ಥಿತಂ ।
ಅಹಂ ಶತಕ್ರತುರ್ವಿಪ್ರ ಪ್ರಸನ್ನೋಽಸ್ಮಿ ಶುಭವ್ರತೈಃ ॥ ೩೬ ॥

॥ ನಂದೀಶ್ವರ ಉವಾಚ ॥

ಇತ್ಯಾಕರ್ಣ್ಯ ಮಹೇಂದ್ರಸ್ಯ ವಾಕ್ಯಂ ಮುನಿಕುಮಾರಕಃ ।
ಉವಾಚ ಮಧುರಂ ಧೀರಃ ಕೀರ್ತಯನ್ಮಧುರಾಕ್ಷರಂ ॥ ೩೭ ॥

॥ ಗೃಹಪತಿರುವಾಚ ॥

ಮಘವನ್ವೃತ್ರಶತ್ರೋ ತ್ವಾಂ ಜಾನೇ ಕುಲಿಶಪಾಣಿನಂ ।
ನಾಹಂ ವೃಣೇ ವರಂ ತ್ವತ್ತಃ ಶಂಕರೋ ವರದೋಽಸ್ತಿ ಮೇ ॥ ೩೮ ॥

---

೩೫. ಆ ಕುಮಾರನು ಹುಟ್ಟಿದ ಮೊದಲುಗೊಂಡು ಹನ್ನೆರಡನೆಯದಾದ ಈ ಸಂವತ್ಸರದಲ್ಲಿ ನಾರದಮಹರ್ಷಿಯು ಹೇಳಿದ ಮಾತನ್ನು ಸತ್ಯವಾದುದನ್ನಾಗಿ ಮಾಡಬೇಕೆಂದು ಇಂದ್ರನು ವಜ್ರಹಸ್ತನಾಗಿ ಆ ಗೃಹಪತಿಯ ಬಳಿಗೆ ಬಂದು

೩೬. ಎಲೈ ಬ್ರಾಹ್ಮಣನೇ, ನಾನು ಇಂದ್ರನು. ನಿನ್ನೀ ಶುಭಕರವಾದ ವ್ರತಾದಿ ನಿಯಮಗಳಿಂದ ಒಲಿದಿರುವೆನು. ನಿನ್ನ ಮನಸ್ಸಿನಲ್ಲಿ ಯಾವ ಕೋರಿಕೆಯಿದೆಯೋ ಕೇಳು, ಅದನ್ನು ಕೊಡುವೆನು ಎಂದನು.

೩೭. ಎಲೈ ಮುನಿಯೇ, ಈರೀತಿಯಾಗಿ ದೇವೇಂದ್ರನು ನುಡಿದ ಮಾತನ್ನು ಕೇಳಿ ಧೀರನಾದ ಆ ಮುನಿಕುಮಾರನು ಇಂಪಾದ ಅಕ್ಷರಗಳಿಂದ ಕೂಡಿ ಮಧುರವಾಗಿರುವ ಮಾತನ್ನು ಆಡಿದನು.

೩೮. ಎಲೈ ಇಂದ್ರನೇ, ನೀನು ವೃತ್ರಾಸುರಸಂಹಾರಿಯಾದ ವಜ್ರಧರನೆಂಬುದನ್ನು ನಾನು ಬಲ್ಲೆನು. ನಿನ್ನಿಂದ ನಾನು ವರವನ್ನು ಅಪೇಕ್ಷಿಸಲಾರೆನು. ನನಗೆ ವರವನ್ನು ಕೊಡಲು ಶಿವನು ಇರುವನು.

॥ ಇಂದ್ರ ಉವಾಚ ॥

ನ ಮತ್ತಶ್ಶಂಕರಸ್ತ್ವನ್ಯೋ ದೇವದೇವೋಽಸ್ಮ್ಯಹಂ ಶಿಶೋ ।
ವಿಹಾಯ ಬಾಲಿಶತ್ವಂ ತ್ವಂ ವರಂ ಯಾಚಸ್ವ ಮಾ ಚಿರಂ ॥ ೩೯ ॥

॥ ಗೃಹಪತಿರುವಾಚ ॥

ಗಚ್ಛಾಹಲ್ಯಾಪತೇಽಸಾಧೋ ಗೋತ್ರಾರೇ ಪಾಕಶಾಸನ ।
ನ ಪ್ರಾರ್ಥಯೇ ಪಶುಪತೇರನ್ಯಂ ದೇವಾಂತರಂ ಸ್ಫುಟಂ ॥ ೪೦ ॥

॥ ನಂದೀಶ್ವರ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಕ್ರೋಧಸಂರಕ್ತಲೋಚನಃ ।
ಉದ್ಯಮ್ಯ ಕುಲಿಶಂ ಘೋರಂ ಭೀಷಯಾಮಾಸ ಬಾಲಕಂ ॥ ೪೧ ॥

ಸ ದೃಷ್ಟ್ವಾ ಬಾಲಕೋ ವಜ್ರಂ ವಿದ್ಯುಜ್ಜ್ವಾಲಾಸಮಾಕುಲಂ ।
ಸ್ಮರನ್ನಾರದವಾಕ್ಯಂ ಚ ಮುಮೂರ್ಛ ಭಯವಿಹ್ವಲಃ ॥ ೪೨ ॥

---

೩೯. ಎನಲು, ಇಂದ್ರನು, ಎಲೈ ಬಾಲಕನೇ, ನಾನು ಬೇರೆ, ಶಂಕರನು ಬೇರೆ ಅಲ್ಲ ನಾನೇ ದೇವಾಧಿದೇವನಾದ ಶಂಕರನು. ನೀನೀ ಮೂರ್ಖತೆಯನ್ನು ಬಿಟ್ಟು ತಡಮಾಡದೆ ವರವನ್ನು ಬೇಡುವನಾಗು ಎಂದು ಮತ್ತೆ ನುಡಿದನು

೪೦. ಆಗ ಗೃಹಪತಿಯು, ಎಲೈ ಇಂದ್ರನೇ ನೀನು ಗೌತಮಪತ್ನಿಯಾದ ಅಹಲ್ಯೆಯಲ್ಲಿ ಜಾರತ್ವವನ್ನು ಮಾಡಿ ಅಶುದ್ಧನಾಗಿರುವವನು, ಇಂತಹ ನಿನ್ನನ್ನು ವರಕೊಡೆಂದು ಯಾಚಿಸುವೆನೇ ? ಖಂಡಿತವಾಗಿಯೂ ಶಂಕರನನ್ನು ಹೊರತು ಬೇರೆ ದೇವರಿಂದ ವರವನ್ನು ಪ್ರಾರ್ಥಿಸಲಾರೆನು ಎಂದನು.

೪೧ ಗೃಹಪತಿಯು ನುಡಿದ ಮಾತನ್ನು ಕೇಳಿ ವಿಪರೀತವಾದ ಕೋಪದಿಂದ ಕೆಂಡದಂತೆ ಕೆಂಪಗಾದ ಕಂಗಳುಳ್ಳವನಾಗಿ ಆ ಇಂದ್ರನು ಭಯಂಕರವಾದ ವಜ್ರಾಯುಧ ವನ್ನು ಮೇಲಕ್ಕೆತ್ತಿ ಹಿಡಿದು ಆ ಬಾಲನನ್ನು ಹೆದರಿಸಿದನು

೪೨ ಮಿಂಚಿನ ಉರಿನಾಲಗೆಗಳನ್ನು ಹೊರಸೂಸುತ್ತಿರುವ ಆ ವಜ್ರಾಯುಧ ವನ್ನು ನೋಡುತ್ತಲೇ ಆ ಕುಮಾರನು, ನಾರದಮಹರ್ಷಿಯು ಹೇಳಿದ್ದ ಮಾತು ನೆನಪಾಗಲು, ಭಯದಿಂದ ತತ್ತಳಿಸುತ್ತ ಮೂರ್ಛಿತನಾದನು.

ಅಥ ಗೌರೀಪತಿಶ್ಶಂಭುರಾವಿರಾಸೀತ್ತಮೋನುದಃ ।
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಸ್ಪರ್ಶೈಸ್ಸಂಜೀವಯನ್ನಿವ ॥ ೪೩ ॥

ಉನ್ಮೀಲ್ಯ ನೇತ್ರಕಮಲೇ ಸುಪ್ತೇ ಇವ ದಿನಕ್ಷಯೇ ।
ಅಪಶ್ಯದಗ್ರೇ ಚೋತ್ಥಾಯ ಶಂಭುಮರ್ಕಶತಾಧಿಕಂ ॥ ೪೪ ॥

ಭಾಲೇ ಲೋಚನಮಾಲೋಕ್ಯ ಕಂಠೇಕಾಲಂ ವೃಷಧ್ವಜಂ ।
ವಾಮಾಂಗಸನ್ನಿವಿಷ್ಟಾದ್ರಿತನಯಂ ಚಂದ್ರಶೇಖರಂ ॥ ೪೫ ॥

ಕಪರ್ದೇನ ವಿರಾಜಂತಂ ತ್ರಿಶೂಲಾದಿಗವಾಯುಧಂ ।
ಸ್ಫುರತ್ಕರ್ಪೂರಗೌರಾಂಗಂ ಪರಿಣದ್ಧಗಜಾಜಿನಂ ॥ ೪೬ ॥

---

೪೩. ಆಗ ಒಡನೆಯೇ ಗೌರೀದೇವಿಯ ವಲ್ಲಭನಾದ ಶಂಕರನು, ಅವನಿಗೆ ಕವಿದಿದ್ದ ಮೋಹವನ್ನು ತನ್ನ ಹಸ್ತಸ್ಪರ್ಶದಿಂದ ಪರಿಹರಿಸಿ ಏಳು ಏಳು ಎನ್ನುತ್ತಾ ನಿನಗೆ ಮಂಗಳವಾಗಲಿ ಎನ್ನುತ್ತಾ ಪ್ರತ್ಯಕ್ಷನಾದನು.

೪೪. ದಿವಸಾಂತ್ಯದಲ್ಲಿ (ಸಂಜೆಯಲ್ಲಿ) ಮೊಗ್ಗಾಗಿ ಮುಚ್ಚಿಹೋದ ಕಮಲಗಳು ಅರಳುವಂತೆ ತನ್ನ ಕಂಗಳನ್ನು ತೆರೆಯಲು ನೂರಾರು ಸೂರ್ಯರಿಗೂ ಮಿಗಿಲಾದ ತೇಜಸ್ಸಿನಿಂದ ವಿರಾಜಿಸುತ್ತಿರುವ ಶ್ರೀ ಶಂಕರನನ್ನು ತನ್ನ ಮುಂದೆ ಕಂಡನು.

೪೫. ಆ ಶಿವನ ಹಣೆಯ ಮಧ್ಯದಲ್ಲಿ ನೇತ್ರವಿದ್ದಿತು. ಅವನ ಕಂಠವು ಕಪ್ಪಾಗಿದ್ದಿತು. ತನ್ನ ಎಡಭಾಗದಲ್ಲಿ ಗಿರಿಜೆಯು ಕಂಗೊಳಿಸುತ್ತಿದ್ದಳು. ಶಿರಸ್ಸಿನಲ್ಲಿ ಚಂದ್ರಕಲೆ ಬೆಳಗುತ್ತಿತ್ತು.

೪೬. ಆತನ ತಲೆಯಲ್ಲಿ ಕಪರ್ದವೆಂಬ ಜಟಾಜೂಟವೂ, ಕೈಯ್ಯಲ್ಲಿ ತ್ರಿಶೂಲ, ಪಿನಾಕ, ಮೊದಲಾದ ಆಯುಧಗಳೂ ಕಂಗೊಳಿಸುತ್ತಿದ್ದುವು. ಆತನು ಕರ್ಪೂರದಂತೆ ಶುಭ್ರವಾದ ಶರೀರಕಾಂತಿಯಿಂದ ಬೆಳಗುತ್ತಿದ್ದನು. ನಡುವಿನಲ್ಲಿ ಗಜಚರ್ಮವನ್ನು ಧರಿಸಿದ್ದನು.

ಪರಿಜ್ಞಾಯ ಮಹಾದೇವಂ ಗುರುವಾಕ್ಯತ ಆಗಮಾತ್ ।
ಹರ್ಷಬಾಷ್ಪಾಕುಲಾಸನ್ನಕಂಠರೋಮಾಂಚಕಂಚುಕಃ ॥ ೪೭ ॥

ಕ್ಷಣಂ ಚ ಗಿರಿವತ್ತಸ್ಥೌ ಚಿತ್ರಕೂಟತ್ರಿಪುತ್ರಕಃ ।
ಯಥಾ ತಥಾ ಸಮುತ್ಪನ್ನೋ ವಿಸ್ಮೃತ್ಯಾತ್ಮಾನಮೇವ ಚ ॥ ೪೮ ॥

ನ ಸ್ತೋತುಂ ನ ನಮಸ್ಕರ್ತುಂ ಕಿಂಚಿದ್ವಿಜ್ಞಪ್ತಿಮೇವ ಚ ।
ಯದಾ ಸ ನ ಶಶಾಕಾಲಂ ತದಾ ಸ್ಮಿತ್ವಾಹ ಶಂಕರಃ ॥ ೪೯ ॥

॥ ಈಶ್ವರ ಉವಾಚ ॥

ಶಿಶೋ ಗೃಹಪತೇ ಶಕ್ರಾದ್ವಜ್ರೋದ್ಯತಕರಾದಹೋ ।
ಜ್ಞಾತಂ ಭೀತೋಽಸಿ ಮಾಭೈಷೀರ್ಜಿಜ್ಞಾಸಾ ತೇ ಮಯಾ ಕೃತಾ ॥ ೫೦ ॥

---

೪೭. ಆ ಕುಮಾರನು ಗುರುವಚನದಿಂದಲೂ ವೇದವಾಕ್ಯಗಳಿಂದಲೂ ಈತನೇ ಶಂಕರನೆಂದು ನಿಶ್ಚಯಿಸಿದನು. ಆಗ ಸಂತೋಷದಿಂದ ಆತನ ಕಣ್ಣುಗಳಲ್ಲಿ ನೀರು ತುಂಬಿತು. ಕುತ್ತಿಗೆಯು ತುಂಬಿಬಂದಿತು. ಮೈಯ್ಯೆಲ್ಲವೂ ರೋಮಾಂಚವನ್ನು ಹೊಂದಿತು

೪೮. ಆಗ ಅವನು ಒಂದುಕ್ಷಣಕಾಲ ತನ್ನನ್ನೇ ತಾನು ಮರೆತು ಚಿತ್ರಕೂಟ ಪರ್ವತದಂತೆಯೂ ತ್ರಿಕೂಟಪರ್ವತದಂತೆಯೂ ಅಲುಗಾಡದೆ ಸ್ತಂಭೀಭೂತನಾಗಿ ನಿಂತುಬಿಟ್ಟನು.

೪೯. ಯಾವಾಗ ಆ ಕುಮಾರನು, ಸ್ತೋತ್ರಮಾಡುವುದಕ್ಕೂ ನಮಸ್ಕರಿಸುವುದಕ್ಕೂ ಸ್ವಲ್ಪವಾದರೂ ಬಿನ್ನವಿಸಿಕೊಳ್ಳುವುಕ್ಕೂ ತೋಚದೆ ನಿಂತುಬಿಟ್ಟನೋ ಆಗ ಶಂಕರನು ನಸುನಕ್ಕು ಈರೀತಿ ಹೇಳಿದನು

೫೦. ಎಲೈ ಎಳೆಯುವಯಸ್ಸಿನ ಗೃಹಪತಿಯೇ, ತಿಳಿಯಿತು. ವಜ್ರಾಯುಧವನ್ನೆತ್ತಿ ಹೊಡೆಯಲುಬಂದ ಇಂದ್ರನ ಬೆಸೆಯಿಂದ ಹೆದರಿರುವೆಯಲ್ಲವೇ, ಹೆದರಬೇಡ ನಾನು ನಿನ್ನನ್ನು ಪರೀಕ್ಷೆಮಾಡಲೋಸುಗ ಈರೀತಿ ಮಾಡಿದೆನು.

ಮಮ ಭಕ್ತಸ್ಯ ನ ಶಕ್ರೋ ನೋ ವಜ್ರಂ ಚಾಂತಕೋಽಪಿ ಚ ।
ಪ್ರಭವೇದಿಂದ್ರರೂಪೇಣ ಮಯೈವ ತ್ವಂ ವಿಭೀಷಿತಃ ॥ ೫೧ ॥

ವರಂ ದದಾಮಿ ತೇ ಭದ್ರ ತ್ವಮಗ್ನಿಪದಭಾಗ್ಭವ ।
ಸರ್ವೇಷಾಮೇವ ದೇವಾನಾಂ ವರದಸ್ತ್ವಂ ಭವಿಷ್ಯಸಿ ॥ ೫೨ ॥

ಸರ್ವೇಷಾಮೇವ ಭೂತಾನಾಂ ತ್ವಮಗ್ನೇಽಂತಶ್ಚರೋ ಭವ ।
ಧರ್ಮರಾಜೇಂದ್ರಯೋರ್ಮಧ್ಯೇ ದಿಗೀಶೋ ರಾಜ್ಯಮಾಪ್ನುಹಿ ॥ ೫೩ ॥

ತ್ವಯೇದಂ ಸ್ಥಾಪಿತಂ ಲಿಂಗಂ ತವ ನಾಮ್ನಾ ಭವಿಷ್ಯತಿ ।
ಅಗ್ನೀಶ್ವರ ಇತಿ ಖ್ಯಾತಂ ಸರ್ವತೇಜೋವಿಬೃಂಹಣಂ ॥ ೫೪ ॥

---

೫೧. ನನ್ನ ಭಕ್ತನನ್ನು ಇಂದ್ರನಾಗಲೀ ವಜ್ರಾಯುಧವಾಗಲೀ ಕೊನೆಗೆ ಯಮನಾಗಲೀ ಹಿಂಸೆಪಡಿಸಲು ಸಾಧ್ಯವಿಲ್ಲ. ನಾನೇ ಇಂದ್ರನರೂಪದಿಂದ ಬಂದು ನಿನ್ನನ್ನು ಹೆದರಿಸಿದೆನು.

೫೨. ಎಲೈ ಸೌಮ್ಯನೇ, ನಿನಗೆ ವರವನ್ನೀಯುವೆನು. ನೀನು ಇಂದಿನಿಂದ ಅಗ್ನಿಯೆಂಬ ಹೆಸರಿನಿಂದ ಪ್ರಖ್ಯಾತನಾಗು. ಎಲ್ಲ ದೇವತೆಗಳಿಗೂ ನೀನು ವರಗಳನ್ನು ಕೊಡುವಂಥವನಾಗುವೆ. ಪ್ರಾಣಿಗಳಲ್ಲಿಯೂ ನೀನು ಮಧ್ಯವರ್ತಿಯಾಗಿ ಜಠರದಲ್ಲಿ ನೆಲೆಸಿ ಇದ್ದುಕೊಂಡಿರು.

೫೩. ಎಲೈ ಅಗ್ನಿಯೇ, ನೀನು ಎಲ್ಲ ಪ್ರಾಣಿಗಳಲ್ಲಿಯೂ ಅಂತಶ್ಚರನಾಗಿ ಅಂದರೆ ಜಠರವರ್ತಿಯಾಗಿ ಇದ್ದುಕೊಂಡಿರು. ಇಂದ್ರನಿಗೂ ಯಮನಿಗೂ ನಡುವೆ ದಿಕ್ಪಾಲನಾಗಿ ನಿಂತು ಆ ರಾಜ್ಯಭಾರವನ್ನು ಇನ್ನುಮೇಲೆ ನಡೆಸು.

೫೪. ನೀನು ಇಲ್ಲಿ ಪ್ರತಿಷ್ಠಿಸಿದ ಲಿಂಗವು ಇನ್ನುಮೇಲೆ ನಿನ್ನ ಹೆಸರಿನಿಂದಲೇ ಅಗ್ನೀಶ್ವರನೆಂಬುದಾಗಿ ಪ್ರಸಿದ್ಧಿಯನ್ನು ಹೊಂದಿ ಎಲ್ಲರ ತೇಜಸ್ಸನ್ನೂ ಅಭಿವೃದ್ಧಿಗೊಳಿಸುವುದು.

ಆಗ್ನೀಶ್ವರಸ್ಯ ಭಕ್ತಾನಾಂ ನ ಭಯಂ ವಿದ್ಯುದಗ್ನಿಭಿಃ ।
ಅಗ್ನಿಮಾಂದ್ಯಭಯಂ ನೈವ ನಾಕಾಲಮರಣಂ ಕ್ವಚಿತ್ ॥ ೫೫ ॥

ಅಗ್ನೀಶ್ವರಂ ಸಮಭ್ಯರ್ಚ್ಯ ಕಾಶ್ಯಾಂ ಸರ್ವಸಮೃದ್ಧಿದಂ ।
ಅನ್ಯತ್ರಾಪಿ ಮೃತೋ ದೈವಾದ್ವಹ್ನಿಲೋಕೇ ಮಹೀಯತೇ ॥ ೫೬ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾನೀಯ ತದ್ಬಂಧೂನ್ಪಿತ್ರೋಶ್ಚ ಪರಿಪಶ್ಯತೋಃ ।
ದಿಕ್ಪತಿತ್ವೇಽಭಿಷಿಚ್ಯಾಗ್ನಿಂ ತತ್ರ ಲಿಂಗೇ ಶಿವೋಽವಿಶತ್ ॥ ೫೭ ॥

ಇತ್ಥಮಗ್ನ್ಯವತಾರಸ್ತೇ ವರ್ಣಿತೋ ಮೇ ಜನಾರ್ದನಃ ।
ನಾಮ್ನಾ ಗೃಹಪತಿಸ್ತಾತ ಶಂಕರಸ್ಯ ಪರಾತ್ಮನಃ ॥ ೫೮ ॥

---

೫೫ ಅಗ್ನೀಶ್ವರನನ್ನು ಭಜಿಸುವ ನರರಿಗೆ ವಿದ್ಯುತ್ತಿನಿಂದಲೂ ಅಗ್ನಿಯಿಂದಲೂ ಭಯವುಂಟಾಗುವುದಿಲ್ಲ ಅವರಿಗೆ ಅಗ್ನಿಮಾಂದ್ಯವೆಂಬುದು ಉಂಟಾಗದು ಅವರಿಗೆ ಅಕಾಲಮರಣವೆಂಬುದು ಎಂದಿಗೂ ಬರಲಾರದು

೫೬. ಕಾಶಿಯಲ್ಲಿರುವ ಸಕಲ ಸಂಪತ್ತನ್ನೂ ಕರುಣಿಸುವ ಅಗ್ನೀಶ್ವರನನ್ನು ಪೂಜಿಸಿದವರು ಬೇರೆ ಇನ್ನೆಲ್ಲಿಮೃತರಾದರೂ ಸತ್ತರೂ ಅವರು ಅಗ್ನಿಲೋಕದಲ್ಲಿ ವಾಸ ಮಾಡುವರು

೫೭. ಎಲೈ ಮುನೀಂದ್ರನೇ, ಈರೀತಿಯಾಗಿ ವರವನ್ನಿತ್ತು ಅವನ ಬಂಧುಗಳನ್ನು ಕರೆತರಿಸಿ ಅವನನ್ನು ದಿಕ್ಪಾಲಕಪದವಿಯಲ್ಲಿ ಅವನ ತಾಯ್ತಂದೆಗಳ ಕಣ್ಣೆದುರಿಗೇ ಅಭಿಷೇಕಮಾಡಿ, ಬಳಿಕ ಆ ಅಗ್ನೀಶ್ವರಲಿಂಗದಲ್ಲೇ ಅಂತರ್ಧಾನ ಹೊಂದಿದನು

೫೮. ಅಪ್ಪಾ, ಇಂತು ಪರಮಪುರುಷನಾದ ಶಂಕರನ ಜನಪ್ರಿಯವಾದ ಗೃಹಪತಿಯೆಂಬ ಅಗ್ನಿರೂಪವಾದ ಅವತಾರವನ್ನು ನಿನಗೆ ನಾನು ವರ್ಣಿಸಿದುದಾಯಿತು.

ಚಿತ್ರಹೋತ್ರಪುರೀ ರಮ್ಯಾ ಸುಖದಾರ್ಚಿಷ್ಮತೀ ವರಾ ।
ಜಾತವೇದಸಿ ಯೇ ಭಕ್ತಾ ತೇ ತತ್ರ ನಿವಸಂತಿ ವೈ ॥ ೫೯ ॥

ಅಗ್ನಿಪ್ರವೇಶಂ ಯೇ ಕುರ್ಯುರ್ದೃಢಸತ್ತ್ವಾ ಜಿತೇಂದ್ರಿಯಾಃ ।
ಸ್ತ್ರಿಯೋ ವಾ ಸತ್ತ್ವಸಂಪನ್ನಾಸ್ತೇ ಸರ್ವೇಽಪ್ಯಗ್ನಿತೇಜಸಃ ॥ ೬೦ ॥

ಅಗ್ನಿಹೋತ್ರರತಾ ವಿಪ್ರಾಃ ಸ್ಥಾಪಿತಾ ಬ್ರಹ್ಮಚಾರಿಣಃ ।
ಪಂಚಾಗ್ನಿವರ್ತಿನೋಽಪ್ಯೇವಮಗ್ನಿಲೋಕೇಽಗ್ನಿವರ್ಚಸಃ ॥ ೬೧ ॥

ಶೀತೇ ಶೀತಾಪನುತ್ತ್ಯೈ ಯಸ್ತ್ವೇಧೋಭಾರಾನ್ಪ್ರಯಚ್ಛತಿ ।
ಕುರ್ಯಾದಗ್ನೀಷ್ಟಿಕಾಂ ವಾಥ ಸ ವಸೇದಗ್ನಿಸನ್ನಿಧೌ ॥ ೬೨ ॥

೫೯. ಯಾರು ಅಗ್ನಿಯ ಭಕ್ತರೆನಿಸುವರೋ ಅವರೆಲ್ಲರೂ ರಮಣೀಯವೂ ಸುಖದಾಯಕವೂ ಪ್ರಕಾಶಮಾನವೂ ಆದ ಚಿತ್ರಹೋತ್ರವೆಂಬ ನಗರಶ್ರೇಷ್ಠದಲ್ಲಿ ವಾಸಮಾಡುವರು.

೬೦ ಯಾರು ಜಿತೇಂದ್ರಿಯರೂ ದೃಢಚಿತ್ತರೂ ಆಗಿ ಅಗ್ನಿಯನ್ನು ಪ್ರವೇಶಿಸುವರೋ ಆ ಸತ್ತ್ವಶಾಲಿಗಳು ಸ್ತ್ರೀಯರಾಗಲೀ ಪುರುಷರಾಗಲೀ ಅವರೆಲ್ಲರೂ ಅಗ್ನಿಯಂತೆ ತೇಜಸ್ಸನ್ನು ಪಡೆಯುವರು.

೬೧. ಯಾವ ಬ್ರಾಹ್ಮಣರು ಸರ್ವದಾ ಅಗ್ನಿಹೋತ್ರವನ್ನು ಆಚರಿಸುತ್ತಾ ಬರುವರೋ, ಯಾರು ಬ್ರಹ್ಮಚರ್ಯವನ್ನು ಶಾಶ್ವತವಾಗಿ ಪಾಲಿಸುವರೋ, ಯಾರು ಪಂಚಾಗ್ನಿ ಮಧ್ಯೆ ತಪಸ್ಸುಮಾಡುವರೋ ಅವರೆಲ್ಲರೂ ಅಗ್ನಿಯಂತೆ ಹೊಳೆಯುತ್ತಾ ಅಗ್ನಿಲೋಕದಲ್ಲಿ ವಿಹರಿಸುವರು.

೬೨. ಯಾವನು ಚಳಿಗಾಲದಲ್ಲಿ ಕೊರೆತವನ್ನು ಹೋಗಲಾಡಿಸಲು ಸೌದೆಯನ್ನು ದಾನಮಾಡುವನೋ, ಇಲ್ಲದಿದ್ದರೆ ಅಗ್ನಿಷ್ಟಿಕೆಯನ್ನು ಈಯುವನೋ ಅವನು ಅಗ್ನಿಯ ಬಳಿಯಲ್ಲಿ ವಾಸಮಾಡುವನು.

**ಅನಾಥಸ್ಯಾಗ್ನಿಸಂಸ್ಕಾರಂ ಯಃ ಕುರ್ಯಾಚ್ಛ್ರದ್ಧಯಾನ್ವಿತಃ ।**
**ಅಶಕ್ತಃ ಪ್ರೇರಯೇದನ್ಯಂ ಸೋಽಗ್ನಿಲೋಕೇ ಮಹೀಯತೇ ॥ ೬೩ ॥**

**ಅಗ್ನಿರೇಕೋ ದ್ವಿಜಾತೀನಾಂ ನಿಃಶ್ರೇಯಸಕರಃ ಪರಃ ।**
**ಗುರುರ್ದೇವೋ ವ್ರತಂ ತೀರ್ಥಂ ಸರ್ವಮಗ್ನಿರ್ವಿನಿಶ್ಚಿತಂ ॥ ೬೪ ॥**

**ಅಪಾವನಾನಿ ಸರ್ವಾಣಿ ವಹ್ನಿಸಂಸರ್ಗತಃ ಕ್ಷಣಾತ್ ।**
**ಪಾವನಾನಿ ಭವಂತ್ಯೇವ ತಸ್ಮಾದ್ಯಃ ಪಾವಕಃ ಸ್ಮೃತಃ ॥ ೬೫ ॥**

**ಅಂತರಾತ್ಮಾ ಹ್ಯಯಂ ಸಾಕ್ಷಾನ್ನಿಶ್ಚಯೋ ಹ್ಯಾಶುಶುಕ್ಷಣಿಃ ।**
**ಮಾಂಸಗ್ರಾಸಾನ್ಪಚೇತ್ಕುಕ್ಷೌ ಸ್ತ್ರೀಣಾಂ ನೋ ಮಾಂಸಪೇಶಿಕಾಂ ॥ ೬೬ ॥**

---

೬೩. ಯಾವನು ಶ್ರದ್ಧೆಯಿಂದ ಅನಾಥನಾದವನಿಗೆ ಅಗ್ನಿಸಂಸ್ಕಾರರನ್ನು ನಡೆಸುವನೋ ಅಥವಾ ತನ್ನ ಕೈಲಿ ಅದು ಸಾಧ್ಯವಿಲ್ಲದಿದ್ದಲ್ಲಿ ಮತ್ತೊಬ್ಬನನ್ನಾದರೂ ಪ್ರೇರಿಸುವನೋ ಅವನು ಅಗ್ನಿಲೋಕದಲ್ಲಿ ವಿರಾಜಿಸುವನು.

೬೪ ಬ್ರಾಹ್ಮಣರಾದವರಿಗೆ ಅಗ್ನಿಯೊಬ್ಬನೇ ಮೋಕ್ಷದಾಯಕನು. ಅವರಿಗೆ ಗುರುವೂ ದೇವರೂ ವ್ರತವೂ ತೀರ್ಥವೂ ಎಲ್ಲವೂ ಅಗ್ನಿಯೇ ಎಂದು ತಿಳಿ, ಇದು ಖಂಡಿತವಾದುದು

೬೫ ಅಗ್ನಿಯ ಸಂಸ್ಪರ್ಶಮಾತ್ರದಿಂದಲೇ ಅಪರಿಶುದ್ಧವಾದ ವಸ್ತುಗಳೆಲ್ಲವೂ ಪರಿಶುದ್ಧಿಯನ್ನು ಹೊಂದುವುವು. ಆ ಕಾರಣದಿಂದಲೇ ಅಗ್ನಿಯು ಪಾವಕನೆಂಬುದಾಗಿ ಪ್ರಸಿದ್ಧಿಯನ್ನು ಪಡೆದನು.

೬೬. ಈ ಅಗ್ನಿಯು ಎಲ್ಲರಲ್ಲಿಯೂ ನೆಲೆಸಿರುವ ಸಾಕ್ಷಾತ್ಪರಮಾತ್ಮನೆಂದು ತಿಳಿ. ಈತನು ಜಠರದಲ್ಲಿರುವ ಮಾಂಸವನ್ನೂ ಗ್ರಾಸ (ಆಹಾರ) ವನ್ನು ಅರಗಿಸುವನು. ಆದರೆ ಸ್ತ್ರೀಯರ ಜಠರದಲ್ಲಿ ಮಾಂಸವನ್ನು ಪಚನಮಾಡಲಾರನು.

ತೈಜಸೀ ಶಾಂಭವೀ ಮೂರ್ತಿಃ ಪ್ರತ್ಯಕ್ಷಾ ದಹನಾತ್ಮಿಕಾ ।
ಕರ್ತ್ರೀ ಹರ್ತ್ರೀ ಪಾಲಯಿತ್ರೀ ವಿನೈತಾಂ ಕಿಂ ವಿಲೋಕ್ಯತೇ ॥ ೬೭ ॥

ಚಿತ್ರಭಾನುರಯಂ ಸಾಕ್ಷಾನ್ನೇತ್ರಂ ತ್ರಿಭುವನೇಶಿತುಃ ।
ಅಧಂತಮೋಮಯೇ ಲೋಕೇ ವಿನೈನಂ ಕಃ ಪ್ರಕಾಶಕಃ ॥ ೬೮ ॥

ಧೂಪಪ್ರದೀಪನೈವೇದ್ಯಪಯೋದಧಿಘೃತೈಕ್ಷವಂ ।
ಏತದ್ಭುಕ್ತಂ ನಿಷೇವಂತೇ ಸರ್ವೇ ದಿವಿ ದಿವೌಕಸಃ ॥ ೬೯ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಗೃಹಪತ್ಯವತಾರವರ್ಣನಂ ನಾಮ ಪಂಚದಶೋಽಧ್ಯಾಯಃ

---

೬೭. ಈಗ ಬೆಂಕಿಯಂತೆ ನಮಗೆಲ್ಲರಿಗೂ ಪ್ರತ್ಯಕ್ಷವಾಗಿರುವ ಈತನು ಶಿವನ ತೇಜೋಮಯಸ್ವರೂಪವೆಂದು ತಿಳಿ ಇದೇ ಕರ್ತೃವು. ಇದೇ ಸಂರಕ್ಷಕವು. ಇದೇ ಸಂಹಾರಕವು. ಇದನ್ನು ಬಿಟ್ಟರೆ ಯಾವುದನ್ನು ತಾನೇ ನೋಡಲಾಗುವುದು ?

೬೮. ಈ ಅಗ್ನಿಯು ಸಾಕ್ಷಾತ್ ತ್ರಿಲೋಕಪ್ರಭುವಾದ ಶಂಕರನ ನೇತ್ರವು. ಈತನಿಲ್ಲದಿದ್ದರೆ ಮಹಾಕತ್ತಲು ಕವಿದುಕೊಂಡಿರುವ ಈ ಪ್ರಪಂಚದಲ್ಲಿ ಎಲ್ಲ ವಸ್ತುಗಳನ್ನೂ ಪ್ರಕಾಶಪಡಿಸುವವನು ಯಾರು ?

೬೯. ಸ್ವರ್ಗದಲ್ಲಿರುವ ದೇವತೆಗಳೆಲ್ಲರೂ ಜನರು ಅರ್ಪಿಸಿದ ಧೂಪ, ದೀಪ, ನೈವೇದ್ಯ, ಹಾಲು, ಮೊಸರು, ತುಪ್ಪ, ಸಕ್ಕರೆ ಮೊದಲಾದ ವಸ್ತುವೆಲ್ಲವನ್ನೂ ಈ ಅಗ್ನಿಯು ಭುಜಿಸಿದುದನ್ನೇ ತಾವು ಭುಜಿಸುವರು. ಎಂದರೆ ಈ ವಸ್ತುಗಳೆಲ್ಲವೂ ಅಗ್ನಿಮೂಲಕವೇ ದೇವತೆಗಳು ಸ್ವೀಕರಿಸುವರು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಗೃಹಪತ್ಯವತಾರವರ್ಣನವೆಂಬ ಹದಿನೈದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಷೋಡಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಯಕ್ಷೇಶ್ವರಾವತಾರಂ ಚ ಶೃಣು ಶಂಭೋರ್ಮುನೀಶ್ವರ ।
ಗರ್ವಿಣಾಂ ಗರ್ವಹಂತಾರಂ ಸತಾಂ ಭಕ್ತಿವಿವರ್ಧನಂ ॥ ೧ ॥

ಪುರಾ ದೇವಾಶ್ಚ ದೈತ್ಯಾಶ್ಚ ಪೀಯೂಷಾರ್ಥಂ ಮಹಾಬಲಾಃ ।
ಕ್ಷೀರೋದಧಿಂ ಮಮಂಥುಸ್ತೇ ಸುಕೃತಸ್ವಾರ್ಥಸಂಧಯಃ ॥ ೨ ॥

---

## ಹದಿನಾರನೆಯ ಅಧ್ಯಾಯವು

೧ ನಂದೀಶ್ವರನು ಸನತ್ಕುಮಾರನನ್ನು ಕುರಿತು ಹೇಳತೊಡಗಿದನು ಎಲೈ ಮುನೀಶ್ವರನೇ, ಸರ್ವೋನ್ಮತ್ತರ ಗರ್ವವನ್ನು ಪರಿಹರಿಸುವಂತಹುದೂ, ಸತ್ಪುರುಷರಿಗೆ ಭಕ್ತಿಯನ್ನು ಹೆಚ್ಚಿಸುವುದೂ ಆದ ಶಿವನ ಯಕ್ಷೇಶ್ವರಾವತಾರವನ್ನು ವಿವರಿಸುವೆನು ಕೇಳು.

೨ ಹಿಂದೆ ಮಹಾಬಲಾಢ್ಯರಾದ ದೇವತೆಗಳೂ ದೈತ್ಯರೂ, ತಮ್ಮ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳಲೋಸುಗ, ಅಮೃತವನ್ನು ಸಂಪಾದಿಸಲು ಕ್ಷೀರಸಾಗರವನ್ನು ಕಡೆದರು.

ಮಥ್ಯಮಾನೇಽಮೃತೇ ಪೂರ್ವಂ ಕ್ಷೀರಾಬ್ಧೇಸ್ಸುರದಾನವೈಃ ।
ಅಗ್ನೇಃ ಸಮುತ್ಥಿತಂ ತಸ್ಮಾದ್ವಿಷಂ ಕಾಲಾನಲಪ್ರಭಂ ॥ ೩ ॥

ತಂ ದೃಷ್ಟ್ವಾ ನಿಖಿಲಾ ದೇವಾ ದೈತ್ಯಾಶ್ಚ ಭಯವಿಹ್ವಲಾಃ ।
ವಿದ್ರುತ್ಯ ತರಸಾ ತಾತ ಶಂಭೋಸ್ತೇ ಶರಣಂ ಯಯುಃ ॥ ೪ ॥

ದೃಷ್ಟ್ವಾ ತಂ ಶಂಕರಂ ಸರ್ವೇ ಸರ್ವದೇವಶಿಖಾಮಣಿಂ ।
ಪ್ರಣಮ್ಯ ತುಷ್ಟುವುರ್ಭಕ್ತ್ಯಾ ಸಾಚ್ಯುತಾ ನತಮಸ್ತಕಾಃ ॥ ೫ ॥

ತತಃ ಪ್ರಸನ್ನೋ ಭಗವಾಞ್ಛಂಕರೋ ಭಕ್ತವತ್ಸಲಃ ।
ಪಪೌ ವಿಷಂ ಮಹಾಘೋರಂ ಸುರಾಸುರಗಣಾರ್ದನಂ ॥ ೬ ॥

ಪೀತಂ ತಂ ವಿಷಮುಂ ಕಂಠೇ ನಿದಧೇ ವಿಷಮುಲ್ಬಣಂ ।
ರೇಜೇ ತೇನಾತಿ ಸ ವಿಭುರ್ನೀಲಕಂಠೋ ಬಭೂವ ಹ ॥ ೭ ॥

---

೩. ಆ ದೇವದಾನವರು ಅಮೃತದಸಲುವಾಗಿ ಕ್ಷೀರಾಬ್ಧಿಯನ್ನು ಮಥಿಸುತ್ತಿರಲು, ಆ ಕಾಪಿನಿಂದ ಪ್ರಳಯಾಗ್ನಿಯಂತೆ ಉರಿಯುತ್ತಿರುವ ಹಾಲಾಹಲವೆಂಬ ಘೋರವಾದ ವಿಷವು ಮೊದಲು ಹುಟ್ಟಿತು.

೪. ಆ ವಿಷವನ್ನು ನೋಡುತ್ತಲೇ ದೇವತೆಗಳೂ ದೈತ್ಯರೂ, ಭಯದಿಂದ ತತ್ತಳಿಸುತ್ತಾ, ಜಾಗ್ರತೆ ಓಡಿಹೋಗಿ, ಶಂಕರನನ್ನು ಮರೆಹೊಕ್ಕರು.

೫. ಸಕಲ ದೇವತೆಗಳಿಗೂ ಮುಕುಟಮಣಿಯಂತಿರುವ ಆ ಶಂಕರನನ್ನು ಕಂಡು ವಿಷ್ಣುವೇ ಮೊದಲಾದ ಆ ದೇವತೆಗಳೆಲ್ಲರೂ ನಮಸ್ಕರಿಸಿ, ಭಕ್ತಿಯಿಂದ ತಲೆತಗ್ಗಿಸಿ ಸ್ತೋತ್ರಮಾಡಿದರು.

೬. ಆಗ ಭಕ್ತವತ್ಸಲನಾದ ಆ ಶಂಕರನು ಅವರ ಸ್ತುತಿಗೆ ಮೆಚ್ಚಿ, ಪ್ರಸನ್ನನಾಗಿ ಸುರಾಸುರರನ್ನು ತಂಡತಂಡವಾಗಿ ಸುಡುತ್ತಾ ಇರುವ ಮಹಾಘೋರವಾದ ಆ ವಿಷವನ್ನು ಕುಡಿದುಬಿಟ್ಟನು.

೭. ಸರ್ವೇಶ್ವರನಾದ ಶಿವನು ಆ ಘೋರವಾದ ವಿಷವನ್ನು ತನ್ನ ಕುತ್ತಿಗೆಯಲ್ಲೇ ನಿಲ್ಲಿಸಿದನು. ವಿಷವು ಅಲ್ಲಿ ನಿಂತುದುದರಿಂದ ಅದೊಂದು ಅಲಂಕಾರವೇ ಆದಂತಾಗಿ ಅಂದಿನಿಂದ ನೀಲಕಂಠನೆಂಬುದಾಗಿಯೇ ಮೆರೆದನು.

ತತಃ ಸುರಾಸುರಗಣಾ ಮಮಂಥುಃ ಪುನರೇವ ತಂ ।
ವಿಷದಾಹವಿನಿರ್ಮುಕ್ತಾಃ ಶಿವಾನುಗ್ರಹತೋಽಖಿಲಾಃ ॥ ೮ ॥

ತತೋ ಬಹೂನಿ ರತ್ನಾನಿ ನಿಸ್ಸೃತಾನಿ ತತೋ ಮುನೇ ।
ಅಮೃತಂ ಚ ಪದಾರ್ಥಂ ಹಿ ಸುರದಾನವಯೋರ್ಮುನೇ ॥ ೯ ॥

ತಂ ಪಪುಃ ಕೇವಲಂ ದೇವಾ ನಾಸುರಾಃ ಕೃಪಯಾ ಹರೇಃ ।
ತತೋ ಬಭೂವ ಸುಮಹಾನ್ರತ್ನಂ ತೇಷಾಂ ಮಿಥೋಽಕದಂ ॥ ೧೦ ॥

ದ್ವಂದ್ವಯುದ್ಧಂ ಬಭೂವಾಥ ದೇವದಾನವಯೋರ್ಮುನೇ ।
ತತ್ರ ರಾಹುಭಯಾಚ್ಚಂದ್ರೋ ವಿದುದ್ರಾವ ತದರ್ದಿತಃ ॥ ೧೧ ॥

ಜಗಾಮ ಸದನಂ ಶಂಭೋಃ ಶರಣಂ ಭಯವಿಹ್ವಲಃ ।
ಸುಪ್ರಣಮ್ಯ ಚ ತುಷ್ಟಾವ ಪಾಹಿ ಪಾಹೀತಿ ಸಂವದನ್ ॥ ೧೨ ॥

---

೮. ಈರೀತಿ ಶಿವನ ದಯೆಯಿಂದ ವಿಷದ ಬೇಗೆಯಿಂದ ಪಾರಾದ ಆ ದೇವಾಸುರರು ಮತ್ತೆ ಕ್ಷೀರಸಮುದ್ರವನ್ನು ಮಥಿಸತೊಡಗಿದರು

೯ ಎಲೈ ಮುನಿಯೇ, ಆಮೇಲೆ ಆ ಕ್ಷೀರಸಮುದ್ರದಿಂದ ಅನೇಕ ರತ್ನಗಳು ಹೊರಬಿದ್ದುವು ಕೊನೆಗೆ ದೇವಾಸುರರಿಗೆ ಬೇಕಾಗಿದ್ದ ಅಮೃತವೂ ಹುಟ್ಟಿತು

೧೦ ಆ ಅಮೃತವನ್ನು ಮೋಹಿನೀರೂಪಧಾರಿಯಾದ ಶ್ರೀಹರಿಯ ಕೃಪೆಯಿಂದ ದೇವತೆಗಳೊಬ್ಬರೇ ಕುಡಿದುಬಿಟ್ಟರು ಅನಂತರ ಬಹುಗೊಂದಲವೆದ್ದಿತು. ಆ ದೇವದಾನವರಿಗೆ ಪರಸ್ಪರ ವೈಷಮ್ಯವುಂಟಾಗಲು ಕ್ಷೀರಸಾಗರದಲ್ಲಿ ಹುಟ್ಟಿದ ಆ ರತ್ನಗಳೇ ಕಾರಣವಾದುವು

೧೧ ಎಲೈ ಸನತ್ಕುಮಾರನೇ, ಅನಂತರ ದೇವದಾನವರಿಗೆ ಪರಸ್ಪರ ಕೈಕೈಹತ್ತಿ ಯುದ್ಧವಾರಂಭವಾಯಿತು ಆಗ ರಾಹುವಿಗೆದುರಾಗಿ ಯುದ್ಧಮಾಡುತ್ತಿದ್ದ ಚಂದ್ರನು, ಅವನ ಏಟನ್ನು ತಡೆಯಲಾರದೆ ಯುದ್ಧರಂಗದಿಂದ ಓಡಿಹೋದನು

೧೨. ಆ ಚಂದ್ರನು ಭಯದಿಂದ ತತ್ತಳಿಸುತ್ತಾ ಶಿವಲೋಕವನ್ನು ಸೇರಿ, ಶ್ರೀ ಶಂಕರನನ್ನು ಕಂಡು ಕಾಪಾಡು, ಕಾಪಾಡು, ಎಂಬುದಾಗಿ ಮರೆಹೊಕ್ಕನು. ಆ ಶಿವನನ್ನು ನಮಸ್ಕರಿಸಿ ಸ್ತೋತ್ರಮಾಡಿದನು.

ತತಸ್ಸ ತಾಮುಭಯದಃ ಶಂಕರೋ ಭಕ್ತವತ್ಸಲಃ ।
ದಧ್ರೇ ಶಿರಸಿ ಚಂದ್ರಂ ಸ ವಿಭುಶ್ಶರಣಮಾಗತಂ ॥ ೧೩ ॥

ಅಥಾಗತಸ್ತದಾ ರಾಹುಸ್ತುಷ್ಟಾವ ಸುಪ್ರಣಮ್ಯ ತಂ ।
ಶಂಕರಂ ಸಕಲಾಧೀಶಂ ವಾಗ್ಭಿರಿಷ್ಟಾಭಿರಾದರಾತ್ ॥ ೧೪ ॥

ಶಂಭುಸ್ತನ್ಮತಮಾಜ್ಞಾಯ ತಚ್ಛಿರಾಂಸ್ಯಚ್ಯುತೇನ ಹ ।
ಪುರಾ ಛಿನ್ನಾನಿ ವೈ ಕೇತುಸಂಜ್ಞಾನಿ ನಿದಧೇ ಗಲೇ ॥ ೧೫ ॥

ತತೋ ಯುದ್ಧೇಽಸುರಾಃ ಸರ್ವೇ ದೇವೈಶ್ಚೈವ ಪರಾಜಿತಾಃ ।
ಪೀತ್ವಾಮೃತಂ ಸುರಾಸ್ಸರ್ವೇ ಜಯಂ ಪ್ರಾಪುರ್ಮಹಾಬಲಾಃ ॥ ೧೬ ॥

ವಿಷ್ಣುಪ್ರಭೃತಯಃ ಸರ್ವೇ ಬಭೂವುಶ್ಚಾತಿಗರ್ವಿತಾಃ ।
ಬಲಾನಿ ಚಾಂಕುರಂತ್ಯಂತಶ್ಶಿವಮಾಯಾವಿಮೋಹಿತಾಃ ॥ ೧೭ ॥

---

೧೩. ಬಳಿಕ ಸತ್ಪುರುಷರಿಗೆ ಅಭಯವನ್ನೀಯುವ ಭಕ್ತವತ್ಸಲನಾದ ಶಂಕರನು ತನ್ನನ್ನು ಮರೆಹೊಕ್ಕಿರುವ ಆ ಚಂದ್ರನನ್ನು ತಲೆಯಲ್ಲಿ ಧರಿಸಿದನು.

೧೪. ಅನಂತರ ಚಂದ್ರನನ್ನು ಹಿಂಬಾಲಿಸಿ ಓಡಿಸಿಕೊಂಡುಬಂದ ರಾಹುವು, ಸರ್ವೇಶ್ವರನೂ ಚಂದ್ರಶೇಖರನೂ ಆದ ಆ ಶಿವನನ್ನು ನಮಸ್ಕರಿಸಿ, ಮಧುರವಾದ ಮಾತುಗಳಿಂದ ಆತನನ್ನು ಆದರದಿಂದ ಸ್ತೋತ್ರಮಾಡಿದನು.

೧೫. ಆಗ ಶಿವನು ಆ ರಾಹುವಿನ ಅಭಿಪ್ರಾಯವನ್ನರಿತು, ಹಿಂದೆ ಅನೇಕ ಕಲ್ಪಗಳಲ್ಲಿ ಅಮೃತವನ್ನು ಹಂಚುವಾಗ ವಿಷ್ಣುವಿನಿಂದ ಕತ್ತರಿಸಲ್ಪಟ್ಟ ಕೇತುವೆಂಬುದಾಗಿ ಹೆಸರುಳ್ಳ ಆತನ ತಲೆಗಳನ್ನು ತನ್ನ ಕುತ್ತಿಗೆಯಲ್ಲಿ ಸರವಂತೆ ಧರಿಸಿದನು.

೧೬. ಬಳಿಕ ಅಮೃತವನ್ನು ಕುಡಿದು, ಮತ್ತಷ್ಟು ಬಲವನ್ನು ಪಡೆದ, ಬಲಾಢ್ಯರಾದ ದೇವತೆಗಳು ಯುದ್ಧದಲ್ಲಿ ದೈತ್ಯರನ್ನೆಲ್ಲಾ ಸೋಲಿಸಿಬಿಟ್ಟರು.

೧೭. ಅನಂತರ ವಿಷ್ಣುವೇ ಮೊದಲಾದ ಆ ದೇವತೆಗಳೆಲ್ಲರೂ, ಶಿವನ ಮಾಯೆಯಿಂದ ಮರುಳಾಗಿ, ಮಹಾ ಅಹಂಕಾರದಿಂದ ಮೆರೆಯುತ್ತಾ ತಮ್ಮ ತಮ್ಮ ಬಲವನ್ನು ವಿಶೇಷವಾಗಿ ಹೊಗಳಿಕೊಳ್ಳಲಾರಂಭಿಸಿದರು.

ತತಸ್ಸ ಶಂಕರೋ ದೇವಃ ಸರ್ವಾಧೀಶೋಽಥ ಗರ್ವಹಾ ।
ಯಕ್ಷೋ ಭೂತ್ವಾ ಜಗಾಮಾಶು ಯತ್ರ ದೇವಾಃ ಸ್ಥಿತಾ ಮುನೇ ॥ ೧೮ ॥

ಸರ್ವಾನ್ದೃಷ್ಟ್ವಾಚ್ಯುತಮುಖಾನ್ದೇವಾನ್ಯಕ್ಷಪತಿಸ್ಸ ವೈ ।
ಮಹಾಗರ್ವಾಢ್ಯಮನಸಾ ಮಹೇಶಃ ಪ್ರಾಹ ಗರ್ವಹಾ ॥ ೧೯ ॥

॥ ಯಕ್ಷೇಶ್ವರ ಉವಾಚ ॥

ಕಿಮರ್ಥಂ ಸಂಸ್ಥಿತಾ ಯೂಯಮತ್ರ ಸರ್ವೇ ಸುರಾ ಮಿಥಃ ।
ಕಿಮು ಕಾಷ್ಠಾಖಿಲಂ ಬ್ರೂತ ಕಾರಣಂ ಮೇಽನುಪೃಚ್ಛತೇ ॥ ೨೦ ॥

॥ ದೇವಾ ಊಚುಃ ॥

ಅಭೂದತ್ರ ಮಹಾನ್ದೇವರಣಃ ಪರಮದಾರುಣಃ ।
ಅಸುರಾ ನಾಶಿತಾಸ್ಸರ್ವೇಽವಶಿಷ್ಟಾ ವಿದ್ರುತಾ ಗತಾಃ ॥ ೨೧ ॥

---

೧೮ ಎಲೈ ಮುನಿಯೇ, ಅನಂತರ ಸರ್ವಗರ್ವಾಪಹಾರಕನೂ, ಸರ್ವೇಶ್ವರನೂ ಆದ ಆ ಶಂಕರನು, ಯಕ್ಷನ ವೇಷವನ್ನು ಧರಿಸಿ, ಆ ದೇವತೆಗಳಿರುವ ಸ್ಥಳಕ್ಕೆ ಬೇಗನೆ ಬಂದನು.

೧೯. ಆ ಯಕ್ಷರೂಪಧಾರಿಯಾದ ಮಹೇಶ್ವರನು ಮಹಾಗರ್ವದಿಂದ ಬೀಗುತ್ತಿರುವ ವಿಷ್ಣು ಮೊದಲಾದ ದೇವತೆಗಳನ್ನು ಕಂಡು ಅವರ ಅಹಂಕಾರವನ್ನು ಮುರಿಯಲೋಸುಗ ಇಂತೆಂದು ನುಡಿದನು.

೨೦. ಎಲೈ ದೇವತೆಗಳಿರಾ! ಇದೇನು ನೀವೆಲ್ಲರೂ ಇಲ್ಲಿ ಪರಸ್ಪರ ಕಲೆತಿರುವಿರಿ? ಅದರ ಕಾರಣವೇನೆಂಬುದೆಲ್ಲವನ್ನೂ ನನಗೆ ವಿಶದವಾಗಿ ತಿಳಿಸಿರಿ

೨೧ ಎನಲು, ಆಗ ದೇವತೆಗಳು ಇಂತೆಂದರು:—ಈಗ ಇಲ್ಲಿ ಮಹಾಭಯಂಕರವಾದ ಭಾರಿ ಯುದ್ಧವು ದೇವತೆಗಳಿಗೂ-ದಾನವರಿಗೂ ನಡೆಯಿತು ಆ ಅಸುರರೆಲ್ಲರೂ ಮಡಿದುಹೋದರು. ಕಳಿದುಳಿದವರು ಓಡಿ ಜೀವವುಳಿಸಿಕೊಂಡರು.

**ವಯಂ ಸರ್ವೇ ಮಹಾವೀರಾ ದೈತ್ಯಘ್ನಾ ಬಲವತ್ತರಾಃ ।**
**ಅಗ್ರೇಽಸ್ಮಾಕಂ ಕಿಯಂತಸ್ತೇ ದೈತ್ಯಾಃ ಕ್ಷುದ್ರಬಲಾಸ್ಸದಾ ॥ ೨೨ ॥**

**॥ ನಂದೀಶ್ವರ ಉವಾಚ ॥**

**ಇತಿ ಶ್ರುತ್ವಾ ವಚಸ್ತೇಷಾಂ ಸುರಾಣಾಂ ಗರ್ವಗರ್ಭಿತಂ ।**
**ಗರ್ವಹಾಸೌ ಮಹಾದೇವೋ ಯಕ್ಷರೂಪೋ ವಚೋಽಬ್ರವೀತ್ ॥ ೨೩ ॥**

**॥ ಯಕ್ಷೇಶ್ವರ ಉವಾಚ ॥**

**ಹೇ ಸುರಾ ನಿಖಿಲಾ ಯೂಯಂ ಮದ್ವಚಶ್ಶೃಣುತಾದರಾತ್ ।**
**ಯಥಾರ್ಥಂ ವಚ್ಮಿ ನಾಸತ್ಯಂ ಸರ್ವಗರ್ವಾಪಹಾರಕಂ ॥ ೨೪ ॥**

**ಗರ್ವಮೇನಂ ನ ಕುರುತ ಕರ್ತಾ ಹರ್ತಾಽಪರಃ ಪ್ರಭುಃ ।**
**ವಿಸ್ಮೃತಾಶ್ಚ ಮಹೇಶಾನಂ ಕಥಯಧ್ವಂ ವೃಥಾಬಲಾಃ ॥ ೨೫ ॥**

---

೨೨. ನಾವೆಲ್ಲರೂ ಮಹಾವೀರರು, ಈ ದೈತ್ಯರೆಲ್ಲರನ್ನೂ ಕೊಂದು ಮಹಾ ಬಲಾಢ್ಯರೆನಿಸಿದೇವೆ. ಯಾವಾಗಲೂ ಅಲ್ಪವಾದ ಬಲವುಳ್ಳ ಆ ದೈತ್ಯರು ನಮ್ಮ ಮುಂದೆ ಯಾವ ಲೆಕ್ಕಕ್ಕೆ ಬರುವರು ? ಎಂದರು.

೨೩. ಎಲೈ ಮುನೀಂದ್ರನೇ, ಈರೀತಿ ಗರ್ವದಿಂದ ತುಂಬಿದ ಆ ದೇವತೆಗಳ ಮಾತನ್ನೂ, ಆ ಗರ್ವದಿಂದ ಅವರು ಬೀಗುತ್ತಾ ಅಹಂಕಾರದಿಂದ ನಗುತ್ತಿರುವುದನ್ನೂ ಕಂಡು, ಯಕ್ಷರೂಪಧಾರಿಯಾದ ಶಿವನಿಂತೆಂದನು.

೨೪. ಎಲೈ ದೇವತೆಗಳೇ, ನೀವೆಲ್ಲರೂ ಪ್ರೀತಿಯಿಂದ ನನ್ನ ಮಾತನ್ನು ಆಲಿಸಿರಿ. ನಾನು ಇದ್ದುದನ್ನಿದ್ದಂತೆ ನಿಜವಾಗಿ ಹೇಳುತ್ತೇನೆ. ಸುಳ್ಳನ್ನು ಎಂದಿಗೂ ಹೇಳಲಾರೆ. ಎಲ್ಲಾರೀತಿಯ ಗರ್ವವನ್ನು ಆ ಮಾತು ನಿಷೇಧಿಸುವುದು.

೨೫. ಈರೀತಿ ಅಹಂಕಾರದಿಂದ ಮೆರೆಯಬೇಡಿ. ಇದೆಲ್ಲಕ್ಕೂ ಕಾರಣಭೂತನೂ ಸರ್ವಸಂಹಾರಕನೂ ಆದ ಬೇರೊಬ್ಬ ಪ್ರಭುವಿರುವನು. ನೀವೆಲ್ಲರೂ ಆ ಮಹೇಶ್ವರನನ್ನೇ ಮರೆತುಬಿಟ್ಟಿರುವಿರಲ್ಲವೇ. ಶಕ್ತಿಯಿಲ್ಲದ ನಿಮಗೆ ಈ ಒಣಮಾತುಗಳೇಕೆ ?

ಯುಷ್ಮಾಕಂ ಚೇತ್ಸ ಹಿ ಮದೋ ಜಾನತಾಂ ಸ್ವಬಲಂ ಮಹತ್ ।
ಮತ್ಸ್ಥಾಪಿತಂ ತೃಣಮಿದಂ ಛಿಂತ ಸ್ವಾಸ್ತ್ರೈಶ್ಚ ತ್ಯೆಸ್ಸುರಾಃ　　　॥ ೨೬ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವೈಕತೃಣಂ ತೇಷಾಂ ನಿಚಿಕ್ಷೇಪ ಪುರಸ್ತತಃ ।
ಜಹ್ರೇ ಸರ್ವಮಿದಂ ಯಕ್ಷರೂಪ ಈಶಸ್ಸತಾಂ ಗತಿಃ　　　॥ ೨೭ ॥

ಅಥ ಸರ್ವೇ ಸುರಾ ವಿಷ್ಣುಪ್ರಮುಖಾ ವೀರಮಾನಿನಃ ।
ಕೃತ್ವಾ ಸ್ವಪೌರುಷಂ ತತ್ರ ಸ್ವಾಯುಧಾನಿ ವಿಚಿಕ್ಷಿಪುಃ　　　॥ ೨೮ ॥

ತತ್ರಾಸನ್ವಿಫಲಾನ್ಯಾಶು ತಾನ್ಯಸ್ತ್ರಾಣಿ ದಿವೌಕಸಾಂ ।
ಶಿವಪ್ರಭಾವತಸ್ತೇಷಾಂ ಮೂಢಗರ್ವಾಪಹಾರಿಣಃ　　　॥ ೨೯ ॥

---

೨೬. ನಿಮ್ಮನಿಮ್ಮ ಬಲವೇ ಬಹು ಹೆಚ್ಚಿನದೆಂದು ತಿಳಿದಿರುವಿರಲ್ಲವೇ? ನಿಮಗೆ ಅಂತಹ ಶಕ್ತಿಯು ನಿಜವಾಗಿಯೂ ಇರುವಪಕ್ಷದಲ್ಲಿ ನಾನು ನಿಮ್ಮ ಮುಂದೆ ಇಡುವ ಈ ಹುಲ್ಲುಕಡ್ಡಿಯನ್ನು ನಿಮ್ಮ ಹರಿತವಾದ ಆಯುಧಗಳಿಂದ ಕತ್ತರಿಸಿರಿ, ನೋಡೋಣ.

೨೭. ಎಲೈ ಸನತ್ಕುಮಾರನೇ, ಈರೀತಿ ಆ ಯಕ್ಷರೂಪಧಾರಿಯಾದ ಮಹೇಶ್ವರನು, ಅವರೆಲ್ಲರನ್ನೂ ನುಡಿದು ಅವರುಗಳಮುಂದೆ ಒಂದು ಹುಲ್ಲುಕಡ್ಡಿಯನ್ನಿಟ್ಟು ಅವರ ಅಹಂಕಾರವೆಲ್ಲವನ್ನೂ ಮುರಿದುಬಿಟ್ಟನು.

೨೮ ಹೀಗೆ ಯಕ್ಷನು ಹುಲ್ಲುಕಡ್ಡಿಯನ್ನು ಮುಂದಿಡುತ್ತಲೇ ತಾವೇ ಮಹಾಬಲಶಾಲಿಗಳೆಂದು ಹೆಮ್ಮೆಪಡುತ್ತಿದ್ದ ವಿಷ್ಣುವೇ ಮೊದಲಾದ ಆ ದೇವತೆಗಳೆಲ್ಲರೂ ತಮ್ಮ ಪುರುಷಪ್ರಯತ್ನವನ್ನೆಲ್ಲಾ ವೆಚ್ಚಮಾಡಿ ತಮ್ಮತಮ್ಮ ಆಯುಧಗಳನ್ನು ಪ್ರಯೋಗಿಸಿದರು

೨೯. ಆದರೇನು ? ಮೋಹಾಂಧರಾಗಿ ಮೆರೆಯುತ್ತಿರುವವರ ಗರ್ವಗಳನು ಅಪಹರಿಸುವ ಆ ಶಂಕರನ ಪ್ರಭಾವದಿಂದ ಆ ದೇವತೆಗಳ ಮಂತ್ರಾಸ್ತ್ರಗಳೂ ಸಹ ಆ ಹುಲ್ಲುಕಡ್ಡಿಯಮುಂದೆ ವಿಫಲವಾಗಿ ಬಿಟ್ಟುವು

ಅಥಾಸೀತ್ತು ನಭೋವಾಣೀ ದೇವವಿಸ್ಮಯಹಾರಿಣೀ ।
ಯಕ್ಷೋಽಯಂ ಶಂಕರೋ ದೇವಾಃ ಸರ್ವಗರ್ವಾಪಹಾರಕಃ ॥ ೩೦ ॥

ಕರ್ತಾ ಹರ್ತಾ ತಥಾ ಭರ್ತಾಽಯಮೇವ ಪರಮೇಶ್ವರಃ ।
ಏತದ್ಬಲೇನ ಬಲಿನೋ ಜೀವಾಃ ಸರ್ವೇಽನ್ಯಥಾ ನ ಹಿ ॥ ೩೧ ॥

ಅಸ್ಯ ಮಾಯಾಪ್ರಭಾವಾದ್ವೈ ಮೋಹಿತಾಃ ಸ್ವಪ್ರಭುಂ ಶಿವಂ ।
ಮದತೋ ಬುಬುಧುರ್ನೈವಾದ್ಯಾಪಿ ಬೋಧತನುಂ ಪ್ರಭುಂ ॥ ೩೨ ॥

॥ ನಂದೀಶ್ವರ ಉವಾಚ ॥

ಇತಿ ಶ್ರುತ್ವಾ ನಭೋವಾಣೀಂ ಬುಬುಧುಸ್ತೇ ಗತಸ್ಮಯಾಃ ।
ಯಕ್ಷೇಶ್ವರಂ ಪ್ರಣೇಮುಶ್ಚ ತುಷ್ಟುವುಶ್ಚ ತಮೀಶ್ವರಂ ॥ ೩೩ ॥

---

೩೦. ಆಗ ದೇವತೆಗಳ ಆಶ್ಚರ್ಯವನ್ನು ಪರಿಹರಿಸುತ್ತಾ ಅಶರೀರವಾಣಿಯು ಈರೀತಿ ಹೇಳಿತು. ಎಲೈ ದೇವತೆಗಳಿರಾ, ಈ ಯಕ್ಷನು ಮತ್ತಾರೂ ಅಲ್ಲ. ಮಧಾಂಧರ ಅಹಂಕಾರವನ್ನು ಮೆಟ್ಟಿ ಮುರಿಯುವ ಶಂಕರನೆಂದು ತಿಳಿಯಿರಿ.

೩೧ ಎಲ್ಲರಿಗೂ ಒಡೆಯನಾದ ಈತನೇ ಕರ್ತೃವು. ಸಂಹಾರಕರ್ತನು, ಪಾಲಕನು. ಈತನ ಬಲದಿಂದಲೇ ಎಲ್ಲ ಜೀವಿಗಳೂ ಬಲಶಾಲಿಗಳಾಗಿರುವರಲ್ಲದೆ ಮತ್ತೆ ಬೇರೆಯಲ್ಲ.

೩೨. ಈತನ ಮಾಯಾಪ್ರಭಾವದಿಂದಲೇ ನಿಮ್ಮೆಲ್ಲರಿಗೂ ಪ್ರಭುವೂ ಶುದ್ಧ ಜ್ಞಾನಸ್ವರೂಪನೂ ಆದ ಈ ಪರಮಪುರುಷನನ್ನೇ ನೀವೆಲ್ಲರೂ ಮದಾಂಧರಾಗಿ ಮೆರೆಯುತ್ತಾ ಈಗಲೂ ಅರಿಯದೆಯೇ ಇರುವಿರಿ ಎಂದು ಹೇಳಿತು.

೩೩. ಎಲೈ ಮಹರ್ಷಿಯೇ, ಈರೀತಿ ಅಶರೀರವಾಣಿಯು ಹೇಳಿದುದನ್ನು ಕೇಳಿದೊಡನೆಯೇ ಆ ದೇವತೆಗಳು ತಮ್ಮತಮ್ಮ ಅಹಂಕಾರವನ್ನು ತೊರೆದು ಎಚ್ಚೆತ್ತು ಕೊಂಡರು. ಬಳಿಕ ಯಕ್ಷರೂಪಧಾರಿಯಾದ ಆ ಶಿವನಿಗೆ ನಮಸ್ಕಾರಮಾಡಿ ಆ ಈಶ್ವರ ನನ್ನು ಸ್ತೋತ್ರಮಾಡಿದರು.

॥ ದೇವಾ ಊಚುಃ ॥

ದೇವದೇವ ಮಹಾದೇವ ಸರ್ವಗರ್ವಾಪಹಾರಕ ।
ಯಕ್ಷೇಶ್ವರ ಮಹಾಲೀಲ ಮಾಯಾ ತೇತ್ಯದ್ಭುತಾ ಪ್ರಭೋ ॥ ೩೪ ॥

ಮೋಹಿತಾ ಮಾಯಯಾದ್ಯಾಪಿ ತವ ಯಕ್ಷಸ್ವರೂಪಿಣಃ ।
ಸಗರ್ವಮಭಿಭಾಷಂತಸ್ತ್ವತ್ಪುರೋ ಹಿ ಪೃಥಜ್ಮಯಾಃ ॥ ೩೫ ॥

ಇದಾನೀಂ ಜ್ಞಾನಮಾಯಾತಂ ತವೈವ ಕೃಪಯಾ ಪ್ರಭೋ ।
ಕರ್ತಾ ಹರ್ತಾ ಚ ಭರ್ತಾ ಚ ತ್ವಮೇವಾನ್ಯೋ ನ ಶಂಕರ ॥ ೩೬ ॥

ತ್ವಮೇವ ಸರ್ವಶಕ್ತೀನಾಂ ಸರ್ವೇಷಾಂ ಹಿ ಪ್ರವರ್ತಕಃ ।
ನಿವರ್ತಕಶ್ಚ ಸರ್ವೇಶಃ ಪರಮಾತ್ಮಾವ್ಯಯೋಽದ್ವಯಃ ॥ ೩೭ ॥

---

೩೪ ಓ ದೇವದೇವ, ಮಹಾದೇವ, ಸರ್ವಗರ್ವಸಂಹಾರಕನೂ ಅನಂತವಾದ ಲೀಲೆಗಳನ್ನು ತೋರ್ಪಡಿಸುವನೂ ಆದ ಓ ಪ್ರಭುವೇ, ಓ ಯಕ್ಷೇಶ್ವರ, ನಿನ್ನ ಮಾಯೆಯು ಅತ್ಯಾಶ್ಚರ್ಯವಾದುದು

೩೫. ಈಗಲೂ ಕೂಡ ಯಕ್ಷರೂಪಧಾರಿಯಾದ ನಿನ್ನ ಮಾಯೆಗೆ ಮರುಳಾಗಿ ಕ್ಷುಲ್ಲಕರಾದ ನಾವೆಲ್ಲರೂ ನಿನ್ನೆದುರಿನಲ್ಲಿ ಮಹಾ ಅಹಂಕಾರದಿಂದ ಮಾತನಾಡುತಿದ್ದೆವಲ್ಲವೇ ?

೩೬ ಎಲೈ ಪ್ರಭುವೇ, ಈಗ ನಿನ್ನ ಕೃಪೆಯಿಂದಲೇ ನಮಗೆ ಜ್ಞಾನವುಂಟಾಯಿತು. ಎಲೈ ಶಂಕರನೇ, ನೀನೇ ಸರ್ವಕರ್ತೃವು ನೀನೇ ಸರ್ವಹರ್ತೃವು. ನೀನೇ ಸರ್ವಭರ್ತೃವು (ಪಾಲಕನು.) ನೀನು ಹೊರತು ಮತ್ತೆ ಯಾರೂ ಅಲ್ಲ.

೩೭ ನೀನೇ ಎಲ್ಲ ಶಕ್ತಿಗಳಿಗೂ ಎಲ್ಲ ವಸ್ತುಗಳಿಗೂ ಪ್ರಚೋದಕನಾಗಿರುವೆ. ಎಲ್ಲರನ್ನೂ ನಿವರ್ತನೆಗೊಳಿಸುವವನೂ ನೀನೇ. ನೀನೇ ಸರ್ವರಿಗೂ ಅಧಿಪತಿಯು. ನೀನೇ ನಾಶರಹಿತನೂ ದ್ವಿತೀಯರಹಿತನೂ (ಏಕಮಾತ್ರನಾದ) ಆದ ಪರಮಪುರುಷನು.

**ಯಕ್ಷೇಶ್ವರಸ್ವರೂಪೇಣ ಸರ್ವೇಷಾಂ ನೋ ಮದೋ ಹೃತಃ ।**
**ಕೃತೋ ಮನ್ಯಾಮಹೇ ತತ್ರೇಽನುಗ್ರಹೋ ಹಿ ಕೃಪಾಲುನಾ ॥ ೩೮ ॥**

**ಅಥೋ ಸ ಯಕ್ಷನಾಥೋಽನುಗೃಹ್ಯ ವೈ ಸಕಲಾನ್ಸುರಾನ್ ।**
**ವಿಬೋಧ್ಯ ವಿವಿಧೈರ್ವಾಕ್ಯೈಸ್ತತ್ರೈವಾಂತರಧೀಯತ ॥ ೩೯ ॥**

**ಇತ್ಥಂ ಸ ವರ್ಣಿತಃ ಶಂಭೋರವತಾರಃ ಸುಖಾವಹಃ ।**
**ಯಕ್ಷೇಶ್ವರಾಖ್ಯಸ್ಸುಖದಸ್ಸತಾಂ ತುಷ್ಟ್ಯೋಽಭಯಂಕರಃ ॥ ೪೦ ॥**

**ಇದಮಾಖ್ಯಾನಮಮಲಂ ಸರ್ವಗರ್ವಾಪಹಾರಕಂ ।**
**ಸತಾಂ ಸುಶಾಂತಿದಂ ನಿತ್ಯಂ ಭುಕ್ತಿಮುಕ್ತಿಪ್ರದಂ ನೃಣಾಂ ॥ ೪೧ ॥**

---

೩೮. ನೀನು ಈ ಯಕ್ಷೇಶ್ವರನ ಅವತಾರವನ್ನೆತ್ತಿ ನಮ್ಮೆಲ್ಲರ ಮದವನ್ನೂ ಇಳಿಸಿಬಿಟ್ಟಿಯಷ್ಟೆ? ಇದು ಕೃಪಾಸಮುದ್ರನಾದ ನೀನು ನಮ್ಮಮೇಲೆ ತೋರಿಸಿದ ಅನುಗ್ರಹವೆಂಬುದಾಗಿಯೇ ನಾವು ಭಾವಿಸುವೆವು ಎಂದರು.

೩೯. ಅನಂತರ ಆ ಯಕ್ಷೇಶ್ವರನು ಆ ಎಲ್ಲ ದೇವತೆಗಳನ್ನೂ ಅನುಗ್ರಹಿಸಿ ಇನ್ನೂ ಬಗೆಬಗೆಯಾದ ವಾಕ್ಯಗಳಿಂದ ಅವರಿಗೆ ತಿಳಿವಳಿಕೆಯುಂಟಾಗುವಂತೆ ಉಪದೇಶಿಸಿ ಬಳಿಕ ಹಾಗೆಯೇ ಕಣ್ಮರೆಯಾದನು.

೪೦. ಈರೀತಿಯಾಗಿ ಶಂಕರನ ಸುಖಹೇತುವೆನಿಸಿದ ಯಕ್ಷೇಶ್ವರಾವತಾರ ವನ್ನು ಬಣ್ಣಿಸಿದುದಾಯಿತು. ಇದು ಸತ್ಪುರುಷರಿಗೆ ಸುಖವನ್ನೂ ಸಂತೋಷವನ್ನೂ ಅಭಯವನ್ನೂ ನೀಡುವಂತಹುದು.

೪೧. ಈ ಚರಿತ್ರವು ಪವಿತ್ರವಾದುದು. ಸಕಲರ ಗರ್ವವನ್ನೂ ಪರಿಹರಿಸು ವಂತಹುದು. ಶುದ್ಧಹೃದಯರಾದ ಮನುಷ್ಯರಿಗೆ ಶಾಶ್ವತವಾದಂತಹ ಶಾಂತತೆಯನ್ನೂ ಭೋಗಭಾಗ್ಯಗಳನ್ನೂ ಮೋಕ್ಷಸುಖವನ್ನೂ ಕೊಡುವಂತಹುದು.

**ಯ ಇದಂ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸುಧೀಃ ಪುಮಾನ್ ।**
**ಸರ್ವಕಾಮಾನವಾಪ್ನೋತಿ ತತಶ್ಚ ಲಭತೇ ಗತಿಂ ॥ ೪೨ ॥**

**ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಯಕ್ಷೇಶ್ವರಾವತಾರವರ್ಣನಂ ನಾಮ ಷೋಡಶೋಽಧ್ಯಾಯಃ**

---

೪೨ ಯಾವ ಪುರುಷನು ಈ ಆಖ್ಯಾನವನ್ನು ಭಕ್ತಿಯಿಂದ ಪಠಿಸುವನೋ ಅಥವಾ ಶ್ರವಣಮಾಡಿಸುವನೋ ಆ ವಿವೇಕಿಯು ಇಹಲೋಕದಲ್ಲಿ ತನ್ನ ಇಷ್ಟಾರ್ಥಗಳೆಲ್ಲವನ್ನೂ ಅನುಭವಿಸಿ ಅನಂತರ ಸದ್ಗತಿಯನ್ನು ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಯಕ್ಷೇಶ್ವರಾವತಾರವರ್ಣನವೆಂಬ ಹದಿನಾರನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಶತರುದ್ರಸಂಹಿತಾಯಾಂ

## ಸಪ್ತದಶೋಽಧ್ಯಾಯಃ



॥ ನಂದೀಶ್ವರ ಉವಾಚ ॥

ಶೃಣ್ವಥೋ ಗಿರಿಶಸ್ಯಾದ್ಯಾವತಾರಾನ್ದಶಸಂಖ್ಯಕಾನ್ ।
ಮಹಾಕಾಲಮುಖಾನ್ಭಕ್ತ್ಯೋಪಾಸನಾಕಾಂಡಸೇವಿತಾನ್ ॥ ೧ ॥

ತತ್ರಾದ್ಯೋ ಹಿ ಮಹಾಕಾಲೋ ಭುಕ್ತಿಮುಕ್ತಿಪ್ರದಸ್ಸತಾಂ ।
ಶಕ್ತಿಸ್ತತ್ರಮಹಾಕಾಲೀ ಭಕ್ತೇಪ್ಸಿತಫಲಪ್ರದಾ ॥ ೨ ॥

---

## ಹದಿನೇಳನೆಯ ಅಧ್ಯಾಯವು.

೧. ಎಲೈ ಸನತ್ಕುಮಾರನೇ, ಇನ್ನು ಮುಂದೆ, ವಿಶೇಷವಾಗಿ ಉಪಾಸನಾ ಕಾಂಡದಲ್ಲಿ ಭಕ್ತಿಯಿಂದ ನಿರೂಪಿತವಾದ ಮಹಾಕಾಲ ಮೊದಲಾದ ಶಂಕರನ ಹತ್ತು ಅವತಾರಗಳನ್ನು ನಿನಗೆ ವಿವರಿಸುವೆನು ಕೇಳು.

೨. ಅವುಗಳಲ್ಲಿ ಮೊದಲನೆಯು ಮಹಾಕಾಲವೆಂಬ ಅವತಾರವು, ಭೋಗ ಮೋಕ್ಷದಾಯಕವೆನಿಸಿರುವುದು. ಆ ಸಮಯದಲ್ಲಿ ಭಕ್ತರ ಇಷ್ಟಾರ್ಥಗಳೆಲ್ಲವನ್ನೂ ಕರುಣಿಸುವ ಮಹಾಕಾಲಿಯು, ಆ ಮಹಾಕಾಲನ ಶಕ್ತಿಯೆನಿಸುವಳು.

ತಾರನಾಮಾ ದ್ವಿತೀಯಶ್ಚ ತಾರಾ ಶಕ್ತಿಸ್ತಥೈವ ಸಾ ।
ಭುಕ್ತಿಮುಕ್ತಿಪ್ರದೌ ಚೋಭೌ ಸ್ವಸೇವಕಸುಖಪ್ರದೌ　　॥ ೩ ॥

ಭುವನೇಶೋ ಹಿ ಬಾಲಾಹ್ವಸ್ತೃತೀಯಃ ಪರಿಕೀರ್ತಿತಃ ।
ಭವನೇಶೀ ಶಿವಾ ತತ್ರ ಬಾಲಾಹ್ವಾ ಸುಖದಾ ಸತಾಂ　　॥ ೪ ॥

ಶ್ರೀವಿದ್ಯೇಶಃ ಷೋಡಶಾಹ್ವಃ ಶ್ರೀರ್ವಿದ್ಯಾ ಷೋಡಶೀ ಶಿವಾ ।
ಚತುರ್ಥೋ ಭಕ್ತಸುಖದೋ ಭುಕ್ತಿಮುಕ್ತಿಫಲಪ್ರದಃ　　॥ ೫ ॥

ಪಂಚಮೋ ಭೈರವಃ ಖ್ಯಾತಃ ಸರ್ವದಾ ಭಕ್ತಕಾಮದಃ ।
ಭೈರವೀ ಗಿರಿಜಾ ತತ್ರ ಸದುಪಾಸಕಕಾಮದಾ　　॥ ೬ ॥

---

೩. ತಾರನೆಂಬುದು ಎರಡನೆಯ ಅವತಾರವು ಆಗ ತಾರೆಯೆಂಬುದಾಗಿ ಆತನ ಶಕ್ತಿಯು ಪ್ರಸಿದ್ಧಳಾಗುವಳು. ಅವರೀರ್ವರೂ, ತಮ್ಮನ್ನು ಭಜಿಸುವ ಜನರಿಗೆ ಸುಖವನ್ನು ನೀಡುತ್ತಾ ಭೋಗಮೋಕ್ಷಗಳನ್ನು ಅನುಗ್ರಹಿಸುವರು.

೪. ಜಗದೀಶ್ವರನಾದ ಆ ಶಂಕರನು ಬಾಲನೆಂಬುದಾಗಿ ಮೂರನೆಯ ಅವತಾರವನ್ನು ಎತ್ತುವನು. ಆಗ ಜಗನ್ಮಾತೆಯಾದ ಪಾರ್ವತಿಯು, ಬಾಲೆಯೆಂಬ ಹೆಸರಿನಿಂದ ಆತನ ಶಕ್ತಿಯೆನಿಸಿ ಸಜ್ಜನರಿಗೆ ಸುಖವನ್ನುಂಟುಮಾಡುವಳು

೫. ನಾಲ್ಕನೆಯ ಅವತಾರದಲ್ಲಿ ಶಿವನು, ಷೋಡಶನೆಂಬ ಹೆಸರುಳ್ಳ ಶ್ರೀವಿದ್ಯೇಶ್ವರನೆಂದು ಪ್ರಸಿದ್ಧನಾಗುವನು ಆಗ ಶಂಕರಿಯು ಷೋಡಶಿಯೆಂಬ ಶ್ರೀವಿದ್ಯೇಶ್ವರಿಯೆನಿಸಿ, ಆತನ ಶಕ್ತಿಯಾಗುವಳು. ಈ ನಾಲ್ಕನೆಯ ಅವತಾರವು, ಭಕ್ತರಿಗೆ ಸುಖವನ್ನೂ, ಭೋಗಮೋಕ್ಷರೂಪವಾದ ಫಲವನ್ನೂ ನೀಡುವುದು.

೬. ಸದಾ ಭಕ್ತರ ಇಷ್ಟಾರ್ಥಗಳನ್ನು ಕರುಣಿಸುವ ಆ ಪರಶಿವನು ಭೈರವನೆಂಬುದಾಗಿ ಐದನೆಯ ಅವತಾರವನ್ನೆತ್ತುವನು. ಆಗ ಶುದ್ಧರಾದ ಉಪಾಸಕರ ಅಭೀಷ್ಟಪ್ರದೆಯೆನಿಸಿದ ಗಿರಿಜೆಯು ಭೈರವಿಯೆಂಬ ಹೆಸರಿನಿಂದ ಪ್ರಖ್ಯಾತಳಾಗಿ ಆತನ ಶಕ್ತಿಯೆನಿಸುವಳು

ಛಿನ್ನಮಸ್ತಕನಾಮಾಸೌ ಶಿವಃ ಷಷ್ಠಃ ಪ್ರಕೀರ್ತಿತಃ ।
ಭಕ್ತಕಾಮಪ್ರದಾ ಚೈವ ಗಿರಿಜಾ ಛಿನ್ನಮಸ್ತಕಾ ॥ ೭ ॥

ಧೂಮವಾನ್ಸಪ್ತಮಃ ಶಂಭುಸ್ಸರ್ವಕಾಮಫಲಪ್ರದಃ ।
ಧೂಮಾವತೀ ಶಿವಾ ತತ್ರ ಸದುಪಾಸಕಕಾಮದಾ ॥ ೮ ॥

ಶಿವಾವತಾರಃ ಸುಖದೋ ಹ್ಯಷ್ಟಮೋ ಬಗಲಾಮುಖಃ ।
ಶಕ್ತಿಸ್ತತ್ರ ಮಹಾನಂದಾ ವಿಖ್ಯಾತಾ ಬಗಲಾಮುಖೀ ॥ ೯ ॥

ಶಿವಾವತಾರೋ ಮಾತಂಗೋ ನವಮಃ ಪರಿಕೀರ್ತಿತಃ ।
ಮಾತಂಗೀ ತತ್ರ ಶರ್ವಾಣೀ ಸರ್ವಕಾಮಫಲಪ್ರದಾ ॥ ೧೦ ॥

ದಶಮಃ ಕಮಲಃ ಶಂಭುರ್ಭುಕ್ತಿಮುಕ್ತಿಫಲಪ್ರದಃ ।
ಕಮಲಾ ಗಿರಿಜಾ ತತ್ರ ಸ್ವಭಕ್ತಪರಿಪಾಲಿನೀ ॥ ೧೧ ॥

---

೭. ಛಿನ್ನಮಸ್ತಕನೆಂಬ ಹೆಸರಿನಿಂದ ಶಿವನು ಆರನೆಯ ಅವತಾರವನ್ನೆತ್ತಿ ದನು. ಆಗ ಭಕ್ತರ ಕಾಮಿತಾರ್ಥಫಲಗಳನ್ನು ಕರುಣಿಸುವ ಶಿವೆಯು ಛಿನ್ನಮಸ್ತಕೆ ಯೆಂಬುದಾಗಿ ಪ್ರಖ್ಯಾತಳಾಗುವಳು.

೮. ಎಲ್ಲರ ಇಷ್ಟಾರ್ಥಗಳನ್ನೂ ಕರುಣಿಸುವ ಶಿವನ ಧೂಮವಂತನೆಂಬ ಅವತಾರವು ಏಳನೆಯದು. ಆಗ ತನ್ನನ್ನು ಉಪಾಸನೆಮಾಡುವವರ ಅಭಿಲಾಷೆಗ ಳನ್ನು ಈಡೇರಿಸುವ ಶಿವೆಯು ಧೂಮಾವತಿಯೆಂಬ ಹೆಸರಿನಿಂದ ಖ್ಯಾತಳಾಗುವಳು

೯. ಸುಖದಾಯಕವಾದ ಶಿವನ ಎಂಟನೆಯ ಅವತಾರವು ಬಗಲಾಮುಖ ವೆನಿಸುವುದು. ಮಹಾನಂದದಾಯಿನಿಯಾದ ಶಿವೆಯು ಆಗ ಬಗಲಾಮುಖಿಯೆಂಬ ಶಕ್ತಿಯೆನಿಸುವಳು.

೧೦. ಮಾತಂಗನೆಂಬ ಶಿವನ ಅವತಾರವು ಒಂಭತ್ತನೆಯದು. ಆಗ ಸರ್ವ ಕಾಮಫಲಪ್ರದೆಯಾದ ಶರ್ವಾಣಿಯು, ಮಾತಂಗಿಯೆಂಬ ಹೆಸರಿನಿಂದ ಮೆರೆಯುವಳು.

೧೧. ಭಕ್ತರಿಗೆ ಭುಕ್ತಿಮುಕ್ತಫಲಪ್ರದನಾದ ಶ್ರೀ ಶಂಕರನ ಹತ್ತನೆಯ ಅವತಾರವು ಕಮಲವೆನಿಸುವುದು. ಆಗ ಭಕ್ತಸಂರಕ್ಷಿಣಿಯಾದ ಸರ್ವಮಂಗಳೆಯು ಕಮಲೆಯೆಂಬ ಹೆಸರಿನಿಂದ ಅವತರಿಸುವಳು.

ಏತೇ ದಶಮಿತಾಃ ಶೈವಾ ಅವತಾರಾಸ್ಸುಖಪ್ರದಾಃ ।
ಭುಕ್ತಿಮುಕ್ತಿಪ್ರದಾಶ್ಚೈವ ಭಕ್ತಾನಾಂ ಸರ್ವದಾಸ್ಸತಾಂ ॥ ೧೨ ॥

ಏತೇ ದಶಾವತಾರಾ ಹಿ ಶಂಕರಸ್ಯ ಮಹಾತ್ಮನಃ ।
ನಾನಾಸುಖಪ್ರದಾ ನಿತ್ಯಂ ಸೇವತಾಂ ನಿರ್ವಿಕಾರತಃ ॥ ೧೩ ॥

ಏತದ್ದಶಾವತಾರಾಣಾಂ ಮಾಹಾತ್ಮ್ಯಂ ವರ್ಣಿತಂ ಮುನೇ ।
ಸರ್ವಕಾಮಪ್ರದಂ ಜ್ಞೇಯಂ ತಂತ್ರಶಾಸ್ತ್ರಾದಿಗರ್ಭಿತಂ ॥ ೧೪ ॥

ಏತಾಸಾಮಪಿ ಶಕ್ತೀನಾಮದ್ಭುತೋ ಮಹಿಮಾ ಮುನೇ ।
ಸರ್ವಕಾಮಪ್ರದೋ ಜ್ಞೇಯಸ್ತಂತ್ರಶಾಸ್ತ್ರಾದಿಗರ್ಭಿತಃ ॥ ೧೫ ॥

---

೧೨ ಶಿವನ ಈ ಹತ್ತು ಅವತಾರಗಳು ಸದ್ಭಕ್ತರಿಗೆ ಸರ್ವಕಾಲದಲ್ಲಿಯೂ, ಸುಖವನ್ನೂ, ಭೋಗಭಾಗ್ಯಗಳನ್ನೂ, ಮೋಕ್ಷವನ್ನೂ ನೀಡುವುವು.

೧೩ ಮಹಾತ್ಮನಾದ ಶ್ರೀ ಶಂಕರನ ಈ ಹತ್ತು ಅವತಾರಗಳು, ನಿರ್ವಿಕಾರ ಚಿತ್ತರಾಗಿ ಸೇವಿಸುವ ಭಕ್ತರಿಗೆ ನಿತ್ಯವೂ, ಬಗೆಬಗೆಯಾದ ಸುಖಗಳನ್ನು ಅನುಗ್ರಹಿಸುವುವು

೧೪. ಎಲೈ ಸನತ್ಕುಮಾರಮುನಿಯೇ, ಸರ್ವೇಷ್ಟಾರ್ಥಗಳನ್ನೂ ಕರುಣಿಸುವ ತಂತ್ರಶಾಸ್ತ್ರ ಮೊದಲಾದುವುಗಳ ರಹಸ್ಯಗಳನ್ನೊಳಗೊಂಡ ಈ ಹತ್ತು ಅವತಾರಗಳ ಮಹಿಮೆಯನ್ನು ನಿನಗೆ ವರ್ಣಿಸಿದುದಾಯಿತು.

೧೫. ಓ ಮುನೀಂದ್ರ! ಈ ದಶವಿಧಶಕ್ತಿಗಳ ಮಹಿಮೆಯೂ ಅದ್ಭುತವಾದುದು. ಸಕಲೇಷ್ಟಾರ್ಥಗಳನ್ನು ನೀಡುವಂತಹುದು. ತಂತ್ರಶಾಸ್ತ್ರಾದಿಗಳ ಸಾರವನ್ನೊಳಗೊಂಡುದು. (ತಂತ್ರಶಾಸ್ತ್ರ ಸಮ್ಮತವಾದ ಪ್ರಯೋಗಗಳಿಗೆ ಉಪಯೋಗಕರವಾದುದು )

ಶತ್ರುಮಾರಣಕಾರ್ಯಾದೌ ತತ್ತಚ್ಛಕ್ತಿಃ ಪರಾ ಮತಾ ।
ಖಲದಂಡಕರೀ ನಿತ್ಯಂ ಬ್ರಹ್ಮತೇಜೋವಿವರ್ಧಿನೀ ॥ ೧೬ ॥

ಇತ್ಯುಕ್ತಾಸ್ತೇ ಮಯಾ ಬ್ರಹ್ಮನ್ನವತಾರಾ ಮಹೇಶಿತುಃ ।
ಸಶಕ್ತಿಕಾ ದಶಮಿತಾ ಮಹಾಕಾಲಮುಖಾಶ್ಶುಭಾಃ ॥ ೧೭ ॥

ಶೈವಪರ್ವಸು ಸರ್ವೇಷು ಯೋಽಧೀತೇ ಭಕ್ತಿತತ್ಪರಃ ।
ಏತದಾಖ್ಯಾನಮಮಲಂ ಸೋಽತಿಶಂಭುಪ್ರಿಯೋ ಭವೇತ್ ॥ ೧೮ ॥

ಬ್ರಾಹ್ಮಣೋ ಬ್ರಹ್ಮವರ್ಚಸ್ವೀ ಕ್ಷತ್ರಿಯೋ ವಿಜಯೀ ಭವೇತ್ ।
ಧನಾಧಿಪೋ ಹಿ ವೈಶ್ಯಃ ಸ್ಯಾಚ್ಛೂದ್ರಃ ಸುಖಮವಾಪ್ನುಯಾತ್ ॥ ೧೯ ॥

---

೧೬. ಶತ್ರುಮಾರಣ ಮೊದಲಾದ ಕೃತ್ಯಗಳಲ್ಲಿ ಆಯಾ ಶಕ್ತಿಯು ಮಹಾ ಶ್ರೇಷ್ಠವೆನಿಸುವುದು. ದುಷ್ಟರನ್ನು ದಂಡಿಸುವುದರಲ್ಲಿಯೂ, ಬ್ರಹ್ಮತೇಜಸ್ಸನ್ನು ಹೆಚ್ಚಿಸುವುದರಲ್ಲಿಯೂ ಈ ಶಕ್ತಿಯರು ಬಹುಮೇಲಾದವರು.

೧೭. ಎಲೈ ಬ್ರಾಹ್ಮಣೋತ್ತಮನೇ, ಆ ಮಹೇಶ್ವರನ ಶುಭಕರವಾದ ಮಹಾ ಕಾಲ ಮೊದಲಾದ ಹತ್ತು ಅವತಾರಗಳನ್ನೂ, ಹತ್ತುಮಂದಿ ಆಯಾ ಶಕ್ತಿದೇವಿ ಯರೊಡನೆ ನಿನಗೆ ವಿವರಿಸಿಯಾಯಿತು.

೧೮. ಯಾವಾತನು ಮಹಾಭಕ್ತಿಯಿಂದ ಪಾವನವಾದ ಈ ಆಖ್ಯಾನವನ್ನು ಎಲ್ಲ ಶಿವೋತ್ಸವಗಳಲ್ಲಿಯೂ ಪಠಿಸುವನೋ, ಆತನು ಅತಿಶಯವಾದ ಪ್ರೀತಿಗೆ ಪಾತ್ರನಾಗುವನು.

೧೯. ಈ ಚರಿತ್ರವನ್ನು ಕೇಳಿದರೆ ಬ್ರಾಹ್ಮಣನು ಬ್ರಹ್ಮತೇಜಸ್ಸನ್ನು ಹೊಂದು ವನು. ಕ್ಷತ್ರಿಯನು ಶತ್ರುಗಳನ್ನು ಗೆಲ್ಲುವನು. ವೈಶ್ಯನು ಧನಧಾನ್ಯಸಮೃದ್ಧಿಯನ್ನು ಪಡೆಯುವನು. ಶೂದ್ರನು ಸುಖವನ್ನು ಹೊಂದುವನು.

**ಶಾಂಕರಾ ನಿಜಧರ್ಮಸ್ಥಾಃ ಶೃಣ್ವಂತಶ್ಚರಿತಂ ತ್ವಿದಂ ।**
**ಸುಖಿನಃ ಸ್ಯುರ್ವಿಶೇಷೇಣ ಶಿವಭಕ್ತಾ ಭವಂತು ಚ ॥ ೨೦ ॥**

**ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಶಿವದಶಾವತಾರವರ್ಣನಂ ನಾಮ ಸಪ್ತದಶೋಽಧ್ಯಾಯಃ**

೨೦ ಈ ಚರಿತ್ರವನ್ನು ಕೇಳಿದ ಶಿವನ ಭಕ್ತರು ತಮ್ಮ ತಮ್ಮ ಧರ್ಮದಲ್ಲಿ ವಿಶೇಷವಾಗಿ ನಿಷ್ಠೆಯನ್ನು ಹೊಂದುವರು. ಮತ್ತು ಅತಿಶಯವಾಗಿ ಸುಖವನ್ನು ಹೊಂದುವರು ಶಿವನ ಭಕ್ತರಲ್ಲದವರು ಶಿವನಲ್ಲಿ ಭಕ್ತಿಯನ್ನು ಹೊಂದುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಶಿವದಶಾವತಾರವರ್ಣನವೆಂಬ ಹದಿನೇಳನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಅಷ್ಟಾದಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಏಕಾದಶಾವತಾರಾನ್ವೈ ಶೃಣ್ವಥೋ ಶಾಂಕರಾನ್ವರಾನ್ ।
ಯಾಞ್ಛ್ರುತ್ವಾ ನ ಹಿ ಬಾಧ್ಯೇತ ಬಾಧಾಸತ್ಯಾದಿಸಂಭವಾ ॥ ೧ ॥

ಪುರಾ ಸರ್ವೇ ಸುರಾಶ್ಶಕ್ರಮುಖಾ ದೈತ್ಯಪರಾಜಿತಾಃ ।
ತ್ಯಕ್ತ್ವಾಮರಾವತೀಂ ಭೀತ್ಯಾಽಪಲಾಯಂತ ನಿಜಾಂ ಪುರೀಂ ॥ ೨ ॥

---

## ಹದಿನೆಂಟನೆಯ ಅಧ್ಯಾಯವು

೧. ಎಲೈ ಸನತ್ಕುಮಾರನೇ, ಯಾವುದನ್ನು ಶ್ರವಣಮಾಡಿದರೆ ಅಸತ್ಯ ಮುಂತಾದುವುಗಳಿಂದ ಉಂಟಾದ ದೋಷವು ನಮ್ಮನ್ನು ಪೀಡಿಸದೆ ಇರುವುದೋ, ಆ ಶ್ರೇಷ್ಠವಾದ ಶಂಕರನ ಹನ್ನೊಂದು ಅವತಾರಗಳನ್ನು ಇನ್ನುಮುಂದೆ ಹೇಳುವೆನು, ಕೇಳುವವನಾಗು.

೨. ಹಿಂದೆ ಇಂದ್ರಾದಿ ದೇವತೆಗಳು, ದೈತ್ಯರಿಂದ ಸೋಲಿಸಲ್ಪಟ್ಟು ಭಯದಿಂದ ತಮ್ಮ ಪಟ್ಟಣವಾದ ಅಮರಾವತಿಯನ್ನೂ ತೊರೆದು ಓಡಿಹೋದರು.

ದೈತ್ಯಪ್ರಪೀಡಿತಾ ದೇವಾ ಜಗ್ಮುಸ್ತೇ ಕಶ್ಯಪಾಂತಿಕಂ ।
ಬಧ್ವಾ ಕರಾನ್ನತಸ್ಕಂಧಾ ಪ್ರಣೇಮುಸ್ತಂ ಸುವಿಹ್ವಲಂ ॥ ೩ ॥

ಸುನುತ್ವಾ ತಂ ಸುರಾಸ್ಸರ್ವೇ ಕೃತ್ವಾ ವಿಜ್ಞಪ್ತಿಮಾದರಾತ್ ।
ಸರ್ವಂ ನಿವೇದಯಾಮಾಸುಸ್ಸ್ವದುಃಖಂ ತತ್ಪರಾಜಯಂ ॥ ೪ ॥

ತತಸ್ಸ ಕಶ್ಯಪಸ್ತಾತ ತತ್ಪಿತಾ ಶಿವಸಕ್ತಧೀಃ ।
ತದಾಕರ್ಣ್ಯಾಸುರಾಕಂ ವೈ ದುಃಖಿತೋಽಭೂನ್ನ ಚಾಧಿಕಂ ॥ ೫ ॥

ತಾನಾಶ್ವಾಸ್ಯ ಮುನಿಸ್ಸೋಽಥ ಧೈರ್ಯಮಾಧಾಯ ಶಾಂತಧೀಃ ।
ಕಾಶೀಂ ಜಗಾಮ ಸುಪ್ರೀತ್ಯಾ ವಿಶ್ವೇಶ್ವರಪುರೀಂ ಮುನೇ ॥ ೬ ॥

---

೩, ಅನಂತರ ದೈತ್ಯರಿಂದ ಪೀಡಿತರಾದ ಆ ದೇವತೆಗಳು ವ್ಯಾಕುಲತೆಯಿಂದ ಕಶ್ಯಪಮಹರ್ಷಿಯ ಬಳಿಗೆ ಹೋಗಿ, ಕೈಗಳನ್ನು ಮುಗಿದು, ಮೈಬಗ್ಗಿ ಆತನಿಗೆ ನಮಸ್ಕಾರ ಮಾಡಿದರು.

೪. ಈರೀತಿ ನಮಸ್ಕಾರಮಾಡಿದ ಬಳಿಕ ಆ ದೈತ್ಯರು ತಮ್ಮನ್ನು ಸೋಲಿಸಿದುದರಿಂದ ತಮಗುಂಟಾದ ದುಃಖವನ್ನು ಆದ್ಯಂತವಾಗಿ ಆ ಮಹರ್ಷಿಗೆ ಬಿನ್ನವಿಸಿದರು

೫. ಅನಂತರ ಶಿವನಲ್ಲೇ ನೆಲಸಿದ ಮನಸ್ಸುಳ್ಳ, ಆ ದೇವತೆಗಳಿಗೆ ಜನ್ಮಕನಾದ ಕಶ್ಯಪಮಹರ್ಷಿಯು, ಆ ಅಸುರರ ದುಃಖವೆಲ್ಲವನ್ನೂ ಆಲಿಸಿ, ವಿಶೇಷವಾಗಿ ಮರುಗಲಿಲ್ಲ. ಆದರೂ

೬. ಎಲೈ ಮುನೀಂದ್ರನೇ, ಬಳಿಕ ಆ ದೇವತೆಗಳನ್ನು ಶಾಂತಮನಸ್ಕನಾದ ಕಶ್ಯಪಮಹರ್ಷಿಯು ಸಂತೈಸಿ, ಧೈರ್ಯವನ್ನು ವಹಿಸಿರೆಂದು ಬೋಧಿಸಿ, ವಿಶ್ವೇಶ್ವರನ ನಿವಾಸವಾದ ಕಾಶೀಪಟ್ಟಣವನ್ನು ಕುರಿತು ಪ್ರೀತಿಯಿಂದ ತೆರಳಿದನು

ಗಂಗಾಂಭಸಿ ತತಃ ಸ್ನಾತ್ವಾ ಕೃತ್ವಾ ಥಂ ವಿಧಿಮಾದರಾತ್ ।
ವಿಶ್ವೇಶ್ವರಂ ಸಮಾನರ್ಚ ಸಾಂಬಂ ಸರ್ವೇಶ್ವರಂ ಪ್ರಭುಂ ॥ ೭ ॥

ಶಿವಲಿಂಗಂ ಸುಸಂಸ್ಥಾಪ್ಯ ಚಕಾರ ವಿಪುಲಂ ತಪಃ ।
ಶಂಭುಮುದ್ದಿಶ್ಯ ಸುಪ್ರೀತ್ಯಾ ದೇವಾನಾಂ ಹಿತಕಾಮ್ಯಯಾ ॥ ೮ ॥

ಮಹಾನ್ಕಾಲೋ ವ್ಯತೀಯಾಯ ತಪತಸ್ತಸ್ಯ ವೈ ಮುನೇ ।
ಶಿವಪಾದಾಂಬುಜಾಸಕ್ತಮನಸೋ ಧೈರ್ಯಶಾಲಿನಃ ॥ ೯ ॥

ಅಥ ಪ್ರಾದುರಭೂಚ್ಛಂಭುರ್ವರಂ ದಾತುಂ ತದರ್ಷಯೇ ।
ಸ್ವಪದಾಸಕ್ತಮನಸೇ ದೀನಬಂಧುಸ್ಸತಾಂ ಗತಿಃ ॥ ೧೦ ॥

---

೭. ಅಲ್ಲಿಗೆ ಹೋದನಂತರ ಗಂಗಾನದಿಯಲ್ಲಿ ಮಿಂದು, ಅಲ್ಲಿಯ ವಿಧಿಗಳನ್ನೆಲ್ಲ ಆದರಿಂದ ನೆರವೇರಿಸಿ, ಒಳಿಕ ಸರ್ವೇಶ್ವರನೂ, ಪ್ರಭುವೂ ಆದ ಆ ವಿಶ್ವೇಶ್ವರನನ್ನೂ, ಜಗಜ್ಜನನಿಯನ್ನೂ ಪೂಜಿಸಿದನು.

೮. ಆಮೇಲೆ ಶಿವಲಿಂಗವೊಂದನ್ನು ಸ್ಥಾಪಿಸಿಕೊಂಡು, ದೇವತೆಗಳಿಗೆ ಒಳ್ಳೆಯದಾಗಲೆಂದು ಬಗೆದು, ಶಿವನನ್ನು ಕುರಿತು, ಮಹಾಪ್ರೀತಿಯಿಂದ ಬಹುದೊಡ್ಡ ತಪಸ್ಸನ್ನು ಮಾಡಿದನು.

೯. ಎಲೈ ಮುನಿಯೇ, ಶಿವನ ಚರಣಕಮಲಗಳಲ್ಲಿಯೇ ನೆಟ್ಟಮನಸ್ಸುಳ್ಳ ಧೀರನಾದ ಆ ಕಶ್ಯಪಮಹರ್ಷಿಯು, ತಪಸ್ಸುಮಾಡುತ್ತಾ ಇರಲು, ಬಹುಕಾಲವು ಕಳೆದುಹೋಯಿತು.

೧೦. ಅನಂತರ ಸಾಧುಶೀಲರಾದವರಿಗೆ ಸದ್ಗತಿಯನ್ನು ಕರುಣಿಸುವವನೂ, ದೀನವತ್ಸಲೂ ಆದ ಶಂಕರರನು ತನ್ನ ಚರಣಾಂಬುಜಗಳಲ್ಲೇ ನೆಟ್ಟಮನಸ್ಸುಳ್ಳ ಆ ಕಶ್ಯಪಮಹರ್ಷಿಗೆ ವರವನ್ನು ಕೊಡುವುದಕ್ಕೆಂದು ಆತನಮುಂದೆ ಪ್ರತ್ಯಕ್ಷನಾದನು.

ವರಂ ಬ್ರೂಹೀತಿ ಚೋವಾಚ ಸುಪ್ರಸನ್ನೋ ಮಹೇಶ್ವರಃ ।
ಕಶ್ಯಪಂ ಮುನಿಶಾರ್ದೂಲಂ ಸ್ವಭಕ್ತಂ ಭಕ್ತವತ್ಸಲಃ ॥ ೧೧ ॥

ದೃಷ್ಟ್ವಾಥ ತಂ ಮಹೇಶಾನಂ ಸ ಪ್ರಣಮ್ಯ ಕೃತಾಂಜಲಿಃ ।
ತುಷ್ಟಾವ ಕಶ್ಯಪೋ ಹೃಷ್ಟೋ ದೇವತಾತಃ ಪ್ರಸನ್ನಧೀಃ ॥ ೧೨ ॥

॥ ಕಶ್ಯಪ ಉವಾಚ ॥

ದೇವದೇವ ಮಹೇಶಾನ ಶರಣಾಗತವತ್ಸಲ ।
ಸರ್ವೇಶ್ವರಃ ಪರಾತ್ಮಾ ತ್ವಂ ಧ್ಯಾನಗಮ್ಯೋಽದ್ವಯೋಽವ್ಯಯಃ ॥ ೧೩ ॥

ಬಲನಿಗ್ರಹಕರ್ತಾ ತ್ವಂ ಮಹೇಶ್ವರ ಸತಾಂ ಗತಿಃ ।
ದೀನಬಂಧುರ್ದಯಾಸಿಂಧುರ್ಭಕ್ತರಕ್ಷಣದಕ್ಷಧೀಃ ॥ ೧೪ ॥

---

೧೧. ಆಗ ಭಕ್ತರಲ್ಲಿ ಮಮತೆಯುಳ್ಳ, ಆ ಮಹೇಶ್ವರನು ಪ್ರಸನ್ನನಾಗಿ, ತನ್ನ ಭಕ್ತನೂ, ಮುನಿಶ್ರೇಷ್ಠನೂ ಆದ ಕಶ್ಯಪನನ್ನು ಕುರಿತು, ನಿನಗೆ ಬೇಕಾದ ವರವನ್ನು ಕೇಳು ಎಂದನು

೧೨ ಈರೀತಿ ಆ ಮಹೇಶ್ವರನು ತನ್ನೆದುರು ಪ್ರತ್ಯಕ್ಷನಾದುದನ್ನು ಕಂಡು, ದೇವತೆಗಳ ಜನಕನಾದ ಆ ಕಶ್ಯಪಮಹರ್ಷಿಯು, ಸಂತುಷ್ಟಾಂತರಂಗನಾಗಿ ಆತನನ್ನು ನಮಸ್ಕರಿಸಿ, ಬದ್ಧಾಂಜಲಿಪುಟನಾಗಿ ಇಂತು ಸ್ತುತಿಸಿದನು.

೧೩ ಎಲೈ ದೇವಾಧಿದೇವನೇ, ಮಹೇಶ್ವರನೇ, ಶರಣಾಗತವತ್ಸಲನೇ ನೀನು ಸರ್ವೇಶ್ವರನು, ಪರಮಾತ್ಮನು, ಧ್ಯಾನಮಾತ್ರಗೋಚರನು, ನೀನು ಅದ್ವಿತೀಯನು, ಅವಿನಾಶಿಯು

೧೪ ಹೇ ಮಹೇಶ್ವರ! ಸತ್ಪುರುಷರಿಗೆ ಸದ್ಗತಿಯನ್ನು ಈಯುವವನೂ, ದುಷ್ಟರನ್ನು ದಂಡನೆಮಾಡುವವನೂ, ದೀನವತ್ಸಲನೂ, ದಯಾಸಾಗರನೂ, ಭಕ್ತರನ್ನು ಸಂರಕ್ಷಿಸುವುದರಲ್ಲಿ ಬದ್ಧಕಂಕಣನೂ ನೀನಲ್ಲದೆ ಮತ್ತಾರು ?

ಏತೇ ಸುರಾಸ್ತ್ವದೀಯಾ ಹಿ ತ್ವದ್ಭಕ್ತಾಶ್ಚ ವಿಶೇಷತಃ ।
ದೈತ್ಯೈಃ ಪರಾಜಿತಾಶ್ಚಾದ್ಯ ಪಾಹಿ ತಾನ್ದುಃಖಿತಾನ್ಪ್ರಭೋ ॥ ೧೫ ॥

ಅಸಮರ್ಥೋ ರಮೇಶೋಽಪಿ ದುಃಖದಸ್ತೇ ಮುಹುರ್ಮುಹುಃ ।
ಅತೋ ಸುರಾ ಮಚ್ಛರಣಾವೇದಯಂತೋಽಸುಖಂ ಚ ತತ್ ॥ ೧೬ ॥

ತದರ್ಥಂ ದೇವದೇವೇಶ ದೇವದುಃಖವಿನಾಶಕ ।
ತತ್ಪೂರಿತುಂ ತಪೋನಿಷ್ಠಾಂ ಪ್ರಸನ್ನಾರ್ಥಂ ತವಾಸಹಂ ॥ ೧೭ ॥

ಶರಣಂ ತೇ ಪ್ರಪನ್ನೋಽಸ್ಮಿ ಸರ್ವಥಾಹಂ ಮಹೇಶ್ವರ ।
ಕಾಮಂ ಮೇ ಪೂರಯ ಸ್ವಾಮಿನ್ದೇವದುಃಖಂ ವಿನಾಶಯ ॥ ೧೮ ॥

ಪುತ್ರದುಃಖೈಶ್ಚ ದೇವೇಶ ದುಃಖಿತೋಽಹಂ ವಿಶೇಷತಃ ।
ಸುಖಿನಂ ಕುರು ಮಾಮೀಶ ಸಹಾಯಸ್ತ್ವಂ ದಿವೌಕಸಾಂ ॥ ೧೯ ॥

---

೧೫. ಈ ದೇವತೆಗಳೆಲ್ಲರೂ ನಿನ್ನವರು. ವಿಶೇಷವಾಗಿ ನಿನ್ನಲ್ಲಿ ಭಕ್ತಿಯುಳ್ಳವರು. ಇವರೀಗ ದೈತ್ಯರಿಂದ ಪರಾಜಯವನ್ನು ಹೊಂದಿ ದುಃಖಿಸುತ್ತಿರುವರು ಎಲೈ ಪ್ರಭುವೇ, ಅವರನ್ನು ಕಾಪಾಡು.

೧೬. ಲಕ್ಷ್ಮೀಕಾಂತನಾದ ಈ ಶ್ರೀಹರಿಯೂ ಸಹ ಸಾಮರ್ಥ್ಯಸಾಲದೆ, ಬಾರಿಬಾರಿಗೂ ನಿನಗೆ ದುಃಖವನ್ನು ಕೊಡುತ್ತಲೇ ಇರುವನು. ಆದುದರಿಂದ ದೇವತೆಗಳು ತಮ್ಮ ದುಃಖವೆಲ್ಲವನ್ನೂ ಹೇಳಿಕೊಂಡು, ನನ್ನನ್ನು ಮರೆಹೊಕ್ಕರು.

೧೭. ಎಲೈ ದೇವದೇವನೆ, ಆದುದರಿಂದ ದೇವತೆಗಳ ದುಃಖವನ್ನು ಹೋಗಲಾಡಿಸಬೇಕೆಂಬುದಾಗಿ, ನಿನ್ನನ್ನು ಪ್ರಸನ್ನನನ್ನಾಗಿ ಮಾಡಲೋಸುಗ ಈ ತಪೋರೂಪವಾದ ನಿಯಮವನ್ನು ಕೈಕೊಂಡೆನು.

೧೮. ಎಲೈ ಮಹಾದೇವನೇ, ನಿನ್ನನ್ನು ಸರ್ವಪ್ರಕಾರದಿಂದಲೂ ಮರೆಹೊಕ್ಕಿರುವೆನು. ಎಲೈ ಸ್ವಾಮಿಯೇ ನನ್ನೀ ಇಷ್ಟವನ್ನು ಕೈಗೂಡಿಸು. ದೇವತೆಗಳ ದುಃಖವನ್ನು ಹೋಗಲಾಡಿಸು

೧೯–೨೦. ಎಲೈ ದೇವಪ್ರಭುವೇ, ನಾನು ಬಹುವಾಗಿ ಪುತ್ರದುಃಖದಿಂದ ನೊಂದಿರುವೆನು. ಎಲೈ ಸ್ವಾಮಿಯೇ, ನನಗೆ ಮಗನಾಗಿ ಜನಿಸಿ, ದೇವತೆಗಳಿಗೆ

ಭೂತ್ವಾ ಮಮ ಸುತೋ ನಾಥ ದೇವಾ ಯಕ್ಷಾಃ ಪರಾಜಿತಾಃ ।
ದೈತ್ಯೈರ್ಮಹಾಬಲೈಶ್ಶಂಭೋ ಸುರಾನಂದಪ್ರದೋ ಭವ ॥ ೨೦ ॥

ಸದೈವಾಸ್ತು ಮಹೇಶಾನ ಸರ್ವಲೋಖಸಹಾಯಕೃತ್ ।
ಯಥಾ ದೈತ್ಯಕೃತಾ ಬಾಧಾ ನ ಬಾಧೇತ ಸುರಾನ್ಪ್ರಭೋ ॥ ೨೧ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತಸ್ಸ ತು ಸರ್ವೇಶಸ್ತಥೇತಿ ಪ್ರೋಚ್ಯ ಶಂಕರಃ ।
ಪಶ್ಯತಸ್ತಸ್ಯ ಭಗವಾಂಸ್ತತ್ರೈವಾಂತರ್ದಧೇ ಹರಃ ॥ ೨೨ ॥

ಕಶ್ಯಪೋಽಪಿ ಮಹಾಹೃಷ್ಟಃ ಸ್ವಸ್ಥಾನಮಗಮದ್ದ್ರುತಂ ।
ದೇವೇಭ್ಯಃ ಕಥಯಾಮಾಸ ಸರ್ವವೃತ್ತಾಂತಮಾದರಾತ್ ॥ ೨೩ ॥

ತತಸ್ಸ ಶಂಕರಶ್ಶರ್ವಸ್ಸತ್ಯಂ ಕರ್ತುಂ ಸ್ವಕಂ ವಚಃ ।
ಸುರಭ್ಯಾಂ ಕಶ್ಯಪಾಜ್ಜಜ್ಞೇ ಏಕಾದಶಸ್ವರೂಪವಾನ್ ॥ ೨೪ ॥

---

ಸಹಾಯಕನಾಗಿ ನಿಂತು ನನ್ನನ್ನು ಸುಖಪಡಿಸು. ಮಹಾಬಲಿಷ್ಠರಾದ ದೈತ್ಯರಿಂದ ನನ್ನ ಮಕ್ಕಳಾದ ಈ ದೇವತೆಗಳೂ, ಯಕ್ಷರೂ, ಸೋತು ಓಡಿಬಂದಿರುವರು. ಎಲೈ ಶಂಕರನೇ, ಇವರು ಸಂತೋಷದಿಂದ ನಲಿಯುವಂತೆ ಮಾಡು.

೨೧. ಎಲೈ ಮಹೇಶ್ವರನೇ, ದೈತ್ಯರಿಂದ ಉಂಟಾಗುವ ಪೀಡೆಯು ತಟ್ಟದಂತೆ ನೀನು ಯಾವಾಗಲೂ ದೇವತೆಗಳಿಗೆ ಸಹಾಯಮಾಡುತ್ತಾ ಇರುವವನಾಗು ಎಂದನು

೨೨ ಎಲೈ ಸನತ್ಕುಮಾರ ಮುನಿಯೇ, ಹೀಗೆಂಬುದಾಗಿ ಆ ಕಶ್ಯಪ ಮಹರ್ಷಿಯು ಪ್ರಾರ್ಥಿಸಲು ಆ ಶಂಕರನು ಹಾಗೆಯೇ ಆಗಲೆಂದು ಅನುಗ್ರಹಿಸಿ, ಅವನು ನೋಡುತ್ತಿರುವಂತೆಯೇ ಅಲ್ಲಿಂದ ಕಣ್ಮರೆಯಾದನು.

೨೩ ಅನಂತರ ಬಹುಸಂತೋಷದಿಂದ ಕಶ್ಯಪಮಹರ್ಷಿಯು ತನ್ನ ನಿವಾಸಕ್ಕೆ ಬೇಗನೆಬಂದು ಆ ಸಂಗತಿಯೆಲ್ಲವನ್ನೂ, ದೇವತೆಗಳಿಗೆ ತಿಳಿಸಿದನು.

೨೪ ಬಳಿಕ ಜಗತ್ಕಲ್ಯಾಣಕಾರಕನಾದ ಶಿವನು, ತನ್ನ ಮಾತನ್ನು ನಿಜವನ್ನಾಗಿಮಾಡಲು, ಆ ಕಶ್ಯಪಮಹರ್ಷಿಗೆ ಪತ್ನಿಯಾದ ಸುರಭೀದೇವಿಯಲ್ಲಿ ಹನ್ನೊಂದು ರೂಪದಿಂದ ಅವತರಿಸಿದನು.

ಮಹೋತ್ಸವಸ್ತದಾಸೀದ್ವೈ ಸರ್ವಂ ಶಿವಮಯಂ ತ್ವಭೂತ್ ।
ಆಸನ್ ಹೃಷ್ಟಾಃ ಸುರಾಶ್ಚಾಥ ಮುನಿನಾ ಕಶ್ಯಪೇನ ಚ ॥ ೨೫ ॥

ಕಪಾಲೀ ಪಿಂಗಲೋ ಭೀಮೋ ವಿರೂಪಾಕ್ಷೋ ವಿಲೋಹಿತಃ ।
ಶಾಸ್ತ್ರಾಽಜಪಾದಹಿರ್ಬುಧ್ನ್ಯಶ್ಶಂಭುಶ್ಚಂಡೋಭವಸ್ತಥಾ ॥ ೨೬ ॥

ಏಕಾದಶೈತೇ ರುದ್ರಾಸ್ತು ಸುರಭೀತನಯಾಃ ಸ್ಮೃತಾಃ ।
ದೇವಕಾರ್ಯಾರ್ಥಮುತ್ಪನ್ನಾಶ್ಶಿವರೂಪಾಸ್ಸುಖಾಸ್ಪದಂ ॥ ೨೭ ॥

ತೇ ರುದ್ರಾಃ ಕಾಶ್ಯಪಾ ವೀರಾ ಮಹಾಬಲಪರಾಕ್ರಮಾಃ ।
ದೈತ್ಯಾನ್ ಜಘ್ನುಶ್ಚ ಸಂಗ್ರಾಮೇ ದೇವಸಾಹಾಯ್ಯಕಾರಿಣಃ ॥ ೨೮ ॥

ತದ್ರುದ್ರಕೃಪಯಾ ದೇವಾ ದೈತ್ಯಾನ್ ಜಿತ್ವಾ ಚ ನಿರ್ಭಯಾಃ ।
ಚಕ್ರುಃ ಸ್ವರಾಜ್ಯಂ ಸರ್ವೇ ತೇ ಶಕ್ರಾದ್ಯಾಸ್ಸ್ವಸ್ಥಮಾನಸಾಃ ॥ ೨೯ ॥

---

೨೫. ಆಗ ಬಹು ಸಂಭ್ರಮದಿಂದ ಉತ್ಸವಗಳು ಜರುಗಿದುವು. ಎಲ್ಲೆಲ್ಲೂ ಮಂಗಲಮಯವಾಗಿ ಕಂಗೊಳಿಸಿತು. ಆಗ ಕಶ್ಯಪಮಹರ್ಷಿಯೂ, ದೇವತೆಗಳೂ ಪರಮಸಂತೋಷವನ್ನು ತಾಳಿದರು.

೨೬-೨೭. ಕಪಾಲೀ, ಪಿಂಗಲ, ಭೀಮ, ವಿರೂಪಾಕ್ಷ, ವಿಲೋಹಿತ, ಶಾಸ್ತೃ, ಅಜಪಾತ್, ಅಹಿರ್ಬುಧ್ನ್ಯ, ಶಂಭು, ಚಂಡ, ಭವ ಎಂಬೀ ಹನ್ನೊಂದು ಮಂದಿ ಆ ಸುರಭೀ ಕುಮಾರರು ಏಕಾದಶರುದ್ರರೆಂಬುದಾಗಿ ಪ್ರಖ್ಯಾತರಾದರು. ಇವರೆಲ್ಲರೂ ಸಾಕ್ಷಾತ್ ಶಿವಸ್ವರೂಪರು. ದೇವತೆಗಳ ಕೆಲಸವನ್ನು ಸಾಧಿಸಲೋಸುಗ ಅವತಾರ ಮಾಡಿದವರು. ಶಾಶ್ವತಸುಖಪ್ರದರು.

೨೮. ಮಹಾಬಲಾಢ್ಯರೂ, ಸಾಹಸಿಗರೂ, ವೀರಾಧಿವೀರರೂ ಆದ ಕಶ್ಯಪ ಸುತರಾದ ಆ ಏಕಾದಶರುದ್ರರು ಯುದ್ಧದಲ್ಲಿ ದೇವತೆಗಳಿಗೆ ಸಹಾಯವನ್ನುಮಾಡುತ್ತ ದೈತ್ಯರನ್ನು ಸದೆಬಡಿದರು.

೨೯. ಆ ಏಕಾದಶರುದ್ರರ ಕೃಪೆಯಿಂದ ದೇವತೆಗಳು ದೈತ್ಯರನ್ನು ಸೋಲಿಸಿ, ನಿರ್ಭಯರಾಗಿ ನೆಮ್ಮದಿಯಾದ ಮನಸ್ಸಿನಿಂದ ತಮ್ಮ ರಾಜ್ಯವನ್ನು ಆಳತೊಡಗಿದರು.

ಅದ್ಯಾಪಿ ತೇ ಮಹಾರುದ್ರಾಸ್ಸರ್ವೇ ಶಿವಸ್ವರೂಪಕಾಃ ।
ದೇವಾನಾಂ ರಕ್ಷಣಾರ್ಥಾಯ ವಿರಾಜಂತೇ ಸದಾ ದಿವಿ ॥ ೩೦ ॥

ಐಶಾನ್ಯಾಂ ಪುರಿ ತೇ ವಾಸಂ ಚಕ್ರಿರೇ ಭಕ್ತವತ್ಸಲಾಃ ।
ವಿರಮಂತೇ ಸದಾ ತತ್ರ ನಾನಾಲೀಲಾವಿಶಾರದಾಃ ॥ ೩೧ ॥

ತೇಷಾಮನುಚರಾ ರುದ್ರಾಃ ಕೋಟಿಶಃ ಪರಿಕೀರ್ತಿತಾಃ ।
ಸರ್ವತ್ರ ಸಂಸ್ಥಿತಾಸ್ತತ್ರ ತ್ರಿಲೋಕೇಷ್ವಭಿಭಾಗಶಃ ॥ ೩೨ ॥

ಇತಿ ತೇ ವರ್ಣಿತಾಸ್ತಾತಾವತಾರಾಶ್ಶಂಕರಸ್ಯ ವೈ ।
ಏಕಾದಶಮಿತಾ ರುದ್ರಾಸ್ಸರ್ವಲೋಕಸುಖಾವಹಾಃ ॥ ೩೩ ॥

ಇದಮಾಖ್ಯಾನಮಮಲಂ ಸರ್ವಪಾಪಪ್ರಣಾಶಕಂ ।
ಧನ್ಯಂ ಯಶಸ್ಯಮಾಯುಷ್ಯಂ ಸರ್ವಕಾಮಪ್ರದಾಯಕಂ ॥ ೩೪ ॥

---

೩೦. ಈಗಲೂ ಸಹ ಸಾಕ್ಷಾತ್ ಶಿವಸ್ವರೂಪರಾದ ಆ ಏಕಾದಶರುದ್ರರು ದೇವತೆಗಳ ಸಂರಕ್ಷಣೆಗಾಗಿಯೇ ಸ್ವರ್ಗಲೋಕದಲ್ಲಿ ವಿರಾಜಿಸುತ್ತಿರುವರು

೩೧ ಭಕ್ತರಲ್ಲಿ ವಾತ್ಸಲ್ಯವುಳ್ಳ ಆ ಏಕಾದಶರುದ್ರರು ಆ ಸ್ವರ್ಗಲೋಕದಲ್ಲಿ ಈಶಾನಪುರದಲ್ಲಿ ನೆಲೆಸಿರುವರು. ಅಲ್ಲಿ ನಾನಾವಿಧವಾದ ಲೀಲೆಗಳನ್ನು ತೋರುತ್ತಾ ಸದಾಕಾಲದಲ್ಲಿಯೂ ವಿಹರಿಸುತ್ತಿರುವರು

೩೨. ಆ ಏಕಾದಶರುದ್ರರಿಗೆ ಅನುಚರರೆನಿಸಿ ಕೋಟಿಗಟ್ಟಲೆ ರುದ್ರರಿರುವರು. ಅವರು ಈ ಮೂರುಲೋಕದಲ್ಲಿ ಅಲ್ಲಲ್ಲಿ ಕೆಲಕೆಲವುಂದಿಯಂತೆ ಎಲ್ಲ ಕಡೆಗಳಲ್ಲೂ ವ್ಯಾಪಿಸಿ ನೆಲೆಸಿರುವರು.

೩೩ ಅಪ್ಪಾ! ಈರೀತಿ ಸರ್ವಲೋಕಗಳಿಗೂ ಸುಖವನ್ನುಂಟುಮಾಡುವ ಏಕಾದಶರುದ್ರರೆಂಬ ಶಂಕರನ ಅವತಾರಗಳನ್ನು ನಿನಗೆ ವರ್ಣಿಸಿದುದಾಯಿತು.

೩೪ ಈ ಚರಿತ್ರವು ಪಾವನವಾದುದು ಎಲ್ಲ ಪಾಪವನ್ನೂ ಪರಿಹರಿಸುವಂತಹುದು ಶ್ಲಾಘನೀಯವಾದುದು ಯಶಸ್ಸನ್ನೂ ಆಯುಸ್ಸನ್ನೂ ಹೆಚ್ಚಿಸುವಂತಹುದು. ಎಲ್ಲ ವಿಧವಾದ ಅಭಿಲಾಷೆಗಳನ್ನೂ ಪೂರೈಸುವಂತಹುದು.

ಯ ಇದಂ ಶೃಣುಯಾತ್ತಾತ ಶ್ರಾವಯೇದ್ವೈ ಸಮಾಹಿತಃ ।
ಇಹ ಸರ್ವಸುಖಂ ಭುಕ್ತ್ವಾ ತತೋ ಮುಕ್ತಿಂ ಲಭೇತ ಸಃ ॥ ೩೫ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಏಕಾದಶಾವತಾರಲೀಲಾವರ್ಣನಂ ನಾಮಾಷ್ಟಾದಶೋಽಧ್ಯಾಯಃ

---

೩೫. ಅಪ್ಪಾ, ಈ ಆಖ್ಯಾನವನ್ನು ಯಾವಾತನು ಶ್ರವಣಮಾಡುವನೋ ಅಥವಾ ಇತರರಿಗೋಸ್ಕರವಾಗಿ ತಾನು ಕೀರ್ತನೆಮಾಡುವನೋ, ಅಂತಹವನು ಈ ಲೋಕದಲ್ಲಿ ಸಕಲ ಸುಖಗಳನ್ನೂ ಅನುಭವಿಸಿ, ಅನಂತರ ಮೋಕ್ಷವನ್ನು ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಏಕಾದಶರುದ್ರಾವತಾರವರ್ಣನವೆಂಬ ಹದಿನೆಂಟನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಏಕೋನವಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

**ಅಥಾನ್ಯಚ್ಚರಿತಂ ಶಂಭೋಃಶೃಣು ಪ್ರೀತ್ಯಾ ಮಹಾಮುನೇ ।**
**ಯಥಾ ಬಭೂವ ದುರ್ವಾಸಾಶ್ಶಂಕರೋ ಧರ್ಮಹೇತವೇ ॥ ೧ ॥**

**ಬ್ರಹ್ಮಪುತ್ರೋ ಬಭೂವಾತಿತಪಸ್ವೀ ಬ್ರಹ್ಮವಿತ್ಪ್ರಭುಃ ।**
**ಅನಸೂಯಾಪತಿರ್ಧೀಮಾನ್ಬ್ರಹ್ಮಾಜ್ಞಾಪ್ರತಿಪಾಲಕಃ ॥ ೨ ॥**

---

### ಹತ್ತೊಂಭತ್ತನೆಯ ಅಧ್ಯಾಯವು.

೧. ನಂದೀಶ್ವರನು ಸನತ್ಕುಮಾರನನ್ನು ಕುರಿತು ಹೇಳತೊಡಗಿದನು:— ಓ ಮಹಾಪ್ರಾಜ್ಞ! ಧರ್ಮಸ್ಥಾಪನೆಗಾಗಿ ಶಂಕರನು ದುರ್ವಾಸಸ್ಸಿನ ಅವತಾರವನ್ನೆತ್ತಿದ ಮತ್ತೊಂದು ಆಖ್ಯಾನವನ್ನು ತಿಳಿಸುವೆನು. ಪ್ರೀತಿಯಿಂದ ಕೇಳು

೨. ಹಿಂದೆ ಬ್ರಹ್ಮನ ಮಗನೂ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೆನಿಸಿದವನೂ, ಮಹಾತಪಸ್ವಿಯೂ ಅನಸೂಯಾಪತಿಯೂ, ಆದ ಅತ್ರಿಯೆಂಬ ಮಹರ್ಷಿಯಿದ್ದನು. ಆತನು ಮಹಾಪ್ರಾಜ್ಞನು. ಬ್ರಹ್ಮನ ಆಜ್ಞೆಯಂತೆಯೇ ನಡೆಯುವವನು.

ಸುನಿದೇ೯ಶಾದ್ಬ್ರಹ್ಮಣೋ ಹಿ ಸಸ್ತ್ರೀಕಃ ಪುತ್ರಕಾಮ್ಯಯಾ ।
ಸ ತ್ರ್ಯೃಕ್ಷಕುಲನಾಮಾನಂ ಯಯೌ ಚ ತಪಸೇ ಗಿರಿಂ ॥ ೩ ॥

ಪ್ರಾಣಾನಾಯಮ್ಯ ವಿಧಿವನ್ನಿರ್ವಿಂಧ್ಯಾ ತಟಿನೀತಟೇ ।
ತಪಶ್ಚಚಾರ ಸುಮಹದದ್ವಂದ್ವೋಽಬ್ದಶತಂ ಮುನಿಃ ॥ ೪ ॥

ಯ ಏಕ ಈಶ್ವರಃ ಕಶ್ಚಿದವಿಕಾರೋ ಮಹಾಪ್ರಭುಃ ।
ಸ ಮೇ ಪುತ್ರವರಂ ದದ್ಯಾದಿತಿ ನಿಶ್ಚಿತಮಾನಸಃ ॥ ೫ ॥

ಬಹುಕಾಲೋ ವ್ಯತೀಯಾಯ ತಸ್ಮಿಂಸ್ತಪತಿ ಸತ್ತಪಃ ।
ಆವಿರ್ಬಭೂವ ತತ್ಕಾತ್ತು ಶುಚಿಜ್ವಾ೯ಲಾ ಮಹೀಯಸೀ ॥ ೬ ॥

ತಯಾಸನ್ನಿಖಿಲಾ ಲೋಕಾ ದಗ್ಧಪ್ರಾಯಾ ಮುನೀಶ್ವರಾಃ ।
ತಥಾ ಸುರರ್ಷಯಃ ಸರ್ವೇ ಪೀಡಿತಾ ವಾಸವಾದಯಃ ॥ ೭ ॥

---

೩. ಆ ಅತ್ರಿಯು, ಬ್ರಹ್ಮನ ಅಪ್ಪಣೆಯಂತೆ, ತನ್ನ ಮಡದಿಯಾದ ಅನಸೂಯೆಯೊಡನೆ, ಪುತ್ರನನ್ನು ಪಡೆಯಬೇಕೆಂದು ಬಯಸಿ, ತ್ರ್ಯೃಕ್ಷಕುಲವೆಂಬ ಪರ್ವತಕ್ಕೆ ತಪಸ್ಸು ಮಾಡಲು ಹೊರಟನು.

೪. ಆ ಮುನಿಯು, ನಿರ್ವಿಂಧ್ಯಾ ನದಿಯ ದಡದಲ್ಲಿ. ಪ್ರಾಣವಾಯುವನ್ನು ತಡದು ನಿಲ್ಲಿಸಿ, ಶೀತೋಷ್ಣಾದಿ ದ್ವಂದ್ವಗಳನ್ನೂ ಲೆಕ್ಕಿಸದೆ, ಒಂದುನೂರುವರ್ಷಗಳಕಾಲ ಮಹಾನಿಯಮದಿಂದ ಅತಿಘೋರವಾದ ತಪಸ್ಸನ್ನಾಚರಿಸಿದನು.

೫. ಯಾವ ಮಹಾಪ್ರಭುವು, ನಿರ್ವಿಕಾರನೂ, ಏಕೈಕನೂ, ಆದ ಈಶ್ವರನೆನಿಸಿರುವನೋ, ಆತನೇ ತನಗೆ ಪುತ್ರನಾಗುವಂತೆ ವರವನ್ನು ಅನುಗ್ರಹಿಸಲಿ ಎಂದು ನಿಶ್ಚಯಿಸಿ, ಆತನು ತಪಸ್ಸಿಗೆ ತೊಡಗಿದನು.

೬. ಆ ಮುನಿಯು ಹೀಗೆಯೇ ತಪಸ್ಸುಮಾಡುತ್ತಿರಲು ಬಹಳಕಾಲವು ಕಳೆದುಹೋಯಿತು. ಬಳಿಕ ಆತನ ತಲೆಯಿಂದ, ಹೊಳೆಹೊಳೆಯುತ್ತಾ ಮಹಾಜ್ವಾಲೆಯೊಂದು ಹೊರಹೊರಟಿತು.

೭. ಆ ಜ್ವಾಲೆಯಿಂದ ಎಲ್ಲ ಲೋಕಗಳೂ, ಮುನಿಗಳೂ, ಇಂದ್ರಾದಿದೇವತೆಗಳೂ, ಬೆಂದುಹೋದಂತಾಗಿ ಪೀಡಿಸಲ್ಪಟ್ಟರು.

**ಅಥ ಸರ್ವೇ ವಾಸವಾದ್ಯಾ ಸುರಾಶ್ಚ ಮುನಯೋ ಮುನೇ ।**
**ಬ್ರಹ್ಮಸ್ಥಾನಂ ಯಯುಶ್ಶೀಘ್ರಂ ತಜ್ಜ್ವಾಲಾತಿಪ್ರಪೀಡಿತಾಃ ॥ ೮ ॥**

**ನುತ್ವಾ ನುತ್ವಾ ವಿಧಿಂ ದೇವಾಸ್ತತ್ಸ್ವದುಃಖಂ ನ್ಯವೇದಯನ್ ।**
**ಬ್ರಹ್ಮಾ ಸಹ ಸುರೈಸ್ತತ್ರ ವಿಷ್ಣುಲೋಕಂ ಯುಥಾಪರಂ ॥ ೯ ॥**

**ತತ್ರ ಗತ್ವಾ ರಮಾನಾಥಂ ನತ್ವಾ ನುತ್ವಾ ವಿಧಿಸ್ಸುರೈಃ ।**
**ಸ್ವದುಃಖಂ ತತ್ಸಮಾಚಖ್ಯೌ ವಿಷ್ಣವೇಽನಂತಕಂ ಮುನೇ ॥ ೧೦ ॥**

**ವಿಷ್ಣುಶ್ಚ ವಿಧಿನಾ ದೇವೈ ರುದ್ರಸ್ಥಾನಂ ಯಯೌ ದ್ರುತಂ ।**
**ಹರಂ ಪ್ರಣಮ್ಯ ತತ್ರೈತ್ಯ ತುಷ್ಟಾವ ಪರಮೇಶ್ವರಂ ॥ ೧೧ ॥**

**ಸ್ತುತ್ವಾ ಬಹುತಯಾ ವಿಷ್ಣುಂ ಸ್ವದುಃಖಂ ಚ ನ್ಯವೇದಯತ್ ।**
**ಶರ್ವಂ ಜ್ವಾಲಾಸಮುದ್ಭೂತಮತ್ರೇಶ್ಚ ತಪಸಃ ಪರಂ ॥ ೧೨ ॥**

---

೮. ಎಲೈ ಮುನಿಯೇ, ಅನಂತರ ಆ ಜ್ವಾಲೆಯ ವೇಗದಿಂದ ನೊಂದ ಇಂದ್ರಾದಿ ದೇವತೆಗಳೂ, ಋಷಿಗಳೂ, ಬೇಗನೆ, ಬ್ರಹ್ಮನ ಲೋಕಕ್ಕೆ ತೆರಳಿದರು

೯. ಅಲ್ಲಿ ಸೇರಿದಬಳಿಕ ಅವರೆಲ್ಲರೂ ಬ್ರಹ್ಮನನ್ನು ಬಹುವಿಧವಾಗಿ ಸ್ತುತಿಸಿ ತಮ್ಮ ವ್ಯಥೆಯನ್ನು ಅವನಿಗೆ ಹೇಳಿಕೊಂಡರು ಆಗ ಆ ದೇವತೆಗಳೊಂದಿಗೆ ಬ್ರಹ್ಮನು ಬೇಗಬೇಗನೆ ವಿಷ್ಣುವಿನ ಲೋಕಕ್ಕೆ ತೆರಳಿದನು

೧೦. ಅಲ್ಲಿ ಸೇರಿದಬಳಿಕ ಶ್ರೀಹರಿಯನ್ನು ನಮಸ್ಕರಿಸಿಯೂ, ಸ್ತೋತ್ರ ಮಾಡಿಯೂ, ಆದನಂತರ ಅಪಾರವಾದ ತಮ್ಮ ದುಃಖವನ್ನು ಅವರು ಬಿನ್ನವಿಸಿದರು ಬಳಿಕ ಆ ವಿಷ್ಣುವೂ ಸಹ ಬ್ರಹ್ಮನೊಡನೆಯೂ, ದೇವತೆಗಳೊಡನೆಯೂ, ಶಿವನ ಲೋಕಕ್ಕೆ ಬೇಗಬೇಗನೆ ಬಂದನು.

೧೧-೧೨ ಅನಂತರ ವಿಷ್ಣುವು ಪರಾತ್ಪರನಾದ ಆ ಪರಮೇಶ್ವರನನ್ನು ನಮಸ್ಕರಿಸಿ ಬಹುವಿಧವಾಗಿ ಸ್ತೋತ್ರಮಾಡಿದ ಬಳಿಕ ಆ ಮಹರ್ಷಿಯು ತಪಸ್ಸುಮಾಡುತ್ತಿರುವುದನ್ನೂ, ಆತನ ತಲೆಯಿಂದ ಜ್ವಾಲೆಯು ಹೊರಟು ಎಲ್ಲರನ್ನೂ ಸುಡುತ್ತಿರುವುದನ್ನು ಅದರಿಂದ ತಮ್ಮೆಲ್ಲರಿಗೂ ಉಂಟಾಗಿರುವ ನೋವನ್ನು (ದುಃಖವನ್ನೂ) ಬಿನ್ನವಿಸಿದನು.

ಅಥ ತತ್ರ ಸಮೇತಾಸ್ತು ಬ್ರಹ್ಮವಿಷ್ಣುಮಹೇಶ್ವರಾಃ ।
ಮುನೇ ಸಂಮಂತ್ರಯಾಂಚಕ್ರುರನ್ಯೋಽನ್ಯಂ ಜಗತಾಂ ಹಿತಂ ॥ ೧೩ ॥

ತದಾ ಬ್ರಹ್ಮಾದಯೋ ದೇವಾಸ್ತ್ರಯಸ್ತೇ ವರದರ್ಷಭಾಃ ।
ಜಗ್ಮುಸ್ತದಾಶ್ರಮಂ ಶೀಘ್ರಂ ವರಂ ದಾತುಂ ತದರ್ಥಯೇ ॥ ೧೪ ॥

ಸ್ವಚಿಹ್ನಚಿಹ್ನಿತಾಂಸ್ತಾನ್ಸ ದೃಷ್ಟ್ವಾತ್ರಿರ್ಮುನಿಸತ್ತಮಃ ।
ಪ್ರಣನಾಮ ಚ ತುಷ್ಟಾವ ವಾಗ್ಭಿರಿಷ್ಟಾಭಿರಾದರಾತ್ ॥ ೧೫ ॥

ತತಸ್ಸ ವಿಸ್ಮಿತೋ ವಿಪ್ರಸ್ತಾನುವಾಚ ಕೃತಾಂಜಲಿಃ ।
ಬ್ರಹ್ಮಪುತ್ರೋ ವಿನೀತಾತ್ಮಾ ಬ್ರಹ್ಮವಿಷ್ಣುಹರಾಭಿಧಾನ್ ॥ ೧೬ ॥

---

೧೩. ಆಗ ಅಲ್ಲಿ ಆ ಬ್ರಹ್ಮ, ವಿಷ್ಣು, ಮಹೇಶ್ವರರು ಮೂವರೂ ಕಲೆತು ಜಗತ್ತಿಗೆ ಹಿತವುಂಟಾಗಲು ಏನುಮಾಡಬೇಕೆಂಬುದನ್ನು ಪರಸ್ಪರವಾಗಿ ಆಲೋಚಿಸಿ ನಿರ್ಧರಿಸಿದರು.

೧೪. ಅನಂತರ ವರದಾಯಕರಾದ ಆ ಬ್ರಹ್ಮ ವಿಷ್ಣು ಮಹೇಶ್ವರರು ಆ ಋಷಿಗೆ ವರವನ್ನೀಯಲು ಆತನ ಆಶ್ರಮಕ್ಕೆ ತೆರಳಿದರು.

೧೫. ಅವರವರ ವಿಶೇಷಚಿಹ್ನೆಗಳಾದ ಶಂಖ, ಚಕ್ರ, ತ್ರಿಶೂಲ, ಡಮರು, ಮೊದಲಾದ ಆಯುಧಗಳಿಂದ ಕೂಡಿರುವ ಆ ತ್ರಿಮೂರ್ತಿಗಳನ್ನು ಕಂಡು ಮುನಿಶ್ರೇಷ್ಠನಾದ ಅತ್ರಿಯು ಆದರದಿಂದ ನಮಸ್ಕರಿಸಿ ಮಧುರವಾದ ಮಾತುಗಳಿಂದ ಸ್ತೋತ್ರ ಮಾಡಿದನು.

೧೬. ಬಳಿಕ ಬ್ರಹ್ಮಪುತ್ರನಾದ ಆ ಅತ್ರಿಮಹರ್ಷಿಯು ವಿನಯದಿಂದ ಕೈಗಳನ್ನು ಮುಗಿದುಕೊಂಡು ಆ ಬ್ರಹ್ಮ ವಿಷ್ಣು ಮಹೇಶ್ವರರನ್ನು ಕುರಿತು ಆಶ್ಚರ್ಯದಿಂದ ಇಂತು ನುಡಿದನು.

॥ ಅತ್ರಿರುವಾಚ ॥

ಹೇ ಬ್ರಹ್ಮನ್ ಹೇ ಹರೇ ರುದ್ರ ಪೂಜ್ಯಾಸ್ತ್ರಿಜಗತಾಂ ಮತಾಃ ।
ಪ್ರಭವಶ್ಚೇಶ್ವರಾಃ ಸೃಷ್ಟಿರಕ್ಷಾಸಂಹಾರಕಾರಕಾಃ ॥ ೧೭ ॥

ಏಕ ಏವ ಮಯಾ ಧ್ಯಾತ ಈಶ್ವರಃ ಪುತ್ರಹೇತವೇ ।
ಯಃ ಕಶ್ಚಿದೀಶ್ವರಃ ಖ್ಯಾತೋ ಜಗತಾಂ ಸ್ವಸ್ತ್ರಿಯಾ ಸಹ ॥ ೧೮ ॥

ಯೂಯಂ ತ್ರಯಸ್ಸುರಾಃ ಕಸ್ಮಾದಾಗತಾ ವರದರ್ಷಭಾಃ ।
ಏತನ್ಮೇ ಸಂಶಯಂ ಛಿತ್ವಾ ತತೋ ದತ್ತೇಪ್ಸಿತಂ ವರಂ ॥ ೧೯ ॥

ಇತಿ ಶ್ರುತ್ವಾ ವಚಸ್ತಸ್ಯ ಪ್ರತ್ಯೂಚುಸ್ತೇ ಸುರಾಸ್ತ್ರಯಃ ।
ಯಾದೃಕ್ಕೃತಸ್ತೇ ಸಂಕಲ್ಪಸ್ತಥೈವಾಭೂನ್ಮುನೀಶ್ವರ ॥ ೨೦ ॥

---

೧೭. ಹೇ ವಿಧಿ, ಹೇ ಹರೇ, ಹೇ ಶಂಕರ! ಈ ಮೂರು ಲೋಕಗಳಿಗೂ ಸೃಷ್ಟಿ, ಸ್ಥಿತಿ, ಸಂಹಾರ ಕೃತ್ಯಗಳನ್ನು ಜರಗಿಸುವ ನೀವು ಎಲ್ಲರಿಗೂ ಪೂಜ್ಯರಾಗಿರುವಿರಿ ನಿವೇ ಸರ್ವೇಶ್ವರರೂ, ಆಗಿರುವಿರಿ.

೧೮. ನಾನು ಮಕ್ಕಳಾಗಬೇಕೆಂಬಾಸೆಯಿಂದ ಈ ಜಗತ್ತುಗಳಿಗೆಲ್ಲಾ ಯಾವಾತನು ಪ್ರಭುವೆಂಬುದಾಗಿ ಪ್ರಖ್ಯಾತನಾಗಿರುವನೋ, ಆ ಒಬ್ಬ ಈಶ್ವರನನ್ನು ನನ್ನ ಪತ್ನಿಯೊಡನೆ ಧ್ಯಾನಮಾಡಿದೆನು.

೧೯. ಎಲೈ, ವರಪ್ರದಾಯಕರೇ, ನೀವು ಮೂವರೂ. ಏತಕ್ಕೆ ಬಂದಿರಿ? ಈ ನನ್ನ ಸಂಶಯವನ್ನು ಪರಿಹರಿಸಿ, ಅನಂತರ ನನ್ನ ಅಭಿಷ್ಟವಾದ ವರವನ್ನು ಅನುಗ್ರಹಿಸಿರಿ ಎಂದನು.

೨೦ ಈ ರೀತಿ ಅತ್ರಿಮಹರ್ಷಿಯು ಹೇಳಿದಮಾತನ್ನು ಕೇಳಿ, ಆ ತ್ರಿಮೂರ್ತಿಗಳು, ಆತನನ್ನು ಕುರಿತು ಇಂತೆಂದರು ಎಲೈ, ಮುನಿಶ್ರೇಷ್ಠನೆ ನೀನು ಯಾವರೀತಿ ಸಂಕಲ್ಪ ಮಾಡಿದ್ದೆಯೋ ಅದೇರೀತಿ ನಡೆದಿರುವುದು.

ವಯಂ ತ್ರಯೋ ಭವೇಶಾನಾಸ್ಸಮಾನಾ ವರದರ್ಷಭಾಃ ।
ಅಸ್ಮದಂಶಭವಾಸ್ತಸ್ಮಾದ್ಭವಿಷ್ಯಂತಿ ಸುತಾಸ್ತ್ರಯಃ ॥ ೨೧ ॥

ವಿದಿತಾ ಭುವನೇ ಸರ್ವೇ ಪಿತ್ರೋಃ ಕೀರ್ತಿವಿವರ್ಧನಾಃ ।
ಇತ್ಯುಕ್ತ್ವಾಸ್ತೇ ತ್ರಯೋ ದೇವಾಸ್ಸ್ವಧಾಮಾನಿ ಯಯುರ್ಮುದಾ ॥ ೨೨ ॥

ವರಂ ಲಬ್ಧ್ವಾ ಮುನಿಸ್ಸೋಽಥ ಜಗಾಮ ಸ್ವಾಶ್ರಮಂ ಮುದಾ ।
ಯುತೋಽನುಸೂಯಯಾ ಪ್ರೀತೋ ಬ್ರಹ್ಮಾನಂದಪ್ರಭೋ ಮುನೇ ॥

ಅಥ ಬ್ರಹ್ಮಾ ಹರಿಶ್ಶಂಭುರವತೇರುಃ ಸ್ತ್ರಿಯಾಂ ತತಃ ।
ಪುತ್ರರೂಪೈಃ ಪ್ರಸನ್ನಾತ್ಮನಾನಾಲೀಲಾಪ್ರಕಾಶಕಾಃ ॥ ೨೪ ॥

---

೨೧. ಈ ಸಕಲಪ್ರಪಂಚಕ್ಕೂ ಅಧಿಪತಿಗಳೆನಿಸಿದ ನಾವು ಮೂವರೂ, ಸಮಾನರು. ಆದುದರಿಂದ ನಿನಗೆ ನಮ್ಮ ಅಂಶದಿಂದ ಹುಟ್ಟಿದ ಮೂವರು ಪುತ್ರರುಂಟಾಗುವರು.

೨೨. ಅವರೆಲ್ಲರೂ ಜಗತ್ತಿನಲ್ಲಿ ಬಹುವಾಗಿ ಪ್ರಸಿದ್ಧಿಯನ್ನು ಪಡೆಯುವರು. ತಂದೆತಾಯಿಗಳ ಕೀರ್ತಿಯನ್ನು ಹೆಚ್ಚಿಸುವರು. ಈ ರೀತಿಯಾಗಿ ಅನುಗ್ರಹಿಸಿ ಆ ಮೂವರೂ ಸಂತೋಷದಿಂದ ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

೨೩. ಈರೀತಿ ವರವನ್ನು ಪಡೆದ ಆ ಅತ್ರಿಮಹರ್ಷಿಯು ಅನಂತರ ಬಹು ಸಂತೋಷದಿಂದ, ಅನಸೂಯೆಯೊಡನೆ, ತನ್ನ ಆಶ್ರಮಕ್ಕೆ ಹಿಂತಿರುಗಿದನು.

೨೪. ಅನಂತರ ನಾನಾ ವಿಧವಾದ ಲೀಲೆಗಳನ್ನು ತೋರುವ ಆ ತ್ರಿಮೂರ್ತಿಗಳು, ಆ ಮುನಿಗೆ ಒಲಿದವರಾಗಿ, ಆತನ ಪತ್ನಿಯಾದ ಅನಸೂಯೆಯಲ್ಲಿ ಪುತ್ರರೂಪದಿಂದ ಅವತರಿಸಿದರು.

ವಿಧೇರಂಶಾದ್ವಿಧುರ್ಜಜ್ಞೇSನಸೂಯಾಯಾಂ ಮುನೀಶ್ವರಾತ್ ।
ಆವಿರ್ಬಭೂವ್ರೋದಧಿತಃ ಕ್ಷಿಪ್ತೋ ದೇವೈಸ್ಸ ಏವ ಹಿ ॥ ೨೫ ॥

ವಿಷ್ಣೋರಂಶಾತ್ಸ್ತ್ರಿಯಾಂ ತಸ್ಯಾಮತ್ರೇರ್ದತ್ತೋ ವ್ಯಜಾಯತ ।
ಸಂನ್ಯಾಸಪದ್ಧತಿರ್ಯೇನ ವರ್ಧಿತಾ ಪರಮಾ ಮುನೇ ॥ ೨೬ ॥

ದುರ್ವಾಸಾ ಮುನಿಶಾರ್ದೂಲಃ ಶಿವಾಂಶಾನ್ಮುನಿಸತ್ತಮಃ ।
ಜಜ್ಞೇ ತಸ್ಯಾಂ ಸ್ತ್ರಿಯಾಮತ್ರೇರ್ವರಧರ್ಮಪ್ರವರ್ತಕಃ ॥ ೨೭ ॥

ಭೂತ್ವಾ ರುದ್ರಶ್ಚ ದುರ್ವಾಸಾ ಬ್ರಹ್ಮತೇಜೋವಿವರ್ಧನಃ ।
ಚಕ್ರೇ ಧರ್ಮಪರೀಕ್ಷಾಂ ಚ ಬಹೂನಾಂ ಸ ದಯಾಪರಃ ॥ ೨೮ ॥

---

೨೫ ಆ ಅತ್ರಿಮಹರ್ಷಿಗೆ ಅನಸೂಯೆಯಲ್ಲಿ ಬ್ರಹ್ಮನ ಅಂಶದಿಂದ ಚಂದ್ರನು ಹುಟ್ಟಿದನು ಅದೇ ಚಂದ್ರನೇ, ದೇವತೆಗಳು ತನ್ನನ್ನು ಎಸೆದುಬಿಟ್ಟಿರಲು, ಸಮುದ್ರ ಮಧ್ಯದಿಂದ ಮತ್ತೆ ಆವಿರ್ಭವಿಸಿದನು

೨೬. ಅನಂತರ ವಿಷ್ಣುವಿನ ಅಂಶದಿಂದ ಅವರೀರ್ವರಿಗೂ, ದತ್ತಾತ್ರೇಯನು ಅವತರಿಸಿದನು ಎಲೈ, ಮುನಿಯೇ, ಆ ಮಹಾತ್ಮನೇ ಪರಮಶ್ರೇಷ್ಠವಾದ ಸನ್ಯಾಸ ಧರ್ಮವನ್ನು ಜಗತ್ತಿನಲ್ಲಿ ಪ್ರಚಾರಗೊಳಿಸಿದನು.

೨೭ ಆ ಮೇಲೆ ಮುನಿಶ್ರೇಷ್ಠನೂ, ಶ್ರೇಷ್ಠವಾದಂತಹ ಧರ್ಮವನ್ನು ಪ್ರಚಾರ ಮಾಡಿದವನೂ ಆದ ದುರ್ವಾಸಋುಷಿಯು ಆ ಅನಸೂಯಾ ಅತ್ರಿಮಹರ್ಷಿಗಳಲ್ಲಿ ಶಿವಾಂಶದಿಂದ ಅವತರಿಸಿದನು.

೨೮. ಶಿವಾಂಶಸಂಭೂತನೂ, ಬ್ರಹ್ಮತೇಜಸ್ಸನ್ನು ಹೆಚ್ಚಿಸುವವನೂ, ಆದ ಆ ದುರ್ವಾಸಮಹಾಮುನಿಯು, ದಯಾಪೂರಿತವಾದ ಹೃದಯದಿಂದ ಅನೇಕ ಮಂದಿಯ ಧರ್ಮಕಾರ್ಯಗಳನ್ನು ಪರೀಕ್ಷೆಮಾಡಿದನು.

ಸೂರ್ಯವಂಶೇ ಸಮುತ್ಪನ್ನೋ ಯೋಽಂಬರೀಷೋ ನೃಪೋಽಭವತ್ ।
ತತ್ಪರೀಕ್ಷಾಮಕಾರ್ಷೀತ್ಸ ತಾಂ ಶೃಣು ತ್ವಂ ಮುನೀಶ್ವರ ॥ ೨೯ ॥

ಸೋಽಂಬರೀಷೋ ನೃಪವರಃ ಸಪ್ತದ್ವೀಪರಸಾಪತಿಃ ।
ನಿಯಮಂ ಹಿ ಚಕಾರಾಸಾವೇಕಾದಶ್ಯಾ ವ್ರತೇ ದೃಢಂ ॥ ೩೦ ॥

ಏಕಾದಶ್ಯಾ ವ್ರತಂ ಕೃತ್ವಾ ದ್ವಾದಶ್ಯಾಂ ಚೈವ ಪಾರಣಂ ।
ಕರಿಷ್ಯಾಮೀತಿ ಸುದೃಢಸಂಕಲ್ಪಸ್ತು ನರಾಧಿಪಃ ॥ ೩೧ ॥

ಜ್ಞಾತ್ವಾ ತನ್ನಿಯಮಂ ತಸ್ಯ ದುರ್ವಾಸಾ ಮುನಿಸತ್ತಮಃ ।
ತದಂತಿಕಂ ಗತಶ್ಶಿಷ್ಯೈರ್ಬಹುಭಿಶ್ಶಂಕರಾಂಶಜಃ ॥ ೩೨ ॥

ಪಾರಣೇ ದ್ವಾದಶೀಂ ಸ್ವಲ್ಪಾಂ ಜ್ಞಾತ್ವಾ ಯಾವತ್ಸ ಭೋಜನಂ ।
ಕರ್ತುಂ ವ್ಯವಸಿತಸ್ತಾವದಾಗತಂ ಸ ನ್ಯಮಂತ್ರಯತ್ ॥ ೩೩ ॥

---

೨೯. ಸೂರ್ಯವಂಶದ ಅರಸರಲ್ಲಿ ಅಂಬರೀಷನೆಂಬ ದೊರೆಯು ಒಬ್ಬನು. ಆ ಅರಸನ ಧರ್ಮಪರೀಕ್ಷೆಯನ್ನು ದುರ್ವಾಸಮಹರ್ಷಿಯು ಮಾಡಿದನು. ಆ ಕಥೆಯನ್ನು ನಿನಗೆ ವಿವರಿಸುವೆನು. ಅದನ್ನು ಕೇಳು.

೩೦. ಪುತ್ರಶ್ರೇಷ್ಠನಾದ, ಸಪ್ತದ್ವೀಪ ಸಮೇತನಾದ ಪೃಥ್ವಿಗಧಿಪತಿಯಾದ ಆ ಅಂಬರೀಷನು ಏಕಾದಶೀವ್ರತದ ನಿಯಮವನ್ನು ಬಹು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದನು.

೩೧. ಆ ನರಪತಿಯು ಏಕಾದಶೀ ದಿವಸ ಉಪವಾಸ, ಭಜನ, ಮುಂತಾದ ವ್ರತವನ್ನು ನೆರವೇರಿಸಿ ದ್ವಾದಶೀ ದಿನ ಬೆಳಿಗ್ಗೆ ಪಾರಣೆಯನ್ನು ಮಾಡಬೇಕೆಂದು ದೃಢವಾಗಿ ಸಂಕಲ್ಪಿಸಿದ್ದನು

೩೨. ಮುನಿಶ್ರೇಷ್ಠನಾದ ಆ ದುರ್ವಾಸನು, ಅಂಬರೀಷನ ನಿಯಮವನ್ನು ಅರಿತು, ಅವನನ್ನು ಪರೀಕ್ಷಿಸಲೋಸುಗ ತನ್ನ ಅನೇಕಮಂದಿ ಶಿಷ್ಯರೊಡನೆ ಅವನ ಬಳಿಗೆ ಹೋದನು.

೩೩. ಪಾರಣೆಮಾಡಲು, ದ್ವಾದಶಿಯು ಸ್ವಲ್ಪವಿರುವುದೆಂದು ತಿಳಿದು ಅಷ್ಟರೊಳಗಾಗಿಯೇ ಭೋಜನವನ್ನು ಮುಗಿಸಬೇಕೆಂದು ಆ ಅಂಬರೀಷನು ಹವಣಿಸುವ

ತತಃ ಸ್ನಾನಾರ್ಥಮಗಮದ್ದುರ್ವಾಸಾಃ ಶಿಷ್ಯಸಂಯುತಃ ।
ವಿಲಂಬಂ ಕೃತವಾಂಸ್ತತ್ರ ಪರೀಕ್ಷಾರ್ಥಂ ಮುನಿರ್ಬಹು ॥ ೩೪ ॥

ಧರ್ಮವಿಘ್ನಂ ತದಾ ಜ್ಞಾತ್ವಾ ಸ ನೃಪಃ ಶಾಸ್ತ್ರಶಾಸನಾತ್ ।
ಜಲಂ ಪ್ರಾಶ್ಯಾಸ್ಥಿತಸ್ತತ್ರ ತದಾಗಮನಕಾಂಕ್ಷಯಾ ॥ ೩೫ ॥

ಏತಸ್ಮಿನ್ನಂತರೇ ತತ್ರ ದುರ್ವಾಸಾ ಮುನಿರಾಗತಃ ।
ಕೃತಾಶನಂ ನೃಪಂ ಜ್ಞಾತ್ವಾ ಪರೀಕ್ಷಾರ್ಥಂ ಧೃತಾಕೃತಿಃ ॥ ೩೬ ॥

ಚುಕ್ರೋಧಾತಿ ನೃಪೇ ತಸ್ಮಿನ್ಪರೀಕ್ಷಾರ್ಥಂ ವೃಷಸ್ಯ ಸಃ ।
ಪ್ರೋವಾಚ ವಚನಂ ತೂಗ್ರಂ ಸ ಮುನಿಶ್ಶಂಕರಾಂಶಜಃ ॥ ೩೭ ॥

---

ಹೊತ್ತಿಗೆ ಸರಿಯಾಗಿ ಆ ಮಹರ್ಷಿಯು ಬರಲು, ಶಿಷ್ಯಪರಿವೃತನಾದ ಆತನನ್ನು ಅಂಬರೀಷನು ಭೋಜನಕ್ಕೆ ಆಮಂತ್ರಿಸಿದನು.

೩೪. ಅನಂತರ ಆ ಮಹರ್ಷಿಯು, ತನ್ನ ಶಿಷ್ಯರೆಲ್ಲರೊಡಗೂಡಿ, ಸ್ನಾನ ಮಾಡಿ ಬರುವೆನೆಂದು ಹೊರಟುಹೋದನು. ಅಲ್ಲಿ ಆ ಅಂಬರೀಷನನ್ನು ಪರೀಕ್ಷಿಸಬೇಕೆಂದು ಬೇಕೆಂತಲೇ ಬಹಳ ಹೊತ್ತು (ತಡ) ಮಾಡಿದನು.

೩೫ ಆಗ ಆ ಅಂಬರೀಷ ನೃಪತಿಯು, ಶಾಸ್ತ್ರವಚನದಂತೆ ಹೊತ್ತುಮೀರಲು ಧರ್ಮಕ್ಕೆ ಎಡರುಂಟಾಗುವುದೆಂದು ಒಗೆದು, ಸ್ವಲ್ಪ ನೀರನ್ನು ಕುಡಿದು ಆ ಮಹರ್ಷಿಯು ಬರುವುದನ್ನೇ ಎದುರುನೋಡುತ್ತಾ ಕಾದಿದ್ದನು.

೩೬-೩೭. ಇಷ್ಟರಲ್ಲಿ ಶಿವಾಂಶಸಂಭೂತನಾದ ದುರ್ವಾಸ ಮುನಿಯು ಅಲ್ಲಿಗೆ ಬಂದನು ಬಳಿಕ ಅರಸು ಜಲರೂಪವಾದ ಆಹಾರವನ್ನು ಸೇವಿಸಿದನೆಂದು ತಿಳಿದೊಡನೆಯೇ, ಆ ಅರಸಿನ ಧರ್ಮಶ್ರದ್ಧೆಯು ಎಷ್ಟರಮಟ್ಟಿಗೆ ಇರುವುದು ಎಂಬುದನ್ನು ಪರೀಕ್ಷಿಸಬೇಕೆಂಬುದನ್ನು ನಿಶ್ಚಯಿಸಿ, ಇಲ್ಲದ ಕೋಪವನ್ನು ನಟಿಸುತ್ತಾ, ಮಿತಿಮೀರಿ ಕೋಪಬಂದವನಂತೆ ಆ ಅಂಬರೀಷನನ್ನು ಕುರಿತು ಕಠಿಣ ವಾಕ್ಯಗಳನ್ನಾಡ ತೊಡಗಿದನು

॥ ದುರ್ವಾಸಾ ಉವಾಚ ॥

ಮಾಂ ನಿಮಂತ್ರ್ಯ ನೃಪಾಭೋಜ್ಯ ಜಲಂ ಪೀತಂ ತ್ವಯಾಧಮ ।
ದರ್ಶಯಾಮಿ ಫಲಂ ತಸ್ಯ ದುಷ್ಟದಂಡಧರೋ ಹ್ಯಹಂ ॥ ೩೮ ॥

ಇತ್ಯುಕ್ತ್ವಾ ಕ್ರೋಧತಾಮ್ರಾಕ್ಷೋ ನೃಪಂ ದಗ್ಧಂ ಸಮುದ್ಯತಃ ।
ಸಮುತ್ತಸ್ಥೌ ದ್ರುತಂ ಚಕ್ರಂ ತತ್ಸ್ಥಂ ರಕ್ಷಾರ್ಥಮೈಶ್ವರಂ ॥ ೩೯ ॥

ಪ್ರಜಜ್ವಾಲಾತಿ ತಂ ಚಕ್ರಂ ಮುನಿಂ ದುಗ್ಧಂ ಸುದರ್ಶನಂ ।
ಶಿವರೂಪಂ ತಮಜ್ಞಾತ್ವಾ ಶಿವಮಾಯಾವಿಮೋಹಿತಂ ॥ ೪೦ ॥

ಏತಸ್ಮಿನ್ನಂತರೇ ವ್ಯೋಮವಾಣ್ಯುವಾಚಾಶರೀರಿಣೀ ।
ಅಂಬರೀಷಂ ಮಹಾತ್ಮಾನಂ ಬ್ರಹ್ಮಭಕ್ತಂ ಚ ವೈಷ್ಣವಂ ॥ ೪೧ ॥

---

೩೮. ಎಲೆ ಅರಸೇ, ನಿನ್ನ ಮನೆಯಲ್ಲಿ ಯಾರೂ ಊಟಮಾಡಬಾರದು, ನನ್ನನ್ನು ಭೋಜನಕ್ಕೆ ಆಮಂತ್ರಿಸಿ, ನೀರನ್ನು ಕುಡಿದುಬಿಟ್ಟೆಯಲ್ಲವೇ? ಎಲೈ ಅಧಮನೇ, ಈಗ ಅದಕ್ಕೆ ತಕ್ಕ ಫಲವನ್ನು ತೋರುವೆನು. ನಿನ್ನಂತಹ ದುಷ್ಟರನ್ನು ದಂಡಿಸುವುದಕ್ಕಾಗಿಯೇ ನಾನಿರುವುದು.

೩೯. ಹೀಗೆಂದು ಹೇಳಿ, ಕೋಪದಿಂದ ಕೆಂಗಣ್ಣನ್ನು ಬಿಡುತ್ತಾ ಆ ಅಂಬರೀಷ ನನ್ನು ಸುಟ್ಟುಬಿಡಲು, ಉದ್ಯುಕ್ತನಾದನು ಅಷ್ಟರಲ್ಲಿಯೇ, ಆತನ ಸಂರಕ್ಷಣೆಗಾಗಿ ಸರ್ವದಾ ಆತನಬಳಿಯಲ್ಲೇ ಇರುತ್ತಿದ್ದ ಸುದರ್ಶನ ಚಕ್ರವು ತಟ್ಟನೆ ಮುಂದೆ ಬಂದಿತು.

೪೦ ಆಗ ಶಿವನ ಮಾಯೆಯು ಮುಸುಕಿ ಭ್ರಾಂತಿಗೊಳಗಾದ ಆ ಸುದರ್ಶನ ಚಕ್ರವು, ಈ ದುರ್ವಾಸ ಮುನಿಯೇ ಸಾಕ್ಷಾತ್ ಶಿವಸ್ವರೂಪನೆಂದು ಅರಿಯದೆ, ಆತನನ್ನು ಸುಟ್ಟುಬಿಡಬೇಕೆಂದು ಜೋರಾಗಿ ಉರಿಯತೊಡಗಿತು.

೪೧. ಅಷ್ಟರಲ್ಲಿಯೇ ಆಕಾಶದಿಂದ ಅಶರೀರವಾಣಿಯೊಂದು, ಬ್ರಾಹ್ಮಣ ಭಕ್ತನೂ, ವಿಷ್ಣುಭಕ್ತಾಗ್ರೇಸರನೂ, ಆದ ಮಹಾಪುರುಷನಾದ ಅಂಬರೀಷನನ್ನು ಕುರಿತು ಇಂತೆಂದು ಹೇಳಿತು.

॥ ವ್ಯೋಮವಾಣ್ಯುವಾಚ

ಸುದರ್ಶನಮಿದಂ ಚಕ್ರಂ ಹರಯೇ ಶಂಭುನಾರ್ಪಿತಂ ।
ಶಾಂತಂ ಕುರು ಪ್ರಜ್ವಲಿತಮದ್ಯ ದುರ್ವಾಸಸೇ ನೃಪ ॥ ೪೨ ॥

ದುರ್ವಾಸಾಯಂ ಶಿವಃ ಸಾಕ್ಷಾದ್ಯಚ್ಚಕ್ರಂ ಹರಯೇಽರ್ಪಿತಂ ।
ಏವಂ ಸಾಧಾರಣಮುನಿಂ ನ ಜಾನೀಹಿ ನೃಪೋತ್ತಮ ॥ ೪೩ ॥

ತವ ಧರ್ಮಪರೀಕ್ಷಾರ್ಥಮಾಗತೋಽಯಂ ಮುನೀಶ್ವರ ।
ಶರಣಂ ಯಾಹಿ ತಸ್ಯಾಶು ಭವಿಷ್ಯತ್ಯನ್ಯಥಾ ಲಯಃ ॥ ೪೪ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಚ ನಭೋವಾಣೀ ವಿರರಾಮ ಮುನೀಶ್ವರ ।
ಅಸ್ತಾವೀತ್ಸ ಹರಾಂಶಂ ತಮಂಬರೀಷೋಽಪಿ ಜಾದರಾತ್ ॥ ೪೫ ॥

---

೪೨ ಎಲೈ ಅರಸೇ, ಈ ಸುದರ್ಶನಚಕ್ರವು ಶ್ರೀ ಶಂಕರನಿಂದ ವಿಷ್ಣುವಿಗೆ ಅನುಗ್ರಹಿಸಲ್ಪಟ್ಟಿತು. ಈಗ ಈ ಚಕ್ರವು ಮಹಾಮುನಿಯಾದ ದುರ್ವಾಸನನ್ನು ಸುಟ್ಟುಬಿಡಲು ಉರಿಯುತ್ತಿರುವುದು. ಇದನ್ನು ಸಮಾಧಾನಗೊಳಿಸು.

೪೩ ಎಲೈ ನರಪತಿಯೇ, ಈತನು ಸಾಕ್ಷಾತ್ ಶಿವಸ್ವರೂಪನು ವಿಷ್ಣುವಿಗೆ ಅನುಗ್ರಹಿಸಲ್ಪಟ್ಟ ಈ ಸುದರ್ಶನ ಚಕ್ರವು ಈತನದೇ. ಈ ಮಹರ್ಷಿಯನ್ನು ಸಾಮಾನ್ಯ ಋಷಿಯಂತೆ ಭಾವಿಸಬೇಡ.

೪೪. ಈ ಮುನಿಶ್ರೇಷ್ಠನು, ನಿನಗೆ ಧರ್ಮದಲ್ಲಿರುವ ಅಚಲವಾದ ನಿಷ್ಠೆಯನ್ನು ಪರೀಕ್ಷಿಸಬೇಕೆಂದೇ ಬಂದಿರುವನು. ಬೇಗನೆ ಈತನನ್ನು ಮರೆಹೋಗು. ಇಲ್ಲದಿದ್ದರೆ ಪ್ರಳಯವಾಗಿಬಿಡುವುದು ಎಂದಿತು.

೪೫ ಎಲೈ ಸನತ್ಕುಮಾರ ಮುನಿಯೇ, ಹೀಗೆಂದು ನುಡಿದು, ಆಕಾಶವಾಣಿಯು ಸುಮ್ಮನಾಯಿತು. ಆಗ ಅಂಬರೀಷನು ಆದರದಿಂದ ಶಿವಾಂಶಸಂಭೂತನಾದ ಆ ಮಹರ್ಷಿಯನ್ನು ಸ್ತೋತ್ರಮಾಡಿದನು.

॥ ಅಂಬರೀಷ ಉವಾಚ ॥

ಯದ್ಯಸ್ತಿ ದತ್ತಮಿಷ್ಟಂ ಚ ಸ್ವಧರ್ಮೋ ವಾ ಸ್ವನುಷ್ಠಿತಃ ।
ಕುಲಂ ನೋ ವಿಪ್ರದೈವಂ ಚೇದ್ಧರೇರಸ್ತ್ರಂ ಪ್ರಶಾಮ್ಯತು ॥ ೪೬ ॥

ಯದಿ ನೋ ಭಗವಾನ್ಪ್ರೀತೋ ಮದ್ಭಕ್ತೋ ಭಕ್ತವತ್ಸಲಃ ।
ಸುದರ್ಶನಮಿದಂ ಚಾಸ್ತ್ರಂ ಪ್ರಶಾಮ್ಯತು ವಿಶೇಷತಃ ॥ ೪೭ ॥

॥ ನಂದೀಶ್ವರ ಉವಾಚ ॥

ಇತಿ ಸ್ತುವತಿ ರುದ್ರಾಗ್ರೇ ಶೈವಂ ಚಕ್ರಂ ಸುದರ್ಶನಂ ।
ಅಶಾಮ್ಯತ್ಸರ್ವಥಾ ಜ್ಞಾತ್ವಾ ತಂ ಶಿವಾಂಶಂ ಸುಲಬ್ಧಧೀಃ ॥ ೪೮ ॥

ಅಥಾಂಬರೀಷಸ್ಸ ನೃಪಃ ಪ್ರಣನಾಮ ಚ ತಂ ಮುನಿಂ ।
ಶಿವಾವತಾರಂ ಸಂಜ್ಞಾಯ ಸ್ವಪರೀಕ್ಷಾರ್ಥಮಾಗತಂ ॥ ೪೯ ॥

---

೪೬. ನಾನು ದಾನಗಳನ್ನು ಮಾಡಿದ್ದೇ ಆದರೆ, ಯಾಗಗಳನ್ನು ಮಾಡಿದ್ದೇ ಆದರೆ, ನನಗೆ ವಿಹಿತವಾದ ಧರ್ಮವನ್ನು ನಾನು ಸರಿಯಾಗಿ ಆಚರಿಸಿದ್ದೇ ನಿಜವಾದರೆ, ನಮ್ಮ ವಂಶವು ಬ್ರಾಹ್ಮಣನೇ ಪರದೈವವೆಂದು ನಂಬಿದ್ದುದೇ ಆದರೆ, ಶ್ರೀಹರಿಯ ಈ ಅಸ್ತ್ರವು ಪ್ರಶಾಂತವಾಗಲಿ.

೪೭. ಭಕ್ತರಲ್ಲಿ ವಾತ್ಸಲ್ಯವುಳ್ಳವನೂ, ನನ್ನ ಸ್ವಾಮಿಯೂ ಆದ ಆ ಭಗವಂತನು ನನ್ನಲ್ಲಿ ಪ್ರೀತಿಯನ್ನೇ ಉಳ್ಳವನಾಗಿದ್ದರೆ, ಈ ಸುದರ್ಶನಚಕ್ರವು ಬೇಗನೆ ಶಾಂತತೆಯನ್ನು ಹೊಂದಲಿ.

೪೮. ಎಲೈ ಮುನೀಂದ್ರನೇ, ಈರೀತಿ ರುದ್ರಾಂಶಸಂಭೂತನಾದ ಆ ದುರ್ವಾಸ ಮುನಿಯ ಮುಂದುಗಡೆ ಅಂಬರೀಷನು ಪ್ರಾರ್ಥಿಸುತ್ತಲೇ, ಆ ಶಿವನ ಚಕ್ರವಾದ ಸುದರ್ಶನವು, ಸರಿಯಾದ ಜ್ಞಾನವನ್ನು ಹೊಂದಿ, ಆತನನ್ನು ಶಿವಾವತಾರನೆಂದು ತಿಳಿದು, ಸಂಪೂರ್ಣವಾಗಿ ಶಾಂತವಾಯಿತು.

೪೯. ಅನಂತರ ಅಂಬರೀಷ ನರಪತಿಯು, ಆ ಮಹರ್ಷಿಯು ಶಿವಾವತಾರನೆಂದೂ, ತನ್ನನ್ನು ಪರೀಕ್ಷಿಸಲೆಂದೇ ಬಂದಿದ್ದನೆಂದೂ ಅರಿತು ಆ ಮಹರ್ಷಿಗೆ ನಮಸ್ಕಾರಮಾಡಿದನು.

ಸುಪ್ರಸನ್ನೋ ಬಭೂವಾಥ ಸ ಮುನಿಃ ಶಂಕರಾಂಶಜಃ ।
ಭುಕ್ತ್ವಾ ತಸ್ಮೈ ವರಂ ದತ್ವಾ ಸ್ವಾಭೀಷ್ಟಂ ಸ್ವಾಲಯಂ ಯಯೌ ॥ ೫೦ ॥

ಅಂಬರೀಷಪರೀಕ್ಷಾಯಾಂ ದುರ್ವಾಸಶ್ಚರಿತಂ ಮುನೇ ।
ಪ್ರೋಕ್ತಮನ್ಯಚ್ಚರಿತ್ರಂ ತ್ವಂ ಶೃಣು ತಸ್ಯ ಮುನೀಶ್ವರ ॥ ೫೧ ॥

ಪುನರ್ದಾಶರಥೇಶ್ಚಕ್ರೇ ಪರೀಕ್ಷಾಂ ನಿಯಮೇನ ವೈ ।
ಮುನಿರೂಪೇಣ ಕಾಲೇನ ಯಃ ಕೃತೋ ನಿಯಮೋ ಮುನೇ ॥ ೫೨ ॥

ತದೈವ ಮುನಿನಾ ತೇನ ಸೌಮಿತ್ರಿಃ ಪ್ರೇಷಿತೋ ಹಠಾತ್ ।
ತಂ ತತ್ಯಾಜ ದ್ರುತಂ ರಾಮೋ ಬಂಧುಂ ಪ್ರಣವಶಾನ್ಮುನೇ ॥ ೫೩ ॥

---

೫೦. ಅನಂತರ ಆ ಮಹರ್ಷಿಯು ಪ್ರಸನ್ನನಾದನು. ಆಮೇಲೆ ಭೋಜನವನ್ನು ಮಾಡಿ, ಆವನಿಗೆ ವರಗಳನ್ನಿತ್ತು, ತನಗೆ ತೋರಿದಕಡೆಗೆ (ತನ್ನ ನಿವಾಸಕ್ಕೆ) ತೆರಳಿದನು.

೫೧. ಎಲೈ ಸನತ್ಕುಮಾರನೇ, ಆ ದುರ್ವಾಸ ಮುನಿಯು, ಅಂಬರೀಷ ಮಹಾರಾಜನನ್ನು ಪರೀಕ್ಷೆಮಾಡಿದ ಸಂಗತಿಯನ್ನು ನಿನಗೆ ತಿಳಿಸಿದೆನು ಈಗ ಆತನದೇ ಮತ್ತೊಂದು ಚರಿತ್ರವನ್ನು ನಿನಗೆ ತಿಳಿಸುವೆನು ಕೇಳು.

೫೨ ಮತ್ತೊಂದುಸಲ ಆ ಮಹರ್ಷಿಯು ಶ್ರೀರಾಮನ ನಿಯಮನಿಷ್ಠೆಯನ್ನು ಪರೀಕ್ಷಿಸಿದನು. ಒಂದುಸಲ ಯಮನು ಮುನಿವೇಷದಿಂದ ಬಂದು, ತಾವಿಬ್ಬರೂ ಮಾತನಾಡುತ್ತಿರುವಾಗ ಮತ್ತಾರೂ ಬರದಿರುವಂತೆ ಕಟ್ಟುಮಾಡಿಕೊಂಡು, ಶ್ರೀರಾಮಚಂದ್ರನೊಡನೆ ಮಾತನಾಡುತ್ತಿದ್ದನು.

೫೩. ಎಲೈ ಮಹರ್ಷಿಯೇ, ಆ ಸಮಯಕ್ಕೆ ಸರಿಯಾಗಿ ದುರ್ವಾಸ ಮುನಿಯು ಒಂದು ಯಾವುದೋ ಒಂದು ನೆಪಹೂಡಿ, ಲಕ್ಷ್ಮಣನು ಅಲ್ಲಿಗೆ ಥಟ್ಟನೆ ನುಗ್ಗುವಂತೆ ಮಾಡಿದನು. ಆಗ ತಾನು ಯಮನೊಡನೆ ಮಾಡಿಕೊಂಡಿದ್ದ ನಿಯಮದಂತೆ ರಾಮನು ತನ್ನ ತಮ್ಮನಾದರೂ, ಲಕ್ಷ್ಮಣನನ್ನು ಕೂಡಲೇ ಪರಿತ್ಯಾಗಮಾಡಿಬಿಟ್ಟನು.

ಸಾ ಕಥಾ ವಿಹಿತಾ ಲೋಕೇ ಮುನಿಭಿರ್ಬಹುಧೋದಿತಾ ।
ನಾತೋ ಮೇ ವಿಸ್ತರಾತ್ಪ್ರೋಕ್ತಾ ಜ್ಞಾತಾ ಯತ್ಸರ್ವಥಾ ಬುಧೈಃ॥ ೫೪ ॥

ನಿಯಮಂ ಸುದೃಢಂ ದೃಷ್ಟ್ವಾ ಸುಪ್ರಸನ್ನೋಽಭವನ್ಮುನಿಃ ।
ದುರ್ವಾಸಾಸ್ಸುಪ್ರಸನ್ನಾತ್ಮಾ ವರಂ ತಸ್ಮೈ ಪ್ರದತ್ತವಾನ್ ॥ ೫೫ ॥

ಶ್ರೀಕೃಷ್ಣನಿಯಮಸ್ಯಾಪಿ ಪರೀಕ್ಷಾಂ ಸ ಚಕಾರ ಹ ।
ತಾಂ ಶೃಣು ತ್ವಂ ಮುನಿಶ್ರೇಷ್ಠ ಕಥಯಾಮಿ ಕಥಾಂ ಚ ತಾಂ ॥ ೫೬ ॥

ಬ್ರಹ್ಮಪ್ರಾರ್ಥನಯಾ ವಿಷ್ಣುರ್ವಸುದೇವಸುತೋಽಭವತ್ ।
ಧರಾಭಾರಾವತಾರಾರ್ಥಂ ಸಾಧೂನಾಂ ರಕ್ಷಣಾಯ ಚ ॥ ೫೭ ॥

ಹತ್ವಾ ದುಷ್ಟಾನ್ಮಹಾಪಾಪಾನ್ಬ್ರಹ್ಮದ್ರೋಹಕರಾನ್ಖಲಾನ್ ।
ರರಕ್ಷ ನಿಖಿಲಾನ್ಸಾಧೂನ್ಬ್ರಹ್ಮಣಾನ್ಕೃಷ್ಣನಾಮಭಾಕ್ ॥ ೫೮ ॥

---

೫೪. ಅಂದು ನಡೆದ ಆ ಕತೆಯನ್ನು ಈ ಲೋಕದಲ್ಲಿ ಅನೇಕ ರೀತಿಯಾಗಿ ಬಹುಮಂದಿ ಮುನಿಗಳು ತಿಳಿಸಿರುವರು. ಆದುದರಿಂದ ಎಲ್ಲರಿಗೂ ಆ ಕತೆಯು ತಿಳಿದೇ ಇರುವುದು. ಆದುದರಿಂದ ನಾನಿದನ್ನು ವಿಸ್ತಾರವಾಗಿ ನಿನಗೆ ತಿಳಿಸಲಿಲ್ಲ.

೫೫. ದುರ್ವಾಸ ಮಹಾಮುನಿಯು ಶ್ರೀರಾಮಚಂದ್ರನ ನಿಯಮ ದೃಢತೆಯನ್ನು ಕಂಡು ಬಹುವಾಗಿ ಮೆಚ್ಚಿ, ಆತನಿಗೆ ವರಗಳನ್ನಿತ್ತನು.

೫೬. ಇದೇ ರೀತಿಯಾಗಿ ಆ ಮುನಿಯು ಶ್ರೀ ಕೃಷ್ಣನನ್ನೂ ಕೂಡ ನಿಯಮ ಪರೀಕ್ಷೆ ಮಾಡಿದನು. ಎಲೈ ಮುನಿಶ್ರೇಷ್ಠನೇ, ಆ ಕತೆಯನ್ನು ವಿವರಿಸುವೆನು ಅದನ್ನು ಕೇಳು.

೫೭. ಶ್ರೀಹರಿಯು, ಬ್ರಹ್ಮನ ಪ್ರಾರ್ಥನೆಯಂತೆ ಭೂಮಿಯ ಭಾರವನ್ನು ಇಳುಹಲೂ, ಸತ್ಪುರುಷರನ್ನು ಸಂರಕ್ಷಿಸಲೂ ಭೂಮಿಯಲ್ಲಿ ವಸುದೇವನ ಮಗನಾಗಿ ಅವತರಿಸಿದನಷ್ಟೆ.

೫೮. ಆತನು ಕೃಷ್ಣನೆಂಬ ಹೆಸರಿನಿಂದ ಪ್ರಖ್ಯಾತನಾಗಿ ಮಹಾಪಾಪಿಗಳಿಗೂ, ವೇದಶಾಸ್ತ್ರಗಳಿಗೂ, ಬ್ರಾಹ್ಮಣರಿಗೂ ಕಂಟಕಪ್ರಾಯರೂ ಆದ ಅನೇಕಮಂದಿ ದುಷ್ಟರನ್ನು ಸಂಹರಿಸಿ, ಎಲ್ಲ ಸತ್ಪುರುಷರನ್ನೂ, ಬ್ರಾಹ್ಮಣರನ್ನೂ ಸಲಹಿದನು.

ಬ್ರಹ್ಮಭಕ್ತಿಂ ಚಕಾರಾತಿ ಸ ಕೃಷ್ಣೋ ವಸುದೇವಜಃ ।
ನಿತ್ಯಂ ಹಿ ಭೋಜಯಾಮಾಸ ಸುರಸಾನ್ಬ್ರಾಹ್ಮಣಾನ್ಬಹೂನ್ ॥ ೫೯ ॥

ಬ್ರಹ್ಮಭಕ್ತೋ ವಿಶೇಷೇಣ ಕೃಷ್ಣಶ್ಚೇತಿ ಪ್ರಥಾಮುಗಾತ್ ।
ಸಂದ್ರಷ್ಟುಕಾಮಸ್ಸ ಮುನಿಃ ಕೃಷ್ಣಾಂತಿಕಮುಗಾನ್ಮುನೇ ॥ ೬೦ ॥

ರುಕ್ಮಿಣೀಸಹಿತಂ ಕೃಷ್ಣಂ ಮುಗ್ನಂ ಕೃತ್ವಾ ರಥೇ ಸ್ವಯಂ ।
ಸಂಯೋಜ್ಯ ಸಂಸ್ಥಿತೋ ವಾಹಂ ಸುಪ್ರಸನ್ನ ಉವಾಚ ತಂ ॥ ೬೧ ॥

ಮುನೀ ರಥಾತ್ಸಮುತ್ತೀರ್ಯ ದೃಷ್ಟ್ವಾ ತಾಂ ದೃಢತಾಂ ಪರಾಂ ।
ತಸ್ಮೈ ಭೂತ್ವಾ ಸುಪ್ರಸನ್ನೋ ವಜ್ರಾಂಗತ್ವವರಂ ದದೌ ॥ ೬೨ ॥

---

೫೯. ಆ ವಸುದೇವಸುತನಾದ ಕೃಷ್ಣನು ವಿಶೇಷವಾಗಿ ಬ್ರಾಹ್ಮಣರಲ್ಲಿ ಭಕ್ತಿಯನ್ನಿಟ್ಟು, ಪ್ರತಿನಿತ್ಯವೂ ಬಗೆಬಗೆಯಾದ ರುಚಿಕರವಾದ ಭಕ್ಷ್ಯಭೋಜ್ಯಗಳಿಂದ ಅನೇಕಮಂದಿ ಬ್ರಾಹ್ಮಣರಿಗೆ ಸಂತರ್ಪಣೆಮಾಡುತ್ತಿದ್ದನು

೬೦ ಎಲೈ ಸನತ್ಕುಮಾರನೇ, ಹೀಗೆಯೇ ಇರಲು, ಶ್ರೀಕೃಷ್ಣನು ಬ್ರಾಹ್ಮಣರಲ್ಲಿ ವಿಶೇಷವಾದ ಭಕ್ತಿಯುಳ್ಳವನೆಂದು ಪ್ರಖ್ಯಾತಿಯುಂಟಾಯಿತು ಆಗ ಒಂದು ದಿನ ಕೃಷ್ಣನನ್ನು ನೋಡಬಯಸಿ ದುರ್ವಾಸ ಮುನಿಯು ಆತನ ಬಳಿಗೆ ಬಂದನು.

೬೧. ಅನಂತರ ತಾನು ರಥದಲ್ಲಿ ಕುಳಿತುಕೊಂಡು, ಕುದುರೆ ಅಥವಾ ಎತ್ತುಗಳಿಗೆ ಬದಲಾಗಿ, ರುಕ್ಮಿಣಿಯನ್ನೂ ಮತ್ತು ಕೃಷ್ಣನನ್ನೂ ನೊಗಕ್ಕೆ ಹೂಡಿ, ಆ ರಥವನ್ನೆಳೆಸಿದನು. ಅವರು ಅದೇರೀತಿ ಮಾಡಲು ಬಹು ಪ್ರಸನ್ನನಾಗಿ ಅವನನ್ನು ಕುರಿತು ನುಡಿದನು.

೬೨ ಆ ರುಕ್ಮಿಣೀಕೃಷ್ಣರ ದೃಢತೆಯು ಎಳ್ಳಷ್ಟೂ ಕದಲದೇ ಇರುವುದನ್ನು ಕಂಡು, ಆ ಮಹರ್ಷಿಯು ರಥದಿಂದಿಳಿದು, ಅವರ ವಿಷಯದಲ್ಲಿ ಮೆಚ್ಚುಗೆಯನ್ನು ತೋರಿ, ವಜ್ರದೇಹವುಂಟಾಗುವಂತೆ ವರವನ್ನಿತ್ತನು.

ದ್ಯುನದ್ಯಾಮೇಕದಾ ಸ್ನಾನಂ ಕುರ್ವನ್ನಗ್ನೋ ಬಭೂವ ಹ ।
ಲಜ್ಜಿತೋಽಭೂನ್ಮುನಿಶ್ರೇಷ್ಠೋ ದುರ್ವಾಸಾಃ ಕೌತುಕೀ ಮುನೇ ॥ ೬೩ ॥

ತಜ್ಜ್ಞಾತ್ವಾ ದ್ರೌಪದೀ ಸ್ನಾನಂ ಕುರ್ವತೀ ತತ್ರ ಚಾದರಾತ್ ।
ತಲ್ಲಜ್ಜಾಂ ಛಾದಯಾಮಾಸ ಭಿನ್ನಸ್ವಾಂಚಲದಾನತಃ ॥ ೬೪ ॥

ತದಾದಾಯ ಪ್ರವಾಹೇನಾಗತಂ ಸ್ವನಿಕಟಂ ಮುನಿಃ ।
ತೇನಾಚ್ಛಾದ್ಯ ಸ್ವಗುಹ್ಯಂ ಚ ತಸ್ಯೈ ತುಷ್ಟೋ ಬಭೂವ ಸಃ ॥ ೬೫ ॥

ದ್ರೌಪದ್ಯೈ ಚ ವರಂ ಪ್ರಾದಾತ್ತದಂಚಲವಿವರ್ಧನಂ ।
ಪಾಂಡವಾನ್ಸುಖಿನಶ್ಚಕ್ರೇ ದ್ರೌಪದೀ ತದ್ವರಾತ್ಪುನಃ ॥ ೬೬ ॥

---

೬೩. ಎಲೈ ಸನತ್ಕುಮಾರನೇ, ಒಂದಾನೊಂದುಸಲ ಆ ದುರ್ವಾಸ ಮಹರ್ಷಿಯು ಕುತೂಹಲದಿಂದ ಗಂಗಾನದಿಯಲ್ಲಿ ಸ್ನಾನಮಾಡುತ್ತಿರುವಾಗ ಆ ನದೀವೇಗದಿಂದ ಉಟ್ಟಿದ್ದ ಬಟ್ಟೆಯು ಕೊಚ್ಚಿಕೊಂಡು ಹೋಗಲು, ನಗ್ನನಾಗಿ ಈಚೆಗೆ ಬರಲಾರದೆ ನಾಚಿಕೆಪಡುತ್ತಿದ್ದನು.

೬೪. ಆಗ ಅಲ್ಲಿ ಸ್ನಾನಮಾಡುತ್ತಿದ್ದ ದ್ರೌಪದಿಯು, ಈ ಮುನಿಯ ಅವಸ್ಥೆಯನ್ನು ಕಂಡು, ಮರುಗಿ, ಆದರದಿಂದ ತನ್ನ ಸೆರಗನ್ನು ಹರಿದು, ಆ ತುಂಡುಬಟ್ಟೆಯನ್ನು ಅವನಿಗಿತ್ತು ಆತನ ಮಾನವನ್ನು ಕಾಪಾಡಿದಳು.

೬೫. ಆಗ ಆ ಮುನಿಯು ಪ್ರವಾಹದಲ್ಲಿ ತೇಲಿಕೊಂಡುಬಂದ ಆ ತುಂಡುಬಟ್ಟೆಯಿಂದ ತನ್ನ ಮಾನವನ್ನು ಮರೆಮಾಡಿಕೊಂಡನು. ಈ ಸಹಾಯದಿಂದ ಆ ದ್ರೌಪದಿಯ ವಿಷಯದಲ್ಲಿ ಆತನು ಸಂತೋಷಭರಿತನಾದನು.

೬೬. ಆಗ ಆ ಮುನಿಯು, ನಿನಗೂ ಇದೇರೀತಿ ಆಪತ್ಸಮಯದಲ್ಲಿ ವಸ್ತ್ರವೃದ್ಧಿಯಾಗಿ ಮಾನಸಂರಕ್ಷಣವಾಗಲೆಂದು ದ್ರೌಪದಿಗೆ ವರವನ್ನಿತ್ತನು. ಈ ವರದಿಂದ ದ್ರೌಪದಿಯು ಪಾಂಡವರನ್ನು ಸುಖಪಡುವಂತೆ ಮಾಡಿದಳು.

ಹಂಸಡಿಂಭೌ ನೃಪೌ ಕೌಚಿತ್ಸ್ವಾವಮಾನಕರೌ ಖಲೌ ।
ದತ್ವಾ ನಿದೇಶಂ ಚ ಹರೇರ್ನಾಶಯಾಮಾಸ ಸ ಪ್ರಭುಃ　　　　॥ ೬೭ ॥

ಬ್ರಹ್ಮತೇಜೋವಿಶೇಷೇಣ ಸ್ಥಾಪಯಾಮಾಸ ಭೂತಲೇ ।
ಸಂನ್ಯಾಸಪದ್ಧತಿಂ ಚೈವ ಯಥಾಶಾಸ್ತ್ರವಿಧಿಕ್ರಮಂ　　　　॥ ೬೮ ॥

ಬಹೂನುದ್ಧಾರಯಾಮಾಸ ಸೂಪದೇಶಂ ವಿಬೋಧ್ಯ ಚ ।
ಜ್ಞಾನಂ ದತ್ವಾ ವಿಶೇಷೇಣ ಬಹೂನ್ಮುಕ್ತಾಂಶ್ಚಕಾರ ಸಃ　　　　॥ ೬೯ ॥

ಇತ್ಥಂ ಚಕ್ರೇ ಸ ದುರ್ವಾಸಾ ವಿಚಿತ್ರಂ ಚರಿತಂ ಬಹು ।
ಧನ್ಯಂ ಯಶಸ್ಯಮಾಯುಷ್ಯಂ ಶೃಣ್ವತಸ್ಸರ್ವಕಾಮದಂ　　　　॥ ೭೦ ॥

---

೬೭　ಹಂಸಡಿಂಭಕರೆಂಬ ದುಷ್ಟರಿಬ್ಬರು ತನ್ನನ್ನು ಅವಮಾನಪಡಿಸಲು ಅದೇ ಮುನಿಯು, ಶ್ರೀ ಕೃಷ್ಣನಿಗೆ ಈ ವಿಷಯ ತಿಳಿಸಿ, ಆತನಿಂದ ಅವರನ್ನು ಸಂಹಾರ ಮಾಡಿಸಿದನು

೬೮. ತನ್ನ ಅತಿಶಯಯುತವಾದ ಬ್ರಹ್ಮತೇಜಸ್ಸಿನಿಂದ ಈ ಭೂಮಿಯಲ್ಲಿ ಸನ್ನ್ಯಾಸಪದ್ಧತಿಯನ್ನು ಶಾಸ್ತ್ರೀಯ ವಿಧಿಗಳಿಗನುಗುಣವಾಗಿ ನೆಲೆಗೊಳಿಸಿದನು

೬೯. ದಿವ್ಯವಾದ ಅನೇಕ ಉಪದೇಶಗಳನ್ನಿತ್ತು ಅನೇಕರನ್ನು ಉದ್ಧಾರ ಮಾಡಿದನು. ವಿಶೇಷವಾಗಿ ಜ್ಞಾನವನ್ನು ಪ್ರಚಾರಮಾಡಿ ಬಹುಮಂದಿಗೆ ಮೋಕ್ಷ ದೊರೆಯುವಂತೆ ಮಾಡಿದನು

೭೦. ಈ ರೀತಿಯಾಗಿ ಆ ದುರ್ವಾಸ ಮಹರ್ಷಿಯು, ಕೇಳುವವರಿಗೆ ಸಕಲ ಸ್ವಾರ್ಥಗಳನ್ನೂ ಕೊಡುವಂತಹ, ಯಶಸ್ಕರವೂ, ಆಯುಷ್ಕರವೂ, ಆದ ಅನೇಕ ಚರಿತ್ರವನ್ನು ನಡೆಸಿದನು.

ಯ ಇದಂ ಶೃಣುಯಾದ್ಭಕ್ತ್ಯಾ ದುರ್ವಾಸಶ್ಚರಿತಂ ಮುದಾ ।
ಶ್ರಾವಯೇದ್ವಾ ಪರಾನ್ಯಶ್ಚ ಸ ಸುಖೀಹ ಪರತ್ರ ಚ ॥ ೭೧ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ದುರ್ವಾಸಶ್ಚರಿತ್ರವರ್ಣನಂ ನಾಮೈಕೋನವಿಂಶೋಽಧ್ಯಾಯಃ

---

೭೧. ಯಾವನು ಭಕ್ತಿಯಿಂದ ಈ ದುರ್ವಾಸ ಚರಿತ್ರವನ್ನು ಸಂತೋಷ ಸಹಿತನಾಗಿ ಕೇಳುವನೋ, ಅಥವಾ ಇತರರಿಗೆ ಶ್ರವಣಮಾಡಿಸುವನೋ ಅವನು ಇಹದಲ್ಲಿಯೂ ಪರದಲ್ಲಿಯೂ ಸುಖಿಯಾಗುವನು..

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ದುರ್ವಾಸಚರಿತವೆಂಬ ಹತ್ತೊಂಭತ್ತನೆಯ ಅಧ್ಯಾಯವು
ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ವಿಂಶೋಽಧ್ಯಾಯಃ

|| ನಂದೀಶ್ವರ ಉವಾಚ ||

**ಅತಃ ಪರಂ ಶೃಣು ಪ್ರೀತ್ಯಾ ಹನುಮಚ್ಚರಿತಂ ಮುನೇ ।**
**ಯಥಾ ಚಕಾರಾಶು ಹರೋ ಲೀಲಾಸ್ತದ್ರೂಪತೋ ವರಾಃ || ೧ ||**

**ಚಕಾರ ಸುಹಿತಂ ಪ್ರೀತ್ಯಾ ರಾಮಸ್ಯ ಪರಮೇಶ್ವರಃ ।**
**ತತ್ಸರ್ವಂ ಚರಿತಂ ವಿಪ್ರ ಶೃಣು ಸರ್ವಸುಖಾವಹಂ || ೨ ||**

---

### ಇಪ್ಪತ್ತನೆಯ ಅಧ್ಯಾಯವು

೧. ಎಲೈ ಸನತ್ಕುಮಾರಮುನಿಯೇ, ಇದಾದಬಳಿಕ ಹನುಮಂತನ ಚರಿತ್ರವನ್ನು ಪ್ರೀತಿಯಿಂದ ಲಾಲಿಸು. ಶಿವನು ಆ ಹನುಮಂತನರೂಪದಲ್ಲಿ ಶ್ರೇಷ್ಠವಾದ ಅನೇಕ ಲೀಲೆಗಳನ್ನು ತೋರ್ಪಡಿಸಿದನು.

೨. ಆ ಪರಮೇಶ್ವರನು ಶ್ರೀರಾಮಚಂದ್ರನಿಗೆ ಹಿತವೆನಿಸಿದ ಕೆಲಸವನ್ನು ಪ್ರೀತಿಯಿಂದ ಮಾಡಿದನು. ಸಕಲ ಜನರಿಗೂ ಸುಖವನ್ನುಂಟುಮಾಡುವ ಆ ಕಥೆಯೆಲ್ಲವನ್ನೂ, ಎಲೈ ಬ್ರಾಹ್ಮಣೋತ್ತಮನೇ, ಕೇಳುವವನಾಗು.

ಏಕಸ್ಮಿನ್ಸಮಯೇ ಶಂಭುರದ್ಭುತೋತಿಕರಃ ಪ್ರಭುಃ ।
ದದರ್ಶ ಮೋಹಿನೀರೂಪಂ ವಿಷ್ಣೋಸ್ಸ ಹಿ ವಸದ್ಗುಣಃ ॥ ೩ ॥

ಚಕ್ರೇ ಸ್ವಂ ಕ್ಷುಭಿತಂ ಶಂಭುಃ ಕಾಮಬಾಣಹತೋ ಯಥಾ ।
ಸ್ವಂ ವೀರ್ಯಂ ಪಾತಯಾಮಾಸ ರಾಮಕಾರ್ಯಾರ್ಥಮೀಶ್ವರಃ ॥ ೪ ॥

ತದ್ವೀರ್ಯಂ ಸ್ಥಾಪಯಾಮಾಸುಃ ಪತ್ರೇ ಸಪ್ತರ್ಷಯಶ್ಚ ತೇ ।
ಪ್ರೇರಿತಾ ಮನಸಾ ತೇನ ರಾಮಕಾರ್ಯಾರ್ಥಮಾದರಾತ್ ॥ ೫ ॥

ತೈರ್ಗೌತಮಸುತಾಯಾಂ ತದ್ವೀರ್ಯಂ ಶಂಭೋರ್ಮಹರ್ಷಿಭಿಃ ।
ಕರ್ಣದ್ವಾರಾ ತಥಾಂಜನ್ಯಾಂ ರಾಮಕಾರ್ಯಾರ್ಥಮಾಹಿತಂ ॥ ೬ ॥

ತತಶ್ಚ ಸಮಯೇ ತಸ್ಮಾದ್ಧನೂಮಾನಿತಿ ನಾಮಭಾಕ್ ।
ಶಂಭುರ್ಜಜ್ಞೇ ಕಪಿತನುರ್ಮಹಾಬಲಪರಾಕ್ರಮಃ ॥ ೭ ॥

---

೩ ಒಂದಾನೊಂದುಸಲ ಅದ್ಭುತಲೀಲಾಸಿಧಿಯೂ, ಗುಣಗಳ ನೆಲೆಯೂ, ಆದ ಆ ಪ್ರಭುವು ವಿಷ್ಣುವಿನ ಮೋಹಿನೀರೂಪವನ್ನು ಕಂಡನು.

೪ ಆಗ ಪರಶಿವನು ಮೋಹಕ್ಕೆ ಸಿಲುಕದ ಸಾಧಾರಣಮನುಷ್ಯನಂತೆ ಮುಂದೆ ಶ್ರೀರಾಮನ ಕಾರ್ಯಸಿದ್ಧಿಗಾಗಿ ತನ್ನ ವೀರ್ಯವನ್ನು ಚ್ಯುತಿಗೊಳಿಸಿದನು.

೫. ಆಗ ಸಪ್ತಋಷಿಗಳು ಶಿವನಿಂದ ಪ್ರೇರಿತವಾದ ಮನಸ್ಸುಳ್ಳವರಾಗಿ ಮುಂದೆ ಶ್ರೀರಾಮಚಂದ್ರನ ಕಾರ್ಯಸಿದ್ಧಿಗೋಸ್ಕರ ಆತನು ಸಡಿಲಿದ ವೀರ್ಯವನ್ನು ಒಂದು ಎಲೆಯಲ್ಲಿಟ್ಟು ಸಂರಕ್ಷಿಸಿದರು.

೬. ಬಳಿಕ ಅವರು ಮುಂದಿನ ಕಾರ್ಯವನ್ನು ನೆನೆದು, ಆ ಸಂರಕ್ಷಿಸಲ್ಪಟ್ಟ ವೀರ್ಯವನ್ನು ಗೌತಮಪುತ್ರಿಯಾದ ಅಂಜನಾದೇವಿಯಲ್ಲಿ ಕರ್ಣರಂಧ್ರದ ಮೂಲಕವಾಗಿ ಅಧಾನಮಾಡಿದರು.

೭. ಅನಂತರ ಕೆಲವು ಕಾಲ ಕಳೆಯಲು ಶಿವನು ಮಹಾಬಲಾಢ್ಯನೂ ಪರಾಕ್ರಮಶಾಲಿಯೂ, ಎನಿಸಿದ ಹನುಮಂತನೆಂಬ ಹೆಸರನ್ನು ತಾಳಿ ಕಪಿರೂಪದಿಂದ ಅವತರಿಸಿದನು.

ಹನೂಮಾನ್ಸ ಕಪೀಶಾನಃ ಶಿಶುರೇವ ಮಹಾಬಲಃ ।
ರವಿಬಿಂಬಂ ಬಭಕ್ಷಾಶು ಜ್ಞಾತ್ವಾ ಲಘುಫಲಂ ಪ್ರಗೇ ॥ ೮ ॥

ದೇವಪ್ರಾರ್ಥನಯಾ ತಂ ಸೋಽತ್ಯಜಜ್ಜ್ಞಾತ್ವಾ ಮಹಾಬಲಂ ।
ಶಿವಾವತಾರಂ ಚ ಪ್ರಾಪ ವರಾನ್ದತ್ತಾನ್ಸುರರ್ಷಿಭಿಃ ॥ ೯ ॥

ಸ್ವಜನನ್ಯಂತಿಕಂ ಪ್ರಾಗಾದಥ ಸೋಽತಿ ಪ್ರಹರ್ಷಿತಃ ।
ಹನೂಮಾನ್ಸರ್ವಮಾಚಖ್ಯೌ ತಸ್ಯೈ ತದ್ವೃತ್ತಮಾದರಾತ್ ॥ ೧೦ ॥

ತದಾಜ್ಞಯಾ ತತೋ ಧೀರಸ್ಸರ್ವವಿದ್ಯಾಮಯತ್ನತಃ ।
ಸೂರ್ಯಾತ್ಪಪಾಠ ಸ ಕಪಿರ್ಗತ್ವಾ ನಿತ್ಯಂ ತದಂತಿಕಂ ॥ ೧೧ ॥

ಸೂರ್ಯಾಜ್ಞಯಾ ತದಂಶಸ್ಯ ಸುಗ್ರೀವಸ್ಯಾಂತಿಕಂ ಯಯೌ ।
ಮಾತುರಾಜ್ಞಾಮನುಪ್ರಾಪ್ಯ ರುದ್ರಾಂಶಃ ಕಪಿಸತ್ತಮಃ ॥ ೧೨ ॥

---

೮. ಕಪೀಶ್ವರನೂ ಮಹಾಬಲಶಾಲಿಯೂ ಆದ ಆ ಹನುಮಂತನು ಇನ್ನೂ ಬಾಲನಾಗಿರುವಾಗಲೇ ಉದಯಿಸುತ್ತಿರುವ ಸೂರ್ಯಬಿಂಬವನ್ನು ನೋಡಿ ದೊಡ್ಡ ಹಣ್ಣೆಂದು ಭ್ರಮಿಸಿ ತಿಂದುಬಿಟ್ಟನು

೯. ಅನಂತರ ದೇವತೆಗಳೆಲ್ಲರೂ ಪ್ರಾರ್ಥಿಸಲು ನುಂಗಿದ ಸೂರ್ಯಬಿಂಬವನ್ನು ಈಚೆಗೆ ಬಿಟ್ಟುಬಿಟ್ಟನು ಆಗ ದೇವತೆಗಳೂ ಋಷಿಗಳೂ ಈ ಮಹಾಬಲಾಢ್ಯನಾದ ಹನುಮಂತನು ಶಿವನ ಅವತಾರವೆಂದು ಅರಿತು ಆವನಿಗೆ ಅನೇಕ ವರಗಳನ್ನಿತ್ತರು.

೧೦. ಬಳಿಕ ಅವನು ಮಹಾಸಂತೋಷದಿಂದ ತನ್ನ ತಾಯಿಯಾದ ಅಂಜನಾದೇವಿಯ ಬಳಿಗೆ ಹೋಗಿ ನಡೆದ ಆ ಎಲ್ಲ ಸಮಾಚಾರವನ್ನೂ ಅವಳಿಗೆ ತಿಳಿಸಿದನು

೧೧ ಆ ಅಂಜನೆಯ ಅಪ್ಪಣೆಯಂತೆ ಆ ಧೀರನು ಪ್ರತಿನಿತ್ಯವೂ ಸೂರ್ಯನ ಬಳಿಗೆ ಹೋಗಿ ಎಲ್ಲ ವಿದ್ಯೆಗಳನ್ನೂ ಬಹು ಸುಲಭವಾಗಿ ಆತನಿಂದ ಕಲಿತನು.

೧೨. ತಾಯಿಯ ಒಪ್ಪಿಗೆಯನ್ನು ಪಡೆದು ಸೂರ್ಯನ ಅಪ್ಪಣೆಯಂತೆ ಆತನ ಅಂಶದಿಂದ ಹುಟ್ಟಿದ ಸುಗ್ರೀವನಬಳಿಗೆ ರುದ್ರಾಂಶಸಂಭೂತನಾದ ಆ ಕಪಿಶ್ರೇಷ್ಠನು ತೆರಳಿದನು.

ಜ್ಯೇಷ್ಠಭ್ರಾತ್ರಾ ವಾಲಿನಾ ಹಿ ಸ್ವಸ್ತ್ರೀಭೋಕ್ತ್ರಾ ತಿರಸ್ಕೃತಃ ।
ಋಷ್ಯಮೂಕಗಿರೌ ತೇನ ನ್ಯವಸತ್ಸ ಹನೂಮತಾ ॥ ೧೩ ॥

ತತೋಽಭೂತ್ಸ ಸುಕಂಠಸ್ಯ ಮಂತ್ರೀ ಕಪಿವರಸ್ಸುಧೀಃ ।
ಸರ್ವಥಾ ಸುಹಿತಂ ಚಕ್ರೇ ಸುಗ್ರೀವಸ್ಯ ಹರಾಂಶಜಃ ॥ ೧೪ ॥

ತತ್ರಾಗತೇನ ಸಭ್ರಾತ್ರಾ ಹೃತಭಾರ್ಯೇಣ ದುಃಖಿನಾ ।
ಕಾರಯಾಮಾಸ ರಾಮೇಣ ತಸ್ಯ ಸಖ್ಯಂ ಸುಖಾವಹಂ ॥ ೧೫ ॥

ಘಾತಯಾಮಾಸ ರಾಮಶ್ಚ ವಾಲಿನಂ ಕಪಿಕುಂಜರಂ ।
ಭ್ರಾತೃಪತ್ನ್ಯಾಶ್ಚ ಭೋಕ್ತಾರಂ ಪಾಪಿನಂ ವೀರಮಾನಿನಂ ॥ ೧೬ ॥

---

೧೩. ಆ ಸುಗ್ರೀವನು, ತನ್ನ ಹಿರಿಯಣ್ಣನು ತನ್ನ ಹೆಂಡತಿಯನ್ನು ಅಪಹರಿಸಿ ಅವಳನ್ನು ತನ್ನ ಬಳಿಯಲ್ಲೇ ಇಟ್ಟುಕೊಂಡಿದ್ದ ವಾಲಿಯೆಂಬುವನಿಂದ ತಿರಸ್ಕೃತನಾಗಿ ಋಷ್ಯಮೂಕಪರ್ವತದಲ್ಲಿರುತ್ತಾ ಹನುಮಂತನೊಡನೆ ವಾಸಮಾಡ ತೊಡಗಿದನು.

೧೪. ಮಹಾಮೇಧಾವಿಯಾದ ಆ ಕಪಿಶ್ರೇಷ್ಠನು ಕೆಲವು ಕಾಲಾನಂತರದಲ್ಲಿ ಆ ಸುಗ್ರೀವನ ಮಂತ್ರಿಪದವಿಯನ್ನು ಪಡೆದು ಅವನಿಗೆ ಸರ್ವಾಂಶದಲ್ಲಿಯೂ ಹಿತವನ್ನು ಎಸಗಿದನು.

೧೫. ಕಾಲಕ್ರಮದಲ್ಲಿ ತನ್ನ ಅಪಹೃತಳಾದ ಪತ್ನಿಯನ್ನು ಹುಡುಕುತ್ತಾ ತಮ್ಮನಾದ ಲಕ್ಷ್ಮಣನೊಡನೆ ಆ ಋಷ್ಯಮೂಕದ ಬಳಿಗೆಬಂದ ಶ್ರೀ ರಾಮಚಂದ್ರನೊಡನೆ ಆ ಸುಗ್ರೀವನಿಗೆ ಸ್ನೇಹವುಂಟಾಗುವಂತೆ ಮಾಡಿದನು.

೧೬. ಆ ಶ್ರೀರಾಮನು, ವೀರನೆಂದು ಹೆಮ್ಮೆಪಡುತ್ತಾ ತನ್ನ ತಮ್ಮನ ಪತ್ನಿಯನ್ನೇ ಮೋಹಿಸಿ ಅವಳಲ್ಲಿ ಆಸಕ್ತನಾಗಿದ್ದ ಮಹಾಪಾಪಿಯಾದ ಆ ವಾಲಿಯೆಂಬ ಕಪಿಶ್ರೇಷ್ಠನನ್ನು ಸಂಹರಿಸಿದನು.

ತತೋ ರಾಮಾಜ್ಞಯಾ ತಾತ ಹನೂಮಾನ್ವಾನರೇಶ್ವರಃ ।
ಸ ಸೀತಾನ್ವೇಷಣಂ ಚಕ್ರೇ ಬಹುಭಿರ್ವಾನರೈಸ್ಸುಧೀಃ　　॥ ೧೭ ॥

ಜ್ಞಾತ್ವಾ ಲಂಕಾಗತಾಂ ಸೀತಾಂ ಗತಸ್ತತ್ರ ಕಪೀಶ್ವರಃ ।
ದ್ರುತಮುಲ್ಲಂಘ್ಯ ಸಿಂಧುಂ ತಮನಿಸ್ತೀರ್ಯಂ ಪರೈಸ್ಸ ವೈ　　॥ ೧೮ ॥

ಚಕ್ರೇಽದ್ಭುತಚರಿತ್ರಂ ಸ ತತ್ರ ವಿಕ್ರಮಸಂಯುತಂ ।
ಅಭಿಜ್ಞಾನಂ ದದೌ ಪ್ರೀತ್ಯಾ ಸೀತಾಯೈ ಸ್ವಪ್ರಭೋರ್ವರಂ　　॥ ೧೯ ॥

ಸೀತಾ ಶೋಕಂ ಜಹಾರಾಶು ಸ ವೀರಃ ಕಪಿನಾಯಕಃ ।
ಶ್ರಾವಯಿತ್ವಾ ರಾಮವೃತ್ತಂ ತತ್ಪ್ರಾಣಾವನಕಾರಕಂ　　॥ ೨೦ ॥

ತದಭಿಜ್ಞಾನಮಾದಾಯ ನಿವೃತ್ತೋ ರಾಮಸಂನಿಧಿಂ ।
ರಾವಣಾರಾಮಮಾಹೃತ್ಯ ಜಘಾನ ಬಹುರಾಕ್ಷಸಾನ್　　॥ ೨೧ ॥

---

೧೭. ಬಳಿಕ ಆ ಶ್ರೀರಾಮನ ಆಜ್ಞೆಯಂತೆ ವಾನರಾಧಿಪತಿಯಾದ ಆ ಹನುಮಂತನು ಅನೇಕಮಂದಿ ವಾನರರೊಡನೆ ಕೂಡಿಕೊಂಡು ಸೀತಾನ್ವೇಷಣಕ್ಕೆ ಹೊರಟನು

೧೮. ಆ ಸೀತೆಯು ಲಂಕೆಯಲ್ಲಿರುವಳೆಂದು ತಿಳಿದು ಆ ಕಪೀಶ್ವರನು ಇತರರಿಗೆ ದಾಟಲಸಾಧ್ಯವಾದ ಅಪಾರವಾದ ಸಮುದ್ರವನ್ನು ಕ್ಷಣಮಾತ್ರದಲ್ಲಿ ನೆಗೆದು ಆ ಲಂಕಾಪಟ್ಟಣವನ್ನು ಸೇರಿದನು.

೧೯. ಅಲ್ಲಿ ಸಾಹಸಪೂರ್ಣವಾದ ಅನೇಕ ಅದ್ಭುತಗಳನ್ನು ನಡೆಸಿ ತನ್ನ ಒಡೆಯನಾದ ಶ್ರೀರಾಮಚಂದ್ರನು ಇತ್ತ ಗುರುತಿನ ಮುದ್ರಿಕೆಯನ್ನು ಸೀತೆಗೆ ಪ್ರೀತಿಯಿಂದ ಸಲ್ಲಿಸಿದನು.

೨೦. ಕಪಿಗಳ ನಾಯಕನಾದ ಆ ವೀರನು ಸೀತೆಯ ಪ್ರಾಣಗಳನ್ನು ಸಂರಕ್ಷಿಸಲು ಕಾರಣನಾದ ಶ್ರೀರಾಮಚಂದ್ರನ ಸಂಗತಿಯೆಲ್ಲವನ್ನೂ ಆಕೆಗೆ ತಿಳಿಸಿ ಆಕೆಯ ದುಃಖವನ್ನು ಪರಿಹರಿಸಿದನು.

೨೧. ಅನಂತರ ಆ ಸೀತೆಯು ಇತ್ತ ಅಭಿಜ್ಞಾನ ( ಚೂಡಾಮಣಿ ) ವನ್ನು ತೆಗೆದುಕೊಂಡು ಶ್ರೀರಾಮನ ಬಳಿಗೆ ಹಿಂದಿರುಗುವಾಗ ರಾವಣನ ಅಶೋಕವನವನ್ನು ಹಾಳುಮಾಡಿ ಅನೇಕಮಂದಿ ರಾಕ್ಷಸರನ್ನು ಸದೆಬಡಿದನು.

ತದೈವ ರಾವಣಸುತಂ ಹತ್ವಾ ಸಬಹುರಾಕ್ಷಸಂ ।
ಸ ಮಹೋಪದ್ರವಂ ಚಕ್ರೇ ಮಹೋತಿಸ್ತತ್ರ ನಿರ್ಭಯಃ ॥ ೨೨ ॥

ಯದಾ ದಗ್ಧೋ ರಾವಣೇನಾವಗುಂಠ್ಯ ವಸನಾನಿ ಚ ।
ತೈಲಾಭ್ಯಕ್ತಾನಿ ಸುದೃಢಂ ಮಹಾಬಲವತಾ ಮುನೇ ॥ ೨೩ ॥

ಉತ್ಪ್ಲುತ್ಯೋತ್ಪ್ಲುತ್ಯ ಚ ತದಾ ಮಹಾದೇವಾಂಶಜಃ ಕಪಿಃ ।
ದದಾಹ ಲಂಕಾಂ ನಿಖಿಲಾಂ ಕೃತ್ವಾ ವ್ಯಾಜಂ ತಮೇವ ಹಿ ॥ ೨೪ ॥

ದಗ್ಧ್ವಾ ಲಂಕಾಂ ವಂಚಯಿತ್ವಾ ವಿಭೀಷಣಗೃಹಂ ತತಃ ।
ಅಪತದ್ವಾರಿಧೌ ವೀರಸ್ತತಸ್ಸ ಕಪಿಕುಂಜರಃ ॥ ೨೫ ॥

ಸ್ವಪುಚ್ಛಂ ತತ್ರ ನಿರ್ವಾಪ್ಯ ಪ್ರಾಪ ತಸ್ಯ ಪರಂ ತಟಂ ।
ಅಖಿನ್ನಸ್ಸ ಯಯೌ ರಾಮಸನ್ನಿಧಿಂ ಗಿರಿಜಾಂಶಜಃ ॥ ೨೬ ॥

---

೨೨ ಅದೇ ಸಮಯದಲ್ಲಿಯೇ ಆ ಕಪಿವರನು ಸ್ವಲ್ಪವೂ ಭಯವಿಲ್ಲದೆ ರಾವಣನ ಮಗನಾದ ಅಕ್ಷಕುಮಾರನನ್ನು ಅನೇಕಜನ ರಾಕ್ಷಸರೊಡನೆ ಕೊಂದು ಕೆಡಹಿ ಬಹಳ ಉಪದ್ರವವನ್ನು ಮಾಡಿದನು.

೨೩. ಎಲೈ ಮುನಿಯೇ, ಯಾವಾಗ ರಾವಣನು ಎಣ್ಣೆಯಲ್ಲಿ ನೆನೆಸಿದ ಬಟ್ಟೆಗಳನ್ನು ತರಿಸಿ ಆತನ ಬಾಲಕ್ಕೆ ಬಲವಾಗಿ ಸುತ್ತಿಸಿ ಬೆಂಕಿ ಹೊತ್ತಿಸಿದನೋ,

೨೪. ಆಗ ರುದ್ರಾವತಾರನಾದ ಆ ಹನುಮಂತನು ಅದೇ ನೆಪವೆಂದು ಇಲ್ಲಿಂದಲ್ಲಿಗೆ ಹಾರಿಹಾರಿ ಕುಪ್ಪಳಿಸುತ್ತಾ ಲಂಕೆಯೆಲ್ಲಕ್ಕೂ ಬೆಂಕಿಹೊತ್ತಿಸಿ ಸುಟ್ಟುಬಿಟ್ಟನು.

೨೫. ಈರೀತಿ ವಿಭೀಷಣನ ಮನೆಯೊಂದನ್ನು ಹೊರತು, ಉಳಿದ ಲಂಕೆಯೆಲ್ಲವನ್ನೂ ಸುಟ್ಟುಬಿಟ್ಟಮೇಲೆ ಸಮುದ್ರದಲ್ಲಿ ಬಿದ್ದನು.

೨೬. ಅಲ್ಲಿ ತನ್ನ ಬಾಲವನ್ನು ಆರಿಸಿಕೊಂಡು, ಅನಂತರ ಸಮುದ್ರವನ್ನು ದಾಟಿ, ಆಚೆಯ ದಡವನ್ನು ಸೇರಿದನು. ಇಷ್ಟೆಲ್ಲಾ ಅದ್ಭುತ ಕೆಲಸಗಳನ್ನು ನಡೆಸಿದರೂ, ಆ ರುದ್ರಾಂಶಸಂಭೂತನು ಸ್ವಲ್ಪವೂ ಬಳಲದೆ, ರಾಮನಬಳಿಗೆ ಹೊರಟನು.

ಅನಿಲಂಬೇನ ಸುಜವೋ ಹನೂಮಾನ್ಕಪಿಸತ್ತಮಃ ।
ರಾಮೋಪಕಂಠಮಾಗತ್ಯ ದದೌ ಸೀತಾಶಿರೋಮಣಿಂ　　॥ ೨೭ ॥

ತತಸ್ತದಾಜ್ಞಯಾ ವೀರಸ್ಸಿಂಧೌ ಸೇತುಮಬಂಧಯತ್ ।
ವಾನರೈಸ್ಸ ಸಮಾನೀಯ ಬಹೂನ್ಗಿರಿವರಾನ್ಬಲೀ　　॥ ೨೮ ॥

ಗತ್ವಾ ತತ್ರ ತತೋ ರಾಮಸ್ತರ್ತುಕಾಮೋ ಯಥಾ ತತಃ ।
ಶಿವಲಿಂಗಂ ಸಮಾನರ್ಚ ಪ್ರತಿಷ್ಠಾಪ್ಯ ಜಯೇಪ್ಸಯಾ　　॥ ೨೯ ॥

ತದ್ವರಾತ್ಸ ಜಯಂ ಪ್ರಾಪ್ಯ ವರಂ ತೀರ್ತ್ವೋದಧಿಂ ತತಃ ।
ಲಂಕಾಮಾವೃತ್ಯ ಕಪಿಭೀ ರಣಂ ಚಕ್ರೇ ಸ ರಾಕ್ಷಸೈಃ　　॥ ೩೦ ॥

---

೨೭. ಮಹಾವೇಗನಾದ ಆ ಹನುಮಂತನು ಬೇಗನೆ ರಾಮನಬಳಿಯನ್ನು ಸೇರಿ, ಸೀತೆಯ ಚೂಡಾಮಣಿಯನ್ನು ಅವನಿಗೆ ಒಪ್ಪಿಸಿದನು

೨೮. ಆಮೇಲೆ ಶ್ರೀರಾಮಚಂದ್ರನ ಅಪ್ಪಣೆಯಂತೆ ಆ ವೀರನು, ಅನೇಕ ಮಂದಿ ವಾನರರೊಡನೆ ಬೆಟ್ಟಗುಡ್ಡಗಳನ್ನು ರಾಶಿರಾಶಿಯಾಗಿ ತರಿಸಿ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿಸಿದನು

೨೯. ಅನಂತರ ರಾಮನು ಸಮುದ್ರದಂಚಿಗೆ ಬಂದು, ಅದನ್ನು ದಾಟಬಯಸಿ ತನಗೆ ಜಯವುಂಟಾಗಲೆಂದು ಆ ಸಮುದ್ರತೀರದಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಪೂಜಿಸಿದನು.

೩೦. ಶ್ರೀ ಶಂಕರನು ಜಯವುಂಟಾಗಲೆಂದು ವರವನ್ನೀಯಲು ಬಳಿಕ ಸಮುದ್ರವನ್ನು ದಾಟಿ, ಕಪಿಗಳೆಲ್ಲರೊಡನೆ ಲಂಕೆಯನ್ನು ಸುತ್ತುವರಿದು ಮುತ್ತಿಗೆ ಹಾಕಿ ರಾಕ್ಷಸರೊಡನೆ ಯುದ್ಧಮಾಡಿದನು.

ಜಘಾನಾಥಾಸುರಾನ್ವೀರೋ ರಾಮಸ್ಸೈನ್ಯಂ ররಕ್ಷ ಸಃ ।
ಶಕ್ತಿಕ್ಷತಂ ಲಕ್ಷ್ಮಣಂ ಚ ಸಂಜೀವಿನ್ಯಾ ಹ್ಯಜೀವಯತ್ ॥ ೩೧ ॥

ಸರ್ವಥಾ ಸುಖಿನಂ ಚಕ್ರೇ ಸರಾಮಂ ಲಕ್ಷ್ಮಣಂ ಹಿ ಸಃ ।
ಸರ್ವಸೈನ್ಯಂ ররಕ್ಷಾಸೌ ಮಹಾದೇವಾತ್ಮಜಃ ಪ್ರಭುಃ ॥ ೩೨ ॥

ರಾವಣಂ ಪರಿವಾರಾಢ್ಯಂ ನಾಶಯಾಮಾಸ ವಿಶ್ರಮಃ ।
ಸುಖೀಚಕಾರ ದೇವಾನ್ಸ ಮಹಾಬಲಗೃಹಃ ಕಪಿಃ ॥ ೩೩ ॥

ಮಹೀರಾವಣಸಂಜ್ಞಂ ಸ ಹತ್ವಾ ರಾಮಂ ಸಲಕ್ಷ್ಮಣಂ ।
ತತ್ಸ್ಥಾನಾದಾನಯಾಮಾಸ ಸ್ವಸ್ಥಾನಂ ಪರಿಪಾಲ್ಯ ಚ ॥ ೩೪ ॥

ರಾಮಕಾರ್ಯಂ ಚಕಾರಾಶು ಸರ್ವಥಾ ಕಪಿಪುಂಗವಃ ।
ಅಸುರಾನ್ನಮಯಾಮಾಸ ನಾನಾಲೀಲಾಂ ಚಕಾರ ಚ ॥ ೩೫ ॥

---

೩೧ ಆಗ ಆಂಜನೇಯನು ಆ ರಾಕ್ಷಸರನ್ನೆಲ್ಲಾ ಕೊಂದು ಕೆಡಹಿ, ರಾಮನ ಸೈನ್ಯವನ್ನು ಕಾಪಾಡಿದನು. ಮತ್ತು ರಾವಣನ ಅಷ್ಟಘಂಟಾ ಶಕ್ತಿಯಿಂದ ಮೃತ ಪ್ರಾಯನಾಗಿದ್ದ ಲಕ್ಷ್ಮಣನನ್ನು ಸಂಜೀವಿನಿಯೆಂಬ ಔಷಧಿಯನ್ನು ತಂದು ಬದುಕಿಸಿದನು.

೩೨ ಮಹಾದೇವಾಂಶದಿಂದ ಹುಟ್ಟಿದ ಆ ವೀರನು, ರಾಮನನ್ನೂ ಲಕ್ಷ್ಮಣ ನನ್ನೂ ಈರೀತಿ ಸುಖಿಗಳನ್ನಾಗಿ ಮಾಡಿದುದಲ್ಲದೆ ಸೇನೆಯೆಲ್ಲವನ್ನೂ ಕಾಪಾಡಿದನು.

೩೩. ಮಹಾಬಲಶಾಲಿಯಾದ ಆ ಕಪಿಯು ಸ್ವಲ್ಪವೂ ಶ್ರಮವಿಲ್ಲದೆಯೇ ಅನುಚರರೊಡಗೂಡಿದ ಆ ರಾವಣನನ್ನು ಸಂಹರಿಸಿ, ದೇವತೆಗಳಿಗೆ ಸುಖವನ್ನುಂಟು ಮಾಡಿದನು.

೩೪. ಮಹೀರಾವಣನೆಂಬುವನನ್ನು ಕೊಂದು, ಅವನ ಸೆರೆಯಲ್ಲಿದ್ದ ರಾಮ ನನ್ನೂ ಲಕ್ಷ್ಮಣನನ್ನೂ ಅಲ್ಲಿಂದ ಸುರಕ್ಷಿತವಾಗಿ ಅವರಿದ್ದ ಜಾಗಕ್ಕೆ ಕರೆತಂದನು.

೩೫. ಈರೀತಿ ಆ ಕಪಿಶ್ರೇಷ್ಠನು ಸರ್ವವಿಧದಲ್ಲೂ ರಾಮನ ಕಾರ್ಯಗಳನ್ನು ಬೇಗನೆ ನಡೆಯಿಸಿದುದಲ್ಲದೆ, ರಾಕ್ಷಸರೆಲ್ಲರನ್ನೂ ಕೊಂದು, ನಾನಾವಿಧವಾದ ಲೀಲೆ ಗಳನ್ನು ತೋರಿಸಿದನು.

ಸ್ಥಾಪಯಾಮಾಸ ಭೂಲೋಕೇ ರಾಮಭಕ್ತಿಂ ಕಪೀಶ್ವರಃ ।
ಸ್ವಯಂ ಭಕ್ತವರೋ ಭೂತ್ವಾ ಸೀತಾರಾಮಸುಖಪ್ರದಃ ॥ ೩೬ ॥

ಲಕ್ಷ್ಮಣಪ್ರಾಣದಾತಾ ಚ ಸರ್ವದೇವಮದಾಪಹಃ ।
ರುದ್ರಾವತಾರೋ ಭಗವಾನ್ಭಕ್ತೋದ್ಧಾರಕರಸ್ಸ ವೈ ॥ ೩೭ ॥

ಹನುಮಾನ್ಸ ಮಹಾವೀರೋ ರಾಮಕಾರ್ಯಕರಸ್ಸದಾ ।
ರಾಮದೂತಾಭಿಧೋ ಲೋಕೇ ದೈತ್ಯಘ್ನೋ ಭಕ್ತವತ್ಸಲಃ ॥ ೩೮ ॥

ಇತಿ ತೇ ಕಥಿತಂ ತಾತ ಹನುಮಚ್ಚರಿತಂ ವರಂ ।
ಧನ್ಯಂ ಯಶಸ್ಯಮಾಯುಷ್ಯಂ ಸರ್ವಕಾಮಫಲಪ್ರದಂ ॥ ೩೯ ॥

---

೩೬ ಸೀತಾರಾಮರಿಗೆ ಸುಖವನ್ನುಂಟುಮಾಡಿದ ಆ ಕಪಿವರನು, ತಾನೇ ಶ್ರೀ ಸೀತಾರಾಮರ ಭಕ್ತಾಗ್ರಣಿಯೆಂದೆನಿಸಿ, ಈ ಭೂಮಿಯಲ್ಲಿ ರಾಮಭಕ್ತಿಯನ್ನು ನೆಲೆಗೊಳಿಸಿದನು

೩೭. ಆ ಮಹಾಕಪಿಯು, ಲಕ್ಷ್ಮಣಸಿಗೆ ಪ್ರಾಣದಾನಮಾಡಿದನು. ದೇವತೆಗಳ ಅಹಂಕಾರವನ್ನು ಮುರಿದನು. ರುದ್ರಾವತಾರನೆಂದೂ, ಭಕ್ತೋದ್ಧಾರಕನೆಂದೂ ಪ್ರಖ್ಯಾತನಾದನು

೩೮ ಆ ಹನುಮಂತನು, ಮಹಾಪರಾಕ್ರಮಿಯು, ಸರ್ವದಾ ರಾಮಕಾರ್ಯ ತತ್ಪರನು ಆದುದರಿಂದಲೇ ರಾಮದೂತನೆಂಬುದಾಗಿ ಆತನಿಗೆ ಪ್ರಪಂಚದಲ್ಲಿ ಹೆಸರುಂಟಾಯಿತು. ಆತನು ದುಷ್ಟರಾದ ರಾಕ್ಷಸರನ್ನು ಕೊಂದು ಕೆಡಹಿದನು. ಭಕ್ತರಲ್ಲಿ ಆತನಿಗೆ ಬಹಳ ವಾತ್ಸಲ್ಯವಿರುವುದು.

೩೯. ಅಪ್ಪಾ ಮುನಿಯೇ, ಈರೀತಿಯಾಗಿ ನಿನಗೆ ಶ್ರೇಷ್ಠವಾದ ಹನುಮಂತನ ಚರಿತ್ರೆಯನ್ನು ತಿಳಿಸಿದೆನು. ಇದು ಪಾವನವಾದುದು, ಯಶಸ್ಕರವಾದುದು, ಆಯುರ್ವರ್ಧಕವಾದುದು, ಎಲ್ಲಾ ಇಷ್ಟಾರ್ಥಗಳನ್ನೂ ಕರುಣಿಸುವಂತಹುದು.

**ಯ ಇದಂ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।**
**ಸ ಭುಕ್ತ್ವೇಹಾಖಿಲಾನ್ಕಾಮಾನಂತೇ ಮೋಕ್ಷಂ ಲಭೇತ್ಪರಂ ॥ ೪೦ ॥**

**ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಹನುಮದವತಾರವರ್ಣನಂ ನಾಮ ವಿಂಶೋಽಧ್ಯಾಯಃ**

---

೪೦. ಯಾವನು ಈ ಚರಿತ್ರವನ್ನು ಭಕ್ತಿಯಿಂದ ಶ್ರವಣಮಾಡುವನೋ, ಮತ್ತೊಬ್ಬರಿಗೋಸ್ಕರವಾಗಿ ಅವರೆದುರು ಕೀರ್ತನಮಾಡುವನೋ, ಅವನು ಈ ಲೋಕದಲ್ಲಿ ಎಲ್ಲಾ ಮನೋರಥಗಳನ್ನೂ ಅನುಭವಿಸಿ, ಕೊನೆಗೆ ಪರಮಶ್ರೇಷ್ಠವಾದ ಮುಕ್ತಿಸುಖವನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಹನುಮಚ್ಚರಿತವರ್ಣನವೆಂಬ ಇಪ್ಪತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಏಕವಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಅಥ ಪ್ರೀತ್ಯಾ ಶೃಣು ಮುನೇಽವತಾರಂ ಪರಮಂ ಪ್ರಭೋಃ ।
ಶಂಕರಸ್ಯಾತ್ಮಭೂಪುತ್ರ ಶೃಣ್ವತಾಂ ಸರ್ವಕಾಮದಂ ॥ ೧ ॥

ಏಕದಾ ಮುನಿಶಾರ್ದೂಲ ಗಿರಿಜಾಶಂಕರಾವುಭೌ ।
ವಿಹರ್ತುಕಾಮೌ ಸಂಜಾತೌ ಸ್ವೇಚ್ಛಯಾ ಪರಮೇಶ್ವರೌ ॥ ೨ ॥

---

## ಇಪ್ಪತ್ತೊಂದನೆಯ ಅಧ್ಯಾಯವು

೧ ನಂದಿಕೇಶ್ವರನು ಸನತ್ಕುಮಾರನನ್ನು ಕುರಿತು ಹೇಳತೊಡಗಿದನು:-- ಎಲೈ ಬ್ರಹ್ಮಮಾನಸಪುತ್ರನೇ, ಕೇಳುವವರ ಇಷ್ಟಾರ್ಥಗಳೆಲ್ಲವನ್ನೂ ಕರುಣಿಸುವ ಶಂಕರನ ಮತ್ತೊಂದು ಶ್ರೇಷ್ಠವಾದ ಅವತಾರವನ್ನು ಹೇಳುವೆನು ಕೇಳು.

೨. ಎಲೈ ಮುನಿಶ್ರೇಷ್ಠನೇ, ಒಂದಾನೊಂದು ಸಲ ಜಗದೀಶ್ವರರಾದ ಪಾರ್ವತೀ ಚಂದ್ರಶೇಖರರು ಸ್ವೇಚ್ಛೆಯಾಗಿ ವಿಹರಿಸಬೇಕೆಂಬ ಇಚ್ಛೆಯುಳ್ಳವರಾದರು.

ಭೈರವಂ ದ್ವಾರಪಾಲಂ ಚ ಕೃತ್ವಾಭ್ಯಂತರಮಾಗತೌ ।
ನಾನಾಸಖಿಗಣೈಃ ಪ್ರೀತ್ಯಾ ಸೇವಿತೌ ನರಶೀಲಿತೌ ॥ ೩ ॥

ಚಿರಂ ವಿಹೃತ್ಯ ತತ್ರ ದ್ವೌ ಸ್ವತಂತ್ರೌ ಪರಮೇಶ್ವರೌ ।
ಬಭೂವತುಃ ಪ್ರಸನ್ನೌ ತೌ ನಾನಾಲೀಲಾಕರೌ ಮುನೇ ॥ ೪ ॥

ಅಥೋನ್ಮತ್ತಾಕೃತಿರ್ದೇವೀ ಸ್ವತಂತ್ರಾ ಲೀಲಯಾ ಶಿವಾ ।
ಆಗತಾ ದ್ವಾರಿ ತದ್ರೂಪಾ ಪ್ರಭೋರಾಜ್ಞಾಮವಾಪ ಸಾ ॥ ೫ ॥

ತಾಂ ದೇವೀಂ ಭೈರವಸ್ಸೋಽಥ ನಾರೀದೃಷ್ಟ್ಯಾ ವಿಲೋಕ್ಯ ಚ ।
ನಿಷಿಷೇಧ ಬಹಿರ್ಗಂತುಂ ತದ್ರೂಪೇಣ ವಿಮೋಹಿತಃ ॥ ೬ ॥

---

೩. ಆಗ ಭೈರವನನ್ನು ಬಾಗಿಲು ಕಾಯ್ದುಕೊಂಡಿರುವಂತೆ ಹೇಳಿ ಅವರೀರ್ವರೂ ಒಳಗೆ ಬಂದು ಅನೇಕಮಂದಿ ಸಖಿಯರಿಂದ ಪ್ರೀತಿಯ ಸೇವೆಯನ್ನು ಕೈಗೊಳ್ಳುತ್ತಾ ಮನುಷ್ಯರಂತೆ ವಿಹರಿಸತೊಡಗಿದರು.

೪. ಎಲೈ ಮುನಿಯೇ, ನಾನಾವಿಧವಾದ ಲೀಲೆಗಳನ್ನು ಎಸಗುವವರೂ, ಎಲ್ಲರಿಗೂ ಒಡೆಯರೂ ಸ್ವತಂತ್ರರೂ ಆದ ಆ ದಿವ್ಯದಂಪತಿಗಳು ಬಹುಕಾಲ ವಿಹರಿಸಿದ ಅನಂತರ ತೃಪ್ತಿಯಿಂದ ಸಂತೋಷವನ್ನು ತಾಳಿದರು.

೫. ಆಗ ಸ್ವತಂತ್ರಳಾದ ಶಿವೆಯು ತನ್ನ ಪ್ರಭುವಾದ ಶಿವನ ಅಪ್ಪಣೆಯನ್ನು ಪಡೆದು ಲೀಲಾರ್ಥವಾಗಿ ಹುಚ್ಚಳಂತೆ ವೇಷವನ್ನು ತಳೆದು ಭೈರವನಿದ್ದ ಬಾಗಿಲಬಳಿ ಬಂದಳು.

೬. ಆಗ ದ್ವಾರಪಾಲನಾದ ಭೈರವನು ಆ ಸರ್ವಮಂಗಳೆಯ ರೂಪದಿಂದ ಮಂಕನಾದಂತಾಗಿ ಆಕೆಯನ್ನು ಸಾಮಾನ್ಯಹೆಂಗಸಿನಂತೆ ಭಾವಿಸಿ ಹೊರಗಡೆಗೆ ಹೋಗಲು ಬಿಡದೆ ತಡೆದನು.

ನಾರೀದೃಷ್ಟ್ಯಾ ಸುದೃಷ್ಟಾ ಸಾ ಭೈರವೇಣ ಯದಾ ಮುನೇ ।
ಕ್ರುದ್ಧಾಽಭವಚ್ಛಿವಾ ದೇವೀ ತಂ ಶಶಾಪ ತದಾಂಬಿಕಾ ॥ ೭ ॥

॥ ಶಿವ ಉವಾಚ ॥

ನಾರೀದೃಷ್ಟ್ಯಾ ಪಶ್ಯಸಿ ತ್ವಂ ಯತೋ ಮಾಂ ಪುರುಷಾಧಮ ।
ಅತೋ ಭವ ಧರಾಯಾಂ ಹಿ ಮಾನುಷಸ್ತ್ವಂ ಚ ಭೈರವ ॥ ೮ ॥

॥ ನಂದೀಶ್ವರ ಉವಾಚ ॥

ಇತ್ಥಂ ಯದಾಽಭವಚ್ಛಪ್ತೋ ಭೈರವಶ್ಶಿವಯಾ ಮುನೇ ।
ಹಾಹಾಕಾರೋ ಮಹಾನಾಸೀದ್ದುಃಖಮಾಪ ಸ ಲೀಲಯಾ ॥ ೯ ॥

ತತಶ್ಚ ಶಂಕರಃ ಶೀಘ್ರಂ ತಮಾಗತ್ಯ ಮುನೀಶ್ವರ ।
ಆಶ್ವಾಸಯದ್ಭೈರವಂ ಹಿ ನಾನಾಽನುನಯಕೋವಿದಃ ॥ ೧೦ ॥

---

೭. ಎಲೈ ಮಹರ್ಷಿಯೇ, ಆಗ ಜಗನ್ಮಾತೆಯಾದ ಪಾರ್ವತಿಯು ತನ್ನನ್ನು ಈ ಭೈರವನು ಸಾಧಾರಣಸ್ತ್ರೀಯಂತೆ ಕಂಡುದನ್ನು ನೋಡಿ ಮಹಾಕೋಪವನ್ನು ತಾಳಿ ಅವನನ್ನು ಶಪಿಸಿದಳು.

೮. ಎಲೈ ಪುರುಷಾಧಮನೇ ನನ್ನನ್ನು ನೀನು ಸಾಮಾನ್ಯಹೆಂಗಸಿನಂತೆ ಕೀಳಾಗಿ ಕಂಡೆಯಲ್ಲವೆ? ಆದುದರಿಂದ ಎಲೈ ಭೈರವನೇ ನೀನು ಭೂಲೋಕದಲ್ಲಿ ಮನುಷ್ಯನಾಗಿ ಹುಟ್ಟು

೯ ಎಲೈ ಮುನಿಯೇ, ಇಂತು ಶಿವೆಯು ಭೈರವನನ್ನು ಶಪಿಸಿದೊಡನೆ ಮಹತ್ತಾದ ಹಾಹಾಕಾರವೆದ್ದಿತು. ಭೈರವನೂ ಸಹ- ಬಹು ದುಃಖವನ್ನು ಹೊಂದಿದನು.

೧೦. ಬಳಿಕ ಪರಶಿವನು ಆ ಭೈರವನ ಬಳಿಗೆ ಕೂಡಲೇ ಬಂದು ನಾನಾವಿಧವಾಗಿ ಸಮಾಧಾನವಾಕ್ಯಗಳನ್ನಾಡಿ ಅವನನ್ನು ಸಂತೈಸಿದನು.

ತಚ್ಛಾಪಾದ್ಭೈರವಸ್ಸೋಽಥ ಕ್ಷಿತಾವವತರನ್ಮುನೇ ।
ಮನುಷ್ಯಯೋನ್ಯಾಂ ವೈತಾಲಸಂಜ್ಞಃ ಶಂಕರೇಚ್ಛಯಾ ॥ ೧೧ ॥

ತತ್ಸ್ನೇಹತಃ ಶಿವಃ ಸೋಽಪಿ ಕ್ಷಿತಾವವತರದ್ವಿಭುಃ ।
ಶಿವಯಾ ಸಹ ಸಲ್ಲೀಲೋ ಲೌಕಿಕೀಂ ಗತಿಮಾಶ್ರಿತಃ ॥ ೧೨ ॥

ಮಹೇಶಾಹ್ವಃ ಶಿವಶ್ಶಾಸೀಚ್ಛಾರದಾ ಗಿರಿಜಾ ಮುನೇ ।
ಸುಲೀಲಾಂ ಚಕ್ರತುಃ ಪ್ರೀತ್ಯಾ ನಾನಾಲೀಲಾವಿಶಾರದೌ ॥ ೧೩ ॥

ಇತಿ ತೇ ಕಥಿತಂ ತಾತ ಮಹೇಶಚರಿತಂ ವರಂ ।
ಧನ್ಯಂ ಯಶಸ್ಯಮಾಯುಷ್ಯಂ ಸರ್ವಕಾಮಫಲಪ್ರದಂ ॥ ೧೪ ॥

---

೧೧. ಅನಂತರ ಶಂಕರಿಯ ಶಾಪದಿಂದ ಆ ಭೈರವನು ಭೂಮಿಗೆ ಇಳಿದು ಬಂದು ಶಿವನ ಅಪ್ಪಣೆಯಂತೆ ಮನುಷ್ಯಜಾತಿಯಲ್ಲಿ ವೇತಾಲನೆಂಬ ಹೆಸರಿದಿಂದ ಹುಟ್ಟಿದನು.

೧೨. ಆಭೈರವನ ಮೇಲಿನ ವಿಶ್ವಾಸದಿಂದ ಪ್ರಭುವಾದ ಆ ಶಿವನೂ ಸಹ ಲೋಕವ್ಯವಹಾರವನ್ನು ಅನುಸರಿಸಿ ಲೀಲೆಯನ್ನು ತೋರುತ್ತಾ ಪಾರ್ವತಿಯೊಡನೆ ಭೂಮಿಯಲ್ಲಿ ಅವತರಿಸಿದನು.

೧೩. ಬಗೆಬಗೆಯಾದ ಲೀಲೆಗಳನ್ನು ತೋರುವುದರಲ್ಲಿ ಕುಶಲರಾದ ಶಿವ ಪಾರ್ವತಿಯರು ಮಹೇಶ ಶಾರದೆಯೆಂಬ ಹೆಸರನ್ನು ತಳೆದು ಪ್ರೀತಿಯಿಂದ ಸೊಗಸಾದ ಲೀಲೆಯನ್ನು ತೋರ್ಪಡಿಸಿದರು.

೧೪. ಅಪ್ಪಾ ! ಇಂತು ನಿನಗೆ ಶ್ರೇಷ್ಠವೂ ಶ್ಲಾಘ್ಯವೂ ಯಶಸ್ಕರವೂ ಆಯುವರ್ಧನವೂ, ಎಲ್ಲ ಅಭೀಷ್ಟಗಳನ್ನು ನೆರವೇರಿಸುವುದೂ ಆದ ಮಹೇಶಾವತಾರಚರಿತ್ರೆಯನ್ನು ತಿಳಿಸಿದೆನು.

ಯ ಇದಂ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।
ಸ ಭುಕ್ತ್ವೇಹಾಖಿಲಾನ್ಭೋಗಾನಂತೇ ಮೋಕ್ಷಮವಾಪ್ನುಯಾತ್ ॥ ೧೫ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಮಹೇಶಾವತಾರವರ್ಣನಂ ನಾಮೈಕವಿಂಶೋಽಧ್ಯಾಯಃ

---

೧೫　ಯಾವನು ಭಕ್ತಿಯಿಂದ ಮನಸ್ಸಿಟ್ಟು ಈ ಉಪಾಖ್ಯಾನವನ್ನು ಪಠಿಸುವನೋ ಅಥವಾ ಮತ್ತೊಬ್ಬರ ಸಲುವಾಗಿ ಪಠನಮಾಡುವನೋ ಅವನು ಈ ಲೋಕದಲ್ಲಿ ಎಲ್ಲ ಭೋಗಗಳನ್ನೂ ಅನುಭವಿಸಿ ಕೊನೆಗೆ ಮೋಕ್ಷವನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಮಹೇಶಾವತಾರವರ್ಣನವೆಂಬ ಇಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು

|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ದ್ವಾವಿಂಶೋಽಧ್ಯಾಯಃ



॥ ನಂದೀಶ್ವರ ಉವಾಚ ॥

ಶೃಣು ಬ್ರಹ್ಮಸುತ ಪ್ರಾಜ್ಞ ವೃಷೇಶಾಖ್ಯಂ ಮುನೀಶ್ವರ ।
ಶಿವಾವತಾರಂ ಸಲ್ಲೀಲಂ ಹರಿಗರ್ವಹರಂ ವರಂ ॥ ೧ ॥

ಪುರಾ ದೇವಾಸುರಾಃ ಸರ್ವೇ ಜರಾಮೃತ್ಯುಭಯಾರ್ದಿತಾಃ ।
ಪರಸ್ಪರಂ ಚ ಸಂಧಾಯ ರತ್ನಾನ್ಯಾದಿತ್ಸವೋಽಭವನ್ ॥ ೨ ॥

---

### ಇಪ್ಪತ್ತೆರಡನೆಯ ಅಧ್ಯಾಯವು.

೧. ಎಲೈ ಮೇಧಾವಿಯಾದ ಸನತ್ಕುಮಾರಮುನಿಯೇ, ವಿಷ್ಣುವಿನ ಗರ್ವವನ್ನು ಅಪಹರಿಸಿದ ವೃಷಭೇಶನೆಂಬ ಶಿವನ ಲೀಲಾಮಯವಾದ ಅವತಾರವನ್ನು ವರ್ಣಿಸುವೆನು, ಕೇಳು.

೨. ಹಿಂದೆ ಮುಪ್ಪು ಸಾವಿಗಳಿಗಂಜಿ ದೇವತೆಗಳೂ ಅಸುರರೂ ಎಲ್ಲರೂ ಒಟ್ಟಾಗಿ ಕಲೆತು, ಒಮ್ಮತದಿಂದ ಪ್ರತಿಯೊಂದು ಜಾತಿಯಲ್ಲಿಯೂ ಉತ್ಕೃಷ್ಟವಾದುದೆನಿಸಿದ ರತ್ನಗಳನ್ನು ಪಡೆಯಬೇಕೆಂದು ಬಯಸಿದರು.

ತತಃ ಸುರಾಸ್ಸುರಾಃ ಸರ್ವೇ ಕ್ಷೀರೋದಂ ಸಾಗರೋತ್ತಮಂ ।
ಉದ್ಯತಾ ಮಥಿತುಂ ತಂ ಚ ಬಭೂವುರ್ಮುನಿನಂದನ ॥ ೩ ॥

ಆಸಞ್ಚುಚಿಸ್ಮಿತಾಸ್ಸರ್ವೇ ಕೇನೇದಂ ಮಂಥನಂ ಭವೇತ್ ।
ಸ್ವಕಾರ್ಯಸಿದ್ಧಯೇ ತಸ್ಯ ಬ್ರಹ್ಮನ್ನಿತಿ ಸುರಾಸುರಾಃ ॥ ೪ ॥

ತದಾ ನಭೋಗತಾ ವಾಣೀ ಮೇಘಗಂಭೀರನಿಸ್ಸ್ವನಾ ।
ಉವಾಚ ದೇವಾನ್ದೈತ್ಯಾಂಶ್ಚ ಶ್ವಾಸಯಂತೀಶ್ವರಾಜ್ಞಯಾ ॥ ೫ ॥

॥ ನಭೋವಾಣ್ಯುವಾಚ ॥

ಹೇ ದೇವಾ ಅಸುರಾಶ್ಚೈವ ಮಂಥಧ್ವಂ ಕ್ಷೀರಸಾಗರಂ ।
ಭವತಾಂ ಬಲಬುದ್ಧಿರ್ಹಿ ಭವಿಷ್ಯತಿ ನ ಸಂಶಯಃ ॥ ೬ ॥

ಮಂದರಂ ಚೈವ ಮಂಥಾನಂ ರಜ್ಜುಂ ಕುರುತ ವಾಸುಕಿಂ ।
ಮಿಥಸ್ಸರ್ವೇ ಮಿಲಿತ್ವಾ ತು ಮಥನಂ ಕುರುತಾದರಾತ್ ॥ ೭ ॥

---

೩. ಎಲೈ ಮುನಿಕುಮಾರನೇ, ಅನಂತರ ಆ ದೇವಾಸುರರು ಸಾಗರಶ್ರೇಷ್ಠ ವಾದ ಕ್ಷೀರಸಮುದ್ರವನ್ನು ಕಡೆಯಲು ತೊಡಗಿದರು.

೪. ನಗುಮುಖದ ಆ ದೇವಾಸುರರು ತಮ್ಮ ಅಭಿಲಾಷೆಯು ನೆರವೇರಲು ಈ ಸಮುದ್ರವನ್ನು ಏತರಿಂದ ಕಡೆಯಬೇಕೆಂದು ಯೋಚಿಸುತ್ತಿರಲು,

೫. ಆಗ ಮೇಘದಂತೆ ಗಂಭೀರವಾದ ಧ್ವನಿಯಿಂದ ಕೂಡಿ ಈಶ್ವರಾಜ್ಞೆಯಿಂದ ಆ ದೇವದಾನವರನ್ನು ಸಂತೈಸುತ್ತಾ ಅಂತರಿಕ್ಷದಿಂದ ಅಶರೀರವಾಣಿಯು ನುಡಿಯಿತು.

೬. ಎಲೈ ದೇವತೆಗಳಿರಾ, ಅಸುರರಿರಾ, ನೀವು ಕ್ಷೀರಸಾಗರವನ್ನು ಮಥಿಸಿರಿ. ನಿಮಗೆ ಬಲವು ಹೆಚ್ಚುವುದು. ಸ್ವಲ್ಪವೂ ಸಂಶಯಪಡಬೇಡಿರಿ.

೭. ಮಂದರಪರ್ವತವನ್ನು ಕಡೆಗೋಲನ್ನಾಗಿಯೂ ವಾಸುಕಿಯನ್ನು ಹಗ್ಗ ವನ್ನಾಗಿಯೂ ಮಾಡಿಕೊಂಡು ನೀವೆಲ್ಲರೂ ಒಗ್ಗಟ್ಟಾಗಿ ಕಲೆತು ಸಂತೋಷದಿಂದ ಕಡೆ ಯತೊಡಗಿರಿ ಎಂದು ನುಡಿಯಿತು

॥ ನಂದೀಶ್ವರ ಉವಾಚ ॥

ನಭೋಗತಾಂ ತದಾ ವಾಣೀಂ ನಿಶಮ್ಯಾಥ ಸುರಾಸುರಾಃ ।
ಉದ್ಯೋಗಂ ಚಕ್ರಿರೇ ಸರ್ವೇ ತತ್ಕರ್ತುಂ ಮುನಿಸತ್ತಮ ॥ ೮ ॥

ಸುಸಂಧಾಯಾಖಿಲಾಸ್ತೇ ವೈ ಮಂದರಂ ಪರ್ವತೋತ್ತಮಂ ।
ಕನಕಾಭಂ ಚ ಸರಲಂ ನಾನಾಶೋಭಾರ್ಚಿತಂ ಯಯುಃ ॥ ೯ ॥

ಸುಪ್ರಸಾದ್ಯ ಗಿರೀಶಂ ತಂ ತದಾಜ್ಞಪ್ತಾಃ ಸುರಾಸುರಾಃ ।
ಬಲಾದುತ್ಪಾಟಯಾಮಾಸುರ್ನೇತುಕಾಮಾಃ ಪಯೋರ್ಣವಂ ॥ ೧೦ ॥

ಭುಜೈರುತ್ಪಾಟ್ಯ ತೇ ಸರ್ವೇ ಜಗ್ಮುಃ ಕ್ಷೀರಾರ್ಣವಂ ಮುನೇ ।
ಅಶಕ್ತಾ ಅಭವಂಸ್ತತ್ರ ತಮಾನೇತುಂ ಹತೌಜಸಃ ॥ ೧೧ ॥

ತದ್ಭುಜೈಸ್ಸ ಪರಿಭ್ರಷ್ಟಃ ಪತಿತೋ ಮಂದಿರೋ ಗಿರಿಃ ।
ಸಹಸಾತಿಗುರುಸ್ಸದ್ಯೋ ದೇವದೈತ್ಯೋಪರಿ ಧ್ರುವಂ ॥ ೧೨ ॥

೮. ಈರೀತಿ ಆ ಅಶರೀರವಾಣಿಯು ಹೇಳಿದ ಮಾತನ್ನು ಕೇಳಿ ಆ ದೇವಾಸುರರು ಆರೀತಿ ಮಾಡಲು ಸನ್ನಾಹನಡೆಸಿದರು.

೯ ಬಳಿಕ ಅವರೆಲ್ಲರೂ ಒಟ್ಟಾಗಿ ಕಲೆತು ಚಿನ್ನದಂತೆ ಹೊಳೆಯುತ್ತಾ ನಾನಾ ವಿಧವಾದ ಶೋಭೆಗೆ ನೆಲೆಯೆನಿಸಿದ ಮಂದರಪರ್ವತದ ಬಳಿಗೆ ಬಂದರು.

೧೦. ಪರ್ವತಶ್ರೇಷ್ಠವಾದ ಆ ಮಂದರವನ್ನು ಒಲಿಸಿಕೊಂಡು ಅದರ ಅಪ್ಪಣೆಯನ್ನು ಪಡೆದು ಅವರೆಲ್ಲರೂ ಅದನ್ನು ಕ್ಷೀರಸಮುದ್ರಕ್ಕೆ ತೆಗೆದುಕೊಂಡುಹೋಗಲು ತಮ್ಮ ಬಲವೆಲ್ಲಾ ಬಿಟ್ಟು ಮೇಲಕ್ಕೆ ಕಿತ್ತರು.

೧೧. ಎಲೈ ಮುನಿಯೇ, ಅವರೆಲ್ಲರೂ ತಮ್ಮ ತೋಳ್ಬಲದಿಂದ ಆ ಪರ್ವತವನ್ನು ಕಿತ್ತು ಕ್ಷೀರಸಮುದ್ರಕ್ಕೆ ತರಬೇಕೆಂದು ಬಯಸಿ ಅದನ್ನು ಹೊರಲಾರದೆ ಶಕ್ತಿ ಗುಂದಿ ಬಳಲಿಹೋದರು.

೧೨. ಆಗ ಅತಿಭಾರವಾದ ಆ ಮಂದರಪರ್ವತವು ಅವರುಗಳ ಕೈಗಳಿಂದ ಜಾರಿ ತಟ್ಟನೆ ಆ ದೇವದಾನವರಮೇಲೆಯೇ ಬಿದ್ದುಹೋಯಿತು.

ಏವಂ ಭಗ್ನೋದ್ಯಮಾ ಭಗ್ನಾಃ ಸಂಬಭೂವುಸ್ಸುರಾಸುರಾಃ ।
ಚೇತನಾಃ ಪ್ರಾಪ್ಯ ಚ ತತಸ್ತುಷ್ಟುವುರ್ಜಗದೀಶ್ವರಂ ॥ ೧೩ ॥

ತದಿಚ್ಛಯೋದ್ಯತಾಸ್ಸರ್ವೇ ಪುನರುತ್ಥಾಪ್ಯ ತಂ ಗಿರಿಂ ।
ನಿಚಿಕ್ಷಿಪುರ್ಜಲೇ ನೀತ್ವಾ ಕ್ಷೀರೋದಸ್ಯೋತ್ತರೇ ತಟೇ ॥ ೧೪ ॥

ತತಸ್ಸುರಾಸುರಗಣಾ ರಜ್ಜುಂ ಕೃತ್ವಾ ಚ ವಾಸುಕಿಂ ।
ರತ್ನಾನ್ಯಾದಾತುಕಾಮಾಸ್ತೇ ಮಮಂಥುಃ ಕ್ಷೀರಸಾಗರಂ ॥ ೧೫ ॥

ಕ್ಷೀರೋದೇ ಮಥ್ಯಮಾನೇ ತು ಶ್ರೀಸ್ಸ್ವರ್ಲೋಕಮಹೇಶ್ವರೀ ।
ಸಮುದ್ಭೂತಾ ಸಮುದ್ರಾಚ್ಚ ಭೃಗುಪುತ್ರೀ ಹರಿಪ್ರಿಯಾ ॥ ೧೬ ॥

ಧನ್ವಂತರಿಃ ಶಶಾಂಕಶ್ಚ ಪಾರಿಜಾತೋ ಮಹಾದ್ರುಮಃ ।
ಉಚ್ಚೈಃಶ್ರವಾಶ್ಚ ತುರಗೋ ಗಜ ಐರಾವತಸ್ತಥಾ ॥ ೧೭ ॥

---

೧೩ ಈರೀತಿ ತಮ್ಮ ಪ್ರಯತ್ನವು ವ್ಯರ್ಥವಾದುದಲ್ಲದೆ ಆ ದೇವಾಸುರರು ಮೈಕೈಗಳನ್ನು ಮುರಿದುಕೊಂಡರು ಅನಂತರ ಹೇಗೋ ಎಚ್ಚೆತ್ತು ಜಗತ್ಪ್ರಭುವನ್ನು ಸ್ತುತಿಸಿದರು.

೧೪ ಆಗ ಅವರು ಪುನಃ ಪ್ರಯತ್ನಿಸಿ ಮಂದರಪರ್ವತವನ್ನು ಎತ್ತಿನಿಲ್ಲಿಸಿ ಆ ಪ್ರಭುವಿನ ಇಚ್ಛೆಯಿಂದ ಅದನ್ನು ಹೊತ್ತುಕೊಂಡುಹೋಗಿ ಕ್ಷೀರಸಾಗರದ ಉತ್ತರದ ತೀರಕ್ಕೆ ತಂದು ಆ ಸಾಗರದ ನೀರಿನಲ್ಲಿ ಅದನ್ನು ಎತ್ತಿಹಾಕಿದರು

೧೫ ಬಳಿಕ ಪ್ರತಿಯೊಂದು ಜಾತಿಯಲ್ಲಿಯೂ ಉತ್ಕೃಷ್ಟಗಳೆನಿಸಿದ ವಸ್ತುಗಳನ್ನು ಪಡೆಯಬೇಕೆಂಬ ಕುತೂಹಲವುಳ್ಳ ಆ ದೇವದಾನವರು ವಾಸುಕಿಯನ್ನು ಹಗ್ಗವನ್ನಾಗಿಮಾಡಿಕೊಂಡು ಕ್ಷೀರಸಮುದ್ರವನ್ನು ಕಡೆಯತೊಡಗಿದರು

೧೬ ಈರೀತಿ ಕ್ಷೀರಸಮುದ್ರವನ್ನು ಕಡೆಯುತ್ತಿರಲು ಸ್ವರ್ಗಲೋಕಕ್ಕೆ ಅಧೀಶ್ವರಿಯೂ, ಭೃಗುಮಹರ್ಷಿಯ ಮಗಳೂ, ಶ್ರೀಹರಿಯ ಪ್ರಿಯೆಯೂ ಆದ ಲಕ್ಷ್ಮಿಯು ಆ ನೀರಿನಿಂದ ಆವಿರ್ಭವಿಸಿದಳು

೧೭. ಹಾಗೆಯೇ ಧನ್ವಂತರಿಯೂ, ಚಂದ್ರನೂ, ಪಾರಿಜಾತವೃಕ್ಷವೂ, ಉಚ್ಚೈಶ್ಶ್ರವಸ್ಸೆಂಬ ಕುದುರೆಯೂ. ಐರಾವತವೆಂಬ ಆನೆಯೂ ಆ ಸಮುದ್ರದಿಂದ ಹುಟ್ಟಿದುವು.

ಸುರಾ ಹರಿಧನುಶ್ಶಂಖೋ ಗಾವಃ ಕಾಮದುಘಾಸ್ತತಃ ।
ಕೌಸ್ತುಭಾಖ್ಯೋ ಮಣಿಶ್ಚೈವ ತಥಾ ಪೀಯೂಷಮೇವ ಚ ॥ ೧೮ ॥

ಪುನಶ್ಚ ಮಥ್ಯಮಾನೇ ತು ಕಾಲಕೂಟಂ ಮಹಾವಿಷಂ ।
ಯುಗಾಂತಾನಲಭಂ ಜಾತಂ ಸುರಾಸುರಭಯಾವಹಂ ॥ ೧೯ ॥

ಪೀಯೂಷಜನ್ಮಕಾಲೇ ತು ಬಿಂದವೋ ಯೇ ಬಹಿರ್ಗತಾಃ ।
ತೇಭ್ಯಃ ಕಾಂತಾ ಸಮುದ್ಭೂತಾ ಬಹ್ವ್ಯೋ ಹ್ಯದ್ಭುತದರ್ಶನಾಃ ॥ ೨೦ ॥

ಶರತ್ಪೂರ್ಣೇಂದುವದನಾಸ್ತಡಿತ್ಸೂರ್ಯಾನಲಪ್ರಭಾಃ ।
ಹಾರಕೇಯೂರಕಟಕೈರ್ದಿವ್ಯರತ್ನೈರಲಂಕೃತಾಃ ॥ ೨೧ ॥

ಲಾವಣ್ಯಾಮೃತತೋಯೇನ ತಾಸ್ಸಿಂಚಂತ್ಯೋ ದಿಶೋ ದಶ ।
ಜಗದುನ್ಮಾದಯಂತ್ಯೇವ ಭ್ರೂಭಂಗಾಯುತವೀಕ್ಷಣಾಃ ॥ ೨೨ ॥

---

೧೮. ಅದರಂತೆ ಸುರೆ, ಶಾರ್ಙ್ಗವೆಂಬ ಧನುಸ್ಸು, ಶಂಖ, ಕಾಮಧೇನು, ಕೌಸ್ತುಭವೆಂಬ ರತ್ನ, ಅಮೃತ ಮುಂತಾದುವೂ ಹುಟ್ಟಿದುವು.

೧೯. ಅದೇರೀತಿ ಮತ್ತೆ ಕಡೆಯುತ್ತಿರಲಾಗಿ ಆ ದೇವತೆಗಳಿಗೂ ದಾನವರಿಗೂ ಭಯವನ್ನುಂಟುಮಾಡುತ್ತಾ ಪ್ರಳಯಕಾಲದ ಅಗ್ನಿಯಂತೆ ದೇದೀಪ್ಯಮಾನವಾಗಿ ಉರಿಯುತ್ತಿರುವ ಕಾಲಕೂಟವೆಂಬ ಮಹಾವಿಷವು ಹುಟ್ಟಿತು.

೨೦. ಹಿಂದೆ ಅಮೃತವು ಹುಟ್ಟಿದಾಗ ಅತ್ತಿತ್ತ ಹೊರಚೆಲ್ಲಿದ ಅದರ ಬಿಂದುಗಳಿಂದ ಮಹಾರೂಪವತಿಯರಾದ ಅನೇಕಮಂದಿ ನಾರಿಯರು ಹೊರಬಿದ್ದರು.

೨೧. ಅವರೊಬ್ಬೊಬ್ಬರೂ ಶರತ್ಕಾಲದ ಪೂರ್ಣಚಂದ್ರನಂತೆ ಮನೋಹರವಾದ ಮುಖವುಳ್ಳವರು. ಒಬ್ಬೊಬ್ಬರೂ ಕಾಂತಿಯಿಂದ ಮಿಂಚನ್ನೂ ಸೂರ್ಯನನ್ನೂ ಅಗ್ನಿಯನ್ನೂ ಹೋಲುವವರು ದಿವ್ಯವಾದ ರತ್ನಗಳನ್ನು ಕೆತ್ತಿದ ಹಾರ, ಬಂದಿ, ಕಡಗ ಮೊದಲಾದ ಆಭರಣಗಳಿಂದ ಅಲಂಕೃತರಾದವರು.

೨೨. ಅವರು ತಮ್ಮ ಲಾವಣ್ಯವೆಂಬ ಅಮೃತಜಲದಿಂದ ಹತ್ತು ದಿಕ್ಕುಗಳನ್ನೂ ಚಿಮುಕಿಸುತ್ತಾ ಇರುವಂತೆಯೂ, ತಮ್ಮ ಭ್ರೂಭಂಗದಿಂದಲೂ ವಿಶಾಲವಾದ ಕಣ್ಣಿನ ನೋಟದಿಂದಲೂ ಜಗತ್ತನ್ನೇ ಮರುಳುಗೊಳಿಸುತ್ತಿರುವಂತೆಯೂ ಕಂಗೊಳಿಸುತ್ತಿದ್ದರು.

ಕೋಟಿಶಸ್ತಾಸ್ಸಮುತ್ಪನ್ನಾಸ್ತ್ವಮೃತಾತ್ಕಾಮನಿಸ್ಸೃತಾಃ ।
ತತೋಽಮೃತಂ ಸಮುತ್ಪನ್ನಂ ಜರಾಮೃತ್ಯುನಿವಾರಣಂ ॥ ೨೩ ॥

ಲಕ್ಷ್ಮೀಂ ಶಂಖಂ ಕೌಸ್ತುಭಂ ಚ ಖಡ್ಗಂ ಜಗ್ರಾಹ ಕೇಶವಃ ।
ಜಗ್ರಾಹಾರ್ಕೋ ಹಯಂ ದಿವ್ಯಮುಚ್ಚೈಃಶ್ರವಸಮಾದರಾತ್ ॥ ೨೪ ॥

ಪಾರಿಜಾತಂ ತರುವರಮೈರಾವತಮಿಭೇಶ್ವರಂ ।
ಶಚೀಪತಿಶ್ಚ ಜಗ್ರಾಹ ನಿರ್ಜರೇಶೋ ಮಹಾದರಾತ್ ॥ ೨೫ ॥

ಕಾಲಕೂಟಂ ಶಶಾಂಕಂ ಚ ದೇವತ್ರಾಣಾಯ ಶಂಕರಃ ।
ಸ್ವಕಂಠೇ ಧೃತವಾಂಛಂಭುಸ್ಸ್ವೇಚ್ಛಯಾ ಭಕ್ತವತ್ಸಲಃ ॥ ೨೬ ॥

ದೈತ್ಯಾಸ್ಸುರಾಖ್ಯಾಂ ರಮಣೀಮೀಶ್ವರಾಜನಿಮೋಹಿತಾಃ ।
ಜಗೃಹುಃ ಸಕಲಾ ವ್ಯಾಸ ಸರ್ವೇ ಧನ್ವಂತರಿಂ ಜನಾಃ ॥ ೨೭ ॥

---

೨೩ ಇಂತಹ ಕಾಮಿನಿಯರು ಕೋಟಿಗಟ್ಟಲೆ ಅಮೃತದಿಂದ ಹುಟ್ಟಿದರು. ಆಗಲೇ ಮುಪ್ಪನ್ನೂ ಸಾವನ್ನೂ ಹೋಗಲಾಡಿಸುವ ಅಮೃತವೂ ಹುಟ್ಟಿತು

೨೪ ಲಕ್ಷ್ಮಿ, ಶಂಖ, ಕೌಸ್ತುಭ, ನಂದಕವೆಂಬ ಖಡ್ಗ ಇವುಗಳನ್ನು ಹರಿಯೂ, ಉಚ್ಚೈಶ್ಶ್ರವಸ್ಸೆಂಬ ಉತ್ತಮಾಶ್ವವನ್ನು ಸೂರ್ಯನೂ ಆದರದಿಂದ ತಾವು ಸ್ವೀಕರಿಸಿದರು.

೨೫ ಆಗ ದೇವತೆಗಳ ಒಡೆಯನಾದ ಇಂದ್ರನು ಪ್ರೀತಿಯಿಂದ ಪಾರಿಜಾತ ವೃಕ್ಷವನ್ನೂ ಐರಾವತವೆಂಬ ಗಜರಾಜನನ್ನೂ ಸ್ವೀಕರಿಸಿದನು

೨೬. ಲೋಕದ ಹಿತವನ್ನೇ ಎಸಗುವ ಆ ಶಿವನು ಯಾರೂ ಹೇಳದೆಯೇ ಭಕ್ತರಮೇಲಿನ ಮರುಕದಿಂದ ಅವರನ್ನು ಕಾಪಾಡಲು ಕಾಲಕೂಟವೆಂಬ ಮಹಾವಿಷವನ್ನು ಪಾನಮಾಡಿ ತನ್ನ ಕತ್ತಿನಲ್ಲಿ ಧರಿಸಿದುದದಲ್ಲದೆ ಚಂದ್ರನನ್ನೂ ತಲೆಯಲ್ಲಿ ಧರಿಸಿದನು.

೨೭. ಈಶ್ವರನ ಮಾಯೆಯಿಂದ ಮೋಹಿತರಾದ ದೈತ್ಯರು ಸುರೆಯೆಂಬ ಮದ್ಯವನ್ನು ಸ್ವೀಕರಿಸಿದರು ಎಲೈ ವ್ಯಾಸನೇ, ಉಳಿದ ಜನಗಳು ಧನ್ವಂತರಿಯನ್ನು ಪರಿಗ್ರಹಿಸಿದರು

ಜಗೃಹುರ್ಮುನಯಸ್ಸರ್ವೇ ಕಾಮಧೇನುಂ ಮುನೀಶ್ವರಾಃ ।
ಸಾಮಾನ್ಯತಸ್ತ್ರಿಯಸ್ತಾಶ್ಚ ಸ್ಥಿತಾ ಅಸನ್ವಿಮೋಹಿಕಾಃ ॥ ೨೮ ॥

ಅಮೃತಾರ್ಥಂ ಮಹಾಯುದ್ಧಂ ಸಂಬಭೂವ ಜಯೈಷಿಣಾಂ ।
ಸುರಾಣಾಮಸುರಾಣಾಂ ಚ ಮಿಥಃ ಸಂಕ್ಷುಬ್ಧಚೇತಸಾಂ ॥ ೨೯ ॥

ಹೃತಂ ಸೋಮಂ ಚ ದೈತೇಯೈರ್ಬಲಾದ್ದೇವಾನ್ವಿಜಿತ್ಯ ಚ ।
ಬಲಿಪ್ರಭೃತಿಭಿರ್ವ್ಯಾಸ ಯುಗಾಂತಾಗ್ನ್ಯರ್ಕಸುಪ್ರಭೈಃ ॥ ೩೦ ॥

ದೇವಾಶ್ಶಂಕರಮಾಪನ್ನಾ ವಿಹ್ವಲಾಶ್ಶಿವಮಾಯಯಾ ।
ಸರ್ವೇ ಶಕ್ರಾದಯಸ್ತಾತ ದೈತೇಯೈರರ್ದಿತಾ ಬಲಾತ್ ॥ ೩೧ ॥

ತತಸ್ತದಮೃತಂ ಯತ್ನಾತ್ಸ್ತ್ರೀಸ್ವರೂಪೇಣ ಮಾಯಯಾ ।
ಶಿವಾಜ್ಞಯಾ ರಮೇಶೇನ ದೈತ್ಯೇಭ್ಯಶ್ಚ ಹೃತಂ ಮುನೇ ॥ ೩೨ ॥

---

೨೮. ಮುನಿಗಳೆಲ್ಲರೂ ಕಾಮಧೇನುವನ್ನು ಆರಿಸಿಕೊಂಡರು. ಅಮೃತದಿಂದ ಹುಟ್ಟಿದ ಆ ಅಪ್ಸರೆಯರು ಎಲ್ಲರನ್ನೂ ತಮ್ಮ ಸೊಬಗಿನಿಂದ ಮೋಹಗೊಳಿಸುತ್ತಿದ್ದರು.

೨೯. ಆಗ ಅಮೃತದ ಸಲುವಾಗಿ ದೇವತೆಗಳಿಗೂ ದಾನವರಿಗೂ ಪರಸ್ಪರ ಮನಸ್ಸು ಕಲುಷಿತವಾಗಿ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಆಕಾಂಕ್ಷೆಯಿಂದ ಭಾರಿ ಯುದ್ಧವು ಜರುಗಿತು.

೩೦ ಎಲೈ ವ್ಯಾಸನೇ, ಪ್ರಳಯಕಾಲದ ಸೂರ್ಯನಂತೆ ತೇಜಸ್ವಿಗಳಾದ ಬಲಿ ಮೊದಲಾದ ಆ ದೈತ್ಯರು ತಮ್ಮ ಬಲದಿಂದ ದೇವತೆಗಳನ್ನು ಸೋಲಿಸಿ ಸೋಮವೆಂಬ ಆ ಅಮೃತವನ್ನು ಕಿತ್ತುಕೊಂಡುಬಿಟ್ಟರು.

೩೧. ಆಗ ದೈತ್ಯರಿಂದ ಬಲವಾಗಿ ಪೀಡಿಸಲ್ಪಟ್ಟು ಶಿವಮಾಯೆಯಿಂದ ವ್ಯಾಕುಲಚಿತ್ತರಾದ ಆ ಇಂದ್ರಾದಿ ದೇವತೆಗಳು ಶಿವನನ್ನು ಮರೆಹೊಕ್ಕರು.

೩೨. ಎಲೈ ಮುನಿಯೇ, ಬಳಿಕ ಶಿವನ ಅಪ್ಪಣೆಯಂತೆ ಶ್ರೀಹರಿಯು ನಾರೀರೂಪವನ್ನು ಧರಿಸಿ ಉಪಾಯದಿಂದ ಆ ದೈತ್ಯರ ಬಳಿಯಿದ್ದ ಅಮೃತವನ್ನು ಅವರಿಂದ ಕಸಿದುಕೊಂಡನು.

ಅಪಾಯಯತ್ಸುರಾಂಸ್ತಾಂಶ್ಚ ಮೋಹಿನೀ ಸ್ತ್ರೀಸ್ವರೂಪಧೃಕ್ ।
ಮೋಹಯಿತ್ವಾ ಸುರಾನ್ಸರ್ವಾನ್ ಹರಿರ್ಮಾಯಾವಿನಾಂ ವರಃ ॥ ೩೩ ॥

ಗತ್ವಾ ನಿಕಟಮೇತಸ್ಯಾ ಊಚಿರೇ ದೈತ್ಯಪುಂಗವಾಃ ।
ಪಾಯಯಸ್ವ ಸುಧಾಮೇತಾಂ ಮಾಭೂದ್ಭೇದೋಽತ್ರ ಪಂಕ್ತಿಷು ॥ ೩೪ ॥

ಏತದುಕ್ತ್ವಾ ದದುಸ್ತಸ್ಮೈ ವಿಷ್ಣವೇ ಛಲರೂಪಿಣೇ ।
ತೇ ದೈತ್ಯಾ ದಾನವಾಃ ಸರ್ವೇ ಶಿವಮಾಯಾವಿಮೋಹಿತಾಃ ॥ ೩೫ ॥

ಏತಸ್ಮಿನ್ನಂತರೇ ದೃಷ್ಟ್ವಾ ಸ್ತ್ರಿಯೋ ದಾನವಪುಂಗವಾಃ ।
ಅನಯನ್ನಮೃತೋದ್ಭೂತಾ ಯಥಾಸ್ಥಾನಂ ಯಥಾಸುಖಂ ॥ ೩೬ ॥

---

೩೩. ಮಾಯಾವಿಗಳಲ್ಲಿ ಅಗ್ರಗಣ್ಯನಾದ ಆ ಶ್ರೀಹರಿಯು ಎಲ್ಲರ ಮನಸ್ಸನ್ನೂ ಮೋಹಗೊಳಿಸುವ ಮೋಹಿನೀರೂಪವನ್ನು ತಾಳಿ ಆ ಅಸುರರನ್ನು ಮರುಳುಗೊಳಿಸಿ ದೇವತೆಗಳೆಲ್ಲರಿಗೂ ಅಮೃತವನ್ನು ಹಂಚಿ ಪಾನಮಾಡಿಸಿದನು.

೩೪. ಆ ದೈತ್ಯವೀರರು ಆ ಮೋಹಿನಿಯ ಬಳಿಗೆ ಹೋಗಿ ಎರಡುಸಾಲಾಗಿ ಕುಳಿತಿರುವ ನಮ್ಮಲ್ಲಿ ಭೇದವನ್ನು ಮಾಡಬೇಡ. ನಮಗೆ ಅಮೃತವನ್ನು ಹಂಚಿ ಅದನ್ನು ಪಾನಮಾಡಿಸು ಎಂದರು

೩೫ ಶಿವನ ಮಾಯೆಯಿಂದ ಮಂಕುಕವಿದ ಆ ದೈತ್ಯರೂ ಆ ದಾನವರೂ ಈರೀತಿ ನುಡಿದು ಮಾಯಾವೇಷಧಾರಿಯಾದ ಆ ವಿಷ್ಣುವಿನ ಕೈಗೆ ಅಮೃತವನ್ನು ಕೊಟ್ಟರು.

೩೬ ಈ ನಡುವೆ ಆ ದಾನವವೀರರು ಅಮೃತದಿಂದ ಹುಟ್ಟಿದ ಸ್ತ್ರೀಯರನ್ನು ಕಂಡು ಮೋಹಿತರಾಗಿ ತಮತಮಗೆ ತೋರಿದಕಡೆ ಸುಖಿಸುವ ಆಸೆಯಿಂದ ಅವರನ್ನು ಕರೆದುಕೊಂಡುಹೋದರು.

ತಾಸಾಂ ಪುರಾಣಿ ದಿವ್ಯಾನಿ ಸ್ವರ್ಗಾಚ್ಛತಗುಣಾನ್ಯಪಿ ।
ಘೋರೈರ್ಯಂತ್ರೈಃ ಸುಗುಪ್ತಾನಿ ಮಯಮಾಯಾಕೃತಾನಿ ಚ ॥ ೩೭ ॥

ಸುರಕ್ಷಿತಾನಿ ಸರ್ವಾಣಿ ಕೃತ್ವಾ ಯುದ್ಧಾಯ ನಿರ್ಯಯುಃ ।
ಅಸ್ಪೃಷ್ಟವಕ್ಷಸೋ ದೈತ್ಯಾಃ ಕೃತ್ವಾ ಸಮಯಮೇವ ಹಿ ॥ ೩೮ ॥

ನ ಸ್ಪೃಶಾಮಃ ಸ್ತ್ರಿಯಶ್ಚೇಮಾ ಯದಿ ದೇವೈರ್ನಿನಿರ್ಜಿತಾಃ ।
ಇತ್ಯುಕ್ತ್ವಾ ತೇ ಮಹಾವೀರಾ ದೈತ್ಯಾಸ್ಸರ್ವೇ ಯಯುತ್ಸವಃ ॥ ೩೯ ॥

ಸಿಂಹನಾದಂ ತತಶ್ಚಕ್ರುಃ ಶಂಖಾನ್ ದಧ್ಮುಃ ಪೃಥಕ್ಪೃಥಕ್ ।
ಪೂರಯಂತ ಇವಾಕಾಶಂ ತರ್ಜಯಂತೋ ಬಲಾಹಕಾನ್ ॥ ೪೦ ॥

ಯುದ್ಧಂ ಬಭೂವ ದೇವಾನಾಮಸುರೈಸ್ಸಹ ಭೀಕರಂ ।
ದೇವಾಸುರಾಖ್ಯಮತುಲಂ ಪ್ರಸಿದ್ಧಂ ಭುವನತ್ರಯೇ ॥ ೪೧ ॥

---

೩೭. ಬಳಿಕ ಆ ಕಾಮಿನಿಯರಿಗೆ ವಾಸಮಾಡಲು ಸ್ವರ್ಗಕ್ಕಿಂತಲೂ ನೂರು ಮಡಿಯಷ್ಟು ರಮಣೀಯವಾಗಿಯೂ ಭಾರಿಭಾರಿ ಯಂತ್ರಗಳಿಂದ ಸುರಕ್ಷಿತವಾಗಿಯೂ ಮಯನ ಮಾಯಾಕೌಶಲದಿಂದ ನಿರ್ಮಿಸಲ್ಪಟ್ಟಿದಾಗಿಯೂ ಇರುವ ದಿವ್ಯವಾದ ನಗರಗಳನ್ನು ಬಿಟ್ಟುಕೊಟ್ಟರು.

೩೮-೩೯. ಆನಗರಗಳನ್ನು ಭದ್ರಗೊಳಿಸಿ ನಾವು ದೇವತೆಗಳನ್ನು ಜಯಿಸದೆ ಪರಾಜಿತರೇ ಆದಪಕ್ಷಕ್ಕೆ ಈ ಲಲನೆಯರನ್ನು ಮುಟ್ಟಲಾರೆವು ಎಂದು ಶಪಥವನ್ನು ಮಾಡಿಕೊಂಡು ಆ ಸ್ತ್ರೀಯರನ್ನು ಒಂದುಬಾರಿಯಾದರೂ ಆಲಂಗಿಸದೆ ಯುದ್ಧವನ್ನು ಮಾಡಬೇಕೆಂಬ ಉತ್ಸಾಹದಿಂದ ಆ ದೈತ್ಯವೀರರು ಅಲ್ಲಿಂದ ಹೊರಟರು.

೪೦. ಬಳಿಕ ಒಬ್ಬೊಬ್ಬ ದೈತ್ಯವೀರನೂ ಆಕಾಶವನ್ನೇ ಶಬ್ದದಿಂದ ಪೂರೈಸಿ (ತುಂಬಿ) ಬಿಡುವನೋ, ಮೇಘಗಳನ್ನೇ ಚದುರಿಸಿಬಿಡುವನೋ ಎಂಬಂತೆ ಸಿಂಹನಾದ ಗಳನ್ನು ಮಾಡಿದುದಲ್ಲದೆ ಶಂಖಗಳನ್ನು ಗಟ್ಟಿಯಾಗಿ ಊದಿದರು.

೪೧. ಆಗ ದೇವಾಸುರಯುದ್ಧವೆಂದು ಮೂರುಲೋಕಗಳಲ್ಲಿಯೂ ಪ್ರಖ್ಯಾತ ವಾದ ಭಯಂಕರವಾದ, ಹೋಲಿಕೆಯೇ ಸಿಗದಂತಹ ಯುದ್ಧವು ದೇವತೆಗಳಿಗೂ ದಾನ ವಾದಿಗಳಿಗೂ ಜರುಗಿತು.

ಜಯಂ ಪ್ರಾಪುಸ್ಸುರಾಸ್ಸರ್ವೇ ವಿಷ್ಣುನಾ ಪರಿರಕ್ಷಿತಾಃ ।
ದೈತ್ಯಾಃ ಪಾಲಯಿತಾಸ್ತತ್ರ ಹತಾಃ ಸಾಮರವಿಷ್ಣುನಾ ॥ ೪೨ ॥

ದೈತ್ಯಾಃ ಸಂಮೋಹಿತಾ ದೇವೈರ್ವಿಷ್ಣುನಾ ಚ ಮಹಾತ್ಮನಾ ।
ಹತಾವಶಿಷ್ಟಾಃ ಪಾತಾಲಂ ವಿವಿಶುರ್ವಿವರಾಣಿ ಚ ॥ ೪೩ ॥

ಅನುವವ್ರಾಜ ತಾನ್ವಿಷ್ಣುಶ್ಚಕ್ರಪಾಣಿರ್ಮಹಾಬಲಃ ।
ಪಾತಾಲಂ ಪರಮಂ ಗತ್ವಾ ಸಂಸ್ಥಿತಾನ್ಭೀತಭೀತವತ್ ॥ ೪೪ ॥

ಏತಸ್ಮಿನ್ನಂತರೇ ವಿಷ್ಣುರ್ದದರ್ಶಾಮೃತಸಂಭವಾಃ ।
ಕಾಂತಾಃ ಪೂರ್ಣೇಂದುವದನಾ ದಿವ್ಯಲಾವಣ್ಯಗರ್ವಿತಾಃ ॥ ೪೫ ॥

---

೪೨. ಆಗ ವಿಷ್ಣುವಿನಿಂದ ಸಂರಕ್ಷಿತರಾದ ದೇವತೆಗಳು ಗೆದ್ದರು ವಿಷ್ಣುವಿನಿಂದಲೂ ದೇವತೆಗಳಿಂದಲೂ ಏಟನ್ನು ತಿಂದು ಅನೇಕಮಂದಿ ದೈತ್ಯರು ಮಡಿದರು. ಇತರರು ಓಡಿಹೋದರು

೪೩. ಆಗ ವಿಷ್ಣುವಿನಿಂದಲೂ ದೇವತೆಗಳಿಂದಲೂ ಏಟುಗಳನ್ನು ತಿನ್ನಲಾರದೆ ಅಳಿದುಳಿದ ದೈತ್ಯರು ಗಾಬರಿಯಿಂದ ಪಾತಾಲವನ್ನೂ ಸಿಕ್ಕಿದ ಬಿಲಗಳ್ನೂ ಹೊಕ್ಕು ತಲೆಮರೆಸಿಕೊಂಡರು.

೪೪. ಮಹಾಬಲಶಾಲಿಯಾದ ವಿಷ್ಣುವು ಕೈಯ್ಯಲ್ಲಿ ಚಕ್ರವನ್ನು ಪಿಡಿದು, ಹೆದರಿಹೆದರಿ ಪಾತಾಳದ ಕೊನೆಯನ್ನೂ ಹೊಕ್ಕು ಅವಿತುಕೊಂಡಿರುವ ಆ ದೈತ್ಯರನ್ನು ಅಲ್ಲಿಯವರೆಗೂ ಬಿಡದೆ ಬೆನ್ನಟ್ಟಿಕೊಂಡುಹೋದನು.

೪೫. ಈ ನಡುವೆ ವಿಷ್ಣುವು ಅಮೃತದಿಂದ ಹುಟ್ಟಿದ ಅನುಪಮವಾದ ಲಾವಣ್ಯದಿಂದ ಮೆರೆಯುತ್ತಿರುವ, ಪೂರ್ಣಚಂದ್ರನಂತೆ ಕಂಗೊಳಿಸುವ ಮುಖವುಳ್ಳ ಕಾಂತೆಯರನ್ನು ಅಲ್ಲಿ ಕಂಡನು.

ಸಂಮೋಹಿತಃ ಕಾಮಬಾಣೈರ್ಲೇಭೇ ತತ್ರೈವ ನಿರ್ವೃತಿಂ ।
ತಾಭಿಶ್ಚ ವರನಾರೀಭಿಃ ಕ್ರೀಡಮಾನೋ ಬಭೂವ ಹ ॥ ೪೬ ॥

ತಾಭ್ಯಃ ಪುತ್ರಾನಜನಯದ್ವಿಷ್ಣುರ್ವರಪರಾಕ್ರಮಾನ್ ।
ಮಹೀಂ ಸರ್ವಾಂ ಕಂಪಯತೋ ನಾನಾಯುದ್ಧವಿಶಾರದಾನ್ ॥ ೪೭ ॥

ತತೋ ವೈ ಹರಿಪುತ್ರಾಸ್ತೇ ಮಹಾಬಲಪರಾಕ್ರಮಾಃ ।
ಮಹೋಪದ್ರವಮಾಚೇರುಸ್ಸ್ವರ್ಗೇ ಭುವಿ ಚ ದುಃಖದಂ ॥ ೪೮ ॥

ಲೋಕೋಪದ್ರವಮಾಲಕ್ಷ್ಯ ನಿರ್ಜರಾ ಮುನಯೋಽಥ ವೈ ।
ಚಕ್ರುರ್ನಿವೇದನಂ ತೇಷಾಂ ಬ್ರಹ್ಮಣೇ ಪ್ರಣಿಪತ್ಯ ಚ ॥ ೪೯ ॥

ತಚ್ಛ್ರುತ್ವಾದಾಯ ತಾನ್ಬ್ರಹ್ಮಾ ಯಯೌ ಕೈಲಾಸಪರ್ವತಂ ।
ತತ್ರ ದೃಷ್ಟ್ವಾ ಶಿವಂ ದೇವೈಃ ಪ್ರಣನಾಮ ಪುನಃ ಪುನಃ ॥ ೫೦ ॥

---

೪೬. ಆಗ ಮನ್ಮಥನ ಬಾಣಗಳಿಗೆ ಸಿಲುಕಿ ಮೋಹವರವಶನಾದ ಆತನು ಆ ರಮಣೀರತ್ನಗಳೊಡನೆ ವಿಹರಿಸುತ್ತಾ ಅಲ್ಲಿಯೇ ತೃಪ್ತನಾಗಿ ಇದ್ದುಬಿಟ್ಟನು.

೪೭. ಆತನೂ ಆ ಸ್ತ್ರೀಯರಲ್ಲಿ ಅನೇಕಮಂದಿ ಪುತ್ರರನ್ನು ಪಡೆದನು. ಆ ಪುತ್ರರು ಮಹಾಪರಾಕ್ರಮಶಾಲಿಗಳು ನಾನಾವಿಧವಾದ ಯುದ್ಧಗಳನ್ನು ಚೆನ್ನಾಗಿ ಬಲ್ಲವರು. ಅವರು ತಮ್ಮ ಶೌರ್ಯ ಮೊದಲಾದವುಗಳಿಂದ ಭೂಮಿಯೆಲ್ಲವನ್ನೂ ಸಹ ನಡುಗಿಸುತ್ತಿದ್ದರು.

೪೮. ಬಳಿಕ ಆ ಪರಾಕ್ರಮಿಗಳಾದ ವಿಷ್ಣುಪುತ್ರರು (ಬಲದಿಂದ ಕೊಬ್ಬಿ) ಸ್ವರ್ಗದಲ್ಲಿಯೂ ಭೂಮಿಯಲ್ಲಿಯೂ ಮಹಾಕಿರುಕುಳವನ್ನು ಕೊಡುತ್ತಾಬಂದರು.

೪೯. ಅನಂತರ ಪ್ರಜಾಪೀಡೆಯನ್ನು ಕಂಡು ಮರುಗಿದವರಾಗಿ ದೇವತೆಗಳೂ ಋಷಿಗಳೂ ಬ್ರಹ್ಮನಿಗೆ ನಮಸ್ಕರಿಸಿ ಇದೆಲ್ಲವನ್ನೂ ಬಿನ್ನವಿಸಿಕೊಂಡರು.

೫೦. ಅದನ್ನು ಕೇಳಿ ಬ್ರಹ್ಮನು ಅವರೆಲ್ಲರನ್ನೂ ಕರೆದುಕೊಂಡು ಕೈಲಾಸ ಪರ್ವತಕ್ಕೆ ಹೋಗಿ ಅಲ್ಲಿ ಶಿವನನ್ನು ಕಂಡು ಆತನಿಗೆ ಮತ್ತೆಮತ್ತೆ ಅವರೆಲ್ಲರೊಡನೆ ನಮಸ್ಕರಿಸಿದನು.

ತುಷ್ಟಾವ ವಿವಿಧೈಸ್ತೋತ್ರೈರ್ನತಸ್ಕಂಧಃ ಕೃತಾಂಜಲಿಃ ।
ಜಯ ದೇವ ಮಹಾದೇವ ಸರ್ವಸ್ವಾಮಿನ್ನಿತಿ ಬ್ರುವನ್ ॥ ೫೧ ॥

॥ ಬ್ರಹ್ಮೋವಾಚ ॥

ದೇವದೇವ ಮಹಾದೇವ ಲೋಕಾನ್ರಕ್ಷಾಖಿಲಾನ್ಪ್ರಭೋ ।
ಉಪದ್ರುತಾನ್ವಿಷ್ಣುಪುತ್ರೈಃ ಪಾತಾಲಸ್ಥೈರ್ವಿಕಾರಿಭಿಃ ॥ ೫೨ ॥

ನಾರೀಷ್ವಮೃತಭೂತಾಸು ಸಂಸಕ್ತಾತ್ಮಾ ಹರಿರ್ವಿಭೋ ।
ಪಾತಾಲೇ ತಿಷ್ಠತೀದಾನೀಂ ರಮತೇ ಹಿ ವಿಕಾರವಾನ್ ॥ ೫೩ ॥

॥ ನಂದೀಶ್ವರ ಉವಾಚ ॥

ಇತ್ಥಂ ಬಹುಸ್ತುತಃ ಶಂಭುರ್ಬ್ರಹ್ಮಣಾ ಸರ್ಷಿನಿರ್ಜರೈಃ ।
ಲೋಕಸಂರಕ್ಷಣಾರ್ಥಾಯ ವಿಷ್ಣೋರಾನಯನಾಯ ಚ ॥ ೫೪ ॥

---

೫೧ ಬಳಿಕ ತಲೆಬಗ್ಗಿಸಿ ಕೈಮುಗಿದು ಬಗೆಬಗೆಯಾದ ಸ್ತೋತ್ರಗಳಿಂದ ಎಲೈ ದೇವನೇ, ಮಹಾದೇವನೇ, ಸರ್ವೇಶ್ವರನೇ, ಜಯಶೀಲನಾಗು ಎನ್ನುತ್ತಾ ಸ್ತುತಿಸಿದನು.

೫೨. ಓ ದೇವದೇವ, ಮಹಾದೇವ, ಪ್ರಭೂ, ಸಕಲ ಲೋಕಗಳನ್ನೂ ಕಾಪಾಡು. ಪಾತಾಳಲೋಕದಲ್ಲಿ ಮನ್ಮಥವಿಕಾರಕ್ಕೆ ಸಿಲುಕಿದ ವಿಷ್ಣುಪುತ್ರರಿಂದ ವಿವಿಧವಾದ ಪೀಡೆಗಳಿಗೆ ಗುರಿಪಡಿಸಲ್ಪಟ್ಟ ಎಲ್ಲರನ್ನೂ ಕಾಪಾಡು.

೫೩ ಎಲೈ ಸರ್ವವ್ಯಾಪಿಯೇ, ಅಮೃತದಿಂದ ಹುಟ್ಟಿದ ನಾರಿಯರಲ್ಲಿ ಮನಸ್ಸನಿಟ್ಟುಹೋಗಿ ಇಂದ್ರಿಯ ವಿಕಾರಗಳಿಗೆ ಈಡಾಗಿ ವಿಷ್ಣುವು ಅವರೊಡನೆಯೇ ವಿಹರಿಸುತ್ತಾ ಈಗ ಪಾತಾಳದಲ್ಲಿ ಇದ್ದುಬಿಟ್ಟಿರುವನು.

೫೪. ಎಲೈ ಮುನಿಯೇ, ಈರೀತಿಯಾಗಿ ಲೋಕಸಂರಕ್ಷಣೆಗಾಗಿಯೂ, ವಿಷ್ಣುವನ್ನು ಮತ್ತೆ ಹಿಂತಿರುಗಿ ಕರೆತರುವುದಕ್ಕಾಗಿಯೂ ಬ್ರಹ್ಮನಿಂದಲೂ ಋಷಿಗಳಿಂದಲೂ ದೇವತೆಗಳಿಂದಲೂ ಶಂಕರನು ಪ್ರಾರ್ಥಿಸಲ್ಪಡಲು,

ತತಸ್ಸ ಭಗವಾಂಚ್ಛಂಭುಃ ಕೃಪಾಸಿಂಧುರ್ಮಹೇಶ್ವರಃ ।
ತದುಪದ್ರವಮಾಜ್ಞಾಯ ವೃಷರೂಪೋ ಬಭೂವ ಹ ॥ ೫೫ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ವಿಷ್ಣೂಪದ್ರವವೃಷಾವತಾರವರ್ಣನಂ ನಾಮ
ದ್ವಾವಿಂಶೋಽಧ್ಯಾಯಃ

---

೫೫. ಕರುಣಾಸಾಗರನೂ ಭಗವಂತನೂ ಆದ ಆ ಮಹೇಶ್ವರನು ವಿಷ್ಣುವಿನ ಉಪದ್ರವವನ್ನು ನೆನೆದು ಅದನ್ನು ಪರಿಹರಿಸಲು ವೃಷಭರೂಪವನ್ನು ಧಾರಣೆ ಮಾಡಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ವಿಷ್ಣೂಪದ್ರವ ವೃಷಾವತಾರವರ್ಣನವೆಂಬ ಇಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಶತರುದ್ರಸಂಹಿತಾಯಾಂ

## ತ್ರಯೋವಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ತತೋ ವೃಷಭರೂಪೇಣ ಗರ್ಜಮಾನಃ ಪಿನಾಕಧೃಕ್ ।
ಪ್ರವಿಷ್ಟೋ ವಿವರಂ ತತ್ರ ನಿನಂದನ್ಭೈರವಾನ್ರವಾನ್ ॥ ೧ ॥

ನಿಪೇತುಸ್ತಸ್ಯ ನಿನದೈಃ ಪುರಾಣಿ ನಗರಾಣಿ ಚ ।
ಪ್ರಕಂಪೋ ಹಿ ಬಭೂವಾಥ ಸರ್ವೇಷಾಂ ಪುರವಾಸಿನಾಂ ॥ ೨ ॥

---

## ಇಪ್ಪತ್ತಮೂರನೆಯ ಅಧ್ಯಾಯವು.

೧ ಅನಂತರ ಪರಶಿವನು ವೃಷಭರೂಪವನ್ನು ತಾಳಿ ಬಹು ಭಯಂಕರವಾಗಿ ಗುಟುರೆಹಾಕುತ್ತಾ ಪಾತಾಳಲೋಕವನ್ನು ಹೊಕ್ಕನು.

೨ ಆಗ ವೃಷಭದ ಗುಟುರೆಯ ಅಬ್ಬರದಿಂದ ಊರುಗಳೂ ಪಟ್ಟಣಗಳೂ ಕುಸಿದುಬಿದ್ದುವು. ಆಗ ಅಲ್ಲಿ ವಾಸಮಾಡುತ್ತಿದ್ದವರೆಲ್ಲರಿಗೂ ಗಡಗಡನೆ ನಡುಕ ವುಂಟಾಯಿತು.

ತತೋ ವೃಷೋ ಹರೇಃ ಪುತ್ರಾನ್ಸಂಗ್ರಾಮೋದ್ಯತಕಾರ್ಮುಕಾನ್ ।
ಶಿವಮಾಯಾವಿಮೂಢಾತ್ಮಮಹಾಬಲಪರಾಕ್ರಮಾನ್ ॥ ೩ ॥

ಹರಿಪುತ್ರಾಸ್ತತಸ್ತೇಽಥ ಪ್ರಾಕುಪ್ಯನ್ಮುನಿಸತ್ತಮ ।
ಪ್ರದುದ್ರುವುಃ ಪ್ರಗರ್ಜ್ಯೋಚ್ಚೈರ್ವೀರಾಶ್ಶಂಕರಸನ್ಮುಖಂ ॥ ೪ ॥

ಆಯಾತಾಂಸ್ತಾನ್ಹರೇಃ ಪುತ್ರಾನ್ರುದ್ರೋ ವೃಷಭರೂಪಧೃಕ್ ।
ಪ್ರಾಕುಪ್ಯದ್ವಿಷ್ಣುಪುತ್ರಾಂಶ್ಚ ಖುರೈಶ್ಶೃಂಗೈರ್ವ್ಯದಾರಯತ್ ॥ ೫ ॥

ವಿದಾರಿತಾಂಗಾ ರುದ್ರೇಣ ಸರ್ವೇ ಹರಿಸುತಾಶ್ಚ ತೇ ।
ನಷ್ಟಾ ದ್ರುತಂ ಸಂಬಭೂವುರ್ಗತಪ್ರಾಣಾ ವಿಚೇತಸಃ ॥ ೬ ॥

---

೩. ಅನಂತರ ಮಹಾಬಲಾಢ್ಯರೂ ಸಾಹಸಶೀಲರೂ ಯುದ್ಧಕ್ಕೆ ಸಿದ್ಧರಾಗಿ ಬಿಲ್ಲನ್ನು ಧರಿಸಿ ನಿಂತವರೂ ಆದ, ಶಿವಮಾಯಾಮೋಹಿತರಾದ ಆ ವಿಷ್ಣುಪುತ್ರರನ್ನು ಆ ವೃಷಭವು ಹುಡುಕಿಕೊಂಡು ಬಂದಿತು.

೪. ಎಲೈ ಮುನಿಶ್ರೇಷ್ಠನೇ, ಬಳಿಕ ವೀರರಾದ ಆ ವಿಷ್ಣುಪುತ್ರರು ಬಹು ಕೋಪವನ್ನು ತಾಳಿ ಗಟ್ಟಿಯಾಗಿ ಸಿಂಹನಾದಗಳನ್ನು ಮಾಡುತ್ತಾ ವೃಷಭರೂಪನಾದ ಆ ಶಂಕರನ ಎದುರಿಗೆ ಜೋರಾಗಿ ನುಗ್ಗಿಬಂದರು.

೫. ಹೀಗೆ ನುಗ್ಗಿಬಂದ ಆ ವಿಷ್ಣುಪುತ್ರರನ್ನು ಕಂಡು ವೃಷಭರೂಪನಾದ ಶಿವನು ಕುಪಿತನಾಗಿ ಗೊರಸುಗಳಿಂದಲೂ ಕೋಡುಗಳಿಂದಲೂ ಅವರನ್ನು ಸೀಳು ಸೀಳುಮಾಡಿಬಿಟ್ಟನು.

೬. ಈರೀತಿಯಾಗಿ ಆ ರುದ್ರನಿಂದ ಸಿಗಿದುಹಾಕಲ್ಪಟ್ಟ ಕೈಕಾಲು ಮುಂತಾದ ಅವಯವಗಳೆಲ್ಲವೂ ಜರ್ಝರಿತವಾಗಿ ಆ ವಿಷ್ಣುಪುತ್ರರು ಬಹುಬೇಗನೆ ನಿಶ್ಚೇತನರಾಗಿ ಪ್ರಾಣಗಳನ್ನು ತೊರೆದರು.

ಹತೇಷು ತೇಷು ಪುತ್ರೇಷು ವಿಷ್ಣುರ್ಬಲವತಾಂ ವರಃ ।
ನಿಷ್ಕ್ರಮ್ಯಾಥ ಪ್ರಣವ್ಯೋಚ್ಚೈರ್ಯಯೌ ಶೀಘ್ರಂ ಹರಾಂತಿಕಂ ॥ ೭ ॥

ದೃಷ್ಟ್ವಾ ರುದ್ರಂ ಪ್ರವ್ರಜಂತಂ ಹತವಿಷ್ಣುಸುತಂ ವೃಷಂ ।
ಶರೈಸ್ಸಂತಾಡಯಾಮಾಸ ದಿವ್ಯೈರಸ್ತ್ರೈಶ್ಚ ಕೇಶವಃ . ॥ ೮ ॥

ತತಃ ಕ್ರುದ್ಧೋ ಮಹಾದೇವೋ ವೃಷರೂಪೀ ಮಹಾಬಲಃ ।
ಅಸ್ತ್ರಾಣಿ ತಾನಿ ವಿಷ್ಣೋಶ್ಚ ಜಗ್ರಾಸ ಗಿರಿಗೋಚರಃ ॥ ೯ ॥

ಅಥ ಕೃತ್ವಾ ಮಹಾಕೋಪಂ ವೃಷಾತ್ಮಾ ಸ ಮಹೇಶ್ವರಃ ।
ವಿನನಾದ ಮಹಾಘೋರಂ ಕಂಪಯಂಸ್ತ್ರಿಜಗನ್ಮುನೇ ॥ ೧೦ ॥

ತತ ಉತ್ಪ್ಲುತ್ಯ ತರಸಾ ಖುರೈಶ್ಶೃಂಗೈರ್ವ್ಯದಾರಯತ್ ।
ವಿಷ್ಣುಂ ಕ್ರೋಧಾಕುಲಂ ಮೂಢಮಜಾನಂತಂ ನಿಜಂ ಹರಿಂ ॥ ೧೧ ॥

---

೭ ಹೀಗೆ ತನ್ನ ಮಕ್ಕಳೆಲ್ಲರೂ ಮಡಿದುಹೋಗಲು ಬಲಾಢ್ಯರಲ್ಲಿ ಅಗ್ರಗಣ್ಯನೆನಿಸಿದ ವಿಷ್ಣುವು ಅಲ್ಲಿಂದ ಹೊರಟು ಗಟ್ಟಿಯಾಗಿ ಸಿಂಹನಾದವಮಾಡಿ ಬೇಗನೆ ಶಿವನ ಬಳಿಗೆ ಬಂದನು.

೮ ಬಳಿಕ ತನ್ನ ಮಕ್ಕಳೆಲ್ಲರನ್ನೂ ಕೊಂದುಹಾಕಿ ಅಲ್ಲಿಯೇ ಅಲೆದಾಡುತ್ತಿರುವ ಆ ವೃಷಭವನ್ನು ಕಂಡು ಬಿಲ್ಲಿನಲ್ಲಿ ಬಾಣಗಳನ್ನು ಹೂಡಿ ಹೊಡೆಯುತ್ತಾ ಅವುಗಳಿಂದಲೂ ದಿವ್ಯವಾದ ಮಂತ್ರಾಸ್ತ್ರಗಳಿಂದಲೂ ಅದನ್ನು ಮರ್ದಿಸತೊಡಗಿದನು.

೯. ಆಗ ಮಹಾಬಲಿಷ್ಠವಾದ ಆ ವೃಷಭವು ಬಹುವಾಗಿ ರೇಗಿ ವಿಷ್ಣುವು ಬಿಟ್ಟ ಆ ಅಸ್ತ್ರಗಳೆಲ್ಲವನ್ನೂ ನುಂಗಿಬಿಟ್ಟಿತು.

೧೦ ಎಲೈ ಮುನಿಯೇ, ಅನಂತರ ಆ ರೇಗಿದ ವೃಷಭವು ಮೂರುಲೋಕವೂ ಗಡಗಡನೆ ನಡುಗುವಂತೆ ಬಹು ಭಯಂಕರವಾಗಿ ಗುಟುರೆಹಾಕಿತು

೧೧ ಬಳಿಕ ಜೋರಾಗಿ ಒಂದುಸಲ ನೆಗೆದು ತನ್ನನ್ನು ಅರಿಯದೆ ಮೋಹವಶದಿಂದ ಬಹು ಕೋಪಕ್ಕೆ ಈಡಾಗಿರುವ ಆ ವಿಷ್ಣುವನ್ನು ಗೊರಸುಗಳಿಂದಲೂ ಕೊಂಬುಗಳಿಂದಲೂ ಒದೆಯುತ್ತಾ ತಿವಿಯುತ್ತಾ ಛಿದ್ರಛಿದ್ರಮಾಡಿಬಿಟ್ಟಿತು.

ತತಸ್ಸ ಶಿಥಿಲಾತ್ಮಾ ಹಿ ವ್ಯಥಿತಾಂಗೋ ಬಭೂವ ಹ ।
ತತ್ಪ್ರಹಾರಮುಸಹ್ಯಾಶು ಹರಿರ್ಮಾಯಾವಿಮೋಹಿತಃ ॥ ೧೨ ॥

ಗತಗರ್ವೋ ಹರಿಶ್ಚೈವ ವಿಚೇತಾ ಗತಚೇತನಃ ।
ಜ್ಞಾತವಾನ್ಪರಮೇಶಾನಂ ವಿಹರಂತಂ ವೃಷಾತ್ಮನಾ ॥ ೧೩ ॥

ಅಥ ವಿಜ್ಞಾಯ ಗೌರೀಶಮಾಗತಂ ವೃಷರೂಪತಃ ।
ಪ್ರಾಹ ಗಂಭೀರಯಾ ವಾಚಾ ನತಸ್ಕಂಧಃ ಕೃತಾಂಜಲಿಃ ॥ ೧೪ ॥

॥ ಹರಿರುವಾಚ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ಮಾಯಯಾ ತೇ ಮಹೇಶಾನ ಮೋಹಿತೋಽಹಂ ವಿಮೂಢಧೀಃ ॥ ೧೫ ॥

---

೧೨. ಬಳಿಕ ಮಾಯೆಗೆ ಸಿಲುಕಿದವನಾಗಿ ಮತಿಗೆಟ್ಟ ಆ ವಿಷ್ಣುವು ಆ ವೃಷಭದ ಏಟುಗಳನ್ನು ತಡೆಯಲಾರದೆ ಮೈಕೈಯೆಲ್ಲಾ ತಗ್ಗಿನುಗ್ಗಾಗಿ ಬಹುವಾಗಿ ವ್ಯಥೆಯನ್ನು ಹೊಂದಿದನು.

೧೩. ಆಗ ಕೆಲಹೊತ್ತು ಬಲಗುಂದಿ ಮೈಮರೆತಿದ್ದ ಆ ವಿಷ್ಣುವು ತನ್ನ ಗರ್ವವು ಮುರಿದುಬೀಳಲು ಆ ವೃಷಭರೂಪದಿಂದ ಅಲ್ಲಿ ಸಂಚರಿಸುತ್ತಿರುವವನು ಸಾಕ್ಷಾತ್ಪರಮೇಶ್ವರನೆಂಬುದಾಗಿ ಅರಿತನು.

೧೪. ಹೀಗೆ ಅರಿತನಂತರ ವೃಷಭರೂಪನಾದ ಆ ಗೌರೀಕಾಂತನನ್ನು ಕುರಿತು ತಲೆವಾಗಿ ಕೈಗಳನ್ನು ಮುಗಿದುಕೊಂಡು ಗಂಭೀರವಾದ ವಾಣಿಯಿಂದ ಇಂತು ನುಡಿದನು.

೧೫. ಎಲೈ ದೇವಾದಿದೇವನೇ, ಮಹಾದೇವನೇ, ಕೃಪಾಸಾಗರನೇ, ಪ್ರಭುವಾದ ಮಹೇಶ್ವರನೇ, ನಿನ್ನ ಮಾಯೆಯಿಂದ ಮರುಳುಗೊಳಿಸಲ್ಪಟ್ಟಿದ್ದ ನಾನು ಎಚ್ಚರ ದಪ್ಪಿದ್ದೆನು.

ಕೃತಂ ಯುದ್ಧಂ ತ್ವಯೇಶೇನ ಸ್ವನಾಥೇನ ಮಯಾ ಪ್ರಭೋ ।
ಕೃಪಾಂ ಕೃತ್ವಾ ಮಯಿ ಸ್ವಾಮಿನ್ನೋಽಪರಾಧೋ ಹಿ ಸಹ್ಯತಾಂ ॥ ೧೬ ॥

॥ ನಂದೀಶ್ವರ ಉವಾಚ ॥.

ತಸ್ಯ ತದ್ವಚನಂ ಶ್ರುತ್ವಾ ಹರೇರ್ದೀನತಯಾ ಮುನೇ ।
ಭಗವಾಂಛಂಕರಃ ಪ್ರಾಹ ರಮೇಶಂ ಭಕ್ತವತ್ಸಲಃ ॥ ೧೭ ॥

ಹೇ ವಿಷ್ಣೋ ಮಹಾಬುದ್ಧೇ ಕಥಂ ಮಾಂ ಜ್ಞಾತವಾನ್ನ ಹಿ ।
ಯುದ್ಧಂ ಕೃತಂ ಕುತಸ್ತೇಽದ್ಯ ಜ್ಞಾನಂ ಸರ್ವಂ ಚ ವಿಸ್ಮೃತಂ ॥ ೧೮ ॥

ಆತ್ಮಾನಂ ಕಿಂ ನ ಜಾನಾಸಿ ಮದಧೀನಪರಾಕ್ರಮಂ ।
ತ್ವಯಾ ನಾತ್ರ ರತಿಃ ಕಾರ್ಯಾ ನಿವರ್ತಸ್ವ ಕುಚಾರತಃ ॥ ೧೯ ॥

---

೧೬ ಎಲೈ ಪ್ರಭುವೇ, ನನ್ನ ಸ್ವಾಮಿಯೂ ಸರ್ವೇಶ್ವರನೂ ಆದ ನಿನ್ನೊಡನೆ ನಾನು ಯುದ್ಧವನ್ನು ಮಾಡಿದೆನು. ದಯಮಾಡಿ ಈ ಅಪರಾಧವೊಂದನ್ನು ಕ್ಷಮಿಸು, ಎಂದು ಬೇಡಿಕೊಂಡನು.

೧೭ ಎಲೈ ಮುನಿಯೇ, ಈರೀತಿ ದೀನತೆಯಿಂದ ಹರಿಯು ಮೊರೆಯಿಟ್ಟುದನ್ನು ಕೇಳಿ ಭಕ್ತರಲ್ಲಿ ವಾತ್ಸಲ್ಯವುಳ್ಳ ಆ ಶಂಕರನು ಲಕ್ಷ್ಮೀಕಾಂತನನ್ನು ಕುರಿತು ಇಂತೆಂದನು.

೧೮. ಎಲೈ ಮಹಾಮೇಧಾವಿಯಾದ ವಿಷ್ಣುವೇ, ನೀನು ನನ್ನನ್ನೇಕೆ ಗುರುತಿಸಲಿಲ್ಲ? ನನ್ನೊಡನೆ ಏತಕ್ಕೆ ಯುದ್ಧವನ್ನು ಮಾಡಿದೆ? ನಿನ್ನ ವಿವೇಕವು ಎಲ್ಲವೂ ಮರೆತುಹೋಯಿತೇ?

೧೯. ನಿನ್ನ ಪರಾಕ್ರಮವೇನೂ ನನ್ನಮುಂದೆ ಸಾಗುವುದಿಲ್ಲವೆಂಬುದನ್ನು ನೀನರಿಯೆಯಾ? ನಿನ್ನ ಪರಾಕ್ರಮವೆಲ್ಲವೂ ನನ್ನ ಅಧೀನವೆಂದು ನೀನರಿಯೆಯಾ? ನೀನಿಲ್ಲಿ ವಿಹರಿಸುತ್ತಿರಬೇಡ. ಈ ಕೆಟ್ಟನಡತೆಯನ್ನು ಬಿಟ್ಟುಬಿಡು.

**ಕಾಮಾಧೀನಂ ಕಥಂ ಜ್ಞಾನಂ ಸ್ತ್ರೀಷು ಸಕ್ತೋ ವಿಹಾರಕೃತ್ ।**
**ನೋಚಿತಂ ತವ ದೇವೇಶ ಸ್ಮರಣಂ ವಿಶ್ವತಾರಣಂ ॥ ೨೦ ॥**

**ತಚ್ಛ್ರುತ್ವಾ ಶಂಭುವಚನಂ ವಿಜ್ಞಾನಪ್ರದಮಾದರಾತ್ ।**
**ವ್ರೀಡ್ಯನ್ಸ್ವಮನಸಾ ವಿಷ್ಣುಃ ಪ್ರಾಹ ವಾಚಂ ಮಹೇಶ್ವರಂ ॥ ೨೧ ॥**

**॥ ವಿಷ್ಣುರುವಾಚ ॥**
**ಮಮಾತ್ರ ವಿದ್ಯತೇ ಚಕ್ರಂ ತದ್ಗೃಹೀತ್ವೇತದಾದರಾತ್ ।**
**ಗಮಿಷ್ಯಾಮಿ ಸ್ವಲೋಕಂ ತಂ ತ್ವದಾಜ್ಞಾಪರಿಪಾಲಕಃ ॥ ೨೨ ॥**

**॥ ನಂದೀಶ್ವರ ಉವಾಚ ॥**
**ತದಾಕರ್ಣ್ಯ ಮಹೇಶಾನೋ ವಚನಂ ವೈಷ್ಣವಂ ಹರಃ ।**
**ಪ್ರತ್ಯುವಾಚ ವೃಷಾತ್ಮಾ ಹಿ ವೃಷರಕ್ಷಃ ಪುನರ್ಹರಿಂ ॥ ೨೩ ॥**

**ನ ವಿಲಂಬಃ ಪ್ರಕರ್ತವ್ಯೋ ಗಂತವ್ಯಮಿತ ಆಶು ತೇ ।**
**ಮಚ್ಛಾಸನಾದ್ಧರೇ ಲೋಕೇ ಚಕ್ರಮತ್ರೈವ ತಿಷ್ಠತಾಂ ॥ ೨೪ ॥**

---

೨೦. ಎಲೈ ಹರಿಯೇ, ನಿನ್ನ ಜ್ಞಾನವೆಲ್ಲವೂ ಕಾಮುದಕಡೆಗೇಕೆ ಹರಿಯಿತು? ನೀನು ಸ್ತ್ರೀಯುರಲ್ಲಿ ಆಸಕ್ತನಾಗಿ ವಿಹರಿಸುತ್ತ ಇದ್ದುಬಿಟ್ಟಿರುವೆಯಲ್ಲಾ. ಎಲೈ ದೇವಾಧೀಶನೇ, ನಿನಗಿದು ತರವಲ್ಲ. ನೀನು ನಿನ್ನ ಹಿಂದಿನ ವಿವೇಕವನ್ನು ತಂದು ಕೊಂಡರೆ ಪ್ರಪಂಚಕ್ಕೆ ಕ್ಷೇಮಕರವಾಗುವುದು.

೨೧. ಈರೀತಿ ವಿವೇಕವನ್ನು ಬೋಧಿಸುವ ಶಂಕರನ ಮಾತನ್ನು ಆಲಿಸಿ ವಿಷ್ಣುವು ಮನಸ್ಸಿನಲ್ಲಿ ನಾಚಿಕೆಪಡುತ್ತಾ ಆ ಮಹೇಶ್ವರನನ್ನು ಕುರಿತು ಇಂತೆಂದನು.

೨೨. ನನ್ನ ಚಕ್ರವು ಈ ಪಾತಾಳದಲ್ಲೇ ಇದೆ. ಅದನ್ನು ತೆಗೆದುಕೊಂಡು ನಿನ್ನ ಅಪ್ಪಣೆಯನ್ನು ಶಿರಸಾವಹಿಸಿ ನನ್ನ ಲೋಕಕ್ಕೆ ತೆರಳುವೆನು ಎಂದನು.

೨೩. ಇಂತು ವಿಷ್ಣುವು ನುಡಿದುದನ್ನು ಕೇಳಿ ವೃಭಷರೂಪಿಯಾದ ಶ್ರೀ ಶಂಕರನು ಅವನನ್ನು ಇಂತೆಂದನು.

೨೪. ನೀನಿಲ್ಲಿಂದ ಬೇಗನೆ ಹೊರಡು. ತಡಮಾಡಬೇಡ. ನನ್ನ ಆಪ್ಪಣೆಯಂತೆ ನಿನ್ನ ಚಕ್ರವು ಈ ಪಾತಾಳದಲ್ಲಿಯೇ ಇರಲಿ.

ಸಂತಾನಾದಿತ್ಯಸಂಸ್ಥಾನಾಚ್ಛಿವತ್ವವಚನಾದಪಿ ।
ಅಹಂ ಘೋರತರಂ ತಸ್ಮಾಚ್ಚಕ್ರಮನ್ಯದ್ದದಾಮಿ ತೇ ॥ ೨೫ ॥

॥ ನಂದೀಶ್ವರ ಉವಾಚ ॥

ಏತದುಕ್ತ್ವಾ ಹರೋಽಲೇಖೀದ್ದಿವ್ಯಂ ಕಾಲಾನಲಪ್ರಭಂ ।
ಪರಂ ಚಕ್ರಂ ಪ್ರದೀಪ್ತಂ ಹಿ ಸರ್ವದುಷ್ಟವಿನಾಶನಂ ॥ ೨೬ ॥

ವಿಷ್ಣವೇ ಪ್ರದದೌ ಚಕ್ರಂ ಘೋರಾರ್ಕಾಯುತಸುಪ್ರಭಂ ।
ಸರ್ವಾಮರಮುನೀಂದ್ರಾಣಾಂ ರಕ್ಷಕಾಯ ಮಹಾತ್ಮನೇ ॥ ೨೭ ॥

ಲಬ್ಧ್ವಾ ಸುದರ್ಶನಂ ಚಾನ್ಯಚ್ಚಕ್ರಂ ಪರಮದೀಪ್ತಿಮತ್ ।
ಉವಾಚ ವಿಬುಧಾಂಸ್ತತ್ರ ವಿಷ್ಣುರ್ಬುದ್ಧಿಮತಾಂ ವರಃ ॥ ೨೮ ॥

---

೨೫ ನಿನಗೆ ನಾನು ಸಾಲಾಗಿ ನಿಂತ ಸೂರ್ಯರಂತೆ ತೇಜಸ್ಸುಳ್ಳ, ಕಲ್ಯಾಣ ದಾಯಕವೂ ಆದಂತಹ, ನಿನ್ನ ಈ ಚಕ್ರಕ್ಕಿಂತಲೂ ದಾರುಣವೆನಿಸಿದ ಬೇರೊಂದು ಚಕ್ರವನ್ನು ಕೊಡುವೆನು.

೨೬ ಎಲೈ ಮುನಿಯೇ, ಹೀಗೆ ಹೇಳಿ ಶಿವನು ಪ್ರಳಯಕಾಲದ ಅಗ್ನಿಯಂತೆ ಉರಿಯನ್ನುಗುಳುತ್ತಿರುವ, ಎಲ್ಲ ದುಷ್ಟರನ್ನೂ ನಿಗ್ರಹಿಸುವ ಬೇರೊಂದು ದಿವ್ಯವಾದ ಚಕ್ರವನ್ನು ಗೆರೆಹಾಕಿ ಬರೆದು ಸೃಷ್ಟಿಸಿದನು.

೨೭. ಆ ಚಕ್ರವು ಉರಿಯುತ್ತಿರುವ ಹತ್ತುಸಾವಿರ ಸೂರ್ಯರು ಒಟ್ಟು ಸೇರಿದಾಗ ಹೇಗೋ ಹಾಗೆ ಪ್ರಜ್ವಲಿಸುತ್ತಾ ಇದ್ದಿತು ಇಂತಹ ಚಕ್ರವನ್ನು ಎಲ್ಲ ದೇವತೆಗಳಿಗೂ ಮುನಿಗಳಿಗೂ ಸಂರಕ್ಷಕನೆನಿಸಿದ ಆ ವಿಷ್ಣುವಿಗೆ ಶಿವನಿತ್ತನು.

೨೮. ಮಹಾಕಾಂತಿಯಿಂದ ಉಜ್ವಲವಾಗಿರುವ ಆ ಸುದರ್ಶನವೆಂಬ ಬೇರೊಂದು ಚಕ್ರವನ್ನು ಪಡೆದ ಬಳಿಕ ಕಡುಜಾಣನಾದ ವಿಷ್ಣುವು ದೇವತೆಗಳನ್ನು ಕುರಿತು ಇಂತೆಂದನು

ಸರ್ವದೇವವರಾ ಯೂಯಂ ಮದ್ವಾಕ್ಯಂ ಶೃಣುತಾದರಾತ್ ।
ಕರ್ತವ್ಯಂ ತತ್ತಥಾ ಶೀಘ್ರಂ ತತಶ್ಯಂ ವ್ಹೋ ಭವಿಷ್ಯತಿ ॥ ೨೯ ॥

ದಿವ್ಯಾಂಬರಾಂಗನಾಸ್ಸಂತಿ ಪಾತಾಲೇ ಯೌವನಾನ್ವಿತಾಃ ।
ತಾಭಿಃ ಸಾರ್ಧಂ ಮಹಾಕ್ರೀಡಾಂ ಯಃ ಕರೋತು ಕರೋತು ಸಃ ॥ ೩೦ ॥

ತಚ್ಛ್ರುತ್ವಾ ಕೇಶವಾದ್ವಾಕ್ಯಂ ಶೂರಾಸ್ತ್ರಿದಶಯೋನಯಃ ।
ಪ್ರವೇಷ್ಟುಕಾಮಾಃ ಪಾತಾಲಂ ಬಭೂವುರ್ವಿಷ್ಣುನಾ ಸಹ ॥ ೩೧ ॥

ವಿಚಾರಮಥ ವಿಜ್ಞಾಯ ತಂ ತದಾ ಭಗವಾನ್ಹರಃ ।
ಕ್ರೋಧಾಚ್ಛಾಪಂ ದದೌ ಘೋರಂ ದೇವಯೋನ್ಯಷ್ಟಕಸ್ಯ ಚ ॥ ೩೨ ॥

॥ ಹರ ಉವಾಚ ॥

ವರ್ಜಯಿತ್ವಾ ಮುನಿಂ ಶಾಂತಂ ದಾನವಾನ್ಮಾ ಮದಂಶಜಂ ।
ಇದಂ ಯಃ ಪ್ರವಿಶೇತ್ಸ್ಥಾನಂ ತಸ್ಯ ಸ್ಯಾನ್ನಿಧನಂ ಕ್ಷಣಾತ್ ॥ ೩೩ ॥

---

೨೯. ಎಲೈ ದೇವತೆಗಳಿರಾ, ನೀವು ನನ್ನೀ ಮಾತನ್ನು ವಿಶ್ವಾಸದಿಂದ ಆಲಿಸುವುದಲ್ಲದೆ ಅದರಂತೆಯೇ ಬೇಗನೆ ನಡೆಯಲೂ ಬೇಕು. ಹಾಗೆ ಮಾಡಿದರೆ ನಿಮಗೆ ಸುಖವುಂಟಾಗುವುದು (ಒಳ್ಳೆಯದು.)

೩೦. ಪಾತಾಳಲೋಕದಲ್ಲಿ ಸೊಗಸಾದ ವಸ್ತ್ರಗಳನ್ನು ಧರಿಸಿ ಮೆರೆಯುತ್ತಿರುವ ಯೌವನಯುವತಿಯುರಾದ ಚೆಲುವೆಯರಿರುವರು. ಅವರೊಡನೆ ಕೂಡಿ ಯಾವನು ವಿಹರಿಸಬೇಕೆನ್ನುವನೋ ಅವನು ಹೋಗಿ ಸುಖವಾಗಿ ವಿಹರಿಸುತ್ತಿರಬಹುದು.

೩೧. ಈರೀತಿ ವಿಷ್ಣುವು ಹೇಳಿದ ಮಾತನ್ನು ಕೇಳಿ ಶೂರರಾದ ದೇವತೆಗಳು ಅವನೊಡನೆ ಪಾತಾಳಲೋಕಕ್ಕೆ ಹೋಗಬೇಕೆಂಬುದಾಗಿ ಆಸೆಯುಳ್ಳವರಾದರು.

೩೨. ಈ ಸಂಗತಿಯನ್ನು ತಿಳಿದೊಡನೆಯೇ ಭಗವಂತನಾದ ಶಿವನು ಎಂಟು ಒಳಪಂಗಡಗಳನ್ನೊಳಗೊಂಡ ಆ ದೇವತೆಗಳಿಗೆ ಕಠೋರವಾದ ಶಾಪವನ್ನಿತ್ತನು.

೩೩. ಪ್ರಶಾಂತನಾದ ಮಹರ್ಷಿಯಾಗಲಿ, ನನ್ನಂಶದಿಂದುದ್ಭವಿಸಿದ ದಾನವನಾಗಲೀ ಇವರೀರ್ವರನ್ನು ಹೊರತು ಮತ್ತಾರಾದರೂ ಈ ಪಾತಾಲಲೋಕನನ್ನು ಒಳಹೊಕ್ಕಿದ್ದೇ ಆದರೆ ಒಡನೆಯೇ ಅವರಿಗೆ ಮರಣವು ಸಂಭವಿಸಲಿ.

ಶ್ರುತ್ವಾವಾಸಮಿದಂ ಘೋರಂ ಮನುಷ್ಯೈಹಿತವರ್ಧನಂ ।
ಪ್ರತ್ಯಾಖ್ಯಾತಾಸ್ತು ರುದ್ರೇಣ ದೇವಾಸ್ಸ್ವಗೃಹಮಾಯಯುಃ ॥ ೩೪ ॥

ಏವಂ ಸ್ತ್ರೀಲಃ ಪರೋ ವಿಷ್ಣುಶ್ಶಿವೇನ ಪ್ರತಿಶಾಸಿತಃ ।
ಸ್ವಲೋಕಮಗಮದ್ವ್ಯಾಸ ಸ್ವಾಸ್ಥ್ಯಂ ಪ್ರಾಪ ಜಗಚ್ಚ ತತ್ ॥ ೩೫ ॥

ವೃಷೇಶ್ವರೋಽಪಿ ಭಗವಾಂಛಂಕರೋ ಭಕ್ತವತ್ಸಲಃ ।
ಇತ್ಥಂ ಕೃತ್ವಾ ದೇವಕಾರ್ಯಂ ಜಗಾಮ ಸ್ವಗಿರೀಶ್ವರಂ ॥ ೩೬ ॥

ವೃಷೇಶ್ವರಾವತಾರಸ್ತು ವರ್ಣಿತಶ್ಶಂಕರಸ್ಯ ಚ ।
ವಿಷ್ಣುಮೋಹಹರಶ್ಶರ್ವಸ್ತ್ರೈಲೋಕ್ಯಸುಖಕಾರಕಃ ॥ ೩೭ ॥

ಪವಿತ್ರಮಿದಮಾಖ್ಯಾನಂ ಶತ್ರುಬಾಧಾಹರಂ ಪರಂ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಭುಕ್ತಿಮುಕ್ತಿಪ್ರದಂ ಸತಾಂ ॥ ೩೮ ॥

---

೩೪. ಮನುಜರಿಗೆ ಸುಖಪ್ರದವೆನಿಸಿದ ಈ ದಾರುಣವಾದ ಶಾಪವಾಕ್ಯವನ್ನು ಕೇಳಿದ ಆ ದೇವತೆಗಳೆಲ್ಲರೂ ಈರೀತಿ ಶಿವನಿಂದ ತಿರಸ್ಕರಿಸಲ್ಪಟ್ಟವರಾಗಿ ತಮ್ಮತಮ್ಮ ಮನೆಗಳಿಗೆ ಹಿಂದಿರುಗಿದರು

೩೫ ಈರೀತಿಯಾಗಿ ವಿಶೇಷವಾಗಿ ಸ್ತ್ರೀಲಂಪಟನಾದ ವಿಷ್ಣುವು ಶಿವನಿಂದ ಶಿಕ್ಷಿಸಲ್ಪಟ್ಟವನಾಗಿ ತನ್ನ ಲೋಕಕ್ಕೆ ಹೋದನು ಆಗ ಪ್ರಪಂಚವು ಸ್ವಸ್ಥತೆಯನ್ನು ಹೊಂದಿತು.

೩೬. ವೃಷರೂಪಧಾರಿಯೂ ಭಕ್ತವತ್ಸಲನೂ ಆದ ಶಂಕರನು ಈರೀತಿಯಾಗಿ ದೇವತೆಗಳ ಕಾರ್ಯವನ್ನೆಸಗಿ ತನ್ನ ನಿವಾಸವಾದ ಕೈಲಾಸಪರ್ವತಕ್ಕೆ ತೆರಳಿದನು.

೩೭. ಇಂತು ವಿಷ್ಣುವಿನ ಮೋಹವನ್ನು ಪರಿಹರಿಸಿದುದೂ ಮೂರುಲೋಕಕ್ಕೂ ಸುಖವನ್ನುಂಟುಮಾಡಿದುದೂ ಆದ ಶ್ರೀ ಶಂಕರನ ವೃಷಭಾವತಾರವನ್ನು ವರ್ಣಿಸಿದುದಾಯಿತು

೩೮. ಈ ಆಖ್ಯಾನವು ಪರಮಪಾವನವಾದುದು. ಶತ್ರುಗಳ ಬಾಧೆಯನ್ನು ಪರಿಹರಿಸುವಂತಹುದು. ಇದು ಸ್ವರ್ಗವನ್ನೂ ಯಶಸ್ಸನ್ನೂ ಆಯುಸ್ಸನ್ನೂ ಈಯುವುದು. ಸತ್ಪುರುಷರಿಗೆ ಭೋಗವನ್ನೂ ಮೋಕ್ಷವನ್ನೂ ಕೊಡುವುದು

**ಯ ಇದಂ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವೈ ಸಮಾಹಿತಃ ।**
**ಸ ಭುಕ್ತ್ವಾ ಸಕಲಾನ್ಕಾಮಾನಂತೇ ಮೋಕ್ಷಮವಾಪ್ನುಯಾತ್ ।**
**ತಥಾ ಪಠತಿ ಯೋ ಹೀದಂ ಪಾಠಯೇತ್ಸುಧಿಯೋ ನರಾನ್ ॥ ೩೯ ॥**

**ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಶಿವಾವತಾರಲೀಲಾವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ**

---

೩೯. ಯಾವನು ಈ ಚರಿತವನ್ನು ಭಕ್ತಿಯಿಂದ ಮನವಿಟ್ಟು ಶ್ರವಣಮಾಡಿಸುವನೋ ಮತ್ತು ಯಾವನು ಇದನ್ನು ಓದುವನೋ ಅಥವಾ ಇನ್ನೊಬ್ಬರಿಗೆ ಓದಿ ಹೇಳುವನೋ ಆವನು ಇಲ್ಲಿ ಎಲ್ಲ ಮನೋರಥಗಳನ್ನೂ ಹೊಂದುವುದಲ್ಲದೆ ಕೊನೆಗೆ ಮೋಕ್ಷವನ್ನೂ ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ವೃಷಾವತಾರಲೀಲಾವರ್ಣನವೆಂಬ ಇಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಚತುರ್ವಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಪಿಪ್ಪಲಾದಾಖ್ಯಪರಮಮವತಾರಂ ಮಹೇಶಿತುಃ ।
ಶೃಣು ಪ್ರಾಜ್ಞ ಮಹಾಪ್ರೀತ್ಯಾ ಭಕ್ತಿವರ್ಧನಮುತ್ತಮಂ ॥ ೧ ॥

ಯಃ ಪುರಾ ಗದಿತೋ ವಿಪ್ರೋ ದಧೀಚಿರ್ಮುನಿಸತ್ತಮಃ ।
ಮಹಾಶೈವಸ್ಸ ಪ್ರತಾಪೀ ಚ್ಯಾವನಿರ್ಭೃಗುವಂಶಜಃ ॥ ೨ ॥

### ಇಪ್ಪತ್ತನಾಲ್ಕನೆಯ ಅಧ್ಯಾಯವು.

೧ ನಂದೀಶ್ವರನು ಹೇಳತೊಡಗಿದನು ,—ಎಲೈ ಮಹಾಜ್ಞಾನಿಯೇ, ಕೇಳಿದವರಿಗೆ ಭಕ್ತಿಯನ್ನು ಹೆಚ್ಚಿಸುವಂತಹ ಶ್ರೇಷ್ಠವಾದ ಪಿಪ್ಪಲಾದ ಎಂಬ ಮಹೇಶ್ವರನ ಮತ್ತೊಂದು ಅವತಾರವನ್ನು ಪ್ರೀತಿಯಿಂದ ಆಲಿಸು, ವಿವರಿಸುವೆನು

೨. ಹಿಂದೆ ನಿನಗೆ ದಧೀಚಿಯೆಂಬ ಮುನಿಶ್ರೇಷ್ಠನ ವಿಷಯವನ್ನು ತಿಳಿಸಿರುವೆನಷ್ಟೆ. ಆ ಬ್ರಾಹ್ಮಣಶ್ರೇಷ್ಠನು ಭೃಗುವಂಶೀಯರಲ್ಲಿ ಪ್ರಖ್ಯಾತನಾದ ಚ್ಯವನ ಮಹರ್ಷಿಯ ಮಗನು. ಈತನು ಶಿವನಲ್ಲಿ ವಿಶೇಷವಾಗಿ ಭಕ್ತಿಯುಳ್ಳವನು. ಮಹಾತೇಜಸ್ವಿಯು

ಕ್ಷುವೇಣ ಸಹ ಸಂಗ್ರಾಮೋ ಯೇನ ವಿಷ್ಣುಃ ಪರಾಜಿತಃ ।
ಸನಿರ್ಜರೋಽಥ ಸಂಶಪ್ತೋ ಮಹೇಶ್ವರಸಹಾಯಿನಾ ॥ ೩ ॥

ತಸ್ಯ ಪತ್ನೀ ಮಹಾಭಾಗಾ ಸುವರ್ಚಾ ನಾಮ ನಾಮತಃ ।
ಮಹಾಪತಿವ್ರತಾ ಸಾಧ್ವೀ ಯಯಾ ಶಪ್ತಾ ದಿವೌಕಸಃ ॥ ೪ ॥

ತಸ್ಯಾಂ ತಸ್ಯಾಂ ಮಹಾದೇವೋ ನಾನಾಲೀಲಾವಿಶಾರದಃ ।
ಪ್ರಾದುರ್ಬಭೂವ ತೇಜಸ್ವೀ ಪಿಪ್ಪಲಾದೇತಿ ನಾಮತಃ ॥ ೫ ॥

॥ ಸೂತ ಉವಾಚ ॥

ಇತ್ಯಾಕರ್ಣ್ಯ ಮುನಿಶ್ರೇಷ್ಠೋ ನಂದೀಶ್ವರವಚೋಽದ್ಭುತಂ ।
ಸನತ್ಕುಮಾರಃ ಪ್ರೋವಾಚ ನತಸ್ಕಂಧಃ ಕೃತಾಂಜಲಿಃ ॥ ೬ ॥

---

೩. ಕ್ಷುವನೆಂಬುವವನೊಡನೆ ಯುದ್ಧವು ಸಂಭವಿಸಿದಾಗ ಮಹೇಶ್ವರನ ಸಹಾಯವುಳ್ಳ ಆ ದಧೀಚಿಮುನಿಯು, ಎಲ್ಲ ದೇವತೆಗಳೊಡನೆ ಸೆಣಸಲು ಬಂದ ವಿಷ್ಣುವನ್ನು ಸೋಲಿಸುದುದಲ್ಲದೆ ಅವರೆಲ್ಲರಿಗೂ ಶಾಪವನ್ನೂ ಇತ್ತನು.

೪. ಮಹಾನುಭಾವಳಾದ ಆತನ ಪತ್ನಿಯು ಸುವರ್ಚಸ್ಸೆಂಬ ಹೆಸರಿನಿಂದ ಪ್ರಖ್ಯಾತಳಾಗಿರುವಳು. ಆಕೆಯು ಸತೀಶಿರೋಮಣಿಯು, ಸಾಧುಶೀಲೆಯು, ಆಕೆಯೂ ದೇವತೆಗಳನ್ನು ಶಪಿಸಿಬಿಟ್ಟಳು.

೫. ಆ ದಧೀಚಮುನಿಗೆ ಸುವರ್ಚಸ್ಸೆಂಬ ಆ ಪತ್ನಿಯಲ್ಲಿ ಬಗೆಬಗೆಯಾದ ಲೀಲೆಗಳನ್ನು ತೋರುವುದರಲ್ಲಿ ಕುಶಲನಾದ ಆ ಮಹಾದೇವನು ಮಹಾತೇಜಸ್ಸಿನಿಂದ ಮೆರೆಯುತ್ತಾ ಪಿಪ್ಪಲಾದನೆಂಬ ಹೆಸರಿನಿಂದ ಅವತರಿಸಿದನು ಎಂದನು.

೬. ಸೂತಪುರಾಣಿಕನು ಶೌನಕನ್ನು ಕುರಿತು ಹೇಳಿದನು—ಹೀಗೆ ನಂದಿಕೇಶ್ವರನು ಹೇಳಿದ ಅದ್ಭುತವಾದ ಮಾತನ್ನು ಕೇಳಿ ಮುನಿಶ್ರೇಷ್ಠನಾದ ಸನತ್ಕುಮಾರನು ವಿನಯದಿಂದ ತಲೆಬಾಗಿ ಕೈಗಳನ್ನು ಮುಗಿದುಕೊಂಡು ಇಂತು ನುಡಿದನು.

॥ ಸನತ್ಕುಮಾರ ಉವಾಚ ॥

ನಂದೀಶ್ವರ ಮಹಾಪ್ರಾಜ್ಞ ಸಾಕ್ಷಾದ್ರುದ್ರಸ್ವರೂಪಧೃಕ್ ।
ಧನ್ಯಸ್ತ್ವಂ ಸದ್ಗುರುಸ್ತಾತ ಶ್ರಾವಿತೇಯಂ ಕಥಾದ್ಭುತಾ ॥ ೭ ॥

ಕ್ಷುವೇಣ ಸಹ ಸಂಗ್ರಾಮೋ ಶ್ರುತೋ ವಿಷ್ಣು ಪರಾಜಯಃ ।
ಬ್ರಹ್ಮಣಾ ಮೇ ಪುರಾ ತಾತ ತಚ್ಛಾಪಶ್ಚ ಶಿಲಾದಜ ॥ ೮ ॥

ಅಧುನಾ ಶ್ರೋತುಮಿಚ್ಛಾಮಿ ದೇವಶಾಪಂ ಸುವರ್ಚಯಾ ।
ದತ್ತಂ ಪಶ್ಚಾತ್ಪಿಪ್ಪಲಾದಚರಿತಂ ಮಂಗಲಾಯನಂ ॥ ೯ ॥

॥ ಸೂತ ಉವಾಚ ॥

ಇತಿ ಶ್ರುತ್ವಾಥ ಶೈಲಾದಿರ್ವಿಧಿಪುತ್ರವಚಶ್ಶುಭಂ ।
ಪ್ರತ್ಯುವಾಚ ಪ್ರಸನ್ನಾತ್ಮಾ ಸ್ಮೃತ್ವಾ ಶಿವಪದಾಂಬುಜಂ ॥ ೧೦ ॥

---

೭. ಎಲೈ ನಂದಿಕೇಶ್ವರನೇ, ನೀನು ಮಹಾಪ್ರಾಜ್ಞನು, ಸಾಕ್ಷಾತ್ ಶಿವ ಸ್ವರೂಪನು ಅಪ್ಪಾ, ನೀನೇ ಸರಿಯಾದ ಗುರುವು, ನೀನೇ ಧನ್ಯನು. ಈ ಅದ್ಭುತ ವಾದ ಕಥೆಯನ್ನು ನನಗೆ ಶ್ರವಣಮಾಡಿಸಿದೆ.

೮ ಅಪ್ಪಾ, ಶಿಲಾದ ಸೂನುವೇ, ಕ್ಷುವನೊಡನೆ ಯುದ್ಧವು ನಡೆದಾಗ ವಿಷ್ಣುವು ಸೋತುಹೋದ ಸಂಗತಿಯನ್ನೂ ಆ ದಧೀಚಮುನಿಯು ಶಾಪವಿತ್ತುದನ್ನೂ ಹಿಂದೆ ಬ್ರಹ್ಮನಮುಖದಿಂದಲೇ ಕೇಳಿ ತಿಳಿದಿದ್ದೆನು.

೯ ಈಗ ಆತನ ಮಡದಿಯಾದ ಸುವರ್ಚಸೆಯು ದೇವತೆಗಳಿಗೆ ಶಾಪವನ್ನಿತ್ತ ವೃತ್ತಾಂತವನ್ನು ಕೇಳಬಯಸುವೆನು. ಅನಂತರ ಮಂಗಲಗಳಿಗೆಲ್ಲಾ ಹೇತುವೆನಿಸಿದ ಪಿಪ್ಪಲಾದನ ಚರಿತ್ರೆಯನ್ನು ಕೇಳುವೆನು ಎಂದನು

೧೦. ಸೂತನು ಶೌನಕನನ್ನು ಕುರಿತು ಹೇಳಿದನು :—ಈರೀತಿ ಬ್ರಹ್ಮಮಾನಸ ಪುತ್ರನಾದ ಸನತ್ಕುಮಾರನು ಕೇಳಿದುದನ್ನು ಆಲಿಸಿ ಆ ಶಿಲಾದಪುತ್ರನು ಪ್ರಸನ್ನವಾದ ಮನಸ್ಸಿನಿಂದ ಶಂಕರನ ಪಾದಕಮಲಗಳನ್ನು ನೆನೆದು ಇಂತು ನುಡಿಯತೊಡ ಗಿದನು

॥ ನಂದೀಶ್ವರ ಉವಾಚ ॥

ಏಕದಾ ನಿರ್ಜರಾಸ್ಸರ್ವೇ ವಾಸವಾದ್ಯಾ ಮುನೀಶ್ವರ ।
ವೃತ್ರಾಸುರಸಹಾಯೈಶ್ಚ ದೈತ್ಯೈರಾಸನ್ಪರಾಜಿತಾಃ ॥ ೧೧ ॥

ಸ್ವಾನಿ ಸ್ವಾನಿ ವರಾಸ್ತ್ರಾಣಿ ದಧೀಚಸ್ಯಾಶ್ರಮೇಽಖಿಲಾಃ ।
ನಿಃಕ್ಷಿಪ್ಯ ಸಹಸಾ ಸದ್ಯೋಽಭವನ್ದೇವಾಃ ಪರಾಜಿತಾಃ ॥ ೧೨ ॥

ತದಾ ಸರ್ವೇ ಸುರಾಸ್ಸೇಂದ್ರಾ ವಧ್ಯಮಾನಾಸ್ತಥರ್ಷಯಃ ।
ಬ್ರಹ್ಮಲೋಕಂ ಗತಾಶ್ಶೀಘ್ರಂ ಪ್ರೋಚುಃ ಸ್ವಂ ವ್ಯಸನಂ ಚ ತತ್ ॥ ೧೩ ॥

ತಚ್ಛ್ರುತ್ವಾ ದೇವವಚನಂ ಬ್ರಹ್ಮಾ ಲೋಕಪಿತಾಮಹಃ ।
ಸರ್ವಂ ಶಶಂಸ ತತ್ತ್ವೇನ ತ್ವಷ್ಟುಶ್ಚೈವ ಚಿಕೀರ್ಷಿತಂ ॥ ೧೪ ॥

ಭವದ್ವಧಾರ್ಥಂ ಜನಿತಸ್ತ್ವಷ್ಟ್ರಾಯಂ ತಪಸಾಸುರಃ ।
ವೃತ್ರೋ ನಾಮ ಮಹಾತೇಜಾಃ ಸರ್ವದೈತ್ಯಾಧಿಪೋ ಮಹಾನ್ ॥ ೧೫ ॥

---

೧೧. ಎಲೈ ಮಹರ್ಷಿಯೇ, ಒಂದಾನೊಂದುಸಲ ವೃತ್ರಾಸುರನ ಸಹಾಯದಿಂದ ಗರ್ವಿತರಾದ ದೈತ್ಯರು ಇಂದ್ರಾದಿದೇವತೆಗಳೆಲ್ಲರನ್ನೂ ಸೋಲಿಸಿದರು.

೧೨. ಆಗ ಸೋತುಹೋದ ಆ ದೇವತೆಗಳೆಲ್ಲರೂ ತಮ್ಮ ತಮ್ಮ ಉತ್ತಮವಾದ ಅಸ್ತ್ರಶಸ್ತ್ರಗಳೆಲ್ಲವನ್ನೂ ಈ ದಧೀಚಮುನಿಯ ಆಶ್ರಮದಲ್ಲಿಯೇ ಎಸೆದುಬಿಟ್ಟು ಓಡಿಹೋದರು.

೧೩. ಆಗ ಆ ದೇವತೆಗಳೂ ಋಷಿಗಳೂ ದೈತ್ಯರಿಂದ ಸಿಕ್ಕಿದಕಡೆ ಕೊಲ್ಲಲ್ಪಡುತ್ತಾ ಹೆದರಿಕೆಯಿಂದ ಬೇಗಬೇಗನೆ ಬ್ರಹ್ಮಲೋಕಕ್ಕೆ ಓಡಿಬಂದು ಆ ತಮ್ಮ ವ್ಯಸನವೆಲ್ಲವನ್ನೂ ಆತನಿಗೆ ಬಿನ್ನವಿಸಿದರು.

೧೪. ದೇವತೆಗಳು ನುಡಿದುದನ್ನು ಕೇಳಿ ಲೋಕಗಳಿಗೆಲ್ಲಾ ಪಿತಾಮಹನೆನಿಸಿದ ಆ ಬ್ರಹ್ಮನು, ಕೋಪಗೊಂಡು ತ್ವಷ್ಟೃವೆಂಬುವನು ಮಾಡಬೇಕೆಂದು ಉದ್ದೇಶಿಸಿರುವುದೆಲ್ಲವನ್ನೂ ಯಥಾವತ್ತಾಗಿ ಅವರಿಗೆ ತಿಳಿಸಿದನು.

೧೫. ಆ ತ್ವಷ್ಟೃವೆಂಬುವನು ನಿಮ್ಮೆಲ್ಲರನ್ನೂ ಕೊಲ್ಲುವುದಕ್ಕೋಸ್ಕರವಾಗಿಯೇ ಬಹುತಪಸ್ಸುಮಾಡಿ ಮಹಾತೇಜಸ್ವಿಯೂ ಎಲ್ಲ ದೈತ್ಯರಿಗೂ ಅಧಿಪತಿಯೂ ಆದ ವೃತ್ರಾಸುರನನ್ನು ಮಗನಾಗಿ ಪಡೆದಿರುವನು.

ಅಥ ಪ್ರಯತ್ನಃ ಕ್ರಿಯತಾಂ ಭವೇದಸ್ಯ ವಧೋ ಯಥಾ ।
ತತ್ರೋಪಾಯಂ ಶೃಣು ಪ್ರಾಜ್ಞ ಧರ್ಮಹೇತೋರ್ವದಾಮಿ ತೇ ॥ ೧೬ ॥

ಮಹಾಮುನಿರ್ದಧೀಚಿರ್ಯಸ್ಸ ತಪಸ್ವೀ ಜಿತೇಂದ್ರಿಯಃ ।
ಲೇಭೇ ಶಿವಂ ಸಮಾರಾಧ್ಯ ವಜ್ರಾಸ್ಥಿತ್ವವರಂ ಪುರಾ ॥ ೧೭ ॥

ತಸ್ಯಾಸ್ಥೀನ್ಯೇವ ಯಾಚಧ್ವಂ ಸ ದಾಸ್ಯತಿ ನ ಸಂಶಯಃ ।
ನಿರ್ಮಾಯ ತೈರ್ದಂಡವಜ್ರಂ ವೃತ್ರಂ ಜಹಿ ನ ಸಂಶಯಃ ॥ ೧೮ ॥

॥ ನಂದೀಶ್ವರ ಉವಾಚ ॥

ತಚ್ಛ್ರುತ್ವಾ ಬ್ರಹ್ಮವಚನಂ ಶಕ್ರೋ ಗುರುಸಮನ್ವಿತಃ ।
ಆಗಚ್ಛತ್ತ್ವಾಮರಸ್ಸದ್ಯೋ ದಧೀಚ್ಯಾಶ್ರಮಮುತ್ತಮಂ ॥ ೧೯ ॥

---

೧೬. ಈ ವೃತ್ರಾಸುರನಿಗೆ ಸಾವು ಉಂಟಾಗುವಂತೆ ಈಗ ನೀವೇನಾದರೂ ಪ್ರಯತ್ನವನ್ನು ನಡೆಸಬೇಕು. ಎಲೈ ಇಂದ್ರನೇ, ಧರ್ಮಸಂಸ್ಥಾಪನೆಗೋಸ್ಕರ ನಾನೀಗ ಅದಕ್ಕೆ ಉಪಾಯವನ್ನು ನಿನಗೆ ತಿಳಿಸುವೆನು.

೧೭. ದಧೀಚಿಯೆಂಬ ಮಹಾಮುನಿಯಿರುವನಷ್ಟೆ. ಆತನು ಮಹಾತಪೋನಿರತನು. ಇಂದ್ರಿಯಗಳನ್ನು ಜಯಿಸಿದವನು, ಆತನು ಶಂಕರನನ್ನು ಸೇವೆಗೈದು ತನ್ನ ಮೂಳೆಗಳೆಲ್ಲಾ ವಜ್ರಮಯವಾಗಿರುವಂತೆ ಆತನಿಂದ ಈ ಹಿಂದೆಯೇ ವರವನ್ನು ಪಡೆದಿರುವನು.

೧೮. ನೀವೆಲ್ಲರೂ ಹೋಗಿ ಆತನ ಮೂಳೆಗಳನ್ನು ಯಾಚಿಸಿರಿ. ಆತನು ನಿಸ್ಸಂಶಯವಾಗಿಯೂ ನೀವು ಕೇಳಿದುದನ್ನು ಕೊಟ್ಟೇಕೊಡುವನು. ಎಲೈ ಇಂದ್ರನೇ, ಆ ಮೂಳೆಗಳಿಂದ ದಂಡಾಕಾರವಾದ ವಜ್ರಾಯುಧವನ್ನು ನಿರ್ಮಿಸಿ ವೃತ್ರಾಸುರನನ್ನು ಸಂಹರಿಸು.

೧೯. ಈರೀತಿ ಬ್ರಹ್ಮನು ನುಡಿದುದನ್ನು ಕೇಳಿ ಇಂದ್ರನು ಬೃಹಸ್ಪತ್ಯಾಚಾರ್ಯನೊಡನೆಯೂ ದೇವತೆಗಳೊಡನೆಯೂ ಆ ದಧೀಚಿಮುನಿಯ ಆಶ್ರಮಕ್ಕೆ ಒಡನೆಯೇ ತೆರಳಿದನು.

ದೃಷ್ಟ್ವಾ ತತ್ರ ಮುನಿಂ ಶಕ್ರಃ ಸುವರ್ಚಾನ್ವಿತಮಾದರಾತ್ ।
ನನಾಮ ಸಾಂಜಲಿರ್ನಮ್ರಃ ಸಗುರುಃ ಸಾಮರಶ್ಚ ತಂ ॥ ೨೦ ॥

ತದಭಿಪ್ರಾಯಮಾಜ್ಞಾಯ ಸ ಮುನಿರ್ಬುಧಸತ್ತಮಃ ।
ಸ್ವಪತ್ನೀಂ ಪ್ರೇಷಯಾಮಾಸ ಸುವರ್ಚಾಂ ಸ್ವಾಶ್ರಮಾಂತರಂ ॥ ೨೧ ॥

ತತಸ್ಸದೇವರಾಜಶ್ಚ ಸಾಮರಃ ಸ್ವಾರ್ಥಸಾಧಕಃ ।
ಅರ್ಥಶಾಸ್ತ್ರಪರೋ ಭೂತ್ವಾ ಮುನೀಶಂ ವಾಕ್ಯಮಬ್ರವೀತ್ ॥ ೨೨ ॥

॥ ಶಕ್ರ ಉವಾಚ ॥

ತ್ವಷ್ಟ್ರಾ ವಿಪ್ರಕೃತಾಃ ಸರ್ವೇ ವಯಂ ದೇವಾಸ್ತಥರ್ಷಯಃ ।
ಶರಣ್ಯಂ ತ್ವಾಂ ಮಹಾಶೈವಂ ದಾತಾರಂ ಶರಣಂ ಗತಾಃ ॥ ೨೩ ॥

ಸ್ವಾಸ್ಥೀನಿ ದೇಹಿ ನೋ ವಿಪ್ರ ಮಹಾವಜ್ರಮಯಾನಿ ಹಿ ।
ಅಸ್ಥ್ನಾ ತೇ ಸ್ವಪವಿಂ ಕೃತ್ವಾ ಹನಿಷ್ಯಾಮಿ ಸುರದ್ರುಹಂ ॥ ೨೪ ॥

---

೨೦. ಅಲ್ಲಿ ತನ್ನ ಪತ್ನಿಯಾದ ಸುವರ್ಚಸೆಯೊಡನೆ ಕುಳಿತಿರುವ ದಧೀಚಿ ಮುನಿಯನ್ನು ಕಂಡು ಆ ಅಸುರರೆಲ್ಲರೊಡನೆ ನಮ್ರತೆಯಿಂದ ಮುಕುಲಿತಹಸ್ತನಾಗಿ ಆತನಿಗೆ ನಮಸ್ಕರಿಸಿದನು.

೨೧. ಅತಿ ಕುಶಲಮತಿಯಾದ ಆ ಮಹರ್ಷಿಯು ಅವರು ಬಂದಿರುವುದರ ಉದ್ದೇಶವೇನೆಂಬುದನ್ನು ಅರಿತು ತನ್ನ ಮಡದಿಯಾದ ಸುವರ್ಚೆಯನ್ನು ತನ್ನ ಆಶ್ರಮದೊಳಕ್ಕೆ ಕಳುಹಿಸಿಬಿಟ್ಟನು.

೨೨. ಬಳಿಕ ಆ ಇಂದ್ರನು ತನ್ನ ಸ್ವಾರ್ಥವನ್ನು ಸಾಧಿಸಲು ನೀತಿಶಾಸ್ತ್ರದ ಮಾರ್ಗವನ್ನೇ ಅವಲಂಬಿಸುತ್ತಾ ಆ ಮುನೀಂದ್ರನನ್ನು ಕುರಿತು ಇಂತೆಂದನು.

೨೩. ಈ ಎಲ್ಲ ದೇವತೆಗಳೂ ಋಷಿಗಳೂ ತ್ವಷ್ಟೃವಿನಿಂದ ಪೀಡಿತರಾಗಿದ್ದೇವೆ. ಶಿವಭಕ್ತಾಗ್ರಣಿಯೂ ಶರಣಾಗತಸಂರಕ್ಷನೂ ಪರಮದಾನಿಯೂ ಆದ ನಿನ್ನನ್ನು ನಾವೆಲ್ಲರೂ ಮರೆಹೊಕ್ಕಿದ್ದೇವೆ.

೨೪. ಎಲೈ ಬ್ರಾಹ್ಮಣೋತ್ತಮನೇ, ವಜ್ರದಂತೆ ಬಲಾಢ್ಯವಾದ ನಿನ್ನ ಮೂಳೆಗಳನ್ನು ನಮಗೆ ಕೊಡುವವನಾಗು. ನಿನ್ನ ಮೂಳೆಯಿಂದ ಒಂದು ಆಯುಧವನ್ನು ನಿರ್ಮಾಣಮಾಡಿ ಆ ದೇವಶತ್ರುವಾದ ವೃತ್ರನನ್ನು ಸಂಹರಿಸುವೆನು.

ಇತ್ಯುಕ್ತಸ್ತೇನ ಸ ಮುನಿಃ ಪರೋಪಕರಣೇ ರತಃ ।
ಧ್ಯಾತ್ವಾ ಶಿವಂ ಸ್ವನಾಥಂ ಹಿ ವಿಸಸರ್ಜ ಕಲೇವರಂ　　॥ ೨೫ ॥

ಬ್ರಹ್ಮಲೋಕಂ ಗತಸ್ಸದ್ಯಸ್ಸ ಮುನಿರ್ಧ್ವಸ್ತಬಂಧನಃ ।
ಪುಷ್ಪವೃಷ್ಟಿರಭೂತ್ತತ್ರ ಸರ್ವೇ ವಿಸ್ಮಯಮಾಗತಾಃ　　॥ ೨೬ ॥

ಅಥ ಗಾಂ ಸುರಭಿಂ ಶಕ್ರ ಆಹೂಯಾಶು ಹ್ಯಲೇಹಯತ್ ।
ಅಸ್ತ್ರನಿರ್ಮಿತಯೇ ತ್ವಾಷ್ಟ್ರಂ ನಿದಿದೇಶ ತದಸ್ಥಿಭಿಃ　　॥ ೨೭ ॥

ವಿಶ್ವಕರ್ಮಾ ತದಾಜ್ಞಪ್ತಶ್ಚಕ್ಲೃಪೇಽಸ್ತ್ರಾಣಿ ಕೃತ್ಸ್ನಶಃ ।
ತದಸ್ಥಿಭಿರ್ವಜ್ರಮಯ್ಯೈಸ್ಸುದೃಢೈಶ್ಶಿವವರ್ಚಸಾ　　॥ ೨೮ ॥

೨೫. ಈರೀತಿ ಇಂದ್ರನು ಪ್ರಾರ್ಥಿಸಲು ಪರೋಪಕಾರದಲ್ಲಿಯೇ ನಿರತನಾದ ಆ ಮುನಿಯು ತನ್ನ ಪ್ರಭುವಾದ ಶಿವನನ್ನು ನೆನೆಯುತ್ತಾ ತನ್ನ ದೇಹವನ್ನು ತೊರೆದುಬಿಟ್ಟನು

೨೬. ಆಕ್ಷಣವೇ ಆ ಮಹರ್ಷಿಯು ತನ್ನ ಸಂಸಾರಪಾಶಗಳನ್ನೆಲ್ಲಾ ಹರಿದುಕೊಂಡು ಬ್ರಹ್ಮಲೋಕಕ್ಕೆ ಹೊರಟುಹೋದನು. ಆಗ ಅಲ್ಲಿ ಹೂವಿನಮಳೆ ಸುರಿಯಿತು ಎಲ್ಲರೂ ಆಶ್ಚರ್ಯಚಕಿತರಾದರು

೨೭. ಅನಂತರ ಇಂದ್ರನು ಕಾಮಧೇನುವನ್ನು ಕರೆದು ಆ ಮುನಿಯ ಮೂಳೆಗಳೆಲ್ಲವನ್ನೂ ಬೇಗನೆ ನಾಲಗೆಯಿಂದ ನೆಕ್ಕಿಸಿಬಿಟ್ಟನು. ಬಳಿಕ ಶುದ್ಧವಾದ ಆ ಮೂಳೆಗಳಿಂದ ಆಯುಧಗಳನ್ನು ನಿರ್ಮಿಸುವಂತೆ ತ್ವಷ್ಟೃಪುತ್ರನಾದ ವಿಶ್ವಕರ್ಮನಿಗೆ ಅಪ್ಪಣೆಮಾಡಿದನು.

೨೮ ಆರೀತಿ ಅಪ್ಪಣೆಪಡೆದ ಆ ವಿಶ್ವಕರ್ಮನು ಶಿವತೇಜಸ್ಸಿನಿಂದ ಮತ್ತಷ್ಟು ಬಲಾಢ್ಯವಾಗಿರುವ ವಜ್ರಮಯವಾದ ಆ ಅಸ್ಥಿಗಳಿಂದ ಎಲ್ಲಾ ಬಗೆಯ ಆಯುಧಗಳನ್ನು ನಿರ್ಮಿಸಿದನು.

ತಸ್ಯ ವಂಶೋದ್ಭವಂ ವಜ್ರಂ ಶರೋ ಬ್ರಹ್ಮಶಿರಸ್ತಥಾ ।
ಅನ್ಯಾಸ್ಥಿಭಿರ್ಬಹೂನಿ ಸ್ವಪರಾಣ್ಯಸ್ತ್ರಾಣಿ ನಿರ್ಮಮೇ ॥ ೨೯ ॥

ತಮಿಂದ್ರೋ ವಜ್ರಮುದ್ಯಮ್ಯ ವರ್ಧಿತಃ ಶಿವವರ್ಚಸಾ ।
ವೃತ್ರಮಭ್ಯದ್ರವತ್ಕ್ರುದ್ಧೋ ಮುನೇ ರುದ್ರ ಇವಾಂತಕಂ ॥ ೩೦ ॥

ತತಃ ಶಕ್ರಸ್ಸುಸನ್ನದ್ಧಸ್ತೇನ ವಜ್ರೇಣ ಸ ದ್ರುತಂ ।
ಉಚ್ಚಕರ್ತ ಶಿರೋ ವಾರ್ತ್ರಂ ಗಿರಿಶೃಂಗಮಿವೋಜಸಾ ॥ ೩೧ ॥

ತದಾ ಸಮುತ್ಸವಸ್ತತ್ರ ಬಭೂವ ತ್ರಿದಿವೌಕಸಾಂ ।
ತುಷ್ಟುವುರ್ನಿರ್ಜರಾಶ್ಶಕ್ರಂ ಪೇತುಃ ಕುಸುಮವೃಷ್ಟಯಃ ॥ ೩೨ ॥

ಇತಿ ತೇ ಕಥಿತಂ ತಾತ ಪ್ರಸಂಗಾಚ್ಚರಿತಂ ತ್ವಿದಂ ।
ಪಿಪ್ಪಲಾದಾವತಾರಂ ಮೇ ಶೃಣು ಶಂಭೋರ್ಮಹಾದರಾತ್ ॥ ೩೩ ॥

---

೨೯. ಆಗ ಆ ಮುನಿಯ ಬೆನ್ನೆಲುಬಿನಿಂದ ವಜ್ರಾಯುಧವೂ ಬ್ರಹ್ಮಶಿರಸ್ಸೆಂಬ ಬಾಣವೂ ಉಂಟಾದುವು. ಉಳಿದ ಇತರ ಎಲುಬುಗಳಿಂದ ತನಗೆ ಬೇಕಾದ ಇನ್ನೂ ಕೆಲವು ಅಸ್ತ್ರಗಳನ್ನೂ ಇತರರ ಅಸ್ತ್ರಗಳನ್ನೂ ನಿರ್ಮಿಸಲಾಯಿತು.

೩೦. ಬಳಿಕ ಶಿವನ ತೇಜಸ್ಸಿನಿಂದ ಹೆಚ್ಚಿದ ಬಲವುಳ್ಳ ಆ ಇಂದ್ರನು ವಜ್ರಾಯುಧವನ್ನು ಹಿಡಿದುಕೊಂಡು, ರುದ್ರನು ಮೃತ್ಯುವನ್ನು ಬೆನ್ನಟ್ಟುವಂತೆ ಕೋಪದಿಂದ ವೃತ್ರನನ್ನು ಬೆನ್ನಟ್ಟಿಹೋದನು.

೩೧. ಅನಂತರ ವಜ್ರಾಯುಧದಿಂದ ಪರ್ವತಗಳ ಕೋಡುಗಲ್ಲುಗಳನ್ನುರುಳಿಸುವಂತೆ ಬೇಗನೆ ಆ ವೃತ್ರಾಸುರನ ತಲೆಯನ್ನು ಕತ್ತರಿಸಿ ಕೆಡಹಿಬಿಟ್ಟನು

೩೨. ಅಪ್ಪಾ ಮುನಿಯೇ, ಆಗ ದೇವತೆಗಳಿಗೆಲ್ಲಾ ಉತ್ಸವವಾಗಿಬಿಟ್ಟಿತು. ಅವರೆಲ್ಲರೂ ಇಂದ್ರನನ್ನು ಸ್ತೋತ್ರಮಾಡಿದರು. ಮೇಲಿನಿಂದ ಹೂವಿನಮಳೆ ಸುರಿದುವು.

೩೩. ಅಪ್ಪಾ, ನಿನಗೆ ಈರೀತಿ ಪ್ರಸಂಗವಶದಿಂದ ಈ ಚರಿತೆಯನ್ನು ತಿಳಿಸಿದೆನು. ಈಗ ಶಂಕರನು ಪಿಪ್ಪಲಾದಾವತಾರವನ್ನು ಮಾಡಿದ ವೃತ್ತಾಂತವನ್ನು ಹೇಳುವೆನು ಆದರದಿಂದ ಕೇಳು

ಸವರ್ಚಾ ಸಾ ಮುನ್ಯೇಃ ಪತ್ನೀ ದಧೀಚಸ್ಯ ಮಹಾತ್ಮನಃ ।
ಯಯೌ ಸ್ವಮಾಶ್ರಮಾಭ್ಯಂತಸ್ತದಾಜ್ಞಪ್ತಾ ಪತಿವ್ರತಾ ॥ ೩೪ ॥

ಆಗತ್ಯ ತತ್ರ ಸಾ ದೃಷ್ಟ್ವಾ ನ ಪತಿಂ ಸ್ವಂ ತಪಸ್ವಿನೀ ।
ಗೃಹಕಾರ್ಯಂ ಚ ಸಾ ಕೃತ್ವಾಖಿಲಂ ಪತಿನಿದೇಶತಃ ॥ ೩೫ ॥

ಆಜಗಾಮ ಪುನಸ್ತತ್ರ ಪಶ್ಯಂತೀ ಬಹ್ವಶೋಭನಂ ।
ದೇವಾಂಶ್ಚ ತಾನ್ಮುನಿಶ್ರೇಷ್ಠ ಸುವರ್ಚಾ ವಿಸ್ಮಿತಾಭವತ್ ॥ ೩೬ ॥

ಜ್ಞಾತ್ವಾ ಚ ತತ್ಸರ್ವಮಿದಂ ಸುರಾಣಾಂ
ಕೃತ್ಯಂ ತದಾನೀಂ ಚ ಚುಕೋಪ ಸಾಧ್ವೀ ।
ದದೌ ತದಾ ಶಾಪಮತೀವ ರುಷ್ಟಾ
ತೇಷಾಂ ಸುವರ್ಚಾ ಋಷಿವರ್ಯಭಾರ್ಯಾ ॥ ೩೭ ॥

೩೪ ಮಹಾನುಭಾವನಾದ ದಧೀಚಮುನಿಯ ಪತ್ನಿಯಾದ ಪತಿವ್ರತೆಯಾದ ಸುವರ್ಚೆಯು ಆತನ ಅಪ್ಪಣೆಯಂತೆ ತನ್ನ ಆಶ್ರಮದ ಒಳಕ್ಕೆ ಹೊರಟುಹೋದಳಷ್ಟೆ.

೩೫. ಅನಂತರ ಈಚೆಗೆ ಬಂದು ತನ್ನ ಪತಿಯನ್ನು ಕಾಣದೆ ಪಾಪ ಆ ಬಡಹೆಂಗಸು ಪುನಃ ತನಗೆ ಪತಿಯು ಒಪ್ಪಿಸಿದ್ದ ಪ್ರತಿನಿತ್ಯದ ಕೆಲಸಗಳೆಲ್ಲವನ್ನೂ ಮುಗಿಸಿಕೊಂಡುಬರಲು ಒಳಗೆಹೋದಳು.

೩೬ ಎಲೈ ಮುನೀಂದ್ರನೇ, ಬಳಿಕ ಸುವರ್ಚೆಯು ಅದೆಲ್ಲವನ್ನೂ ಮುಗಿಸಿಕೊಂಡು ಮತ್ತೆ ಅಲ್ಲಿಗೆ ಬಂದಳು ಅಲ್ಲೆಲ್ಲಾ ಅಶುಭಕರವಾದ ಅತ್ಯಮಂಗಳದೃಶ್ಯಗಳನ್ನು ನೋಡಿ ಅಲ್ಲಿ ದೇವತೆಗಳು ಮಾತ್ರ ಇದ್ದುದನ್ನೂ ಕಂಡು ಆಶ್ಚರ್ಯಚಕಿತಳಾದಳು.

೩೭. ಆಗ ಪತಿಪ್ರಾಣೆಯಾದ ದಧೀಚಪತ್ನಿಯು ಇದೆಲ್ಲ ದೇವತೆಗಳ ಕೆಲಸವೆಂದು ತಿಳಿದು ಮಹಾಕೋಪವನ್ನು ತಾಳಿ ಅವರಿಗೆ ಶಾಪವನ್ನಿತ್ತಳು

॥ ಸುವರ್ಚೋವಾಚ ॥

ಅಹೋ ಸುರಾ ದುಷ್ಟತರಾಶ್ಚ ಸರ್ವೇ
ಸ್ವಕಾರ್ಯದಕ್ಷಾ ಹ್ಯಬುಧಾಶ್ಚ ಲುಬ್ಧಾಃ ।
ತಸ್ಮಾಚ್ಚ ಸರ್ವೇ ಪಶವೋ ಭವಂತು
ಸೇಂದ್ರಾಶ್ಚ ಮೇಽದ್ಯ ಪ್ರಭೃತೀತ್ಯುವಾಚ ॥ ೩೮ ॥

ಏವಂ ಶಾಪಂ ದದೌ ತೇಷಾಂ ಸುರಾಣಾಂ ಸಾ ತಪಸ್ವಿನೀ ।
ಸಶಕ್ರಾಣಾಂ ಚ ಸರ್ವೇಷಾಂ ಸುವರ್ಚಾ ಮುನಿಕಾಮಿನೀ ॥ ೩೯ ॥

ಅನುಗಂತುಂ ಪತೇರ್ಲೋಕಮುತ್ಥೈಚ್ಛತ್ಸಾ ಪತಿವ್ರತಾ ।
ಚಿತಾಂ ಚಕ್ರೇ ಸಮೇಧೋಭಿಃ ಸುಪವಿತ್ರೈರ್ಮನಸ್ವಿನೀ ॥ ೪೦ ॥

ತತೋ ನಭೋಗಿರಾ ಪ್ರಾಹ ಸುವರ್ಚಾಂ ತಾಂ ಮುನಿಪ್ರಿಯಾಮ್ ।
ಆಶ್ವಾಸಯಂತೀ ಗಿರಿಶಪ್ರೇರಿತಾ ಸುಖದಾಯಿನೀ ॥ ೪೧ ॥

---

೩೮. ಎಲೈ ದೇವತೆಗಳಿರಾ, ನೀವೆಲ್ಲರೂ ಮಹಾದುಷ್ಟರು, ಸ್ವಾರ್ಥಪರರು, ವಿವೇಕಹೀನರು, ಅತಿ ಕೃಪಣರು. ಆದುದರಿಂದ ಇಂದಿನಿಂದ ಹಿಡಿದು ಇಂದ್ರನೇ ಮೊದಲಾಗಿ ನೀವೆಲ್ಲರೂ ಪಶುಗಳಾಗಿರಿ.

೩೯. ಈರೀತಿಯಾಗಿ ದುಃಖದಿಂದ ದಧೀಚಮುನಿಯ ಪತ್ನಿಯಾದ ಸುವರ್ಚೆಯು ಇಂದ್ರಾದಿದೇವತೆಗಳಿಗೂ ಎಲ್ಲರಿಗೂ ಶಾಪವನ್ನು ಕೊಟ್ಟಳು.

೪೦. ಅನಂತರ ಆ ಪತಿವ್ರತೆಯು ತನ್ನ ಪತಿಯಿರುವ ಲೋಕವನ್ನು ಸೇರ ಬೇಕೆಂದು ಮನಸ್ಸನ್ನು ದೃಢಪಡಿಸಿ ಪವಿತ್ರವಾದ ಕಾಷ್ಠಗಳಿಂದ ಚಿತೆಯನ್ನು ಒಡ್ಡಿದಳು.

೪೧. ಆಗ ಮುನಿಪತ್ನಿಯಾದ ಸುವರ್ಚೆಯನ್ನು ಸಮಾಧಾನಮಾಡಲು ಶಿವನ ಪ್ರೇರಣೆಯಿಂದ ಸುಖಕರವಾದ ಅಶರೀರವಾಣಿಯು ಈರೀತಿ ಕೇಳಿಸಿತು.

॥ ಆಕಾಶವಾಣ್ಯುವಾಚ ॥

ಸಾಹಸಂ ನ ಕುರು ಪ್ರಾಜ್ಞೇ ಶೃಣು ಮೇ ಪರಮಂ ವಚಃ ।
ಮುನಿತೇಜಸ್ತ್ವದುದರೇ ತದುತ್ಪಾದಯ ಯತ್ನತಃ ॥ ೪೨ ॥

ತತಃ ಸ್ವಾಭೀಷ್ಟಚರಣಂ ದೇವಿ ಕರ್ತುಂ ತ್ವಮರ್ಹಸಿ ।
ಸಗರ್ಭಾ ನ ದಹೇದ್ಗಾತ್ರಮಿತಿ ಬ್ರಹ್ಮನಿದೇಶನಂ ॥ ೪೩ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಸಾ ನಭೋವಾಣೀ ವಿರರಾಮ ಮುನೀಶ್ವರ ।
ತಾಂ ಶ್ರುತ್ವಾ ಸಾ ಮುನೇಃ ಪತ್ನೀ ವಿಸ್ಮಿತಾಭೂತ್ಕ್ಷಣಂ ಚ ಸಾ ॥ ೪೪ ॥

ಸುವರ್ಚಾ ಸಾ ಮಹಾಸಾಧ್ವೀ ಪತಿಲೋಕಮಭೀಪ್ಸತೀ ।
ಉಪವಿಶ್ಯಾಶ್ಮನಾ ಭೂಯಃ ಸೋದರಂ ವಿದದಾರ ಹ ॥ ೪೫ ॥

---

೪೨. ಎಲೌ ಪ್ರಾಜ್ಞಳೇ, ನಿನ್ನ ಈ ಸಾಹಸಕಾರ್ಯವನ್ನು ನಿಲ್ಲಿಸು ನನ್ನ ಉತ್ತಮವಾದ ಈ ಮಾತನ್ನು ಕೇಳು. ನಿನ್ನ ಬಸುರಿನಲ್ಲಿ ದಧೀಚಮುನಿಯ ತೇಜಸ್ಸು ಬೆಳೆಯುತ್ತಿರುವುದು. ಅದು ಸಂಪೂರ್ಣವಾಗಿ ಬೆಳೆದು ಜನನವಾಗುವಂತೆ ಪ್ರಯತ್ನಿಸು

೪೩. ಎಲೆ ದೇವಿ, ಬಳಿಕ ನಿನ್ನಿಷ್ಟಬಂದಂತೆ ಮಾಡು. ಗರ್ಭಿಣಿಯಾದವಳು ತನ್ನ ಶರೀರವನ್ನು ಬೆಂಕಿಯ ಪಾಲುಮಾಡಬಾರದೆಂಬುದಾಗಿ ಬ್ರಹ್ಮನ ಕಟ್ಟಾಜ್ಞೆ ಯಿರುವುದು ಎಂದಿತು.

೪೪. ಎಲೈ ಮುನೀಂದ್ರನೇ, ಹೀಗೆ ಹೇಳಿ ಅಶರೀರವಾಣಿಯು ನಿಂತು ಹೋಯಿತು ಅದನ್ನು ಕೇಳಿ ಆ ಮುನಿಪತ್ನಿಯು ಕ್ಷಣಕಾಲ ಆಶ್ಚರ್ಯದಿಂದ ಚಕಿತ ಳಾಗಿದ್ದಳು.

೪೫. ಬಳಿಕ ಮಹಾಪತಿವ್ರತೆಯಾದ ಆ ಸುವರ್ಚೆಯು ತನ್ನ ಪತಿಯ ಲೋಕ ವನ್ನು ಹೋಗಿ ಸೇರಲೇಬೇಕೆಂಬ ಅಭಿಲಾಷೆಯಿಂದ ಅಲ್ಲಿದ್ದ ಒಂದು ಕಲ್ಲನ್ನು ತೆಗೆದು ಕೊಂಡು ತನ್ನ ಹೊಟ್ಟೆಯನ್ನು ಮೇಲೆಮೇಲೆ ಹೊಡೆದು ಸೀಳಿಬಿಟ್ಟಳು.

ನಿರ್ಗತೋ ಜಠರಾತ್ತಸ್ಯಾ ಗರ್ಭೋ ಮುನಿವರಸ್ಯ ಸಃ ।
ಮಹಾದಿವ್ಯತನುರ್ದೀಪ್ತೋ ಭಾಸಯಂಶ್ಚ ದಿಶೋ ದಶ ॥ ೪೬ ॥

ಸಾಕ್ಷಾದ್ರುದ್ರಾವತಾರೋಽಸೌ ದಧೀಚವರತೇಜಸಃ ।
ಪ್ರಾದುರ್ಭೂತಸ್ಸ್ವಯಂ ತಾತ ಸ್ವಲೀಲಾಕರಣೇ ಕ್ಷಮಃ ॥ ೪೭ ॥

ತಂ ದೃಷ್ಟ್ವಾ ಸ್ವಸುತಂ ದಿವ್ಯಸ್ವರೂಪಂ ಮುನಿಕಾಮಿನೀ ।
ಸುವರ್ಚಾ ಜ್ಞಾಯ ಮನಸಾ ಸಾಕ್ಷಾದ್ರುದ್ರಾವತಾರಕಂ ॥ ೪೮ ॥

ಪ್ರಹೃಷ್ಟಾಭೂನ್ಮಹಾಸಾಧ್ವೀ ಪ್ರಣಮ್ಯಾಶು ನುನಾವ ಸಾ ।
ಸ್ವಹೃದಿ ಸ್ಥಾಪಯಾಮಾಸ ತತ್ಸ್ವರೂಪಂ ಮುನೀಶ್ವರ ॥ ೪೯ ॥

ಸುವರ್ಚಾ ತನಯಂ ತಂ ಚ ಪ್ರಹಸ್ಯ ವಿಮಲೇಕ್ಷಣಾ ।
ಜನನೀ ಪ್ರಾಹ ಸುಪ್ರೀತ್ಯಾ ಪತಿಲೋಕಮಭೀಪ್ಸತೀ ॥ ೫೦ ॥

---

೪೬. ಆಕ್ಷಣವೇ ಗರ್ಭರೂಪವಾಗಿದ್ದ ದಧೀಚಮುನಿಯ ತೇಜಸ್ಸು ಶಿಶು ರೂಪವಾಗಿ ಆಕೆಯ ಒನುರಿನಿಂದ ಈಚೆಗೆ ಬಂದಿತು. ಆ ಶಿಶುವು ತನ್ನ ಅಂದವಾದ ಮೈಯಿಂದ ಬೆಳಗುತ್ತಾ ಹತ್ತುದಿಕ್ಕುಗಳನ್ನೂ ಬೆಳಗುತ್ತಲಿದ್ದಿತು.

೪೭. ಅಪ್ಪಾ, ಆ ಶಿಶುವು ಸಾಕ್ಷಾತ್ ರುದ್ರನ ಅವತಾರವೆಂದು ತಿಳಿ. ತನ್ನ ಲೀಲೆಯಲ್ಲಿ ತೊಡಗಿರುವ ಪ್ರಭುವು ತಾನಾಗಿಯೇ ದಧೀಚಮುನಿಯ ಉತ್ತಮವಾದ ತೇಜಸ್ಸಿನಿಂದ ಆವಿರ್ಭವಿಸಿದನು.

೪೮ ಆಗ ದಿವ್ಯವಾದ ಆಕೃತಿಯಿಂದ ಒಪ್ಪುತ್ತಿರುವ ತನ್ನ ಮಗುವನ್ನು ಕಂಡು ಮಹಾಪತಿವ್ರತೆಯಾದ ಮುನಿಪತ್ನಿಯು, ಈತನು ಸಾಕ್ಷಾತ್ ಶಿವನ ಅವತಾರ ವೆಂದು ಅರಿತು ಮಹಾಸಂತೋಷವನ್ನು ತಾಳಿದಳು. ಅನಂತರ ಆಕೆಯು ಆ ಶಿಶುವಿಗೆ ನಮಸ್ಕರಿಸಿ ಸ್ತೋತ್ರಮಾಡಿದಳು.

೪೯. ಎಲೈ ಮುನೀಂದ್ರನೇ, ಆ ಕುಮಾರನ ರೂಪವನ್ನೇ ತನ್ನ ಹೃದಯದಲ್ಲಿ ಧಾರಣೆಮಾಡಿದಳು.

೫೦. ಆಗ ಪತಿಪ್ರಾಣೆಯಾದ ಸುವರ್ಚೆಯು, ಪತಿಲೋಕವನ್ನು ಸೇರ ಬೇಕೆಂಬ ತವಕದಿಂದ ನಸುನಗುತ್ತಾ ತಿಳಿಯಾದ ಕಂಗಳಿಂದ ಆ ಕುಮಾರನನ್ನು ನೋಡಿ ಪ್ರೀತಿಯಿಂದ ಇಂತೆಂದಳು.

॥ ಸುವರ್ಚೋವಾಚ ॥

ಹೇ ತಾತ ಪರಮೇಶಾನ ಚಿರಂ ತಿಷ್ಠಾಸ್ಯ ಸನ್ನಿಧೌ ।
ಅಶ್ವತ್ಥಸ್ಯ ಮಹಾಭಾಗ ಸರ್ವೇಷಾಂ ಸುಖದೋ ಭವೇಃ ॥ ೫೧ ॥

ಮಾಮಾಜ್ಞಾಪಯ ಸುಪ್ರೀತ್ಯಾ ಪತಿಲೋಕಾಯ ಚಾಧುನಾ ।
ತತ್ರಸ್ಥಾಹಂ ಚ ಪತಿನಾ ತ್ವಾಂ ಧ್ಯಾಸ್ಯೇ ರುದ್ರರೂಪಿಣಂ ॥ ೫೨ ॥

॥ ನಂದೀಶ್ವರ ಉವಾಚ ॥

ಇತ್ಯೇವಂ ಸಾ ಬಭಾಷೇಽಥ ಸುವರ್ಚಾ ತನಯಂ ಪ್ರತಿ ।
ಪತಿಮನ್ವಗಮುತ್ಸಾಧ್ವೀ ಪರಮೇಣ ಸಮಾಧಿನಾ ॥ ೫೩ ॥

ಏವಂ ದಧೀಚಪತ್ನೀ ಸಾ ಪತಿನಾ ಸಂಗತಾ ಮುನೇ ।
ಶಿವಲೋಕಂ ಸಮಾಸಾದ್ಯ ನಿಷೇವೇ ಶಂಕರಂ ಮುದಾ ॥ ೫೪ ॥

---

೫೧. ಅಪ್ಪಾ ಪರಮೇಶ್ವರಾ, ಹೇ ಮಹಾನುಭಾವ, ನೀನೀ ಅಶ್ವತ್ಥವೃಕ್ಷದ ಬಳಿಯಲ್ಲೇ ನೆಲೆಸುವವನಾಗು. ಹಾಗೆ ನೆಲೆಸಿ ಎಲ್ಲರಿಗೂ ಸುಖವನ್ನು ಅನುಗ್ರಹಿಸುತ್ತಿರು.

೫೨ ನಾನೀಗ ಪತಿಲೋಕವನ್ನು ಸೇರಲು ಪ್ರೀತಿಯಿಂದ ಅನುಜ್ಞೆಯನ್ನು ಕೊಡು. ನಾನು ಅಲ್ಲಿಯೇ ಇದ್ದುಕೊಂಡು ಪತಿಯಾದ ದಧೀಚಮುನಿಯೊಡನೆ ರುದ್ರಾವತಾರನಾದ ನಿನ್ನನ್ನೇ ಧ್ಯಾನಮಾಡುತ್ತಿರುವೆನು ಎಂದಳು.

೫೩ ಎಲೈ ಸನತ್ಕುಮಾರಮುನಿಯೇ, ಈರೀತಿಯಾಗಿ ಸುವರ್ಚೆಯು, ತನ್ನ ಮಗನಿಗೆ ಹೇಳಿದಳು. ಅನಂತರ ಆ ಪತಿವ್ರತೆಯು, ಮಹಾಸಮಾಧಿಯನ್ನು ಹಿಡಿದು ದೇಹವನ್ನು ತ್ಯಜಿಸಿ ತನ್ನ ಪತಿಯನ್ನನುಸರಿಸಿದಳು.

೫೪. ಹೀಗೆ ದಧೀಚಪತ್ನಿಯು ಪತಿಯೊಡನೆ ಸೇರಿದಳು. ಅನಂತರ ಶಿವಲೋಕವನ್ನು ಸೇರಿ ಶ್ರೀ ಶಿವನನ್ನು ಸಂತೋಷದಿಂದ ಸೇವಿಸಿದಳು.

ಏತಸ್ಮಿನ್ನಂತರೇ ದೇವಾಸ್ಸೇಂದ್ರಾಶ್ಚ ಮುನಿಭಿಸ್ಸಹ ।
ತತ್ರಾಜಗ್ಮುಸ್ತ್ವರಾ ತಾತ ಆಹೂತಾ ಇವ ಹರ್ಷಿತಾಃ ॥ ೫೫ ॥

ಹರಿರ್ಬ್ರಹ್ಮಾ ಚ ಸುಪ್ರೀತ್ಯಾವತೀರ್ಣಂ ಶಂಕರಂ ಭುವಿ ।
ಸುವರ್ಚಾಯಾಂ ದಧೀಚಾದ್ವಾ ಯಯತುಸ್ಸ್ವಗಣೈಸ್ಸಹ ॥ ೫೬ ॥

ತತ್ರ ದೃಷ್ಟ್ವಾವತೀರ್ಣಂ ತಂ ಮುನಿಪುತ್ರತ್ವಮಾಗತಂ ।
ರುದ್ರಂ ಸರ್ವೇ ಪ್ರಣೇಮುಶ್ಚ ತುಷ್ಟುವುರ್ಬದ್ಧಪಾಣಯಃ ॥ ೫೭ ॥

ತದೋತ್ಸವೋ ಮಹಾನಾಸೀದ್ದೇವಾನಾಂ ಮುನಿಸತ್ತಮ ।
ನೇದುರ್ದುಂದುಭಯಸ್ತತ್ರ ನರ್ತಕ್ಯೋ ನನೃತುರ್ಮುದಾ ॥ ೫೮ ॥

ಜಗುರ್ಗಂಧರ್ವಪುತ್ರಾಶ್ಚ ಕಿನ್ನರಾ ವಾದ್ಯವಾದಕಾಃ ।
ವಾದಯಾಮಾಸುರಮರಾಃ ಪುಷ್ಪವೃಷ್ಟಿಂ ಚ ಚಕ್ರಿರೇ ॥ ೫೯ ॥

---

೫೫. ಅಪ್ಪಾ, ಇಷ್ಟರಲ್ಲಿ ಇಂದ್ರಾದಿದೇವತೆಗಳು ಋಷಿಗಳೊಡನೆ ಬಹು ಸಂತೋಷದಿಂದ ಅಲ್ಲಿಗೆ ಬೇಗಬೇಗನೆ ಬಂದರು

೫೬. ಅದೇರೀತಿ ತಮ್ಮತಮ್ಮ ಪರಿವಾರಸಮೇತರಾಗಿ ಬ್ರಹ್ಮನೂ ವಿಷ್ಣುವೂ ಸಹ ದಧೀಚಮುನಿಯ ಸತ್ನಿಯಾದ ಸುವರ್ಚೆಯಲ್ಲಿ ಶ್ರೀ ಶಿವನು ಅವತರಿಸಿರುವುದನ್ನು ಅರಿತು ಅಲ್ಲಿಗೆ ಬಂದರು.

೫೭ ಆಗ ಅವರೆಲ್ಲರೂ ಲೀಲಾಮೂರ್ತಿಯೊದ ಆ ಶಂಕರನು ಮುನಿಯ ಪುತ್ರನಾಗಿ ಹುಟ್ಟಿರುವುದನ್ನು ಕಂಡು ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ಸ್ತೋತ್ರಮಾಡಿದರು

೫೮. ಆಗ ಅಲ್ಲಿ ದೇವತೆಗಳೆಲ್ಲರಿಗೂ ಅದೊಂದು ಭಾರಿ ಉತ್ಸವವೇ ಜರುಗಿ ಹೋಯಿತು. ಆಗ ದುಂದುಭಿಗಳು ಮೊಳಗಿದುವು. ಅಪ್ಸರಸ್ತ್ರೀಯರು ಸಂತೋಷದಿಂದ ನರ್ತನಮಾಡಿದರು.

೫೯. ಆಗ ಗಂಧರ್ವಪುತ್ರರು ಗಾನವನ್ನು ಮಾಡಿದರು ಕಿನ್ನರರು ವಾದ್ಯಗಳನ್ನು ಹಿಡಿದು ಬಾಜಿಸಿದರು. ದೇವತೆಗಳು ಹೂವಿನಮಳೆಯನ್ನು ಕರೆದರು.

ಪಿಪ್ಪಲಸ್ಯ ಶರ್ವಪಿತುರ್ವಿಲಸಂತಂ ಸುತಂ ಚ ತಂ ।
ಸಂಸ್ಕೃತ್ಯ ವಿಧಿವತ್ಸರ್ವೇ ವಿಷ್ಣ್ವಾದ್ಯಾಸ್ತುಷ್ಟುವುಃ ಪುನಃ ॥ ೬೦ ॥

ಪಿಪ್ಪಲಾದೇತಿ ತನ್ನಾಮ ಚಕ್ರೇ ಬ್ರಹ್ಮಾ ಪ್ರಸನ್ನಧೀಃ ।
ಪ್ರಸನ್ನೋ ಭವ ದೇವೇಶ ಇತ್ಯೂಚೇ ಹರಿಣಾ ಸುರೈಃ ॥ ೬೧ ॥

ಇತ್ಯುಕ್ತ್ವಾ ತಮನುಜ್ಞಾಯ ಬ್ರಹ್ಮಾ ವಿಷ್ಣುಸ್ಸುರಾಸ್ತಥಾ ।
ಸ್ವಂ ಸ್ವಂ ಧಾಮ ಯಯುಸ್ಸರ್ವೇ ವಿಧಾಯ ಚ ಮಹೋತ್ಸವಂ ॥ ೬೨ ॥

ಅಥ ರುದ್ರಃ ಪಿಪ್ಪಲಾದೋಽಶ್ವತ್ಥಮೂಲೇ ಮಹಾಪ್ರಭುಃ ।
ತತಾಪ ಸುಚಿರಂ ಕಾಲಂ ಲೋಕಾನಾಂ ಹಿತಕಾಮ್ಯಯಾ ॥ ೬೩ ॥

---

೬೦- ಪಿಪ್ಪಲನೆಂದು ಬೇರೆ ಹೆಸರುಳ್ಳ ಆ ದಧೀಚನಿಗೆ ಪುತ್ರನಾಗಿ ಅವತರಿಸಿರುವ ಆತನನ್ನು ವಿಷ್ಣ್ವಾದಿದೇವತೆಗಳು ಜಾತಕರ್ಮಾದಿ ಸಂಸ್ಕಾರಗಳಿಂದ ಸಂಸ್ಕರಿಸಿ ಪುನಃ ಸ್ತೋತ್ರಮಾಡಿದರು

೬೧. ಆಗ ಪ್ರಸನ್ನಚಿತ್ತನಾದ ಬ್ರಹ್ಮನು ಆ ಶಿಶುವಿಗೆ ಪಿಪ್ಪಲಾದನೆಂದು ಹೆಸರಿಟ್ಟನು. ಆಗ ವಿಷ್ಣುವೂ ಇತರ ದೇವತೆಗಳೂ, ಎಲೈ ದೇವನೇ, ಪ್ರಸನ್ನನಾಗು ಎಂದು ಪ್ರಾರ್ಥಿಸಿದರು.

೬೨. ಈರೀತಿ ಪ್ರಾರ್ಥಿಸಿ ಆತನನ್ನು ಬೀಳ್ಕೊಂಡು ಬ್ರಹ್ಮನೂ ವಿಷ್ಣುವೂ ಉಳಿದೆಲ್ಲ ದೇವತೆಗಳೂ ಮಹಾಸಡಗರದಿಂದ ಉತ್ಸವವನ್ನು ನೆರವೇರಿಸಿ ತಮ್ಮತಮ್ಮ ಲೋಕಗಳಿಗೆ ತೆರಳಿದರು.

೬೩ ಅನಂತರ ರುದ್ರಾವತಾರನಾದ ಆ ಪಿಪ್ಪಲಾದಮುನಿಯು ಎಲ್ಲ ಲೋಕಗಳಿಗೂ ಹಿತವುಂಟಾಗಲೆಂದು ಆ ಅರಳಿಯಮರದ ಬುಡದಲ್ಲಿಯೇ ಬಹುಕಾಲ ತಪಸ್ಸು ಮಾಡುತ್ತಿದ್ದನು

ಇತ್ಥಂ ಸುತಪಸಸ್ತಸ್ಯ ಪಿಪ್ಪಲಾದಸ್ಯ ಸಂಮುಖೇ ।
ಮಹಾಕಾಲೋ ವ್ಯತೀಯಾಯ ಲೋಕಚರ್ಯಾನುಸಾರಿಣಃ ॥ ೬೪ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಪಿಪ್ಪಲಾದಾವತಾರವರ್ಣನಂ ನಾಮ ಚತುರ್ವಿಂಶೋಽಧ್ಯಾಯಃ

---

೬೪. ಈರೀತಿಯಾಗಿ ಲೋಕದ ವ್ಯವಹಾರದಂತೆ ನಡೆಯುತ್ತಾ ಆ ಪಿಪ್ಪಲಾದ ಮುನಿಯು ಬಹು ಘೋರವಾಗಿ ತಪಸ್ಸುಮಾಡುತ್ತಿರಲು ಬಹಳಕಾಲವು ಕಳೆದು ಹೋಯಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಪಿಪ್ಪಲಾದಾವತಾರವರ್ಣನವೆಂಬ ಇಪ್ಪತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಪಂಚವಿಂಶೋಽಧ್ಯಾಯಃ



॥ ನಂದೀಶ್ವರ ಉವಾಚ ॥

**ಅಥ ಲೋಕೇ ವ್ಯವಸ್ಥಾಯ ಧರ್ಮಸ್ಯ ಸ್ಥಾಪನೇಚ್ಛಯಾ ।**
**ಮಹಾಲೀಲಾಂ ಚಕಾರೇಶಸ್ತಾಮಹೋ ಸನ್ಮುನೇ ಶೃಣು ॥ ೧ ॥**

**ಏಕದಾ ಪುಷ್ಪಭದ್ರಾಯಾಂ ಸ್ನಾತುಂ ಗಚ್ಛನ್ಮುನೀಶ್ವರಃ ।**
**ದದರ್ಶ ಪದ್ಮಾಂ ಯುವತೀಂ ಶಿವಾಂಶಾಂ ಸುಮನೋಹರಾಂ ॥ ೨ ॥**

## ಇಪ್ಪತ್ತೈದನೆಯ ಅಧ್ಯಾಯವು.

೧. ಎಲೈ ಸನತ್ಕುಮಾರ ಮುನಿಯೇ, ಅನಂತರ ಪ್ರಪಂಚವೆಲ್ಲವೂ ಒಂದು ನಿಯಮಕ್ಕೆ ಒಳಪಟ್ಟು ನಡೆಯುವಂತೆ ಧರ್ಮವನ್ನು ನೆಲೆಗೊಳಿಸಬೇಕೆಂದು ಇಚ್ಛೆಯಿಂದ ಆ ಪ್ರಭುವು ಒಂದು ಅದ್ಭುತವಾದ ಲೀಲೆಯನ್ನು ತೋರಿದನು ಅದನ್ನು ಕೇಳು.

೨ ಒಂದಾನೊಂದುಸಲ ಆ ಮುನೀಂದ್ರನು, ಪುಷ್ಪಭದ್ರಾನದಿಯಲ್ಲಿ ಮಿಂದು ಬರಬೇಕೆಂದು ಹೋಗುತ್ತಿರುವಾಗ್ಗೆ, ಪಾರ್ವತಿಯ ಅಂಶದಿಂದ ಜನಿಸಿದ ಕಡುಚಲುವೆಯಾದ ಪದ್ಮೆಯೆಂಬ ಯುವತಿಯನ್ನು ಕಂಡನು.

ತಲ್ಲಿಪ್ಸುಸ್ತತ್ಪಿತುಃ ಸ್ಥಾನಮನರಣ್ಯಸ್ಯ ಭೂಪತೇಃ ।
ಜಗಾಮ ಭುವನಾಚಾರೀ ಲೋಕತತ್ತ್ವವಿಚಕ್ಷಣಃ ॥ ೩ ॥

ರಾಜಾ ನರಾಣಾಂ ತಂ ದೃಷ್ಟ್ವಾ ಪ್ರಣಮ್ಯ ಚ ಭಯಾಕುಲಃ ।
ಮಧುಪರ್ಕಾದಿಕಂ ದತ್ವಾ ಪೂಜಯಾಮಾಸ ಭಕ್ತಿತಃ ॥ ೪ ॥

ಸ್ನೇಹಾತ್ಸರ್ವಂ ಗೃಹೀತ್ವಾ ಸ ಯಯಾಚೇ ಕನ್ಯಕಾಂ ಮುನಿಃ ।
ಮೌನೀ ಬಭೂವ ನೃಪತಿಃ ಕಿಂಚಿನ್ನಿರ್ವಕ್ತುಮಕ್ಷಮಃ ॥ ೫ ॥

ಮುನಿಃ ಪ್ರೋವಾಚ ನೃಪತಿಂ ಕನ್ಯಾಂ ಮೇ ದೇಹಿ ಭಕ್ತಿತಃ ।
ಅನ್ಯಥಾ ಭಸ್ಮಸಾತ್ಸರ್ವಂ ಕರಿಷ್ಯೇಽಹಂ ತ್ವಯಾ ಸಹ ॥ ೬ ॥

---

೩. , ಆ ಯುವತಿಯಲ್ಲಿ ಅನುರಾಗವಂಕುರಿಸಲು, ಅವಳನ್ನು ಪಡೆಯಬೇಕೆಂಬ ಆಸೆಯುಂಟಾಯಿತು. ಆಗ ಲೌಕಿಕ ವ್ಯವಹಾರಗಳನ್ನು ಚೆನ್ನಾಗಿ ಅರಿತಿರುವ ಆ ಮುನಿಯು, ಆ ವ್ಯವಹಾರಕ್ಕೆ ಅನುಗುಣವಾಗಿ ಪದ್ಮೆಯೆಂಬ ಆ ಯುವತಿಯ ತಂದೆಯಾದ ಅನರಣ್ಯನೆಂಬ ನೃಪತಿಯ ಆಸ್ಥಾನಕ್ಕೆ ಬಂದನು.

೪. ಆಗ ಆ ಅನರಣ್ಯನೆಂಬ ದೊರೆಯು, ಪಿಪ್ಪಲಾದಮುನಿಯು ಬಂದುದನ್ನು ಕಂಡು, ಭಯಭಕ್ತಿಗಳಿಂದ ಆತನಿಗೆ ನಮಸ್ಕರಿಸಿ, ಮಧುಪರ್ಕಾದಿಗಳನ್ನು ಇತ್ತು ಸತ್ಕರಿಸಿ ಭಕ್ತಿಯಿಂದ ಪೂಜೆಮಾಡಿದನು.

೫. ಆ ಮುನಿಯು ಅವೆಲ್ಲವನ್ನೂ ಸಂತೋಷದಿಂದ ಸ್ವೀಕರಿಸಿ, ಬಳಿಕ ಆತನ ಮಗಳನ್ನು ತನಗೆ ಮದುವೆಮಾಡಿಕೊಡುವಂತೆ ಕೇಳಿದನು. ಆಗ ಅನರಣ್ಯನೆಂಬ ಆ ಅರಸು ಏನು ಹೇಳಲೂ ತೋರದೆ ಮೌನವಹಿಸಿ ಸುಮ್ಮನೆ ನಿಂತುಬಿಟ್ಟನು.

೬. ಆಗ ಆ ಮಹರ್ಷಿಯು ದೊರೆಯನ್ನು ಕುರಿತು, "ನೀನೀಗ ಭಕ್ತಿಪೂರ್ವಕವಾಗಿ ನನಗೆ ನಿನ್ನ ಕನ್ನಿಕೆಯನ್ನಿತ್ತೆಯೋ ಸರಿ, ಇಲ್ಲದಿದ್ದರೆ ಇವೆಲ್ಲವನ್ನೂ ನಿನ್ನೊಡನೆ ಸುಟ್ಟು ಬೂದಿಮಾಡಿಬಿಡುವೆನು" ಎಂದನು.

ಅಥೋ ಬಭೂವುರಾಚ್ಛನ್ನಾಃ ಸರ್ವೇ ರಾಜಜನಾಸ್ತದಾ ।
ತೇಜಸಾ ಪಿಪ್ಪಲಾದಸ್ಯ ದಾಧೀಚಸ್ಯ ಮಹಾಮುನೇ ॥ ೭ ॥

ಅಥ ರಾಜಾ ಮಹಾಭೀತೋ ವಿಲಪ್ಯ ಚ ಮುಹುರ್ಮುಹುಃ ।
ಕನ್ಯಾಮಲಂಕೃತಾಂ ಪದ್ಮಾಂ ವೃದ್ಧಾಯ ಮುನಯೇ ದದೌ ॥ ೮ ॥

ಪದ್ಮಾಂ ವಿವಾಹ್ಯ ಸ ಮುನಿಶ್ಶಿವಾಂಶಾಂ ಭೂಪತೇಃ ಸುತಾಂ ।
ಪಿಪ್ಪಲಾದೋ ಗೃಹೀತ್ವಾ ತಾಂ ಮುದಿತಃ ಸ್ವಾಶ್ರಮಂ ಯಯೌ ॥ ೯ ॥

ತತ್ರ ಗತ್ವಾ ಮುನಿವರೋ ವಯಸಾ ಜರ್ಜರೋಽಧಿಕಃ ।
ಉವಾಚ ನಾರ್ಯಾ ಸ ತಯಾ ತಪಸ್ವೀ ನಾತಿಲಂಪಟಃ ॥ ೧೦ ॥

---

೭, ಅನಂತರ ಆ ಮುನಿಯನ್ನು ಅಸಷ್ಟಿಯಾಗಿ ಕಂಡ ಆ ರಾಜನ ಕಡೆಯ ಜನರೂ ದಧೀಚಿಮುನಿಯ ಪುತ್ರನಾದ ಆ ಪಿಪ್ಪಲಾದ ಮಹಾಮುನಿಯ ತೇಜಸ್ಸನ್ನೂ ನೋಡಿ ಬೆರಗಾದರು

೮. ಆಗ ಆ ದೊರೆಯು, ಬಹುನೊಂದವನಾಗಿ ಅಡಿಗಡಿಗೆ ದುಃಖಿಸುತ್ತಾ ತನ್ನ ಮಗಳಾದ ಪದ್ಮೆಯನ್ನು ಚೆನ್ನಾಗಿ ಸಿಂಗರಿಸಿ, ಆ ವೃದ್ಧಮುನೀಂದ್ರನಿಗೆ ದಾನ ಮಾಡಿದನು.

೯. ಜಗಜ್ಜನನಿಯ ಅಂಶದಿಂದ ಅವತರಿಸಿರುವ ಆ ಅನರಣ್ಯಸುತೆಯಾದ ಪದ್ಮೆಯನ್ನು ಮದುವೆಮಾಡಿಕೊಂಡು ಪಿಪ್ಪಲಾದಮುನಿಯು, ಮಹಾಸಂತೋಷ ದಿಂದ ತನ್ನಾಶ್ರಮಕ್ಕೆ ತೆರಳಿದನು.

೧೦ ವಯಸ್ಸು ಮಿತಿಮೀರಿ, ಅಂಗಾಂಗಗಳೆಲ್ಲಾ ಸಡಿಲವಾಗಿ, ಇಂದ್ರಿಯ ಸುಖಗಳಲ್ಲಿ ಅಷ್ಟಾಗಿ ಆಸೆಯೇ ಇಲ್ಲದಿರುವ ಮುದಿಮುನಿಯು ಆ ಯುವತಿಯೊಡನೆ ವಾಸಮಾಡಿಕೊಂಡಿದ್ದನು. ಆದರೂ,

ಅಥೋऽನರಣ್ಯಕನ್ಯಾ ಸಾ ಸಿಷೇವೇ ಭಕ್ತಿತೋ ಮುನಿಂ ।
ಕರ್ಮಣಾ ಮನಸಾ ವಾಚಾ ಲಕ್ಷ್ಮೀರ್ನಾರಾಯಣಂ ಯಥಾ ॥ ೧೧ ॥

ಇತ್ಥಂ ಸ ಪಿಪ್ಪಲಾದೋ ಹಿ ಶಿವಾಂಶೋ ಮುನಿಸತ್ತಮಃ ।
ರೇಮೇ ತಯಾ ಯುವತ್ಯಾ ಚ ಯುವಾಭೂಯ ಸ್ವಲೀಲಯಾ ॥ ೧೨ ॥

ದಶ ಪುತ್ರಾ ಮಹಾತ್ಮಾನೋ ಬಭೂವುಸ್ಸು ತಪಸ್ವಿನಃ ।
ಮುನೇಃ ಪಿತುಸ್ಸಮಾಃ ಸರ್ವೇ ಪದ್ಮಾಯಾಃ ಸುಖವರ್ಧನಾಃ ॥ ೧೩ ॥

ಏವಂ ಲೀಲಾವತಾರೋ ಹಿ ಶಂಕರಸ್ಯ ಮಹಾಪ್ರಭೋಃ ।
ಪಿಪ್ಪಲಾದೋ ಮುನಿವರೋ ನಾನಾಲೀಲಾಕರಃ ಪ್ರಭುಃ ॥ ೧೪ ॥

---

೧೧. ಅನರಣ್ಯರಾಜನ ಮಗಳಾದ ಪದ್ಮೆಯು, ಮನಸ್ಸಿನಿಂದಲೂ ಮಾತುಗಳಿಂದಲೂ ನಡತೆಯಿಂದಲೂ ಲಕ್ಷ್ಮಿಯು ಶ್ರೀಮನ್ನಾರಾಯಣನನ್ನು ಸೇವಿಸುವಂತೆ ಆ ಮುನಿಯನ್ನು ಭಕ್ತಿಯಿಂದ ಸೇವಿಸುತ್ತಿದ್ದಳು.

೧೨. ಈ ರೀತಿಯಾಗಿ ಶಿವಾಂಶಸಂಭೂತನಾದ ಪಿಪ್ಪಲಾದಮಹಾಮುನಿಯು ತನ್ನ ಲೀಲೆಯಿಂದ ಪದ್ಮೆಯನ್ನು ಬಹುವಾಗಿ ಪರೀಕ್ಷಿಸಿ ಅನಂತರ ಅವಳಿಗೆ ಒಲಿದು, ಚಲುವನಾದ ಯುವಕರೂಪವನ್ನು ತಾಳಿ ಆ ಯೌವನವತಿಯೊಡನೆ ಸಂತೋಷದಿಂದ ವಿಹರಿಸುತ್ತಿದ್ದನು.

೧೩. ಹೀಗೆಯೇ ಇರಲು, ಪದ್ಮೆಯು ಸಂತೋಷವನ್ನು ಹೆಚ್ಚಿಸುತ್ತಾ ತಮ್ಮ ತಂದೆಗೆ ಸರಿಸಮರೆಂದೆನಿಸಿದ ಮಹಾತಪಸ್ವಿಗಳಾದ ಹತ್ತು ಮಕ್ಕಳು ಆ ರಾಜಪುತ್ರಿಗೆ ಹುಟ್ಟಿದರು.

೧೪. ಈರೀತಿಯಾಗಿ ಮಹಾಪ್ರಭುವಾದ ಶ್ರೀ ಶಂಕರನ ಲೀಲಾವತಾರನೆನಿಸಿದ ಪಿಪ್ಪಲಾದ ಮಹಾಮುನಿಯು ನಾನಾವಿಧವಾದ ಲೀಲೆಗಳನ್ನು ತೋರಿದನು.

ಯೇನ ದತ್ತೋ ವರಃ ಪ್ರೀತ್ಯಾ ಲೋಕೇಭ್ಯೋ ಹಿ ದಯಾಲುನಾ ।
ದೃಷ್ಟ್ವಾ ಲೋಕೇ ಶನೇಃ ಪೀಡಾಂ ಸರ್ವೇಷಾಮನಿವಾರಿಣೀಂ ॥ ೧೫ ॥

ಷೋಡಶಾಬ್ದಾವಧಿ ನೃಣಾಂ ಜನ್ಮತೋ ನ ಭವೇಚ್ಚ ಸಾ ।
ತಥಾ ಚ ಶಿವಭಕ್ತಾನಾಂ ಸತ್ಯಮೇತದ್ಧಿ ಮೇ ವಚಃ ॥ ೧೬ ॥

ಅಥಾನಾದೃತ್ಯ ಮದ್ವಾಕ್ಯಂ ಕುರ್ಯಾತ್ಪೀಡಾಂ ಶನಿಃ ಕ್ವಚಿತ್ ।
ತೇಷಾಂ ನೃಣಾಂ ತದಾ ಸ ಸ್ಯಾದ್ಭಸ್ಮಸಾನ್ನ ಹಿ ಸಂಶಯಃ ॥ ೧೭ ॥

ಇತಿ ತದ್ಭಯತಸ್ತಾತ ವಿಕೃತೋಽಪಿ ಶನೈಶ್ಚರಃ ।
ತೇಷಾಂ ನ ಕುರುತೇ ಪೀಡಾಂ ಕದಾಚಿದ್ಗ್ರಹಸತ್ತಮಃ ॥ ೧೮ ॥

---

೧೫. ಕರುಣಾಸಾಗರನಾದ ಮುನಿಯು, ಜಗತ್ತಿನ ಜೀವಿಗಳ ಮೇಲಿನ ಕನಿಕರದಿಂದ ಯಾವನೊಬ್ಬನನ್ನೂ ಬಿಡದೆ ಪೀಡಿಸಿಯೇ ಬಿಡುವ ಶನಿಯ ಉಪದ್ರವ ವನ್ನು ಕಂಡು, ಮರುಗಿ ಅವರೆಲ್ಲರಿಗೂ ವರವನ್ನಿತ್ತನು

೧೬. ಮನುಷ್ಯರಿಗೆ ಹುಟ್ಟಿದಮೊದಲುಗೊಂಡು ಹದಿನಾರು ವರುಷಗಳು ತುಂಬುವವರೆಗೂ ಶನಿಪೀಡೆಯು ಉಂಟಾಗದು. ಅದರಂತೆಯೇ ಶಿವನಲ್ಲಿ ಯಾರು ಭಕ್ತಿಯನ್ನಿಟ್ಟಿರುವರೋ ಅವರಿಗೂ ಅದು ಕಾಡಿಸದು ನನ್ನೀಮಾತು ಸತ್ಯವಾದುದು.

೧೭ ಒಂದುವೇಳೆ ನನ್ನ ಈ ಮಾತನ್ನು ಕಡೆಗಾಣಿಸಿ, ಆ ಶನಿಯು ಎಲ್ಲಿ ಯಾದರೂ ಮೇಲ್ಕಂಡ ಜನರಿಗೆ ಪೀಡೆಯನ್ನುಂಟುಮಾಡಿದುದೇ ಆದರೆ ಅವನು ಸುಟ್ಟು ಬೂದಿಯಾಗುವನು. ಇದು ಖಂಡಿತ

೧೮ ಅಪ್ಪಾ ಸನತ್ಕುಮಾರ, ಈರೀತಿ ಪಿಪ್ಪಲಾದಮುನಿಯು ವರವನ್ನಿತ್ತುದ ರಿಂದ ಹೆದರಿ, ಬಲಾಢ್ಯನಾದ ಗ್ರಹವೆನಿಸಿದರೂ ಆ ಶನಿಯು, ತಾನು ಎಷ್ಟೇ ಕ್ರೂರ ಸ್ಥಿತಿಯಲ್ಲಿರಲಿ ಜನಗಳಿಗೆ ಎಂದೆಂದಿಗೂ ಪೀಡೆಯನ್ನು ಮಾಡದೆ ಇರುವನು.

ಇತಿ ಲೀಲಾಮನುಷ್ಯಸ್ಯ ಪಿಪ್ಪಲಾದಸ್ಯ ಸನ್ಮುನೇ ।
ಕಥಿತಂ ಸುಚರಿತ್ರಂ ತೇ ಸರ್ವಕಾಮಫಲಪ್ರದಂ ॥ ೧೯ ॥

ಗಾಧಿಶ್ಚ ಕೌಶಿಕಶ್ಚೈವ ಪಿಪ್ಪಲಾದೋ ಮಹಾಮುನಿಃ ।
ಶನೈಶ್ಚರಕೃತಾಂ ಪೀಡಾಂ ನಾಶಯಂತಿ ಸ್ಮೃತಾಸ್ತ್ರಯಃ ॥ ೨೦ ॥

ಪಿಪ್ಪಲಾದಸ್ಯ ಚರಿತಂ ಪದ್ಮಾಚರಿತಸಂಯುತಂ ।
ಯಃ ಪಠೇಚ್ಛೃಣುಯಾದ್ವಾಪಿ ಸುಭಕ್ತ್ಯಾ ಭುವಿ ಮಾನವಃ ॥ ೨೧ ॥

ಶನಿಪೀಡಾವಿನಾಶಾರ್ಥಮೇತಚ್ಚರಿತಮುತ್ತಮಂ ।
ಯಃ ಪಠೇಚ್ಛೃಣುಯಾದ್ವಾಪಿ ಸರ್ವಾನ್ಕಾಮಾನವಾಪ್ನುಯಾತ್ ॥ ೨೨ ॥

---

೧೯. ಎಲೈ ಮುನಿಯೇ, ಈ ರೀತಿ ಮನುಷ್ಯನಂತೆ ಲೀಲೆಯನ್ನು ಧರಿಸಿದ ಪಿಪ್ಪಲಾದಮುನಿಯ ಮಂಗಳಚರಿತ್ರವನ್ನು ನಿನಗೆತಿಳಿಸಿದೆನು. ಇದನ್ನು ಕೇಳಿದವರ ಇಷ್ಟಾರ್ಥಗಳು ನೆರವೇರುವವು.

೨೦. ಗಾಧಿ, ಕೌಶಿಕ, ಪಿಪ್ಪಲಾದಮಹರ್ಷಿ ಎಂಬೀ ಮೂವರನ್ನು ನೆನಸಿದ ಮಾತ್ರಕ್ಕೇ ಶನೈಶ್ಚರನಿಂದುಂಟಾಗುವ ಪೀಡೆಯು ಪರಿಹಾರವಾಗುವುದು.

೨೧. ಅನರಣ್ಯಸುತೆಯಾದ ಪದ್ಮೆಯ ಚರಿತದಿಂದೊಡಗೂಡಿದ ಈ ಪಿಪ್ಪಲಾದ ಚರಿತವನ್ನು ಯಾವಾತನು ಮಹಾಭಕ್ತಿಯಿಂದ ಪಠಿಸುವನೋ ಇಲ್ಲವೇ ಶ್ರವಣ ಮಾಡುವನೋ ಆತನು ತನ್ನ ಕೋರಿಕೆಗಳೆಲ್ಲವನ್ನೂ ಪಡೆಯುವನು.

೨೨. ಮತ್ತು ಯಾವಾತನು ಶನಿಯ ಪೀಡೆಯು ಪರಿಹಾರವಾಗಲೆಂದು ಪಾವನ ವಾದ ಈ ಚರಿತವನ್ನು ಪಠಿಸುವನೋ ಅಥವಾ ಶ್ರವಣಮಾಡುವನೋ ಅವನು ಎಲ್ಲ ಇಷ್ಟಾರ್ಥಗಳನ್ನೂ ಹೊಂದುವನು.

ಧನ್ಯೋ ಮುನಿವರೋ ಜ್ಞಾನೀ ಮಹಾಶೈವಃ ಸತಾಂ ಪ್ರಿಯಃ ।
ಅಸ್ಯ ಪುತ್ರೋ ಮಹೇಶಾನಃ ಪಿಪ್ಪಲಾದಾಖ್ಯ ಆತ್ಮವಾನ್ ॥ ೨೩ ॥

ಇದಮಾಖ್ಯಾನಮನಘಂ ಸ್ವರ್ಗ್ಯಂ ಕುಗ್ರಹದೋಷಹೃತ್ ।
ಸರ್ವಕಾಮಪ್ರದಂ ತಾತ ಶಿವಭಕ್ತಿವಿವರ್ಧನಂ ॥ ೨೪ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಪಿಪ್ಪಲಾದಾವತಾರಚರಿತವರ್ಣನಂ ನಾಮ ಪಂಚವಿಂಶೋಽಧ್ಯಾಯಃ

---

೨೩. ಮಹಾಜ್ಞಾನಿಯೂ ಶಿವಭಕ್ತಾಗ್ರೇಸರನೂ ಸತ್ಪುರುಷರಿಗೆ ಪ್ರಿಯನಾದವನೂ ಆದ ದಧೀಚಮಹಾಮುನಿಯು ಪರಮಧನ್ಯನು ಈತನಿಗೆ, ಸಾಕ್ಷಾನ್ಮಹೇಶ್ವರನು ಆತ್ಮಜ್ಞಾನಿಯೆನಿಸಿದ ಪಿಪ್ಪಲಾದಮುನಿಯ ರೂಪದಿಂದ ಮಗನಾಗಿ ಅವತರಿಸಿದನು

೨೪. ಅಪ್ಪಾ ಮುನಿಯೇ, ಶಿವನಲ್ಲಿ ಭಕ್ತಿಯನ್ನು ಹೆಚ್ಚಿಸುವುದೂ ದುಷ್ಟಗ್ರಹಗಳಬಾಧೆಯನ್ನು ಹೋಗಲಾಡಿಸುವುದೂ, ಸ್ವರ್ಗೀಯವಾದ ಭೋಗಗಳನ್ನು ಕರುಣಿಸುವುದೂ ಆದ ಪಾವನವಾದೀ ಚರಿತವು ಬಯಸಿದ ಎಲ್ಲ ಇಷ್ಟವಸ್ತುಗಳನ್ನು ಅನುಗ್ರಹಿಸುವುದು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಮೂರನೆಯದಾದ ಶತರುದ್ರಸಂಹಿತೆಯಲ್ಲಿ
ಪಿಪ್ಪಲಾದಾವತಾರವರ್ಣನವೆಂಬ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಷಡ್ವಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

**ಶೃಣು ತಾತ ಪ್ರವಕ್ಷ್ಯಾಮಿ ಶಿವಸ್ಯ ಪರಮಾತ್ಮನಃ ।**
**ಅವತಾರಂ ಪರಮಾನಂದಂ ವೈಶ್ಯನಾಥಾಹ್ವಯಂ ಮುನೇ ॥ ೧ ॥**

**ನಂದಿಗ್ರಾಮೇ ಪುರಾ ಕಶ್ಚಿನ್ಮಹಾನಂದೇತಿ ವಿಶ್ರುತಾ ।**
**ಬಭೂವ ವಾರವನಿತಾ ಶಿವಭಕ್ತಾ ಸುಸುಂದರೀ ॥ ೨ ॥**

---

### ಇಪ್ಪತ್ತಾರನೆಯ ಅಧ್ಯಾಯವು.

೧ ಎಲೈ ಸನತ್ಕುಮಾರಮುನಿಯೇ, ಪರಮಪುರುಷನಾದ ಶ್ರೀ ಶಂಕರನು ವೈಶ್ಯಾಗ್ರಣಿಯಂತೆ ವೇಷವನ್ನು ತಾಳಿಬಂದ ಪರಮಾನಂದದಾಯಕವಾದ ವೈಶ್ಯನಾಥಾವತಾರ ವೃತ್ತಾಂತವನ್ನು ನಿನಗೆ ತಿಳಿಸುವೆನು, ಕೇಳು.

೨. ಹಿಂದೆ ನಂದಿಗ್ರಾಮವೆಂಬ ಊರಿನಲ್ಲಿ ಮಹಾನಂದೆಯೆಂದು ಪ್ರಸಿದ್ಧಳಾದ ವಾರಾಂಗನೆಯೊಬ್ಬಳು ಇದ್ದಳು. ಅವಳು ಶಿವನಲ್ಲಿ ವಿಶೇಷವಾಗಿ ಭಕ್ತಿಯನ್ನಿಟ್ಟದ್ದಳು. ಮತ್ತು ಕಡುಚಲುವೆಯಾಗಿದ್ದಳು.

ಮಹಾವಿಭವಸಂಪನ್ನಾ ಸುಧನಾಢ್ಯಾ ಮಹೋಜ್ಜ್ವಲಾ ।
ನಾನಾರತ್ನಪರಿಚ್ಛಿನ್ನಶೃಂಗಾರರಸನಿರ್ಭರಾ ॥ ೩ ॥

ಸರ್ವಸಂಗೀತವಿದ್ಯಾಸು ನಿಪುಣಾತಿಮನೋಹರಾ ।
ತಸ್ಯಾ ಗೇಯೇನ ಹೃಷ್ಯಂತಿ ರಾಜ್ಞ್ಯೋ ರಾಜಾನ ಏವ ಚ ॥ ೪ ॥

ಸಮಾನರ್ಚ ಸದಾ ಸಾಂಬಂ ಸಾ ವೇಶ್ಯಾ ಶಂಕರಂ ಮುದಾ ।
ಶಿವನಾಮಜಪಾಸಕ್ತಾ ಭಸ್ಮರುದ್ರಾಕ್ಷಭೂಷಣಾ ॥ ೫ ॥

ಶಿವಂ ಸಂಪೂಜ್ಯ ಸಾ ನಿತ್ಯಂ ಸೇವಂತೀ ಜಗದೀಶ್ವರಂ ।
ನನರ್ತ ಪರಯಾ ಭಕ್ತ್ಯಾ ಗಾಯಂತೀ ಶಿವಸದ್ಯಶಃ ॥ ೬ ॥

---

೩ ಆಕೆಯು ಮಹಾವೈಭವದಿಂದ ಮೆರೆಯುತ್ತಿದ್ದಳು. ಅವಳಲ್ಲಿ ಐಶ್ವರ್ಯವು ತುಂಬಿತುಳುಕಾಡುತ್ತಿದ್ದಿತು. ಅವಳು ಲಾವಣ್ಯಾತಿಶಯದಿಂದ ಬೆಳಗುತ್ತಿದ್ದಳು. ಬಗೆ ಬಗೆಯಾದ ಅನೇಕ ರತ್ನಖಚಿತವಾದ ಒಡವೆಗಳು ಅವಳ ಅಂದವನ್ನು ಹೆಚ್ಚಿಸುತ್ತಿದ್ದುವು. ಆಕೆಯಲ್ಲಿ ಶೃಂಗಾರರಸವು ತುಂಬಿತುಳುಕುತ್ತಿದ್ದಿತು. ಆಕೆಯು ಎಲ್ಲಾ ವಿಧವಾದ ಸಂಗೀತಕಲೆಯಲ್ಲಿಯೂ ಚದುರೆಯಾಗಿದ್ದಳು. ಈರೀತಿ ನೋಡಿದವರ ಮನಸ್ಸನ್ನೆಲ್ಲಾ ಆ ಚೆಲುವೆಯು ಸೆರೆಹಿಡಿದುಬಿಡುತ್ತಿದ್ದಳು.

೪ ಅವಳ ಗಾನವನ್ನು ಕೇಳಿ ಎಷ್ಟೋಮಂದಿ ರಾಜರೂ ರಾಣಿಯರೂ ಸಂತೋಷಪಡುತ್ತಿದ್ದರು.

೫ ಆ ವೇಶ್ಯೆಯು ಯಾವಾಗಲೂ ಶಿವನ ನಾಮಗಳನ್ನೇ ಜಪಿಸುತ್ತ ಭಸ್ಮವನ್ನು ಧರಿಸಿ ರುದ್ರಾಕ್ಷಿಗಳಿಂದ ಅಲಂಕೃತಳಾಗಿ ಸಂತೋಷದಿಂದ ಪಾರ್ವತೀಸಮೇತನಾದ ಶಂಕರನನ್ನು ಪೂಜೆಮಾಡುತ್ತಿದ್ದಳು.

೬ ಆಕೆಯು ಪ್ರತಿನಿತ್ಯವೂ ಜಗದೀಶನಾದ ಶಿವನನ್ನು ಪೂಜಿಸಿ ಆತನ ಯಶೋಗೀತೆಗಳನ್ನು ಹಾಡುತ್ತಾ ಮಹಾಭಕ್ತಿಯಿಂದ ನರ್ತನವನ್ನು ಮಾಡುತ್ತಿದ್ದಳು.

ರುದ್ರಾಕ್ಷೈರ್ಭೂಷಯಿತ್ವೈಕಂ ಮರ್ಕಟಂ ಚೈವ ಕುಕ್ಕುಟಂ ।
ಕರತಾಲೈಶ್ಚ ಗೀತೈಶ್ಚ ಸದಾ ನರ್ತಯತಿ ಸ್ಮ ಸಾ ॥ ೭ ॥

ನೃತ್ಯಮಾನೌ ಚ ತೌ ದೃಷ್ಟ್ವಾ ಶಿವಭಕ್ತಿರತಾ ಚ ಸಾ ।
ವೇಶ್ಯಾ ಸ್ಮ ವಿಹಸತ್ಯುಚ್ಚೈಃ ಪ್ರೇಮ್ಣಾ ಸರ್ವಸಖೀಯುತಾ ॥ ೮ ॥

ರುದ್ರಾಕ್ಷೈಃ ಕೃತಕೇಯೂರಕರ್ಣಾಭರಣಮಂಡನಾ ।
ಮರ್ಕಟಃ ಶಿಕ್ಷಯಾ ತಸ್ಯಾಃ ಪುರೋ ನೃತ್ಯತಿ ಬಾಲವತ್ ॥ ೯ ॥

ಶಿಖಾಸಂಬದ್ಧರುದ್ರಾಕ್ಷಃ ಕುಕ್ಕುಟಃ ಕಪಿನಾ ಸಹ ।
ನಿತ್ಯಂ ನನರ್ತ ನೃತ್ಯಜ್ಞಃ ಪಶ್ಯತಾಂ ಹಿತಮಾವಹನ್ ॥ ೧೦ ॥

ಏವಂ ಸಾ ಕುರ್ವತೀ ವೇಶ್ಯಾ ಕೌತುಕಂ ಪರಮಾದರಾತ್ ।
ಶಿವಭಕ್ತಿರತಾ ನಿತ್ಯಂ ಮಹಾನಂದಭರಾಽಭವತ್ ॥ ೧೧ ॥

---

೭. ಮತ್ತು ಒಂದು ಕೋತಿಯನ್ನೂ ಕೋಳಿಯನ್ನೂ ರುದ್ರಾಕ್ಷಿಗಳಿಂದ ಅಲಂಕರಿಸಿ ಕೈಯ್ಯತಾಳಗಳಿಂದಲೂ ಗೀತಗಳಿಂದಲೂ ಅವುಗಳನ್ನು ಯಾವಾಗಲೂ ಕುಣಿಸುತ್ತಿದ್ದಳು.

೮. ಶಿವಭಕ್ತಿಯು ಅಚಲವಾಗಿ ನೆಲೆಸಿರುವ ಆ ವೇಶ್ಯೆಯು ತನ್ನೆಲ್ಲ ಸಖಿಯರೊಡನೆ ಕಲೆತು ಮಹಾಪ್ರೀತಿಯಿಂದ ಕುಣಿಯುತ್ತಿರುವ ಆ ಕೋತಿಯನ್ನೂ ಕೋಳಿಯನ್ನೂ ಕಂಡು ಒಮ್ಮೊಮ್ಮೆ ಗಟ್ಟಿಯಾಗಿ ನಗುತ್ತಿದ್ದಳು

೯. ರುದ್ರಾಕ್ಷಿಯಿಂದಲೇ ಮಾಡಲ್ಪಟ್ಟ ತೋಳ್ಬಳೆಗಳಿಂದಲೂ ಕಿವಿಯ ಕಡುಕುಗಳಿಂದಲೂ ಅಲಂಕರಿಸಲ್ಪಟ್ಟ ಆ ಕೋತಿಯು ಅವಳಿಂದ ಚೆನ್ನಾಗಿ ಶಿಕ್ಷಿತವಾಗಿ ಅವಳೆದುರು ಎಳೆಯಹುಡುಗನಂತೆ ಕುಣಿಯುವುದು.

೧೦ ನೃತ್ಯವನ್ನು ಚೆನ್ನಾಗಿ ಕಲಿತು ತಲೆಯಮೇಲೆ ರುದ್ರಾಕ್ಷಿಯಿಂದ ಅಲಂಕೃತವಾದ ಆ ಹುಂಜವು ಆ ಕೋತಿಯೊಡನೆ ಕೂಡಿ ನೋಡಿದವರ ಮನಸ್ಸು ಸಂತೋಷದಿಂದ ನಲಿಯುವಂತೆ ನಿತ್ಯವೂ ನರ್ತನಮಾಡುವುದು.

೧೧. ಈರೀತಿಯಾಗಿ ಶಿವನಲ್ಲಿಯೇ ಯಾವಾಗಲೂ ಭಕ್ತಿಯು ನೆಲೆಸಿರುವ ಆ ಮಹಾನಂದೆಯೆಂಬ ವೇಶ್ಯೆಯು ಪ್ರತಿನಿತ್ಯವೂ ಈ ಆಶ್ಚರ್ಯವನ್ನು ನಡೆಸುತ್ತಾ ಬಹುಸಂತೋಷದಲ್ಲಿರುತ್ತಿದ್ದಳು.

ಶಿವಭಕ್ತಿಂ ಪ್ರಕುರ್ವಂತ್ಯಾ ವೇಶ್ಯಯಾ ಮುನಿಸತ್ತಮ ।
ಬಹುಕಾಲೋ ವ್ಯತೀಯಾಯ ತಸ್ಯಾಃ ಪರಮಸೌಖ್ಯತಃ　　॥ ೧೨ ॥

ಏಕದಾ ಚ ಗೃಹೇ ತಸ್ಯಾ ವೈಶ್ಯೋ ಭೂತ್ವಾ ಶಿವಸ್ಸ್ವಯಂ ।
ಪರೀಕ್ಷಿತುಂ ಚ ತದ್ಭಾವಮಾಜಗಾಮ ಶುಭೋ ವ್ರತೀ　　॥ ೧೩ ॥

ತ್ರಿಪುಂಡ್ರವಿಲಸದ್ಭಾಲೋ ರುದ್ರಾಕ್ಷಾಭರಣಃ ಕೃತೀ ।
ಶಿವನಾಮಜಪಾಸಕ್ತೋ ಜಟಿಲಃ ಶೈವವೇಷಭೃತ್　　॥ ೧೪ ॥

ಸ ಬಿಭ್ರದ್ಭಸ್ಮನಿಚಯಂ ಪ್ರಕೋಷ್ಠೇ ವರಕಂಕಣಂ ।
ಮಹಾರತ್ನಪರಿಸ್ತೀರ್ಣಂ ರಾಜತೇ ಪರಕೌತುಕೀ　　॥ ೧೫ ॥

---

೧೨. ಎಲೈ ಮುನಿಶ್ರೇಷ್ಠನೇ, ಹೀಗೆಯೇ ಶಿವನನ್ನೇ ನಂಬಿರುವ ಆ ವಾರಾಂಗನೆಯು ಬಹುಸುಖವಾಗಿ ಇರುತ್ತಿರಲು ಅನೇಕಕಾಲವು ಕಳೆದುಹೋಯಿತು

೧೩. ಒಂದಾನೊಂದುಸಲ ಇವಳ ಮನೋಭಾವವನ್ನು ಪರೀಕ್ಷಿಸಬೇಕೆಂದು ಸಾಕ್ಷಾತ್ ಶಂಕರನೇ ವ್ರತವೊಂದನ್ನು ನಿಯಮದಿಂದ ಹಿಡಿದಿರುವ ವೈಶ್ಯನೊಬ್ಬನಂತೆ ವೇಷವನ್ನು ತಾಳಿ ಇವಳ ಮನೆಗೆ ಬಂದನು

೧೪ ಆ ವೈಶ್ಯನು ಹಣೆಯಲ್ಲಿ ಮೂರೆಳೆ ವಿಭೂತಿಯನ್ನು ಧರಿಸಿದ್ದನು. ರುದ್ರಾಕ್ಷಿಗಳನ್ನು ಒಡವೆಯಹಾಗೆ ಮೈಮೇಲೆಲ್ಲಾ ಅಲಂಕರಿಸಿಕೊಂಡಿದ್ದನು. ಯಾವಾಗಲೂ ಶಿವನ ನಾಮಗಳನ್ನೇ ಜಪಿಸುತ್ತಿದ್ದನು. ಅವನ ತಲೆಯು ಜಡೆಗಟ್ಟಿಹೋಗಿತ್ತು ಈರೀತಿ ಶೈವವ್ರತವನ್ನು ಧರಿಸಿರುವವನಂತೆ ವೇಷವನ್ನು ತಳೆದಿದ್ದ ಆ ನೆಟ್ಟಿಯು,

೧೫. ಮೈಗೆಲ್ಲಾ ಭಸ್ಮವನ್ನು ತೊಡೆದುಕೊಂಡಿದ್ದುದಲ್ಲದೆ ಮುಂಗೈಯಲ್ಲಿ ಬೆಲೆಯೇ ಕಟ್ಟಲಾಗದಂತಹ ಒಳ್ಳೆಯ ರತ್ನಖಚಿತವಾದ ಕಡಗಗಳನ್ನು ತೊಟ್ಟು ಜನರಿಗೆಲ್ಲರಿಗೂ ಆಶ್ಚರ್ಯಕರವಾಗಿ ಕಾಣತೊಡಗಿದನು.

ತಮಾಗತಂ ಸುಸಂಪೂಜ್ಯ ಸಾ ವೇಶ್ಯಾ ಪರಯಾ ಮುದಾ ।
ಸ್ವಸ್ಥಾನೇ ಸಾದರಂ ವೈಶ್ಯಂ ಸುಂದರೀ ಹಿ ನ್ಯವೇಶಯತ್ ॥ ೧೬ ॥

ತತ್ಪ್ರಕೋಷ್ಠೇ ವರಂ ವೀಕ್ಷ್ಯ ಕಂಕಣಂ ಸುಮನೋಹರಂ ।
ತಸ್ಮಿಞ್ಜಾತಸ್ಪೃಹಾ ಸಾ ಚ ತಂ ಪ್ರೋವಾಚ ಸುವಿಸ್ಮಿತಾ ॥ ೧೭ ॥

॥ ಮಹಾನಂದೋವಾಚ ॥

ಮಹಾರತ್ನಮಯಶ್ಚಾಯಂ ಕಂಕಣಸ್ತ್ವತ್ಕರೇ ಸ್ಥಿತಃ ।
ಮನೋ ಹರತಿ ಮೇ ಸದ್ಯೋ ದಿವ್ಯಸ್ತ್ರೀಭೂಷಣೋಚಿತಃ ॥ ೧೮ ॥

॥ ನಂದೀಶ್ವರ ಉವಾಚ ॥

ಇತಿ ತಾಂ ನವರತ್ನಾಢ್ಯೇ ಸಸ್ಪೃಹಾಂ ಕರಭೂಷಣೇ ।
ವೀಕ್ಷ್ಯೋದಾರಮತಿರ್ವೈಶ್ಯಃ ಸಸ್ಮಿತಂ ಸಮಭಾಷತ ॥ ೧೯ ॥

---

೧೬. ಆ ಶೆಟ್ಟಿಯು ಬಂದುದನ್ನು ಕಂಡು ಸುಂದರಿಯಾದ ಆ ವೇಶ್ಯೆಯು ಬಹುಸಂತೋಷವನ್ನು ತಾಳಿ ಆದರದಿಂದ ತನ್ನ ಆಸನದಲ್ಲಿಯೇ ಕುಳ್ಳಿರಿಸಿ ಚೆನ್ನಾಗಿ ಉಪಚರಿಸಿದಳು.

೧೭. ಅನಂತರ ಅವನ ಮುಂಗೈಗಳಲ್ಲಿ ಮನೋಹರವಾಗಿ ಕಂಗೊಳಿಸುತ್ತಿರುವ ರತ್ನಖಚಿತವಾದ ಕಡಗಗಳನ್ನು ಕಂಡ ಒಡನೆಯೇ ಅವುಗಳಲ್ಲಿ ಆಸೆಹುಟ್ಟಿ ಆ ವೇಶ್ಯೆಯು ಮೆಲುನಗೆಯನ್ನು ಬೀರುತ್ತಾ ಅವನನ್ನಿಂತೆಂದಳು.

೧೮. ನಿನ್ನ ಕೈಗಳಲ್ಲಿ ಶೋಭಿಸುತ್ತಿರುವ ಅಮೂಲ್ಯವಾದ ರತ್ನಗಳನ್ನು ಮೆಟ್ಟಿರುವ ಈ ಕಡಗಗಳು ದೇವತಾಸ್ತ್ರೀಯರು ತೊಡಲು ಅರ್ಹವಾದುವು. ಅವು ಕಣ್ಣಿಗೆ ಬಿದ್ದೊಡನೆಯೇ ನನ್ನ ಮನಸ್ಸನ್ನು ಅಪಹರಿಸಿಬಿಟ್ಟಿವೆ.

೧೯. ಎಲೈ ಮುನಿಯೇ, ಹೀಗೆ ನವರತ್ನಖಚಿತವಾದ ಕಡಗಗಳಲ್ಲಿ ಆ ವೇಶ್ಯೆಗೆ ಆಸೆಯಿರುವುದನ್ನು ಕಂಡು ಔದಾರ್ಯಶಾಲಿಯಾದ ವೈಶ್ಯನು ನಗುನಗುತ್ತಾ ಅವಳನ್ನು ಕುರಿತು

॥ ವೈಶ್ಯನಾಥ ಉವಾಚ ॥

ಅಸ್ಮಿನ್ರತ್ನವರೇ ದಿವ್ಯೇ ಸಸ್ಪೃಹಂ ಯದಿ ತೇ ಮನಃ ।
ತ್ವಮೇವಾಧತ್ಸ್ವ ಸುಪ್ರೀತ್ಯಾ ಮೌಲ್ಯಮಸ್ಯ ದದಾಸಿ ಕಿಂ ॥ ೨೦ ॥

॥ ವೇಶ್ಯೋವಾಚ ॥

ವಯಂ ಹಿ ಸ್ವೈರಚಾರಿಣ್ಯೋ ವೇಶ್ಯಾಸ್ತು ನ ಪತಿವ್ರತಾಃ ।
ಅಸ್ಮತ್ಕುಲೋಚಿತೋ ಧರ್ಮೋ ವ್ಯಭಿಚಾರೋ ನ ಸಂಶಯಃ ॥ ೨೧ ॥

ಯದ್ಯೇತದಖಿಲಂ ಚಿತ್ತಂ ಗೃಹ್ಣಾತಿ ಕರಭೂಷಣಂ ।
ದಿನತ್ರಯಮಹೋರಾತ್ರಂ ಪತ್ನೀ ತವ ಭವಾಮ್ಯಹಂ ॥ ೨೨ ॥

॥ ವೈಶ್ಯ ಉವಾಚ ॥

ತಥಾಸ್ತು ಯದಿ ತೇ ಸತ್ಯಂ ವಚನಂ ವೀರವಲ್ಲಭೇ ।
ದದಾಮಿ ರತ್ನವಲಯಂ ತ್ರಿರಾತ್ರಂ ಭವ ಮೇ ವಧೂಃ ॥ ೨೩ ॥

---

೨೦. ಎಲೆ ಸುಂದರಿಯೇ, ದಿವ್ಯವಾದ ಈ ಕಡಗಗಳಲ್ಲಿ ನಿನಗೆ ಆಸೆಯಿರುವ ಪಕ್ಷಕ್ಕೆ ಸಂತೋಷದಿಂದ ಇವುಗಳನ್ನು ನೀನೇ ತೊಟ್ಟುಕೋ ಆದರೆ ನೀನಿದಕ್ಕೆ ಏನು ಬೆಲೆಯನ್ನು ಕೊಡುವೆ ?

೨೧ ಎಂಬುದಾಗಿ ವೈಶ್ಯನು ಕೇಳಲು ಆ ವೇಶ್ಯೆಯು ಇಂತೆಂದಳು ,—ನಾವು ಮನಸ್ಸುಬಂದಂತೆ ನಡೆಯುವ ವೇಶ್ಯೆಯರು ನಾವು ಒಬ್ಬನನ್ನೇ ಪತಿಯೆಂದು ನೆಚ್ಚಿ ಕೊಂಡಿರುವ ಪತಿವ್ರತೆಯರಲ್ಲ ನಮ್ಮ ಕುಲಧರ್ಮವು ವ್ಯಭಿಚಾರವೆಂಬುದಂತೂ ನಿಜ ವಾದುದೇ

೨೨. ಆದರೂ ಈ ಕಡಗಗಳು ನನ್ನ ಮನಸ್ಸನ್ನು ಸಂಪೂರ್ಣವಾಗಿ ಅಪಹರಿಸಿ ಬಿಟ್ಟಿರುವುದರಿಂದ ನಾನು ನಿನಗೆ ಮೂರುದಿನಗಳವುಟ್ಟಿಗೆ ಹಗಲಿನಲ್ಲಿಯೂ ರಾತ್ರಿಯ ಲ್ಲಿಯೂ ಒಂದುಕ್ಷಣವೂ ಬಿಡದೆ ಪತ್ನಿಯಂತೆ ನಡೆದುಕೊಳ್ಳುವೆನು ಎಂದಳು.

೨೩ ಆಗ ವೈಶ್ಯನು ಇಂತೆಂದನು ,—ಹಾಗೆಯೇ ಆಗಲಿ ಎಲೈ ವೀರಾಂ ಗನೆಯೇ ನಿನ್ನ ಮಾತು ನಿಜವೇ ಆದಲ್ಲಿ ನಿನಗೆ ಈ ರತ್ನಮಯವಾದ ಕಡಗಗಳನ್ನು ಕೊಡುವೆನು. ಮೂರುದಿನಗಳು ನನಗೆ ಪತ್ನಿಯಂತೆ ನಡೆದುಕೋ

ಏತಸ್ಮಿನ್ವ್ಯವಹಾರೇ ತು ಪ್ರಮಾಣಂ ಶಶಿಭಾಸ್ಕರೌ ।
ತ್ರಿವಾರಂ ಸತ್ಯಮಿತ್ಯುಕ್ತ್ವಾ ಹೃದಯಂ ಮೇ ಸ್ಪೃಶ ಪ್ರಿಯೇ ॥ ೨೪ ॥

॥ ವೇಶ್ಯೋವಾಚ ॥

ದಿನತ್ರಯಮಹೋರಾತ್ರಂ ಪತ್ನೀ ಭೂತ್ವಾ ತವ ಪ್ರಭೋ ।
ಸಹಧರ್ಮಂ ಚರಾಮೀತಿ ಸತ್ಯಂಸತ್ಯಂ ನ ಸಂಶಯಃ ॥ ೨೫ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಹಿ ಮಹಾನಂದಾ ತ್ರಿವಾರಂ ಶಶಿಭಾಸ್ಕರೌ ।
ಪ್ರಮಾಣೀಕೃತ್ಯ ಸುಪ್ರೀತ್ಯಾ ಸಾ ತದ್ಧೃದಯಮಸ್ಪೃಶತ್ ॥ ೨೬ ॥

ಅಥ ತಸ್ಯೈ ಸ ವೈಶ್ಯಸ್ತು ಪ್ರದದೌ ರತ್ನಕಂಕಣಂ ।
ಲಿಂಗಂ ರತ್ನಮಯಂ ತಸ್ಯಾ ಹಸ್ತೇ ದತ್ವೇದಮಬ್ರವೀತ್ ॥ ೨೭ ॥

---

೨೪. ಎಲೌ ಪ್ರಿಯಳೇ, ಈ ನಿಬಂಧನೆಗೆ ಸೂರ್ಯಚಂದ್ರರೇ ಸಾಕ್ಷಿಯೆಂದು ಮೂರುಸಾರಿ ಹೇಳಿ ನನ್ನ ಎದೆಯನ್ನು ಮುಟ್ಟು ಎನ್ನಲು,

೨೫. ಆಗ ಆ ಮಹಾನಂದೆಯು ಸಂತೋಷದಿಂದ ಎಲೆ ಕಾಂತನೇ, ಖಂಡಿತವಾಗಿಯೂ ಮೂರುದಿನಗಳಮಟ್ಟಿಗೆ ಹಗಲೆನ್ನದೆ ರಾತ್ರಿಯೆನ್ನದೆ ಒಂದು ಗಳಿಗೆಯೂ ಬಿಡದೆ ನಿನ್ನೊಡನೆ ಧರ್ಮದಿಂದ ನಡೆದುಕೊಳ್ಳುವೆನು, ಇದುಸತ್ಯವು, ಇದು ಸತ್ಯವು ಎಂದಳು.

೨೬. ಎಲೈ ಮುನಿಯೇ, ಈರೀತಿಯಾಗಿ ಮಹಾನಂದೆಯು ಮೂರುಬಾರಿ ನುಡಿದು ಸೂರ್ಯಚಂದ್ರರನ್ನು ಸಾಕ್ಷಿಯಾಗಿರಿಸಿ ಪ್ರೀತಿಯಿಂದ ಅವನ ಎದೆಯನ್ನು ಮುಟ್ಟಿದಳು.

೨೭. ಅನಂತರ ಆ ವೈಶ್ಯನು ರತ್ನಖಚಿತವಾದ ಕಡಗಗಳನ್ನು ಅವಳಿಗೆ ಕೊಟ್ಟುಬಿಟ್ಟನು. ಬಳಿಕ ಒಂದು ರತ್ನಮಯವಾದ ಲಿಂಗವನ್ನು ಅವಳ ಕೈಗೆ ಇತ್ತು ಈರೀತಿ ನುಡಿದನು.

॥ ವೈಶ್ಯನಾಥ ಉವಾಚ ॥

ಇದಂ ರತ್ನಮಯಂ ಲಿಂಗಂ ಶೈವಂ ಮತ್ಪ್ರಾಣವಲ್ಲಭಂ ।
ರಕ್ಷಣೀಯಂ ತ್ವಯಾ ಕಾಂತೇ ಗೋಪನೀಯಂ ಪ್ರಯತ್ನತಃ ॥ ೨೮ ॥

॥ ನಂದೀಶ್ವರ ಉವಾಚ ॥

ಏವಮಸ್ತ್ವಿತಿ ಸಾ ಪ್ರೋಚ್ಯ ಲಿಂಗಮಾದಾಯ ರತ್ನಜಂ ।
ನಾಟ್ಯಮಂಡಪಿಕಾಮಧ್ಯೇ ನಿಧಾಯ ಪ್ರಾವಿಶದ್ಗೃಹಂ ॥ ೨೯ ॥

ಸಾ ತೇನ ಸಂಗತಾ ರಾತ್ರೌ ವೈಶ್ಯೇನ ವಿಟಧರ್ಮಿಣಾ ।
ಸುಖಂ ಸುಷ್ವಾಪ ಪರ್ಯಂಕೇ ಮೃದುತಲ್ಪೋಪಶೋಭಿತೇ ॥ ೩೦ ॥

ತತೋ ನಿಶೀಥಸಮಯೇ ಮುನೇ ವೈಶ್ಯಪತೀಚ್ಛಯಾ ।
ಅಕಸ್ಮಾದುತ್ಥಿತಾ ವಾಣೀ ನೃತ್ಯಮಂಡಪಿಕಾಂತರೇ ॥ ೩೧ ॥

---

೨೮ ಎಲೌ ಪ್ರಿಯಳೇ, ಈ ರತ್ನಖಚಿತವಾದ ಶಿವಲಿಂಗವು ನನ್ನ ಪ್ರಾಣಗಳಿಗಿಂತಲೂ ಹೆಚ್ಚು ಪ್ರಿಯವಾದುದು. ಆದುದರಿಂದ ನೀನಿದನ್ನು ರಹಸ್ಯವಾಗಿಟ್ಟಿದ್ದು ಬಹು ಎಚ್ಚರಿಕೆಯಿಂದ ಸಂರಕ್ಷಿಸಬೇಕು ಎಂದನು

೨೯. ಎಲೈ ಸನತ್ಕುಮಾರನೇ, ಹೀಗೆ ವೈಶ್ಯನು ನುಡಿಯಲು ಆ ಮಹಾನಂದೆಯು, ಹಾಗೆಯೇ ಆಗಲೆಂದು ಹೇಳಿ ಆ ರತ್ನನಿರ್ಮಿತವಾದ ಲಿಂಗವನ್ನು ನಾಟ್ಯಮಂಟಪದ ನಡುವೆ ಇಟ್ಟು ತನ್ನ ಮನೆಯೊಳಕ್ಕೆ ಹೋದಳು

೩೦ ವಿಟಪುರುಷನಂತೆ ವರ್ತಿಸುತ್ತಿರುವ ಆ ಕಪಟವೈಶ್ಯನೊಡನೆ ಆ ವೇಶ್ಯೆಯು ಮೆತ್ತನೆಯ ಸುಪ್ಪತ್ತಿಗೆಯಿಂದ ಒಪ್ಪುತ್ತಿರುವ ಮಂಚದಲ್ಲಿ ಪವಡಿಸಿ ಕೆಲಹೊತ್ತು ವಿಲಾಸದಿಂದಿದ್ದು ಬಳಿಕ ಸುಖವಾಗಿ ನಿದ್ರೆಮಾಡಿದಳು

೩೧. ಬಳಿಕ ಸರಿಹೊತ್ತಿನಲ್ಲಿ ವೈಶ್ಯವೇಷಧಾರಿಯಾದ ಶಿವನ ಇಚ್ಛೆಯಂತೆ ಆ ನರ್ತನಮಂಟಪದ ಮಧ್ಯದಿಂದ ಇದ್ದಕ್ಕಿದ್ದಂತೆ ಗೊಂದಲದ ಕೂಗುಂಟಾಯಿತು.

ಮಹಾಪ್ರಜ್ವಲಿತೋ ವಹ್ನಿಃ ಸುಸಮೀರಸಹಾಯವಾನ್ ।
ನಾಟ್ಯಮಂಡಪಿಕಾಂ ತಾತ ತಾಮೇವ ಸಹಸಾವೃಣೋತ್ ॥ ೩೨ ॥

ಮಂಡಪೇ ದಹ್ಯಮಾನೇ ತು ಸಹಸೋತ್ಥಾಯ ಸಂಭ್ರಮಾತ್ ।
ಮರ್ಕಟಂ ಮೋಚಯಾಮಾಸ ಸಾ ವೇಶ್ಯಾ ತತ್ರ ಬಂಧನಾತ್ ॥ ೩೩ ॥

ಸ ಮರ್ಕಟೋ ಮುಕ್ತಬಂಧಃ ಕುಕ್ಕುಟೇನ ಸಹಾಮುನಾ ।
ಭಿಯಾ ದೂರಂ ಹಿ ದುದ್ರಾವ ವಿಧೂಯಾಗ್ನಿಕಣಾನ್ಬಹೂನ್ ॥ ೩೪ ॥

ಸ್ತಂಭೇನ ಸಹ ನಿರ್ದಗ್ಧಂ ತಲ್ಲಿಂಗಂ ಶಕಲೀಕೃತಂ ।
ದೃಷ್ಟ್ವಾ ವೇಶ್ಯಾ ಸ ವೈಶ್ಯಶ್ಚ ದುರಂತಂ ದುಃಖಮಾಪತುಃ ॥ ೩೫ ॥

---

೩೨. ಅಪ್ಪಾ ಮುನಿಯೇ, ಆ ನಾಟ್ಯಮಂಟಪಕ್ಕೆ ಬೆಂಕಿ ಬಿದ್ದುಬಿಟ್ಟಿತ್ತು ಆಗ ಗಾಳಿಯೂ ಅದಕ್ಕೆ ಜೊತೆಯಾಗಿ ಬೀಸತೊಡಗಿದುದರಿಂದ ಆ ಬೆಂಕಿಯು ಧಗ್ಗನೆ ಹೊತ್ತಿಕೊಂಡು ಬಹು ಜೋರಾಗಿ ಆ ಮಂಟಪವನ್ನೆಲ್ಲಾ ಮುತ್ತಿಕೊಂಡು ಉರಿಯ ತೊಡಗಿತು.

೩೩ ಈರೀತಿ ಮಂಡಪವು ಉರಿಯುತ್ತಿರುವುದನ್ನು ಕಂಡು ಆ ವೇಶ್ಯೆಯು ಗಾಬರಿಯಿಂದ ತಟ್ಟನೆ ಎದ್ದು ಓಡಿಹೋಗಿ ಅಲ್ಲಿದ್ದ ಕೋತಿಯ ಸರಪಳಿಯನ್ನು ಬಿಚ್ಚಿ ಅದನ್ನು ಬಿಡಿಸಿದಳು.

೩೪. ಆ ಕೋತಿಯು ತನ್ನಂತೆಯೇ ಸರಪಳಿಯಿಂದ ಬಿಡಿಸಲ್ಪಟ್ಟ ಹುಂಜ ನೊಂದಿಗೆ ಬೆಂಕಿಯ ಕಿಡಿಗಳನ್ನು ಕೆಡವಿಕೊಳ್ಳುತ್ತಾ ಹೆದರಿಕೆಯಿಂದ ದೂರವಾಗಿ ಓಡಿಹೋಯಿತು.

೩೫. ಆಗ ಮಂಡಪದಲ್ಲಿದ್ದ ಕಂಭವು ಉರಿಗೆ ಸಿಕ್ಕಿ ಸುಟ್ಟು ಚೂರುಚೂರಾ ದಂತೆ ಅಲ್ಲಿದ್ದ ರತ್ನಮಯವಾದ ಲಿಂಗವೂ ಸಹ ಸುಟ್ಟುಹೋಗಿ ಚೂರುಚೂರಾಯಿತು. ಇದನ್ನು ಕಂಡು ಆ ವೈಶ್ಯನೂ ವೇಶ್ಯೆಯೂ ಬಹುವಾಗಿ ವ್ಯಥೆಯನ್ನು ಹೊಂದಿದರು.

ದೃಷ್ಟ್ವಾ ಹ್ಯಾತ್ಮಸಮಂ ಲಿಂಗಂ ದಗ್ಧಂ ವೈಶ್ಯಪತಿಸ್ತದಾ ।
ಜ್ಞಾತುಂ ತದ್ಭಾವಮಂತಃಸ್ಥಂ ಮರಣಾಯ ಮತಿಂ ದಧೇ ॥ ೩೬ ॥

ನಿವಿಶ್ಯೇತಿತರಾಂ ಖೇದಾದ್ವೈಶ್ಯಸ್ತಾಮಾಹ ದುಃಖಿತಾಂ ।
ನಾನಾಲೀಲೋ ಮಹೇಶಾನಃ ಕೌತುಕಾನ್ನರದೇಹವಾನ್ ॥ ೩೭ ॥

॥ ವೈಶ್ಯಪತಿರುವಾಚ ॥

ಶಿವಲಿಂಗೇ ತು ನಿರ್ಭಿನ್ನೇ ದಗ್ಧೇ ಮತ್ಪ್ರಾಣವಲ್ಲಭೇ ।
ಸತ್ಯಂ ವಚ್ಮಿ ನ ಸಂದೇಹೋ ನಾಹಂ ಜೀವಿತುಮುತ್ಸಹೇ ॥ ೩೮ ॥

ಚಿತಾಂ ಕಾರಯ ಮೇ ಭದ್ರೇ ಸ್ವಭೃತ್ಯೈಸ್ತ್ವಂ ವರೈರ್ಲಘು ।
ಶಿವೇ ಮನಸ್ಸಮಾವೇಶ್ಯ ಪ್ರವೇಕ್ಷ್ಯಾಮಿ ಹುತಾಶನಂ ॥ ೩೯ ॥

---

೩೬. ತನ್ನ ಪ್ರಾಣಗಳಂತೆ ಪ್ರಿಯವಾಗಿದ್ದ ಆ ಲಿಂಗವು ಸುಟ್ಟು ಕರಗಿದು ದನ್ನು ಕಂಡು ಆ ವೈಶ್ಯನು ಮಹಾನಂದಯ ಮನಸ್ಸಿನ ಭಾವವೇನೆಂಬುದನ್ನು ಸರಿಯಾಗಿ ಅರಿಯಬೇಕೆಂದು ನಿಶ್ಚಯಿಸಿ ಒಂದು ಉಪಾಯವನ್ನು ಮಾಡಿದನು.

೩೭. ವಿನೋದಾರ್ಥವಾಗಿ ಮನುಷ್ಯರೂಪವನ್ನು ಧರಿಸಿ ವೈಶ್ಯನಂತೆ ನಟಿಸು ತ್ತಿರುವ ಆ ಮಹೇಶ್ವರನು ವ್ಯಸನಪಡುತ್ತಿರುವ ಆ ವೇಶ್ಯೆಯನ್ನು ಕುರಿತು ಖೇದ ದಿಂದ ಇಂತು ಹೇಳಿದನು

೩೮. ನನ್ನ ಪ್ರಾಣಕ್ಕಿಂತಲೂ ಪ್ರಿಯವಾದ ಈ ಶಿವಲಿಂಗವು ಸುಟ್ಟು ಚೂರು ಚೂರಾಗಿ ಹೋದಮೇಲೆ ನಾನಿನ್ನು ಬದುಕಿರಲು ಇಷ್ಟಪಡಲಾರೆ. ಇದರಲ್ಲಿ ಸಂದೇಹ ಬೇಡ. ಇದು ಖಂಡಿತ

೩೯. ಎಲೌ ಮಂಗಳಾಂಗಿಯೇ, ಬೇಗನೆ ನಿನ್ನ ಸೇವಕರಿಂದ ನನಗಾಗಿ ಚಿತಿ ಯನ್ನು ಸಿದ್ಧಗೊಳಿಸು. ನಾನು ಶಿವನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ ಈ ದೇಹ ವನ್ನು ಬೆಂಕಿಯಲ್ಲಿ ನೀಗುವೆನು

ಯದಿ ಬ್ರಹ್ಮೇಂದ್ರವಿಷ್ಣ್ವಾದ್ಯಾ ವಾರಯೇಯುಃ ಸಮೇತ್ಯ ಮಾಂ ।
ತಥಾಪ್ಯಸ್ಮಿನ್ ಕ್ಷಣೇ ಭದ್ರೇ ಪ್ರವಿಶಾಮಿ ತ್ಯಜಾಮ್ಯಸೂನ್ ॥ ೪೦ ॥

॥ ನಂದೀಶ್ವರ ಉವಾಚ ॥

ತಮೇವಂ ದೃಢನಿರ್ಬಂಧಂ ಸಾ ವಿಜ್ಞಾಯ ಸುದುಃಖಿತಾ ।
ಸ್ವಭೃತ್ಯೈಃ ಕಾರಯಾಮಾಸ ಚಿತಾಂ ಸ್ವಭವನಾದ್ಬಹಿಃ ॥ ೪೧ ॥

ತತಸ್ಸ ವೈಶ್ಯಸ್ತ್ವವ ಏಕ ಏವ
ಪ್ರದಕ್ಷಿಣೀಕೃತ್ಯ ಸಮಿದ್ಧಮಗ್ನಿಂ ।
ವಿವೇಶ ಪಶ್ಯತ್ಸು ನರೇಷು ಧೀರಃ
ಸುಕೌತುಕೀ ಸಂಗತಿಭಾವಮಿಚ್ಛುಃ ॥ ೪೨ ॥

ದೃಷ್ಟ್ವಾ ಸಾ ತದ್ಗತಿಂ ವೇಶ್ಯಾ ಮಹಾನಂದಾತಿ ವಿಸ್ಮಿತಾ ।
ಅನುತಾಪಂ ಚ ಯುವತೀ ಪ್ರಪೇದೇ ಮುನಿಸತ್ತಮ ॥ ೪೩ ॥

---

೪೦. ಒಂದುವೇಳೆ ಈಗ ಬ್ರಹ್ಮನೂ ವಿಷ್ಣುವೂ ಇಂದ್ರಾದಿದೇವತೆಗಳೂ ಎಲ್ಲರೂ ಒಟ್ಟಿಗೆ ನನ್ನನ್ನು ತಡೆಯಬಂದರೂ ಕೂಡ ನಾನೀಗಲೇ ಉರಿಯುತ್ತಿರುವ ಚಿತೆಯನ್ನು ಹೊಗಲಾರದೆ ಇರೆನು ಕೂಡಲೇ ಈ ಪ್ರಾಣಗಳನ್ನು ತೊರೆಯುವೆನು.

೪೧. ಎಲೈ ಮುನಿಯೇ, ಈರೀತಿ ಆ ಕಪಟವೈಶ್ಯನು ನಿರ್ಬಂಧಪಡಿಸುತ್ತಿರುವುದನ್ನು ಕಂಡು ಆ ವೇಶ್ಯೆಯು ಮತ್ತಷ್ಟು ದುಃಖಿತಳಾಗಿ ತನ್ನ ಸೇವಕರಿಗೆ ಹೇಳಿ ತನ್ನ ಮನೆಯ ಹೊರಗಡೆ ಅವನಿಗೆ ಚಿತೆಯನ್ನು ಒಡ್ಡಿಸಿದಳು.

೪೨. ಆ ವೇಶ್ಯೆಗೆ ತನ್ನಲ್ಲಿರುವ ಪ್ರೀತಿಯ ಆಳವನ್ನು ತಿಳಿಯಬೇಕೆಂಬ ಕುತೂಹಲದಿಂದ ವೈಶ್ಯನ ವೇಷವನ್ನು ಧರಿಸಿಬಂದಿರುವ ಆ ಶಿವನು ಸುತ್ತಲೂ ಜನರೆಲ್ಲರೂ ನೋಡುತ್ತಿರುವಂತೆಯೇ ಉರಿಯುತ್ತಿರುವ ಬೆಂಕಿಗೆ ಪ್ರದಕ್ಷಿಣವಾಗಿ ಬಂದು ಅದನ್ನು ಹೊಕ್ಕುಬಿಟ್ಟನು.

೪೩. ಎಲೈ ಮುನಿಶ್ರೇಷ್ಠನೇ, ಆ ಮಹಾನಂದೆಯೆಂಬ ತುಂಬುಪ್ರಾಯದಲ್ಲಿರುವ ವೇಶ್ಯೆಯು ತನ್ನ ಪ್ರಿಯನೆಸಗಿದ ಸಾಹಸಕೃತ್ಯವನ್ನು ಕಂಡು ಕ್ಷಣಕಾಲ ಅತ್ಯಾಶ್ಚರ್ಯವನ್ನು ತಳೆದಿದ್ದು ಬಳಿಕ ದುಃಖಿಸಲಾರಂಭಿಸಿದಳು.

**ಅಥ ಸಾ ದುಃಖಿತಾ ವೇಶ್ಯಾ ಸ್ಮೃತ್ವಾ ಧರ್ಮಂ ಸುನಿರ್ಮಲಂ ।**
**ಸರ್ವಾನ್ಬಂಧುಜನಾನ್ವೀಕ್ಷ್ಯ ಬಭಾಷೇ ಕರುಣಂ ವಚಃ ॥ ೪೪ ॥**

**॥ ಮಹಾನಂದೋವಾಚ ॥**

**ರತ್ನಕಂಕಣಮಾದಾಯ ಮಯಾ ಸತ್ಯಮುದಾಹೃತಂ ।**
**ದಿನತ್ರಯಮಹಂ ಪತ್ನೀ ವೈಶ್ಯಸ್ಯಾಮುಷ್ಯ ಸಂಮತಾ ॥ ೪೫ ॥**

**ಕರ್ಮಣಾ ಮತ್ಕೃತೇನಾಯಂ ಮೃತೋ ವೈಶ್ಯಃ ಶಿವವ್ರತೀ ।**
**ತಸ್ಮಾದಹಂ ಪ್ರವೇಕ್ಷ್ಯಾಮಿ ಸಹಾನೇನ ಹುತಾಶನಂ ॥ ೪೬ ॥**

**ಸ್ವಧರ್ಮಚಾರಿಣೀತ್ಯುಕ್ತಾ ಮಾಚಾರ್ಯೈಃ ಸತ್ಯವಾದಿಭಿಃ ।**
**ಏವಂ ಕೃತೇ ಮಮ ಪ್ರೀತ್ಯಾ ಸತ್ಯಂ ಮಯಿ ನ ನಶ್ಯತು ॥ ೪೭ ॥**

---

೪೪ ಅನಂತರ ಆ ದುಃಖಿತಳಾದ ವೇಶ್ಯೆಯು ತಾನೀಗ ಮಾಡಬೇಕಾದ ನಿಷ್ಕಲಂಕವಾದ ಧರ್ಮವೇನೆಂಬುದನ್ನು ನಿಶ್ಚಯಿಸಿ ತನ್ನ ಬಂಧುಗಳನ್ನು ಕರೆದು ಅವರನ್ನು ಕುರಿತು ಈರೀತಿ ಮರುಕಹುಟ್ಟುವಂತೆ ಹೇಳಿದಳು

೪೫ ನಾನೀ ವೈಶ್ಯನ ಬಳಿಯಿದ್ದ ರತ್ನದ ಕಡಗಗಳನ್ನು ತೆಗೆದುಕೊಂಡು ಮೂರುದಿನಗಳು ಈತನೊಡನೆ ಪತ್ನಿಯಂತೆ ನಡೆದುಕೊಳ್ಳುವೆನೆಂಬುದಾಗಿ ಮಾತು ಕೊಟ್ಟಿದ್ದೆನು

೪೬ ನನ್ನ ಪ್ರಾರಬ್ಧಕರ್ಮದಿಂದ ಶೈವವ್ರತಧಾರಿಯಾದ ಈ ವೈಶ್ಯನು ಇಂತು ಮರಣವನ್ನು ಹೊಂದಿದನು. ಆದುದರಿಂದ ನಾನೂ ಸಹ ಇವನೊಡನೆಯೇ ಈ ಉರಿಯುತ್ತಿರುವ ಬೆಂಕಿಯನ್ನು ಪ್ರವೇಶಿಸುವೆನು

೪೭. ಎಂದಿಗೂ ಸತ್ಯವನ್ನೇ ನುಡಿಯುವ ನನ್ನ ಗುರುವು ನೀನು ನಿನ ಧರ್ಮವನ್ನು ಬಿಡದೆ ನಡೆಸೆಂದು ನನಗೆ ಹೇಳಿರುವರು ನಾನೀರೀತಿ ಮಾಡುವುದರಿಂದ ಆ ಸತ್ಯವು ನನ್ನಲ್ಲಿ ಅಳಿಯದಿರಲಿ.

ಸತ್ಯಾಶ್ರಯಃ ಪರೋ ಧರ್ಮಃ ಸತ್ಯೇನ ಪರಮಾ ಗತಿಃ ।
ಸತ್ಯೇನ ಸ್ವರ್ಗಮೋಕ್ಷೌ ಚ ಸತ್ಯೇ ಸರ್ವಂ ಪ್ರತಿಷ್ಠಿತಂ ॥ ೪೮ ॥

॥ ನಂದೀಶ್ವರ ಉವಾಚ ॥

ಇತಿ ಸಾ ದೃಢನಿರ್ಬಂಧಾ ವಾರ್ಯಮಾಣಾಪಿ ಬಂಧುಭಿಃ ।
ಸತ್ಯಲೋಕಪರಾ ನಾರೀ ಪ್ರಾಣಾಂಸ್ತ್ಯಕ್ತುಂ ಮನೋ ದಧೇ ॥ ೪೯ ॥

ಸರ್ವಸ್ವಂ ದ್ವಿಜಮುಖ್ಯೇಭ್ಯೋ ದತ್ವಾ ಧ್ಯಾತ್ವಾ ಸದಾಶಿವಂ ।
ತಮಗ್ನಿಂ ತ್ರಿಃಪರಿಕ್ರಮ್ಯ ಪ್ರವೇಶಾಭಿಮುಖೀ ಹ್ಯಭೂತ್ ॥ ೫೦ ॥

ತಾಂ ಪತಂತೀಂ ಸಮಿದ್ಧೇಽಗ್ನೌ ಸ್ವಪದಾರ್ಪಿತಮಾನಸಾಂ ।
ವಾರಯಾಮಾಸ ವಿಶ್ವಾತ್ಮಾ ಪ್ರಾದುರ್ಭೂತಃ ಸ ವೈ ಶಿವಃ ॥ ೫೧ ॥

---

೪೮. ಸತ್ಯದಲ್ಲಿಯೇ ಶ್ರೇಷ್ಠವಾದ ಧರ್ಮವು ನೆಲೆಸಿರುವುದು. ಸತ್ಯದಿಂದಲೇ ಉತ್ತಮವಾದ ಗತಿಯು ದೊರೆಯುವುದು. ಸತ್ಯದಿಂದಲೇ ಸ್ವರ್ಗಮೋಕ್ಷಗಳು ಲಭಿಸುವುವು. ಸತ್ಯವೊಂದರಮೇಲೆಯೇ ಎಲ್ಲವೂ ಅವಲಂಬಿಸುವುದು ಎಂದಳು.

೪೯. ಎಲೈ ಮುನಿಯೇ, ಈರೀತಿ ಸತ್ಯವೊಂದರಲ್ಲಿಯೇ ನೆಟ್ಟದೃಷ್ಟಿಯುಳ್ಳ ಆ ವಾರಾಂಗನೆಯು ತನ್ನ ಬಂಧುಗಳು ಬೇಡಬೇಡವೆಂದು ತಡೆಯುತ್ತಿದ್ದರೂ ದೃಢ ಸಂಕಲ್ಪದಿಂದ ಪ್ರಾಣಗಳನ್ನು ಬಿಡಲು ನಿಶ್ಚಯಿಸಿದಳು.

೫೦. ಆಗ ಆಕೆಯು ತನ್ನ ಸ್ವತ್ತೆಲ್ಲವನ್ನೂ ಬ್ರಾಹ್ಮಣರಿಗೆ ದಾನಮಾಡಿ ಸರ್ವದಾ ಮಂಗಲಸ್ವರೂಪನಾದ ಶ್ರೀ ಶಂಕರನನ್ನು ಮನಸ್ಸಿನಲ್ಲಿ ನೆನೆದು ಆ ಚಿತಾಗ್ನಿಯನ್ನು ಮೂರುಸಲ ಪ್ರದಕ್ಷಿಣೆಮಾಡಿ ಅದರಲ್ಲಿ ಇನ್ನೇನು ಬೀಳಬೇಕೆಂದಿರುವಲ್ಲಿ,

೫೧. ಆಗ ಸರ್ವಸ್ವರೂಪನಾದ ಶ್ರೀ ಶಂಕರನು ತನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿ, ಉರಿಯುತ್ತಲಿರುವ ಬೆಂಕಿಯಲ್ಲಿ ಬಿದ್ದುಬಿಡುತ್ತಿದ್ದ ಆ ಮಹಾನಂದೆಯನ್ನು ತಟ್ಟನೆ ಪ್ರತ್ಯಕ್ಷನಾಗಿ ತಡೆದು ನಿಲ್ಲಿಸಿದನು.

ಸಾ ತಂ ವಿಲೋಕ್ಯಾಖಿಲದೇವದೇವಂ
ತ್ರಿಲೋಚನಂ ಚಂದ್ರಕಲಾವತಂಸಂ ।
ಶಶಾಂಕಸೂರ್ಯಾನಲಕೋಟಿಭಾಸಂ
ಸ್ತಬ್ಧೇವ ಭೀತೇವ ತಥೈವ ತಸ್ಥೌ ॥ ೫೨

ತಾಂ ವಿಹ್ವಲಾಂ ಸುವಿತ್ರಸ್ತಾಂ ವೇಪಮಾನಾಂ ಜಡೀಕೃತಾಂ ।
ಸಮಾಶ್ವಾಸ್ಯಗಲದ್ಬಾಷ್ಪಾಂ ಕರೌ ಧೃತ್ವಾಽಬ್ರವೀದ್ವಚಃ ॥ ೫೩ ॥

॥ ಶಿವ ಉವಾಚ ॥

ಸತ್ಯಂ ಧರ್ಮಂ ಚ ಧೈರ್ಯಂ ಚ ಭಕ್ತಿಂ ಚ ಮಯಿ ನಿಶ್ಚಲಾಂ ।
ಪರೀಕ್ಷಿತುಂ ತ್ವತ್ಸಕಾಶಂ ವೈಶ್ಯೋ ಭೂತ್ವಾಹಮಾಗತಃ ॥ ೫೪ ॥

---

೫೨ ಸಕಲ ದೇವತೆಗಳಿಗೂ ದೇವನೆನಿಸಿದವನೂ ಮೂರು ಕಣ್ಣುಗಳುಳ್ಳವನೂ ತಲೆಯಲ್ಲಿ ಚಂದ್ರಲೇಖೆಯನ್ನು ಕುಸುಮದಂತೆ ಧರಿಸಿರುವವನೂ ಏಕ ಕಾಲದಲ್ಲಿ ಆವಿರ್ಭವಿಸಿದ ಕೋಟ್ಯನುಕೋಟಿ ಸೂರ್ಯ, ಚಂದ್ರ, ಅಗ್ನಿಗಳಿಗೆ ಸರಿಸಮಾನವಾದ ಕಾಂತಿಯಿಂದ ಮೆರೆಯುತ್ತಿರುವವನೂ ಆದ ಆ ಶ್ರೀ ಶಂಕರನನ್ನು ಕಂಡೊಡನೆಯೇ ಆ ವೇಶ್ಯೆಯು ಸ್ತಬ್ಧಳಾದಂತೆಯೂ ಹೆದರಿದವಳಂತೆಯೂ ನಿಂತ ಹಾಗೆಯೇ ನಿಂತುಬಿಟ್ಟಳು

೫೩. ಆಗ ಗಾಬರಿಗೊಂಡು ಹೆದರಿದಂತೆ ಕೆಲಹೊತ್ತು ನಡುಗುತ್ತಲೂ ಕೆಲ ಹೊತ್ತು ಕಂಭದಂತೆ ಅಲುಗಾಡದೆಯೂ ನಿಂತಿರಲು, ಕಣ್ಣೀರುಹರಿಯುತ್ತಿರುವ ಆ ಮಹಾನಂದೆಯನ್ನು ಸಮಾಧಾನಪಡಿಸಿ ಅವಳ ಕೈಗಳನ್ನು ಹಿಡಿದುಕೊಂಡು ಶಂಕರ ನಿಂತೆಂದನು.

೫೪. ನಿನ್ನ ಸತ್ಯವನ್ನೂ ಧರ್ಮವನ್ನೂ ಧೈರ್ಯವನ್ನೂ ಮತ್ತು ನಿನಗೆ ನನ್ನಲ್ಲಿರುವ ಅಚಲವಾದ ಭಕ್ತಿಯನ್ನೂ ಪರೀಕ್ಷಿಸಬೇಕೆಂಬುದಾಗಿಯೇ ಈ ವೈಶ್ಯನ ವೇಷವನ್ನು ತಾಳಿ ನಾನೇ ನಿನ್ನ ಬಳಿಗೆ ಬಂದಿದ್ದೆನು.

ಮಾಯಯಾಗ್ನಿಂ ಸಮುದ್ದೀಪ್ಯ ದಗ್ಧಂ ತೇ ನಾಟ್ಯಮಂಡಪಂ ।
ದಗ್ಧಂ ಕೃತ್ವಾ ರತ್ನಲಿಂಗಂ ಪ್ರವಿಷ್ಟೋಽಹಂ ಹುತಾಶನಂ ॥ ೫೫ ॥

ಸಾ ತ್ವಂ ಸತ್ಯಮನುಸ್ಮೃತ್ಯ ಪ್ರವಿಷ್ಟಾಗ್ನಿಂ ಮಯಾ ಸಹ ।
ಅತಸ್ತೇ ಸಂಪ್ರದಾಸ್ಯಾಮಿ ಭೋಗಾಸ್ತ್ರಿದಶದುರ್ಲಭಾನ್ ॥ ೫೬ ॥

ಯದ್ಯದಿಚ್ಛಸಿ ಸುಶ್ರೋಣಿ ತದೇವ ಹಿ ದದಾಮಿ ತೇ ।
ತ್ವದ್ಭಕ್ತ್ಯಾಹಂ ಪ್ರಸನ್ನೋಽಸ್ಮಿ ತವಾದೇಯಂ ನ ವಿದ್ಯತೇ ॥ ೫೭ ॥

॥ ನಂದೀಶ್ವರ ಉವಾಚ ॥

ಇತಿ ಬ್ರುವತಿ ಗೌರೀಶೇ ಶಂಕರೇ ಭಕ್ತವತ್ಸಲೇ ।
ಮಹಾನಂದಾ ಚ ಸಾ ವೇಶ್ಯಾ ಶಂಕರಂ ಪ್ರತ್ಯಭಾಷತ ॥ ೫೮ ॥

---

೫೫. ನನ್ನ ಮಾಯೆಯಿಂದಲೇ ನಿನ್ನ ನಾಟ್ಯಮಂಟಪಕ್ಕೆ ಬೆಂಕಿಯು ಬಿದ್ದು ಅದು ಹೊತ್ತಿಕೊಂಡು ಉರಿದುಹೋಯಿತು. ಹೀಗೆ ಮಾಡಿ ಆ ರತ್ನಮಯವಾದ ಲಿಂಗವು ಸುಟ್ಟುಹೋಗಲು ನಾನು ಬೆಂಕಿಗೆ ಬಿದ್ದುಬಿಟ್ಟೆನು.

೫೬. ನೀನು ಸತ್ಯಕ್ಕೆ ಕಟ್ಟುಬಿದ್ದು ನಿನ್ನ ನಿಬಂಧನೆಯನ್ನು ನೆನೆದು ನನ್ನೊಡನೆ ಬೆಂಕಿಯನ್ನು ಪ್ರವೇಶಿಸಿಬಿಟ್ಟೆ. ಆದುದರಿಂದ ನಾನು ನಿನಗೆ ದೇವತೆಗಳಿಗೂ ದುರ್ಲಭವೆನಿಸಿದಂತಹ ಅನೇಕ ಭೋಗಭಾಗ್ಯಗಳನ್ನು ಅನುಗ್ರಹಿಸುವೆನು.

೫೭. ಎಲೆ ಸುಶ್ರೋಣಿ, ನೀನೇನೇನನ್ನು ಬಯಸುವೆಯೋ ಅದನ್ನೆಲ್ಲಾ ನಿನಗೆ ಕೊಡುವೆನು. ನಿನ್ನ ಭಕ್ತಿಯಿಂದ ನಾನು ಬಹುವಾಗಿ ಮೆಚ್ಚಿರುವೆನು. ನಿನಗೆ ಕೊಡಬಾರದ ವಸ್ತುವು ಯಾವುದೂ ಇಲ್ಲ.

೫೮. ಓ ಸನತ್ಕುಮಾರ, ಈರೀತಿ ಭಕ್ತರಲ್ಲಿ ವಾತ್ಸಲ್ಯವುಳ್ಳ ಗೌರೀಕಾಂತನಾದ ಶಂಕರನು ಹೇಳಲು, ಆತನನ್ನು ಕುರಿತು ಆ ಮಹಾನಂದೆಯೆಂಬ ವೇಶ್ಯೆಯು ಇಂತೆಂದಳು.

॥ ವೇಶ್ಯೋವಾಚ ॥

ನ ಮೇ ವಾಂಛಾಸ್ತಿ ಭೋಗೇಷು ಭೂಮೌ ಸ್ವರ್ಗೇ ರಸಾತಲೇ ।
ತವ ಪಾದಾಂಬುಜಸ್ಪರ್ಶಾದನ್ಯತ್ಕಿಂಚಿನ್ನ ಕಾಮಯೇ ॥ ೫೯ ॥

ಯೇ ಮೇ ಭೃತ್ಯಾಶ್ಚ ದಾಸ್ಯಶ್ಚ ಯೇ ಚಾನ್ಯೇ ಮಮ ಬಾಂಧವಾಃ ।
ಸರ್ವೇ ತ್ವದ್ದರ್ಶನಪರಾಸ್ತ್ವಯಿ ಸಂನ್ಯಸ್ತವೃತ್ತಯಃ ॥ ೬೦ ॥

ಸರ್ವಾನೇತಾನ್ಮಯಾ ಸಾರ್ಧಂ ನಿನೀಯಾತ್ಮಪರಂ ಪದಂ ।
ಪುನರ್ಜನ್ಮಭಯಂ ಘೋರಂ ವಿಮೋಚಯ ನಮೋಽಸ್ತು ತೇ ॥ ೬೧ ॥

॥ ನಂದೀಶ್ವರ ಉವಾಚ ॥

ತತಸ್ಸ ತಸ್ಯಾ ವಚನಂ ಪ್ರತಿನಂದ್ಯ ಮಹೇಶ್ವರಃ ।
ತಾಃ ಸರ್ವಾಶ್ಚ ತಯಾ ಸಾರ್ಧಂ ನಿನಾಯ ಸ್ವಂ ಪರಂ ಪದಂ ॥ ೬೨ ॥

---

೫೯. ನನಗೆ ಈ ಸುಖಭೋಗಗಳಲ್ಲಿ ಆಸೆಯಿಲ್ಲ ಭೂಮಿಯಲ್ಲಿಯೂ ಸ್ವರ್ಗದಲ್ಲಿಯೂ ಪಾತಾಳದಲ್ಲಿಯೂ ಅಪೇಕ್ಷೆಯಿಲ್ಲ ನಿನ್ನ ಚರಣಕಮಲಸ್ಪರ್ಶವೊಂದನಲ್ಲದೆ ಮತ್ತೇನನ್ನೂ ನಾನು ಬಯಸಲಾರೆನು.

೬೦. ನನ್ನ ಬಳಿ ಯಾರುಯಾರು ದಾಸದಾಸಿಯರಾಗಿ ಇರುವರೋ ಮತ್ತು ಯಾರುಯಾರು ನನಗೆ ಬಂಧುಗಳಾಗಿ ಇರುವರೋ ಅವರೆಲ್ಲರೂ ನಿನ್ನ ದರ್ಶನವನ್ನೇ ಬಯಸುತ್ತಾ ನಿನ್ನಲ್ಲಿಯೇ ತಮ್ಮೆಲ್ಲರ ಚಿತ್ತಗಳನ್ನು ನೆಲೆಸಿಬಿಟ್ಟಿರುವರು

೬೧ ಇವರೆಲ್ಲರನ್ನೂ ನನ್ನೊಡನೆ ನಿನ್ನ ಶ್ರೇಷ್ಠವಾದ ನಿವಾಸಕ್ಕೆ ಕರೆದೊಯ್ದು ಈ ಘೋರವಾದಂತಹ ಗರ್ಭವಾಸದುಃಖವು ಮತ್ತೆ ಒದಗದಂತೆ ಮಾಡು. ನಿನಗೆ ಮತ್ತೊಮ್ಮೆ ನಮಸ್ಕಾರವು ಎಂದಳು

೬೨ ಎಲೈ ಮುನೀಂದ್ರನೇ, ಆಗ ಮಹಾದೇವನು ಅವಳ ಮಾತಿಗೆ ಸಮ್ಮತಿಯಿತ್ತು ಅವಳ ದಾಸದಾಸಿಯರನ್ನೂ ಬಂಧುಬಾಂಧವರನ್ನೂ ಅವಳೊಡನೆ ಪರಮ ಪದವಿಯನ್ನೈದಿಸಿದನು.

ವೈಶ್ಯನಾಥಾವತಾರಸ್తే ವರ್ಣಿತಃ ಪರಮೋ ಮಯಾ ।
ಮಹಾನಂದಾಸುಖಕರೋ ಭಕ್ತಾನಂದಪ್ರದಸ್ಸದಾ ॥ ೬೩ ॥

ಇದಂ ಚರಿತ್ರಂ ಪರಮಂ ಪವಿತ್ರಂ
ಸತಾಂ ಚ ಸರ್ವಪ್ರದಮಾಶು ದಿವ್ಯಂ ।
ಶಿವಾವತಾರಸ್ಯ ವಿಶಾಂಪತೇರ್ಮಹಾ-
ನಂದಾಮಹಾಸೌಖ್ಯಕರಂ ವಿಚಿತ್ರಂ ॥ ೬೪ ॥

ಇದಂ ಯಃ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।
ಚ್ಯವತೇ ನ ಸ್ವಧರ್ಮಾತ್ಸ ಪರತ್ರ ಲಭತೇ ಗತಿಂ ॥ ೬೫ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ವೈಶ್ಯನಾಥಾಹ್ವಯಶಿವಾವತಾರವರ್ಣನಂ ನಾಮ ಷಡ್ವಿಂಶೋಽಧ್ಯಾಯಃ

---

೬೩. ಇಂತು ಮಹಾನಂದೆಗೆ ಸುಖವನ್ನು ನೀಡಿ ಸರ್ವಕಾಲದಲ್ಲಿಯೂ ಭಕ್ತರಿಗೆ ಆನಂದಪ್ರದಾಯಕವೂ ಪಾವನವೂ ಆದ ವೈಶ್ಯನಾಥಾವತಾರಚರಿತವನ್ನು ನಿನಗೆ ವಿವರಿಸಿದೆನು.

೬೪. ಮಹಾನಂದೆಯೆಂಬ ವೇಶ್ಯೆಗೆ ಮಹತ್ತಾದ ಸೌಖ್ಯವನ್ನು ಕರುಣಿಸಿದ ಅದ್ಭುತವಾದ ಶಿವನ ಈ ವೈಶ್ಯನಾಥಾವತಾರ ಚರಿತ್ರವು ಮಹಾಶ್ರೇಷ್ಠವಾದುದು ಅತಿ ಪಾವನವಾದುದು. ಸತ್ಪುರುಷರೆನಿಸಿದವರಿಗೆ ಸಕಲವನ್ನೂ ಬೇಗನೆ ಕರುಣಿಸುವುದು.

೬೫. ಯಾವನು ಈ ಚರಿತ್ರವನ್ನು ಭಕ್ತಿಯಿಂದ ಶ್ರವಣಮಾಡುವನೋ ಇಲ್ಲವೇ ಶ್ರವಣಮಾಡಿಸುವನೋ ಅವನು ತನ್ನ ಧರ್ಮದಿಂದ ಭ್ರಷ್ಟನಾಗಲಾರನು. ಮತ್ತು ಪರಲೋಕದಲ್ಲಿ ಉತ್ತಮವಾದ ಗತಿಯನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ವೈಶ್ಯನಾಥಾವತಾರವರ್ಣನವೆಂಬ ಇಪ್ಪತ್ತಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಸಪ್ತವಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಶೃಣು ತಾತ ಪ್ರವಕ್ಷ್ಯಾಮಿ ಶಿವಸ್ಯ ಪರಮಾತ್ಮನಃ ।
ದ್ವಿಜೇಶ್ವರಾವತಾರಂ ಚ ಸಶಿವಂ ಸುಖದಂ ಸತಾಂ ॥ ೧ ॥

ಯಃ ಪೂರ್ವಂ ವರ್ಣಿತಸ್ತಾತ ಭದ್ರಾಯುರ್ನೃಪಸತ್ತಮಃ ।
ಯಸ್ಮಿನ್ನೃಷಭರೂಪೇಣಾನುಗ್ರಹಂ ಕೃತವಾಞ್ಛಿವಃ ॥ ೨ ॥

---

### ಇಪ್ಪತ್ತೇಳನೆಯ ಅಧ್ಯಾಯವು.

೧. ಅಪ್ಪಾ, ಸನತ್ಕುಮಾರ, ಸತ್ಪುರುಷರಿಗೆ ಸುಖಪ್ರದವೆನಿಸಿದ ಮಂಗಲಮಯವಾದ ಶಿವನ ದ್ವಿಜೇಶ್ವರಾವತಾರಚರಿತ್ರವನ್ನು ನಿನಗೆ ತಿಳಿಸುವೆನು, ಕೇಳು.

೨. ಹಿಂದೆ ನಿನಗೆ ಭದ್ರಾಯುವೆಂಬ ನರಪತಿಕುಲತಿಲಕನನ್ನು ವರ್ಣಿಸಿರುವೆನಷ್ಟೆ. ಆತನಿಗೇನೇ ಶ್ರೀ ಶಂಕರನು ಋಷಭಯೋಗೀಶ್ವರರೂಪದಿಂದ ಅನುಗ್ರಹವನ್ನು ಮಾಡಿದ್ದನು.

ತದ್ಧರ್ಮಸ್ಯ ಪರೀಕ್ಷಾರ್ಥಂ ಪುನರಾವಿರ್ಬಭೂವ ಸಃ ।
ದ್ವಿಜೇಶ್ವರಸ್ವರೂಪೇಣ ತದೇವ ಕಥಯಾಮ್ಯಹಂ ॥ ೩ ॥

ಋಷಭಸ್ಯ ಪ್ರಭಾವೇಣ ಶತ್ರೂಞ್ಜಿತ್ವಾ ರಣೇ ಪ್ರಭುಃ ।
ಪ್ರಾಪ್ತಸಿಂಹಾಸನಸ್ತ್ವಾತ ಭದ್ರಾಯುಃ ಸಂಬಭೂವ ಹ ॥ ೪ ॥

ಚಂದ್ರಾಂಗದಸ್ಯ ತನಯಾ ಸೀಮಂತಿನ್ಯಾಃ ಶುಭಾಂಗಜಾ ।
ಪತ್ನೀ ತಸ್ಯಾಭವದ್ಬ್ರಹ್ಮನ್ಸಾಧ್ವೀ ಕೀರ್ತಿಮಾಲಿನೀ ॥ ೫ ॥

ಸ ಭದ್ರಾಯುಃ ಕದಾಚಿತ್ಸ್ವಪ್ರಿಯಾ ಗಹನಂ ವನಂ ।
ಪ್ರಾವಿಶತ್ಸಂವಿಹಾರಾರ್ಥಂ ವಸಂತಸಮಯೇ ಮುನೇ ॥ ೬ ॥

---

೩. ಅದೇ ಭದ್ರಾಯುವಿನ ಧರ್ಮವನ್ನು ಪರೀಕ್ಷೆಮಾಡಬೇಕೆಂಬುದಾಗಿ ಆ ಶಂಕರನು ಮತ್ತೆ ದ್ವಿಜೇಶ್ವರರೂಪದಿಂದ ಅವತರಿಸಿದನು. ಆ ವೃತ್ತಾಂತವನ್ನೇ ನಿನಗೆ ತಿಳಿಸುವೆನು.

೪. ಅಪ್ಪಾ, ಸನತ್ಕುಮಾರ, ಋಷಭಯೋಗೀಶ್ವರನ ಮಹಿಮೆಯಿಂದ ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಆ ಭದ್ರಾಯುವು ಮತ್ತೆ ತನ್ನ ಪೂರ್ವಿಕರ ಸಿಂಹಾಸನವನ್ನು ಪಡೆದುಕೊಂಡನು.

೫. ಎಲೈ ಬ್ರಾಹ್ಮಣೋತ್ತಮನೇ, ಸೀಮಂತಿನಿಯ ಗರ್ಭಸಂಜಾತಳೂ ಚಂದ್ರಾಂಗದನ ಸುತೆಯೂ ಆದ ಮಹಾಸಾಧುಶೀಲೆಯಾದ ಕೀರ್ತಿಮಾಲಿನಿಯೆಂಬುವಳು ಆತನಿಗೆ ಪತ್ನಿಯಾದಳು.

೬. ಎಲೈ ಮುನಿಯೇ, ಆ ಭದ್ರಾಯುವು ಒಂದಾನೊಂದುಸಲ ತನ್ನ ಪತ್ನಿಯಾದ ಕೀರ್ತಿಮಾಲಿನಿಯೊಡನೆ ವಿಹಾರವಸಲುವಾಗಿ ದಟ್ಟವಾದ ಕಾಡೊಂದನ್ನು ಪ್ರವೇಶಿಸಿದನು.

ಅಥ ತಸ್ಮಿನ್ವನೇ ರಮ್ಯೇ ವಿಜಹಾರ ಸ ಭೂಪತಿಃ ।
ಶರಣಾಗತಪಾಲಿನ್ಯಾ ತಯಾ ಸ್ವಪ್ರಿಯಯಾ ಸಹ ॥ ೭ ॥

ಅಥ ತದ್ಧರ್ಮದೃಢತಾಂ ಪ್ರತೀಕ್ಷನ್ಪರಮೇಶ್ವರಃ ।
ಲೀಲಾಂ ಚಕಾರ ತತ್ರೈವ ಶಿವಯಾ ಸಹ ಶಂಕರಃ ॥ ೮ ॥

ಶಿವಾ ಶಿವಶ್ಚ ಭೂತ್ವೋಭೌ ತದ್ವನೇ ದ್ವಿಜದಂಪತೀ ।
ವ್ಯಾಘ್ರಂ ಮಾಯಾಮಯಂ ಕೃತ್ವಾವಿರ್ಭೂತೌ ನಿಜಲೀಲಯಾ ॥ ೯ ॥

ಅಥಾವಿದೂರೇ ತಸ್ಯೈವ ದ್ರವಂತೌ ಭಯವಿಹ್ವಲೌ ।
ಅನ್ವೀಯಮಾನೌ ವ್ಯಾಘ್ರೇಣ ರುದಂತೌ ತೌ ಬಭೂವತುಃ ॥ ೧೦ ॥

ಅಥ ವಿದ್ಧೌ ಚ ತೌ ತಾತ ಭದ್ರಾಯುಃ ಸ ಮಹೀಪತಿಃ ।
ದದರ್ಶ ಕ್ರಂದಮಾನೌ ಹಿ ಶರಣ್ಯಃ ಕ್ಷತ್ರಿಯರ್ಷಭಃ ॥ ೧೧ ॥

---

೭. ಬಳಿಕ ರಮಣೀಯವಾದ ಆ ಕಾಡಿನಲ್ಲಿ ಆ ಭದ್ರಾಯುವೆಂಬ ಅರಸು ತನ್ನನ್ನು ಮರೆಹೊಕ್ಕವರನ್ನು ಬೆಂಬಿಡದೆ ಕಾಪಾಡುವ ಸ್ವಭಾವವುಳ್ಳ ತನ್ನ ಪ್ರಿಯೆ ಯೊಡನೆ ಸಂತೋಷದಿಂದ ವಿಹರಿಸತೊಡಗಿದನು

೮. ಆಗ ಅವನ ಧರ್ಮಶ್ರದ್ಧೆಯನ್ನು ಪರೀಕ್ಷಿಸಬೇಕೆಂದೆಳೆಸಿ ಶಿವನು ಗೌರಿ ಯೊಡನೆ ಅಲ್ಲಿಯೇ ಒಂದು ಲೀಲೆಯನ್ನು ಹೂಡಿದನು

೯. ಆಗ ಶಿವಪಾರ್ವತಿಯರೀರ್ವರೂ ಬ್ರಾಹ್ಮಣದಂಪತಿಗಳಂತೆ ವೇಷವನ್ನು ಧರಿಸಿ ಮಾಯೆಯಿಂದ ಹುಲಿಯೊಂದನ್ನು ಸೃಷ್ಟಿಸಿ ಅವರದುರಿಗೆ ಕಾಣಿಸಿಕೊಂಡರು

೧೦. ಬಳಿಕ ಆ ಮಾಯಾವ್ಯಾಘ್ರವು ತಮ್ಮನ್ನು ಅಟ್ಟಿಸಿಕೊಂಡುಬರಲು ಆ ಬ್ರಾಹ್ಮಣದಂಪತಿಗಳು ಭಯದಿಂದ ತಲ್ಲಣಿಸುತ್ತಾ ಅಯ್ಯೋ ಅಪ್ಪಾ ಎಂಬುದಾಗಿ ಕಿರಿಚುತ್ತಾ ಆ ಭದ್ರಾಯುವೆಂಬ ಅರಸನಿದ್ದಬಳಿಗೆ ಓಡಿಬಂದರು.

೧೧. ಹುಲಿಯು ಬೆನ್ನಟ್ಟಿಬರುತ್ತಿರಲು ಅಳುತ್ತಾ ಓಡಿಬರುತ್ತಿರುವ ಆ ಬ್ರಾಹ್ಮಣ ದಂಪತಿಗಳನ್ನು ಶರಣಾಗತರಕ್ಷಕನೂ ಕ್ಷತ್ರಿಯಶ್ರೇಷ್ಠನೂ ಆದ ಆ ಭದ್ರಾಯುವು ಕಂಡನು

ಅಥ ತೌ ಮುನಿಶಾರ್ದೂಲ ಸ್ವಮಾಯಾದ್ವಿಜದಂಪತೀ ।
ಭದ್ರಾಯುಷಂ ಮಹಾರಾಜಮೂಚತುರ್ಭಯವಿಹ್ವಲೌ ॥ ೧೨ ॥

॥ ದ್ವಿಜದಂಪತೀ ಊಚತುಃ ।

ಪಾಹಿ ಪಾಹಿ ಮಹಾರಾಜ ಸಾರ್ವಭೌ ಧರ್ಮವಿತ್ತಮ ।
ಏಷ ಆಯಾತಿ ಶಾರ್ದೂಲೋ ಜಗ್ಧ್ವಾವಾಂ ಮಹಾಪ್ರಭೋ ॥ ೧೩ ॥

ಏಷ ಹಿಂಸ್ರಃ ಕಾಲಸಮಃ ಸರ್ವಪ್ರಾಣಿಭಯಂಕರಃ ।
ಯಾವನ್ನ ಖಾದತಿ ಪ್ರಾಪ್ಯ ತಾವನ್ನೌ ರಕ್ಷ ಧರ್ಮವಿತ್ ॥ ೧೪ ॥

॥ ನಂದೀಶ್ವರ ಉವಾಚ ॥

ಇತ್ಥಮಾಕ್ರಂದಿತಂ ಶ್ರುತ್ವಾ ತಯೋಶ್ಚ ನೃಪತೀಶ್ವರಃ ।
ಅತಿ ಶೀಘ್ರಂ ಮಹಾವೀರಃ ಸ ಯಾವದ್ಧನುರಾದದೇ ॥ ೧೫ ॥

---

೧೨. ಅನಂತರ ತಮ್ಮ ಮಾಯೆಯಿಂದ ಬ್ರಾಹ್ಮಣದಂಪತಿಗಳಾದ ಅವರೀರ್ವರು ಭಯದಿಂದ ತತ್ತಳಿಸುತ್ತಾ ಭದ್ರಾಯು ಮಹಾರಾಜನನ್ನು ಕುರಿತು ಇಂತೆಂದು ನುಡಿದರು.

೧೩. ಎಲೈ ಧರ್ಮಜ್ಞನಾದ ಮಹಾರಾಜನೇ, ನಮ್ಮಿರ್ವರನ್ನೂ ಕಾಪಾಡು. ಹೇ ಮಹಾಪ್ರಭೂ, ಇಗೋ ಈ ಹುಲಿಯು ನಮ್ಮಿರ್ವರನ್ನೂ ತಿನ್ನಲು ಅಟ್ಟೆಸಿ ಕೊಂಡುಬರುತ್ತಿರುವುದು.

೧೪. ಎಲ್ಲ ಪ್ರಾಣಿಗಳಿಗೂ ಹೆದರಿಕೆಯನ್ನು ಹುಟ್ಟಿಸುತ್ತಾ ಯಮನಂತೆ ಬರುತ್ತಿರುವ ಈ ದುಷ್ಟಮೃಗವು ನಮ್ಮನ್ನು ತಿಂದುಬಿಡುವಷ್ಟರಲ್ಲಿಯೇ ಧರ್ಮಶೀಲನಾದ ನೀನು ಕಾಪಾಡು ಎಂದರು.

೧೫-೧೬. ಎಲೈ ಮುನಿಯೇ, ಈರೀತಿ ಆ ದಂಪತಿಗಳೀರ್ವರೂ ಅಳುತ್ತಾ ಮೊರೆಯಿಡುತ್ತಿರುವುದನ್ನು ಕೇಳಿ ಮಹಾವೀರನಾದ ಆ ಅರಸು ಬೇಗನೆ ತನ್ನ

ತಾವದಭ್ಯೇತ್ಯ ಶಾರ್ದೂಲಸ್ತ್ವರಮಾಣೋऽತಿಮಾಯಿಕಃ ।
ಸ ತಸ್ಯ ದ್ವಿಜವರ್ಯಸ್ಯ ಮಧ್ಯೇ ಜಗ್ರಾಹ ತಾಂ ವಧೂಂ ॥ ೧೬ ॥

ಹೇ ನಾಥ ನಾಥ ಹೇ ಕಾಂತ ಹಾ ಶಂಭೋ ಹಾ ಜಗದ್ಗುರೋ ।
ಇತಿ ರೋರೂಯಮಾನಾಂ ತಾಂ ವ್ಯಾಘ್ರೋ ಜಗ್ರಾಸ ಭೀಷಣಃ ॥ ೧೭ ॥

ತಾವತ್ಸ ರಾಜಾ ನಿಶಿತೈರ್ಭಲ್ಲೈರ್ವ್ಯಾಘ್ರಮತಾಡಯತ್ ।
ನ ಸ ತೈರ್ವಿವ್ಯಥೇ ಕಿಂಚಿದ್ಗಿರೀಂದ್ರ ಇವ ವೃಷ್ಟಿಭಿಃ ॥ ೧೮ ॥

ಸ ಶಾರ್ದೂಲೋ ಮಹಾಸತ್ತ್ವೋ ರಾಜ್ಞಃ ಸ್ವೈರಕೃತವ್ಯಥಃ ।
ಬಲಾದಾಕೃಷ್ಯ ತಾಂ ನಾರೀಮುಪಾಕ್ರಮತ ಸತ್ವರಃ ॥ ೧೯ ॥

---

ಧನುಸ್ಸನ್ನು ಕೈಗ ತೆಗೆದುಕೊಳ್ಳುವಷ್ಟರಲ್ಲಿಯೇ ಆ ಮಾಯಾವ್ಯಾಘ್ರವು ಬಹುವೇಗದಿಂದ ಅಲ್ಲಿಗೆ ಬಂದು ನಡುವೆ ನಿಂತಿದ್ದ ಆ ಬ್ರಾಹ್ಮಣಪತ್ನಿಯನ್ನು ತಟ್ಟನೆ ಹಿಡಿದುಬಿಟ್ಟಿತು.

೧೭ ಹೇ ನಾಥ, ಹೇ ಕಾಂತ, ಅಯ್ಯೋ ಶಂಭುವೇ, ಅಯ್ಯೋ ಜಗದ್ಗುರುವೇ, ಎಂದು ಮುಂತಾಗಿ ಅಳುತ್ತಿರಲು ಆ ದ್ವಿಜಪತ್ನಿಯನ್ನು ಭಯಂಕರವಾದ ಆ ವ್ಯಾಘ್ರವು ಹಿಡಿದೇಬಿಟ್ಟಿತು

೧೮ ಅಷ್ಟರಲ್ಲಿಯೇ ಆ ಭದ್ರಾಯುವು ಚೂಪಾದ ಭಲ್ಲೆಗಳಿಂದ ಆ ಹುಲಿಯನ್ನು ಬಹುವಾಗಿ ಹೊಡೆದುಬಡಿದು ಹಿಂಸಿಸಿದನು ಆದರೇನು ? ಬೆಟ್ಟವು ಮಳೆಗೆ ಜಗ್ಗದಂತೆ ಆ ಏಟುಗಳಿಂದ ಆ ಹುಲಿಗೆ ಸ್ವಲ್ಪವೂ ತೊಂದರೆಯಾಗಲಿಲ್ಲ

೧೯ ಮಹಾಬಲಾಢ್ಯವಾದ ಆ ಹೆಬ್ಬುಲಿಯು ಆ ಅರಸಿನ ಆಯುಧಗಳಿಂದ ಸ್ವಲ್ಪವೂ ನೋಯದೆ ಆ ಬ್ರಾಹ್ಮಣನ ಪತ್ನಿಯನ್ನು ಬಲವಾಗಿ ಹಿಡಿದೆಳೆದು ಬೇಗನೆ ಹೊತ್ತುಕೊಂಡು ಓಡಿಹೋಯಿತು.

ವ್ಯಾಘ್ರೇಣಾಪಹೃತಾಂ ನಾರೀಂ ವೀಕ್ಷ್ಯ ವಿಪ್ರೋsತಿ ವಿಸ್ಮಿತಃ ।
ಲೌಕಿಕೀಂ ಗತಿಮಾಶ್ರಿತ್ಯ ರುರೋದಾತಿ ಮುಹುರ್ಮುಹುಃ ॥ ೨೦ ॥

ರುದಿತ್ವಾ ಚಿರಕಾಲಂ ಚ ಸ ವಿಪ್ರೋ ಮಾಯಯೇಶ್ವರಃ ।
ಭದ್ರಾಯುಷಂ ಮಹೀಪಾಲಂ ಪ್ರೋವಾಚ ಮದಹಾರಕಃ ॥ ೨೧ ॥

॥ ದ್ವಿಜೇಶ್ವರ ಉವಾಚ ॥

ರಾಜನ್ಕ್ವ ತೇ ಮಹಾಸ್ತ್ರಾಣಿ ಕ್ವ ತೇ ತ್ರಾಣಂ ಮಹದ್ಧನುಃ ।
ಕ್ವ ತೇ ದ್ವಾದಶಸಾಹಸ್ರಮಹಾನಾಗಾಯುತಂ ಬಲಂ ॥ ೨೨ ॥

ಕಿಂ ತೇ ಖಡ್ಗೇನ ಶಂಖೇನ ಕಿಂ ತೇ ಮಂತ್ರಾಸ್ತ್ರವಿದ್ಯಯಾ ।
ಕಿಂ ಸತ್ತ್ವೇನ ಮಹಾಸ್ತ್ರಾಣಾಂ ಕಿಂ ಪ್ರಭಾವೇಣ ಭೂಯಸಾ ॥ ೨೩ ॥

---

೨೦ ಈರೀತಿ ಹೆಬ್ಬುಲಿಯಿಂದ ಹಿಡಿಯಲ್ಪಟ್ಟ ತನ್ನ ಪ್ರಿಯೆಯನ್ನು ಕಂಡು ಬಹುವಾಗಿ ಗಾಬರಿಗೊಂಡ ಆ ಬ್ರಾಹ್ಮಣನು ಸಾಧಾರಣಮನುಜರಂತೆ ಬಿಕ್ಕಿಬಿಕ್ಕಿ ಅಳ ತೊಡಗಿದನು

೨೧. ಈರೀತಿ ತನ್ನ ಮಾಯೆಯಿಂದ ಬ್ರಾಹ್ಮಣನ ವೇಷವನ್ನು ಧರಿಸಿಬಂದ ಮದಭಂಜನೆನಿಸಿದ ಆ ಈಶ್ವರನು ಬಹು ಹೊತ್ತು ಗೋಳಾಡುತ್ತಿದ್ದು ಅನಂತರ ಭದ್ರಾಯು ಮಹಾರಾಜನನ್ನಿಂತೆಂದನು.

೨೨. ಎಲೈ ದೊರೆಯೇ, ನಿನ್ನ ಮಹಾಸ್ತ್ರಗಳೆಲ್ಲಿಹೋದುವು? ಎಲ್ಲರನ್ನೂ ಕಷ್ಟದಿಂದ ಪಾರುಮಾಡುವ ಆ ಭಾರಿ ಧನುಸ್ಸೆಲ್ಲಿಹೋಯಿತು ? ನಿನ್ನ ಆ ಹನ್ನೆರಡು ಸಾವಿರ ಮದ್ದಾನೆಗಳ ಬಲವೂ ಎಲ್ಲಿಹೋಯಿತು ?

೨೩. ನಿನ್ನ ಬಳಿ ಕತ್ತಿಯಿದ್ದರೇನು ? ಶಂಖವಿದ್ದರೂ ಏನು ? ಮಂತ್ರಾಸ್ತ್ರಗಳ ಪ್ರಯೋಗವಿಜ್ಞಾನವು ತಾನೇ ಎಷ್ಟಿದ್ದರೇನು ? ಭಾರಿಭಾರಿ ಅಸ್ತ್ರಗಳೂ ಸಹ ಯಾವು ವಿದ್ದರೇನು ? ಹಿರಿದಾದ ಮಾಹಾತ್ಮ್ಯವೂ ಎಷ್ಟಿದ್ದರೆತಾನೆ ಏನಾಯಿತು ?

ತತ್ಸರ್ವಂ ನಿಷ್ಫಲಂ ಜಾತಂ ಯುಚ್ಚಾನ್ಯತ್ರ್ಯಯಿ ತಿಷ್ಠತಿ ।
ಯುಸ್ತ್ವಂ ವನೌಕಸಾಂ ಘಾತಂ ನ ನಿವಾರಯಿತುಂ ಕ್ಷಮಃ ॥ ೨೪ ॥

ಕ್ಷತ್ರಸ್ಯಾಯಂ ಪರೋ ಧರ್ಮಃ ಕ್ಷತಾಚ್ಚ ಪರಿರಕ್ಷಣಂ ।
ತಸ್ಮಿನ್ಕುಲೋಚಿತೇ ಧರ್ಮೇ ನಷ್ಟೇ ತ್ವಜ್ಜೀವಿತೇನ ಕಿಂ ॥ ೨೫ ॥

ಆರ್ತಾನಾಂ ಶರಣಾಪ್ತಾನಾಂ ತ್ರಾಣಂ ಕುರ್ವಂತಿ ಪಾರ್ಥಿವಾಃ ।
ಪ್ರಾಣೈರರ್ಥೈಶ್ಚ ಧರ್ಮಜ್ಞಾಸ್ತದ್ವಿನಾ ಚ ಮೃತೋಪಮಾಃ ॥ ೨೬ ॥

ಆರ್ತತ್ರಾಣವಿಹೀನಾನಾಂ ಜೀವಿತಾನ್ಮರಣಂ ವರಂ ।
ಧನಿನಾಂ ದಾನಹೀನಾನಾಂ ಗಾರ್ಹಸ್ಥ್ಯಾದ್ಭಿಕ್ಷುತಾ ವರಂ ॥ ೨೭ ॥

---

೨೪. ಕಾಡುಮೃಗಗಳ ಈ ಒಂದು ಉಪಟಳವನ್ನು ನಿನ್ನ ಕೈಲಿ ತಡೆಯಲಾಗದಿದ್ದಮೇಲೆ ನಿನ್ನಲ್ಲಿ ಏನೇ ಸತ್ತ್ವವಿರಲಿ ಏನೇ ಸಾಹಸವಿರಲಿ ಅನೆಲ್ಲವೂ ವ್ಯರ್ಥವಾದಂತೆಯೇ ಸರಿ

೨೫. ಕ್ಷತ್ರಿಯನಾದವನಿಗೆ ಸಂಕಟದಿಂದ ಬಿಡಿಸಬೇಕಾದುದು ಅತಿ ಮುಖ್ಯವಾದ ಧರ್ಮವು ಇಂತಹ ಕುಲಕ್ಕೆ ವಿಹಿತವಾದ ಧರ್ಮವು ಹಾಳಾದಲ್ಲಿ ನೀನು ಬದುಕಿರುವುದರಿಂದ ಆದ ಫಲವಾದರೂ ಏನು ?

೨೬ ಅರಸರಾದವರು ಧರ್ಮವನ್ನು ಬಲ್ಲವರೇ.ಆದರೆ ತಮ್ಮನ್ನು ಮರೆಹೊಕ್ಕವರನ್ನು ತಮ್ಮ ಪ್ರಾಣಗಳನ್ನು ಇತ್ತಾದರೂ, ಸಂಪತ್ತನ್ನೆಲ್ಲಾ ಸೂರೆಗೊಟ್ಟಾದರೂ ಸಂರಕ್ಷಿಸುವರು ಹಾಗೆ ಮಾಡದೇ ಇದ್ದಲ್ಲಿ ಅವರು ಬದುಕಿದ್ದರೂ ಸತ್ತಂತೆಯೇ ಸರಿ

೨೭. ದುಃಖಿತರಾದವರು ಮರೆಹೊಗಲು ಅವರನ್ನು ಸಂರಕ್ಷಿಸದಿದ್ದವನು ಬದುಕುವ ಬದಲು ಸಾಯುವುದು ಲೇಸು ದುಡ್ಡಿದ್ದೂ ಕೇಳಿದವರಿಗೆ ಕೈಯೆತ್ತಿ ಕೊಡದೆ ಇದ್ದವನು ಗೃಹಸ್ಥನೆನಿಸಿ ಬಾಳುವುದಕ್ಕಿಂತಲೂ ತಿರುಪೆಯುವನಂತೆ ತಿರಿದು ತಿನ್ನುವುದು ಮೇಲು.

ವರಂ ವಿಷಾಶನಂ ಪ್ರಾಜ್ಞೈರ್ವರಮಗ್ನಿಪ್ರವೇಶನಂ ।
ಕೃಪಣಾನಾಮನಾಥಾನಾಂ ದೀನಾನಾಮಪರಕ್ಷಣಾತ್ ॥ ೨೮ ॥

॥ ನಂದೀಶ್ವರ ಉವಾಚ ॥

ಇತ್ಥಂ ವಿಲಪಿತಂ ತಸ್ಯ ಸ್ವವೀರ್ಯಸ್ಯ ಚ ಗರ್ಹಣಂ ।
ನಿಶಮ್ಯ ನೃಪತಿಃ ಶೋಕಾದಾತ್ಮನ್ಯೇವಮಚಿಂತಯತ್ ॥ ೨೯ ॥

ಅಹೋ ಮೇ ಪೌರುಷಂ ನಷ್ಟಮಥ ದೈವವಿಪರ್ಯಯಾತ್ ।
ಅದ್ಯ ಕೀರ್ತಿಶ್ಚ ಮೇ ನಷ್ಟಾ ಪಾತಕಂ ಪ್ರಾಪ್ತಮುತ್ಕಟಂ ॥ ೩೦ ॥

ಧರ್ಮಃ ಕುಲೋಚಿತೋ ನಷ್ಟೋ ಮಂದಭಾಗ್ಯಸ್ಯ ದುರ್ಮತೇಃ ।
ನೂನಂ ಮೇ ಸಂಪದೋ ರಾಜ್ಯಮಾಯುಷ್ಯಂ ಕ್ಷಯಮೇಷ್ಯತಿ ॥ ೩೧ ॥

---

೨೮. ಬಡಪಾಯಿಗಳನ್ನೂ ದಿಕ್ಕಿಲ್ಲದವರನ್ನೂ ದರಿದ್ರರನ್ನೂ ಕಾಪಾಡಲು ಸಾಧ್ಯವಿಲ್ಲದಪಕ್ಷಕ್ಕೆ ಅಂಥವರು ಪ್ರಾಜ್ಞರೇ ಆದಲ್ಲಿ ವಿಷವನ್ನಾದರೂ ತಿನ್ನುವುದನ್ನು ಮೇಲೆಂದು ಭಾವಿಸುವರು. ಬೆಂಕಿಯಲ್ಲಿ ಬೀಳುವುದನ್ನಾದರೂ ಲೇಸೆಂದು ಭಾವಿಸುವರು ಎಂದನು.

೨೯. ಎಲೈ ಸನತ್ಕುಮಾರನೇ, ಈರೀತಿಯಾಗಿ ಆ ಬ್ರಾಹ್ಮಣನು ಗೋಳಿಡುತ್ತಿರುವುದನ್ನೂ ತನ್ನ ಶೌರ್ಯವನ್ನು ಅಲ್ಲುಗಳೆಯುತ್ತಿರುವುದನ್ನೂ ಕಂಡು ಆ ಭದ್ರಾಯುವೆಂಬ ಅರಸು ತನ್ನಲ್ಲಿ ಮರುಗುತ್ತಾ ಈರೀತಿ ಆಲೋಚಿಸಿದನು.

೩೦. ಅಕಟಕಟಾ ! ಈ ದಿನ ದೈವದುರ್ವಿಪಾಕದಿಂದ ಈರೀತಿ ನನ್ನ ಸಾಹಸವೆಲ್ಲವೂ ಮಣ್ಣುಗೂಡಿಬಿಟ್ಟಿತಲ್ಲಾ ನನ್ನ ಕೀರ್ತಿಯೆಲ್ಲವೂ ಇಂದು ಹಾಳಾಯಿತು. ಘೋರವಾದ ಪಾಪವು ಸಂಘಟಿಸಿತು.

೩೧. ಭಾಗ್ಯಹೀನನೂ ದುಷ್ಟಬುದ್ಧಿಯೂ ಆದ ನಾನು ನಮ್ಮ ಕುಲಕ್ರಮಾಗತವಾದ ಧರ್ಮದನ್ನು ನಾಶಪಡಿಸಿಕೊಂಡೆನು. ಖಂಡಿತವಾಗಿಯೂ ನನ್ನೀ ಸಂಪತ್ತು ರಾಜ್ಯವೂ ಆಯುಸ್ಸೂ ಕ್ಷಯಿಸಿಹೋಗುವುದು.

ಅದ್ಯ ಚೈನಂ ದ್ವಿಜನ್ಮಾನಂ ಹತದಾರಂ ಶುಚಾರ್ದಿತಂ ।
ಹತಶೋಕಂ ಕರಿಷ್ಯಾಮಿ ದತ್ವಾ ಸ್ವಾಪ್ರಾಣಾನತಿಪ್ರಿಯಾನ್　　॥ ೩೨ ॥

ಇತಿ ನಿಶ್ಚಿತ್ಯ ಮನಸಾ ಸ ಭದ್ರಾಯುರ್ನೃಪೋತ್ತಮಃ ।
ಪತಿತ್ವಾ ಪಾದಯೋಸ್ತಸ್ಯ ಬಭಾಷೇ ಪರಿಸಾಂತ್ವಯನ್　　॥ ೩೩ ॥

॥ ಭದ್ರಾಯುರುವಾಚ ॥

ಕೃಪಾಂ ಕೃತ್ವಾ ಮಯಿ ಬ್ರಹ್ಮನ್ಕ್ಷತ್ರಬಂಧೌ ಹತೌಜಸಿ ।
ಶೋಕಂ ತ್ಯಜ ಮಹಾಪ್ರಾಜ್ಞ ದಾಸ್ಯಾಮ್ಯದ್ಯ ತು ವಾಂಛಿತಂ　　॥ ೩೪ ॥

ಇದಂ ರಾಜ್ಯಮಿದಂ ರಾಜ್ಞೀ ಮಮೇದಂ ಚ ಕಲೇವರಂ ।
ತ್ವದಧೀನಮಿದಂ ಸರ್ವಂ ಕಿಂ ತೇಽಭಿಲಷಿತಂ ವರಂ　　॥ ೩೫ ॥

---

೩೨ ಈಗ ನಾನು ಹೆಂಡತಿಯನ್ನು ಕಳೆದುಕೊಂಡು ದುಃಖಿಸುತ್ತಿರುವ ಈ ಬ್ರಾಹ್ಮಣನಿಗೆ ಅತಿ ಪ್ರೇಮಾಸ್ಪದವಾದ ನನ್ನ ಪ್ರಾಣಗಳನ್ನು ಇತ್ತಾದರೂ ಆತನ ದುಃಖವನ್ನು ಹೋಗಲಾಡಿಸುವೆನು

೩೩. ಈರೀತಿ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಆ ಭದ್ರಾಯುವೆಂಬ ಅರಸನು ಆ ಬ್ರಾಹ್ಮಣನ ಕಾಲಿಗೆ ನಮಸ್ಕರಿಸಿ ಅವನನ್ನು ಸಮಾಧಾನಗೊಳಿಸುತ್ತಾ ಇಂತೆಂದು ನುಡಿದನು

೩೪ ಎಲೈ ಮಹಾಪ್ರಾಜ್ಞನಾದ ಬ್ರಾಹ್ಮಣನೇ, ಶಕ್ತಿಹೀನನಾಗಿ ಕ್ಷತ್ರಿಯನೆಂಬ ಬರಿಯ ಹೆಸರನ್ನು ಮಾತ್ರ ತಳೆದಿರುವ ನನ್ನಲ್ಲಿ ಕೃಪೆಯನ್ನು ಇಟ್ಟು ನಿನ್ನ ಈ ದುಃಖವನ್ನು ಬಿಡು. ನೀನು ಏನುಬೇಕೆನ್ನುವಿಯೋ ಅದನ್ನು ಕೊಡುವೆನು.

೩೫ ಈ ನನ್ನ ರಾಜ್ಯ, ಈ ನನ್ನ ರಾಣಿ, ಈ ನನ್ನ ದೇಹ, ಇದೆಲ್ಲವೂ ನಿನಗೆ ಸೇರಿದ್ದು. ನಿನಗೆ ಬೇಕಾದುದೇನು, ತಿಳಿಸು ಎಂದು ಕೇಳಲು, ಆಗ ಬ್ರಾಹ್ಮಣನು,

॥ ಬ್ರಾಹ್ಮಣ ಉವಾಚ ॥

ಕಿಮಾದರ್ಶೇನ ಚಾಂಧಸ್ಯ ಕಿಂ ಗೃಹೈರ್ಭೈಕ್ಷ್ಯಜೀವಿನಃ ।
ಕಿಂ ಪುಸ್ತಕೇನ ಮೂಢಸ್ಯ ನಿಸ್ತ್ರೀಕಸ್ಯ ಧನೇನ ಕಿಂ ॥ ೩೬ ॥

ಅತೋಽಹಂ ಹತಪತ್ನೀಕೋ ಭುಕ್ತಭೋಗೋ ನ ಕರ್ಹಿಚಿತ್ ।
ಇಮಾಂ ತವಾಗ್ರಮಹಿಷೀಂ ಕಾಮಯೇ ದೀಯತಾಮಿತಿ ॥ ೩೭ ॥

॥ ಭದ್ರಾಯುರುವಾಚ ॥

ದಾತಾ ರಸಾಂತವಿತ್ತಸ್ಯ ರಾಜ್ಯಸ್ಯ ಗಜವಾಜಿನಾಂ ।
ಆತ್ಮದೇಹಸ್ಯ ಕಸ್ಯಾಪಿ ಕಲತ್ರಸ್ಯ ನ ಕರ್ಹಿಚಿತ್ ॥ ೩೮ ॥

ಪರದಾರೋಪಭೋಗೇನ ಯತ್ಪಾಪಂ ಸಮುಪಾರ್ಜಿತಂ ।
ನ ತತ್ಕ್ಷಾಲಯಿತುಂ ಶಕ್ಯಂ ಪ್ರಾಯಶ್ಚಿತ್ತಶತೈರಪಿ ॥ ೩೯ ॥

---

೩೬. ಕುರುಡನಿಗೆ ಕನ್ನಡಿಯೇಕೆ? ತಿರುಪೆಯೆತ್ತಿ ಕೂಳು ತಿನ್ನುವವನಿಗೆ ಮನೆಮಠಗಳೇಕೆ? ಮಂಕನಿಗೆ ಪುಸ್ತಕವು ತಾನೆ ಏಕೆ? ಅನುಕೂಲೆಯಾದ ಮಡದಿಯಿಲ್ಲದಿದ್ದಮೇಲೆ ಎಷ್ಟು ಹಣವಿದ್ದರೆ ತಾನೆ ಏನು?

೩೭. ಆದುದರಿಂದ ಇದುವರೆಗೂ ಯಾವ ಭೋಗವನ್ನೂ ಅನುಭವಿಸದೆ, ಹೆಂಡತಿಯನ್ನೂ ಕಳೆದುಕೊಂಡ ನಾನು ಈ ನಿನ್ನ ಪಟ್ಟದ ರಾಣಿಯನ್ನು ಬಯಸುವೆನು. ಅವಳನ್ನು ನನಗೆ ಕೊಟ್ಟುಬಿಡು ಎಂದನು.

೩೮. ಹೀಗೆ ಆ ಕಪಟ ಬ್ರಾಹ್ಮಣನು ಬೇಡಿದುದನ್ನು ಕೇಳಿ, ಭದ್ರಾಯುವೆಂಬ ಅರಸನಿಂತೆಂದನು. ಈ ಭೂಮಂಡಲವೇ ಅಧಿಕಾರಕ್ಕೊಳಪಟ್ಟ ರಾಜ್ಯವನ್ನಾದರೂ ಕೊಡುವೆನು ಆನೆ ಕುದುರೆಗಳನ್ನಾಗಲೀ ಕೊಡುವೆನು. ಕೊನೆಗೆ ನನ್ನ ದೇಹವನ್ನಾದರೂ ಕೊಡುವೆನು. ನನ್ನ ಕೈಹಿಡಿದ ಹೆಂಡತಿಯನ್ನು ಹೇಗೆತಾನೇ ಕೊಡಲಿ?

೩೯. ಪರಸ್ತ್ರೀಯರ ಸಮಾಗಮದಿಂದ ಉಂಟಾಗುವ ಪಾಪವನ್ನು ಹೋಗಲಾಡಿಸಲು ನೂರಾರು ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡರೂ ಸಾಧ್ಯವಾಗುವುದಿಲ್ಲ.

॥ ಬ್ರಾಹ್ಮಣ ಉವಾಚ ॥

ಆಸ್ತಾಂ ಬ್ರಹ್ಮವಧಂ ಘೋರಮಪಿ ಮದ್ಯನಿಷೇವಣಂ ।
ತಪಸಾ ವಿಧಮಿಷ್ಯಾಮಿ ಕಿಂ ಪುನಃ ಪಾರದಾರಿಕಂ ॥ ೪೦ ॥

ತಸ್ಮಾತ್ಪ್ರಯಚ್ಛ ಭಾರ್ಯಾಂ ಸ್ವಾಮಿಮಾಂ ಕಾಮೋ ನ ಮೇಽಪರಃ ।
ಅರಕ್ಷಣಾದ್ಭಯಾರ್ತಾನಾಂ ಗಂತಾಸಿ ನಿರಯಂ ಧ್ರುವಂ ॥ ೪೧ ॥

॥ ನಂದೀಶ್ವರ ಉವಾಚ ॥

ಇತಿ ವಿಪ್ರಗಿರಾ ಭೀತಶ್ಚಿಂತಯಾಮಾಸ ಪಾರ್ಥಿವಃ ।
ಅರಕ್ಷಣಾನ್ಮಹಾಪಾಪಂ ಪತ್ನೀದಾನಂ ತತೋ ವರಂ ॥ ೪೨ ॥

ಅತಃ ಪತ್ನೀಂ ದ್ವಿಜಾಗ್ರ್ಯಾಯ ದತ್ವಾ ನಿರ್ಮುಕ್ತಕಿಲ್ಬಿಷಃ ।
ಸದ್ಯೋ ವಹ್ನಿಂ ಪ್ರವೇಕ್ಷ್ಯಾಮಿ ಕೀರ್ತಿಶ್ಚ ವಿದಿತಾ ಭವೇತ್ ॥ ೪೩ ॥

---

೪೦. ಹೀಗೆ ಭದ್ರಾಯುವೆನ್ನಲು ಆ ಬ್ರಾಹ್ಮಣನು ಹೇಳಿದನು —ಅದೆಂತಹ ಘೋರವಾದ ಬ್ರಹ್ಮಹತ್ಯೆಯೇ ಆಗಲಿ, ಮದ್ಯಪಾನದಿಂದಾದ ಪಾತಕವೇ ಆಗಲಿ ಅದೆಲ್ಲವನ್ನೂ ನನ್ನ ತಪಶ್ಶಕ್ತಿಯಿಂದ ಸುಟ್ಟು ಬೂದಿಮಾಡಿಬಿಡುವೆನು ಹೀಗಿರುವಾಗ ಈ ಪರಸ್ತ್ರೀಗಮನದಿಂದಾದ ಪಾಪವು ನನ್ನನ್ನೇನುಮಾಡೀತು ?

೪೧ ಆದುದರಿಂದ ನಿನ್ನ ಪತ್ನಿಯನ್ನು ನನಗೆ ಒಪ್ಪಿಸಿಬಿಡು ಇದು ಬಿಟ್ಟು ನನಗೆ ಬೇರಿನ್ನಾವ ಆಸೆಯೂ ಇಲ್ಲ. ನೀನೊಪ್ಪದೇಹೋದರೆ ಭಯಾರ್ತರನ್ನು ಸಂರಕ್ಷಿಸದೆ ಇರುವುದರಿಂದ ಉಂಟಾದ ಪಾಪವು ನಿನ್ನನ್ನು ನರಕಕ್ಕೆ ತಳ್ಳುವುದಂತೂ ಖಂಡಿತವಾದುದು ಎಂದನು

೪೨. ಎಲೈ ಮುನಿಯೇ, ಈರೀತಿ ಬ್ರಾಹ್ಮಣನು ನುಡಿಯಲು ಆ ಭದ್ರಾಯು ನೃಪತಿಯು ಹೆದರಿದವನಾಗಿ ತನ್ನಲ್ಲಿಯೇ ಆಲೋಚಿಸಿದನು. ಶರಣಾಗತರಾದವರನ್ನು ಸಂರಕ್ಷಿಸದೇ ಇರುವುದು ಮಹಾಪಾಪ. ಅದಕ್ಕಿಂತಲೂ ಕೈಹಿಡಿದ ಹೆಂಡತಿಯನ್ನು ದಾನಮಾಡುವುದೇ ಉತ್ತಮವು.

೪೩ ಆದುದರಿಂದ ಈ ನನ್ನ ಪತ್ನಿಯನ್ನು ಈ ದ್ವಿಜೋತ್ತಮನಿಗೆ ದಾನ ಮಾಡಿ ನನ್ನ ಪಾಪವೆಲ್ಲವನ್ನೂ ಕಳೆದುಕೊಂಡು ಒಡನೆಯೇ ಅಗ್ನಿಯನ್ನು ಪ್ರವೇಶಿಸುವೆನು ಹೀಗೆ ಮಾಡಲು ನನ್ನ ಕೀರ್ತಿಯಾದರೂ ಹರಡುವುದು.

ಇತಿ ನಿಶ್ಚಿತ್ಯ ಮನಸಾ ಸಮುಜ್ಜ್ವಾಲ್ಯ ಹುತಾಶನಂ ।
ತಮಾಹೂಯ ದ್ವಿಜಂ ಚಕ್ರೇ ಪತ್ನೀದಾನಂ ಸಹೋದಕಂ ॥ ೪೪ ॥

ಸ್ವಯಂ ಸ್ನಾತಃ ಶುಚಿರ್ಭೂತ್ವಾ ಪ್ರಣಮ್ಯ ವಿಬುಧೇಶ್ವರಾನ್ ।
ತಮಗ್ನಿಂ ತ್ರಿಃ ಪರಿಕ್ರಮ್ಯ ಶಿವಂ ದಧ್ಯೌ ಸಮಾಹಿತಃ ॥ ೪೫ ॥

ತಮಥಾಗ್ನಿಂ ಪತಿಷ್ಯಂತಂ ಸ್ವಪದಾಸಕ್ತಚೇತಸಂ ।
ಪ್ರತ್ಯಷೇಧತ ವಿಶ್ವೇಶಃ ಪ್ರಾದುರ್ಭೂತೋ ದ್ವಿಜೇಶ್ವರಃ ॥ ೪೬ ॥

ತಮೀಶ್ವರಂ ಪಂಚಮುಖಂ ತ್ರಿನೇತ್ರಂ
ಪಿನಾಕಿನಂ ಚಂದ್ರಕಲಾವತಂಸಂ ।
ಪ್ರಲಂಬಪಿಂಗಾಸುಜಟಾಕಲಾಪಂ
ಮಧ್ಯಾಹ್ನಸದ್ಭಾಸ್ಕರಕೋಟಿತೇಜಸಂ ॥ ೪೭ ॥

---

೪೪. ಈರೀತಿ ಮನಸ್ಸಿನಲ್ಲಿ ನಿಶ್ಚಯಿಸಿ ಬೆಂಕಿಯನ್ನು ಹೊತ್ತಿಸಿ ಆ ಬ್ರಾಹ್ಮಣನನ್ನು ಕರೆದು ಆತನಿಗೆ ತನ್ನ ಪತ್ನಿಯನ್ನು ಧಾರೆಯೆರೆದು ಇತ್ತನು.

೪೫. ಅನಂತರ ತಾನು ಸ್ನಾನಮಾಡಿ ಶುಚಿರ್ಭೂತನಾಗಿ ದೇವತೆಗಳೆಲ್ಲರಿಗೂ ನಮಸ್ಕರಿಸಿ ಆ ಅಗ್ನಿಗೆ ಮೂರುಸಾರಿ ಪ್ರದಕ್ಷಿಣೆಮಾಡಿ ಒಮ್ಮನಸ್ಸಿನಿಂದ ಶ್ರೀ ಶಂಕರನನ್ನು ಧ್ಯಾನಮಾಡಿದನು.

೪೬. ಅನಂತರ ತನ್ನ ಚರಣಕಮಲಗಳಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ ಬೆಂಕಿಯಲ್ಲಿ ಇನ್ನೇನು ಬೀಳಬೇಕೆಂದಿದ್ದ ಆ ಭದ್ರಾಯು ನರಪತಿಯನ್ನು ತಡೆತಡೆಯೆಂದು ಗಟ್ಟಿಯಾಗಿ ಕೂಗುತ್ತಾ ಆ ಬ್ರಾಹ್ಮಣನು ತನ್ನ ನಿಜರೂಪದಿಂದ ಆವಿರ್ಭವಿಸಿದನು.

೪೭ ಆ ಈಶ್ವರನಿಗೆ ಐದುಮುಖಗಳು, ಮೂರುಕಣ್ಣುಗಳು, ಕೈಯ್ಯಲ್ಲಿ ಪಿನಾಕವೆಂಬ ಧನುಸ್ಸು, ತಲೆಯಲ್ಲಿ ಲೀಲಾಕುಸುಮದಂತೆ ಅಂದವನ್ನು ಹೆಚ್ಚಿಸುವ ಬಾಲಚಂದ್ರ, ತಲೆಯತುಂಬ ಉದ್ದುದ್ದವಾಗಿ ಜೋತುಬಿದ್ದು ನೇತಾಡುತ್ತಿರುವ ಹೊಂಬಣ್ಣದ ತಿರಿಗಟ್ಟಿದ ಜಟೆಗಳು, ಮಧ್ಯಾಹ್ನಕಾಲದ ಕೋಟಿಸೂರ್ಯರು ಒಟ್ಟಾಗಿ ಸೇರಿದಾಗ ಉಂಟಾಗುವಂತೆ ತುಂಬಿದ ತೇಜಸ್ಸು

ಮೃಣಾಲಗೌರಂ ಗಜಚರ್ಮವಾಸಸಂ
ಗಂಗಾತರಂಗೋಕ್ಷಿತಮೌಲಿದೇಶಕಂ ।
ನಾಗೇಂದ್ರಹಾರಾವಲಿಕಂಠಭೂಷಣಂ
ಕಿರೀಟಕಾಂಚ್ಯಂಗದಕಂಕಣೋಜ್ಜ್ವಲಂ ॥ ೪೮ ॥

ಶೂಲಾಸಿಖಟ್ವಾಂಗಕುಠಾರಚರ್ಮ-
ಮೃಗಾಭಯಾಷ್ಟಾಂಗಪಿನಾಕಹಸ್ತಂ ।
ವೃಷೋಪರಿಸ್ಥಂ ಶಿತಿಕಂಠಭೂಷಣಂ
ಪ್ರೋದ್ಭೂತಮುಗ್ರೇ ಸ ನೃಪೋ ದದರ್ಶ ॥ ೪೯ ॥

ತತೋಂಬರಾದ್ದ್ರುತಂ ಪೇತುರ್ದಿವ್ಯಾಃ ಕುಸುಮವೃಷ್ಟಯಃ ।
ಪ್ರಣೇದುರ್ದೇವತೂರ್ಯಾಣಿ ದೇವ್ಯಶ್ಚ ನನೃತುರ್ಜಗುಃ ॥ ೫೦ ॥

---

೪೮. ಆತನ ಮೈಬಣ್ಣವು ಕಮಲದನಾಳದಂತೆ ಶುಭ್ರವಾಗಿದ್ದಿತು. ಆನೆಯ ಚರ್ಮವು ಆತನ ನಡುವಿನಲ್ಲಿ ಶೋಭಿಸುತ್ತಿದ್ದಿತು ಆತನ ಶಿರಃಪ್ರದೇಶವನ್ನು ಗಂಗಾನದಿಯ ತರಂಗಗಳು ತೊಳೆಯುತ್ತಿದ್ದುವು ವಾಸುಕಿಯೆಂಬ ಸರ್ಪರಾಜನು ಹಾರದಂತೆ ಆತನ ಕತ್ತಿನಲ್ಲಿ ಮೆರೆಯುತ್ತಿದ್ದನು. ಕಿರೀಟವೂ ಒಡ್ಯಾಣವೂ (ನಡುಪಟ್ಟಿಯೂ) ತೋಳ್ಬಳೆಗಳೂ ಕಡಗಗಳೂ ಆತನನ್ನು ಮತ್ತಷ್ಟು ಅಂದಗೊಳಿಸುತ್ತಿದ್ದುವು.

೪೯ ಶೂಲ, ಖಡ್ಗ, ಖಟ್ವಾಂಗ, ಖಂಡವಾದಪರಶು, ಗುರಾಣಿ, ಮೃಗ, ಅಭಯ, ಅಷ್ಟಾಂಗ, ಪಿನಾಕ ಮುಂತಾದ ಆಯುಧಗಳು ಆತನಕೈಲಿ ರಂಜಿಸುತ್ತಿದ್ದುವು. ಇಂತಹ ನೀಲಕಂಠನಾದ ಆ ಶಂಕರನು ವೃಷಭಾರೂಢನಾಗಿ ಗೋಚರಿಸಿದುದನ್ನು ಆ ಭದ್ರಾಯುವು ಕಂಡನು

೫೦ ಆಗ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ದೇವತೆಗಳ ವಾದ್ಯಗಳು ಮೊಳಗಿದುವು ದೇವತಾಸ್ತ್ರೀಯರು ಹಾಡಿನರ್ತನಮಾಡಿದರು

ತತ್ರಾಜಗ್ಮುಸ್ತುಯಮಾನಾ ಹರಿಬ್ರಹ್ಮಾ ತಥಾ ಸುರಾಃ ।
ಇಂದ್ರಾದಯೋ ನಾರದಾದ್ಯಾ ಮುನಯಶ್ಚಾಪರೇಽಪಿ ಚ ॥ ೫೧ ॥

ತದೋತ್ಸವೋ ಮಹಾನಾಸೀತ್ತತ್ರ ಭಕ್ತಿಪ್ರವರ್ಧನಃ ।
ಸತಿ ಪಶ್ಯತಿ ಭೂಪಾಲೇ ಭಕ್ತಿನಮ್ರೀಕೃತಾಂಜಲೌ ॥ ೫೨ ॥

ತದ್ದರ್ಶನಾನಂದವಿಜೃಂಭಿತಾಶಯಃ
ಪ್ರವೃದ್ಧಬಾಷ್ಪಾಂಭುವಿಲಿಪ್ತಗಾತ್ರಃ ।
ಪ್ರಹೃಷ್ಟರೋಮಾ ಸ ಹಿ ಗದ್ಗದಾಕ್ಷರ
ಸ್ತುಷ್ಟಾವ ಗೀರ್ಭಿರ್ಮುಕುಲೀಕೃತಾಂಜಲಿಃ ॥ ೫೩ ॥

ತತಸ್ಸ ಭಗವಾನ್ರಾಜ್ಞಾ ಸಂಸ್ತುತಃ ಪರಮೇಶ್ವರಃ ।
ಪ್ರಸನ್ನಃ ಸಹ ಪಾರ್ವತ್ಯಾ ತಮುವಾಚ ದಯಾನಿಧಿಃ ॥ ೫೪ ॥

---

೫೧ ಆಗ ಅಲ್ಲಿಗೆ ವಿಷ್ಣುವೂ ಬ್ರಹ್ಮನೂ ಇಂದ್ರಾದಿದೇವತೆಗಳೂ ನಾರದಾದಿ ಮಹರ್ಷಿಗಳೂ ಮತ್ತು ಇತರರೂ ಶಿವನನ್ನು ಕೊಂಡಾಡುತ್ತಾ ಬಂದರು.

೫೨. ಆಗ ಭಕ್ತಿಪಾರವಶ್ಯದಿಂದ ಕೈಗಳನ್ನು ಮುಗಿದುಕೊಂಡು ಆಶ್ಚರ್ಯ ದಿಂದ ಆ ಭದ್ರಾಯುವು ನೋಡುತ್ತಿರಲು ಭಕ್ತಿಯನ್ನು ಹೆಚ್ಚಿಸುವಂತಹ ಭಾರಿ ಯುತ್ಸವವು ಅಲ್ಲಿ ಜರುಗಿತು.

೫೩. ಆ ಶಿವನನ್ನು ಕಣ್ಣಾರೆಕಂಡುದರಿಂದ ಮನಸ್ಸಿನಲ್ಲಿ ಆನಂದವು ತುಂಬಿ ತುಳುಕಾಡಿತು. ಕಣ್ಣುಗಳಲ್ಲಿ ಆನಂದಾಶ್ರುವು ಉಕ್ಕಿ ಮೈಮೇಲೆಲ್ಲಾ ಹರಿಯಿತು. ಮೈಯ್ಯೆಲ್ಲಾ ರೋಮಾಂಚವುಂಟಾಯಿತು. ಕುತ್ತಿಗೆಯು ಬಿಗಿದು ದನಿಯು ಗದ್ಗದ ವಾಯಿತು. ಆಗ ಭದ್ರಾಯುವು ಕೈಮುಗಿದುಕೊಂಡು ಸ್ತೋತ್ರಮಾಡ ತೊಡಗಿದನು.

೫೪. ಅನಂತರ ಭದ್ರಾಯುವಿನ ಸ್ತುತಿಯನ್ನು ಕೇಳಿ ಪಾರ್ವತೀಸಮೇತನಾದ ಶ್ರೀ ಶಂಕರನು ಪ್ರಸನ್ನನಾಗಿ ಆತನನ್ನು ಇಂತೆಂದನು.

ರಾಜಂಸ್ತೇ ಪರಿತುಷ್ಟೋಽಹಂ ಭಕ್ತ್ಯಾ ತ್ವದ್ಧರ್ಮತೋಽಧಿಕಂ ।
ವರಂ ಬ್ರೂಹಿ ಸಪತ್ನೀಕಂ ಪ್ರಯಚ್ಛಾಮಿ ನ ಸಂಶಯಃ ॥ ೫೫ ॥

ತವ ಭಾವಪರೀಕ್ಷಾರ್ಥಂ ದ್ವಿಜೋ ಭೂತ್ವಾಹಮಾಗತಃ ।
ವ್ಯಾಘ್ರೇಣ ಯಾ ಪರಿಗ್ರಸ್ತಾ ಸಾಕ್ಷಾದ್ದೇವೀ ಶಿವಾ ಹಿ ಸಾ ॥ ೫೬ ॥

ವ್ಯಾಘ್ರೋ ಮಾಯಾಮಯೋ ಯಸ್ತೇ ಶರೈರಕ್ಷತವಿಗ್ರಹಃ ।
ಧೀರತಾಂ ದ್ರಷ್ಟುಕಾಮಸ್ತೇ ಪತ್ನೀಂ ಯಾಚಿತವಾನಹಂ ॥ ೫೭ ॥

॥ ನಂದೀಶ್ವರ ಉವಾಚ ॥

ಇತ್ಯಾಕರ್ಣ್ಯ ಪ್ರಭೋರ್ವಾಕ್ಯಂ ಸ ಭದ್ರಾಯುರ್ಮಹೀಪತಿಃ ।
ಪುನಃ ಪ್ರಣಮ್ಯ ಸಂಸ್ತೂಯ ಸ್ವಾಮಿನಂ ನತಕೋಽಬ್ರವೀತ್ ॥ ೫೮ ॥

---

೫೫. ಎಲೈ ಭದ್ರಾಯುವೇ, ನಿನ್ನ ಭಕ್ತಿಗೂ ಧರ್ಮಕ್ಕೂ ಬಹುವಾಗಿ ಮೆಚ್ಚಿದೆನು. ನೀನು ನಿನ್ನ ಹೆಂಡತಿಯೊಡನೆ ಬೇಕಾದ ವರವನ್ನು ಕೇಳಿಕೋ ಖಂಡಿತವಾಗಿ ಕೊಡುವೆನು

೫೬. ನಿನ್ನ ಮನಸ್ಸನ್ನು ಪರೀಕ್ಷಿಸಲೋಸುಗ ನಾನು ಬ್ರಾಹ್ಮಣನಂತೆ ವೇಷವನ್ನು ತಾಳಿಬಂದೆನು. ಹುಲಿಯು ಹಿಡಿದುದು ಮತ್ತಾರನ್ನೂ ಅಲ್ಲ ಆಕೆಯು ಸಾಕ್ಷಾತ್ಪಾರ್ವತೀದೇವಿಯೆಂದೇ ತಿಳಿ.

೫೭. ನೀನು ಆಯುಧಗಳನ್ನೆಲ್ಲಾ ಪ್ರಯೋಗಿಸಿದರೂ ಸ್ವಲ್ಪವೂ ಗಾಯಗೊಳ್ಳದ ಈ ಹುಲಿಯು ಬರಿಯ ಮಾಯೆಯದು. ನಿನ್ನ ಮನಸ್ಥೈರ್ಯವನ್ನು ಪರೀಕ್ಷಿಸಬೇಕೆಂದು ನಿನ್ನ ಪತ್ನಿಯನ್ನು ಕೇಳಿದೆನು ಎಂದನು

೫೮. ಎಲೈ ಮುನಿಯೇ ಈ ರೀತಿ ಪ್ರಭುವಾದ ಪರಶಿವನು ನುಡಿದುದನ್ನು ಕೇಳಿ, ಆ ಭದ್ರಾಯುವೆಂಬ ಅರಸನು ಮತ್ತೆ ಆ ಸ್ವಾಮಿಯನ್ನು ನಮಸ್ಕರಿಸಿ, ಬಗೆಬಗೆಯಾಗಿ ಸ್ತೋತ್ರಮಾಡಿ ವಿನಯದಿಂದ ಮೈಬಾಗಿಸಿ ಈರೀತಿ ನುಡಿದನು.

॥ ಭದ್ರಾಯುರುವಾಚ ॥

ಏಕ ಏವ ವರೋ ನಾಥ ಯದ್ಭವಾನ್ಪರಮೇಶ್ವರಃ ।
ಭವತಾಪಪ್ರತಪ್ತಸ್ಯ ಮಮ ಪ್ರತ್ಯಕ್ಷತಾಂ ಗತಃ ॥ ೫೯ ॥

ಯದ್ಯದಾಸಿ ಪುನರ್ನಾಥ ವರಂ ಸ್ವಕೃಪಯಾ ಪ್ರಭೋ ।
ವೃಣೇಽಹಂ ಪರಮಂ ತ್ವತ್ತೋ ವರಂ ಹಿ ವರದರ್ಷಭಾತ್ ॥ ೬೦ ॥

ವಜ್ರಬಾಹುಃ ಪಿತಾ ಮೇಹಿ ಸಪತ್ನೀಕೋ ಮಹೇಶ್ವರ ।
ಸಪತ್ನೀಕಸ್ತ್ವಹಂ ನಾಥ ಸದಾ ತ್ವತ್ಪಾದಸೇವಕಃ ॥ ೬೧ ॥

ವೈಶ್ಯಃ ಪದ್ಮಾಕರೋ ನಾಮ ತತ್ಪುತ್ರಃ ಸನಯಾಭಿಧಃ ।
ಸರ್ವಾನೇತಾನ್ಮಹೇಶಾನ ಸದಾ ತ್ವಂ ಪಾರ್ಶ್ವಗಾನ್ಕುರು ॥ ೬೨ ॥

---

೫೯. ಎಲೈ ಪ್ರಭುವೇ, ಈ ಸಂಸಾರತಾಪದಿಂದ ಬಳಲುತ್ತಿರುವ ನನಗೆ ಜಗತ್ ಪ್ರಭುವಾದ ನೀನೇ ಪ್ರತ್ಯಕ್ಷನಾದೆಯೆಂದಮೇಲೆ ಇದೇ ಭಾರಿಯಾದ ವರವು.

೬೦. ಎಲೈ ಸ್ವಾಮಿಯೇ, ನೀನೇ ನನ್ನಮೇಲೆ ಕರುಣೆಯಿಟ್ಟು ಮತ್ತೊಂದು ವರವನ್ನು ನೀಡುವುದಾದರೆ ಆಗ ವರದಾಯಕನಾದ ನಿನ್ನಿಂದ ಶ್ರೇಷ್ಠವಾದ ಮತ್ತೊಂದು ವರವನ್ನು ಬೇಡುವೆನು.

೬೧-೬೨. ಎಲೈ ಮಹೇಶ್ವರನೇ, ವಜ್ರಬಾಹುವೆಂದು ಪ್ರಸಿದ್ಧನಾದ ನನ್ನ ತಂದೆಯೂ ನನ್ನ ತಾಯಿಯೂ ಯಾವಾಗಲೂ ನಿನ್ನ ಚರಣಸೇವೆಯಲ್ಲಿಯೇ ತೊಡಗಿರುವಾಗ ನಾನೂ ನನ್ನ ಮಡದಿಯೂ ನನಗೆ ಬೇಕಾದವನಾದ ಪದ್ಮಾಕರನೆಂಬ ವೈಶ್ಯನೂ ಸನಯನೆಂಬ ಅವನ ಮಗನೂ ಇವರೆಲ್ಲರೂ ಯಾವಾಗಲೂ ನಿನ್ನ ಪಾರ್ಶ್ವದಲ್ಲಿಯೇ ಇದ್ದುಕೊಂಡಿರುವಂತೆ ವರವನ್ನು ನೀಡು ಎಂದನು.

॥ ನಂದೀಶ್ವರ ಉವಾಚ ॥

ಅಥ ರಾಜ್ಞೀ ಚ ತತ್ಪತ್ನೀ ಪ್ರಮತ್ತಾ ಕೀರ್ತಿಮಾಲಿನೀ ।
ಭಕ್ತ್ಯಾ ಪ್ರಸಾದ್ಯ ಗಿರಿಶಂ ಯಯಾಚೇ ವರಮುತ್ತಮಂ ॥ ೬೩ ॥

॥ ರಾಜ್ಞ್ಯುವಾಚ ॥

ಚಂದ್ರಾಂಗದೋ ಮಮ ಪಿತಾ ಮಾತಾ ಸೀಮಂತಿನೀ ಚ ಮೇ ।
ತಯೋರ್ಯಾಚೇ ಮಹಾದೇವ ತ್ವತ್ಪಾರ್ಶ್ವೇ ಸನ್ನಿಧಿಂ ಮುದಾ ॥ ೬೪ ॥

॥ ನಂದೀಶ್ವರ ಉವಾಚ ।

ಏವಮಸ್ತ್ವಿತಿ ಗೌರೀಶಃ ಪ್ರಸನ್ನೋ ಭಕ್ತವತ್ಸಲಃ ।
ತಯೋಃ ಕಾಮವರಂ ದತ್ವಾ ಕ್ಷಣಾದಂತರ್ಹಿತೋಽಭವತ್ ॥ ೬೫ ॥

ಭದ್ರಾಯುರಪಿ ಸುಪ್ರೀತ್ಯಾ ಪ್ರಸಾದಂ ಪ್ರಾಪ್ಯ ಶೂಲಿನಃ ।
ಸಹಿತಃ ಕೀರ್ತಿಮಾಲಿನ್ಯಾ ಬುಭುಜೇ ವಿಷಯಾನ್ಬಹೂನ್ ॥ ೬೬ ॥

---

೬೩. ಎಲೈ ಮುನಿಯೇ, ಈರೀತಿ ಭದ್ರಾಯುವು ಪ್ರಾರ್ಥಿಸಿದನಂತರ ಮಹಾರಾಣಿಯಾದ ಕೀರ್ತಿಮಾಲಿನಿಯು ಭಕ್ತಿಯಿಂದ ಪರವಶಳಾದಂತಾಗಿ ಆ ಶಂಕರನನ್ನು ಪ್ರಸನ್ನನಾಗಿಮಾಡಿಕೊಂಡು ಉತ್ತಮವಾದ ವರವನ್ನು ಬೇಡಿದಳು

೬೪ ಎಲೈ ಮಹಾದೇವನೇ, ನನ್ನ ತಂದೆಯಾದ ಚಂದ್ರಾಂಗದನೂ ತಾಯಿಯಾದ ಸೀಮಂತಿನಿಯೂ ಸರ್ವದಾ ಸಂತೋಷದಿಂದ ನಿನ್ನ ಪಾರ್ಶ್ವದಲ್ಲಿಯೆ, ಇರುವಂತೆ ಅನುಗ್ರಹಿಸು ಎಂದಳು.

೬೫. ಓ ಮುನೀಂದ್ರ, ಭಕ್ತರಲ್ಲಿ ಅತಿಶಯವಾದ ಪ್ರೀತಿಯುಳ್ಳ ಆ ಗೌರೀಕಾಂತನು ಪ್ರಸನ್ನನಾಗಿ ಹಾಗೆಯೇ ಆಗಲೆಂದು ನುಡಿದು ಅವರೀರ್ವರೂ ಬೇಡಿದ ವರಗಳನ್ನು ಇತ್ತು ಕ್ಷಣಮಾತ್ರದಲ್ಲಿ ಅಲ್ಲಿಂದ ಕಣ್ಮರೆಯಾದನು

೬೬. ಈರೀತಿ ಭದ್ರಾಯುವೆಂಬ ಅರಸು ಶಿವನ ಪರಮಾನುಗ್ರಹವನ್ನು ಪಡೆದು ತನ್ನ ಮಡದಿಯಾದ ಕೀರ್ತಿಮಾಲಿನಿಯೊಂದಿಗೆ ಅನೇಕ ಸುಖಗಳನ್ನು ಅನುಭವಿಸುತ್ತಿದ್ದನು.

ಕೃತ್ವಾ ವರ್ಷಾಯುತಂ ರಾಜ್ಯಮವ್ಯಾಹತಪರಾಕ್ರಮಃ ।
ರಾಜ್ಯಂ ವಿಕ್ಷಿಪ್ಯ ತನಯೇ ಜಗಾಮ ಶಿವಸನ್ನಿಧಿಂ ॥ ೬೭ ॥

ಚಂದ್ರಾಂಗದೋಽಪಿ ರಾಜೇಂದ್ರೋ ರಾಜ್ಞೀ ಸೀಮಂತಿನೀ ಚ ಸಾ ।
ಭಕ್ತ್ಯಾ ಸಂಪೂಜ್ಯ ಗಿರಿಶಂ ಜಗ್ಮತುಃ ಶಾಂಭವಂ ಪದಂ ॥ ೬೮ ॥

ದ್ವಿಜೇಶ್ವರಾವತಾರಸ್ತೇ ವರ್ಣಿತಃ ಪರಮೋ ಮಯಾ ।
ಮಹೇಶ್ವರಸ್ಯ ಭದ್ರಾಯುಪರಮಾನಂದದಃ ಪ್ರಭೋ ॥ ೬೯ ॥

ಇದಂ ಚರಿತ್ರಂ ಪರಮಂ ಪವಿತ್ರಂ
ಶಿವಾವತಾರಸ್ಯ ಪವಿತ್ರಕೀರ್ತೇಃ ।
ದ್ವಿಜೇಶಸಂಜ್ಞಸ್ಯ ಮಹಾದ್ಭುತಂ ಹಿ
ಶೃಣ್ವನ್ಪಠನ್ಶಂಭುಪದಂ ಪ್ರಯಾತಿ ॥ ೭೦ ॥

---

೬೭. ತನ್ನ ಪರಾಕ್ರಮಕ್ಕೆ ಯಾರೂ ಎದುರಿಲ್ಲದಂತೆ ಹತ್ತುಸಹಸ್ರವರ್ಷಗಳಕಾಲ ರಾಜ್ಯಭಾರವನ್ನು ಮಾಡಿ ಬಳಿಕ ತನ್ನ ಮಗನಿಗೆ ಆ ಆಡಳಿತವನ್ನೆಲ್ಲಾ ಒಪ್ಪಿಸಿ ತಾನು ಶಿವನ ಸನ್ನಿಧಿಯನ್ನು ಸೇರಿದನು.

೬೮. ಚಂದ್ರಾಂಗದ ಮಹಾರಾಜನೂ ಆತನ ಪತ್ನಿಯಾದ ಸೀಮಂತಿನೀ ಮಹಾರಾಣಿಯೂ ಶಿವನನ್ನು ಭಕ್ತಿಯಿಂದ ಪೂಜಿಸುತ್ತಿದ್ದು ಕೊನೆಗೆ ಶಿವಲೋಕವನ್ನು ಸೇರಿದರು.

೬೯. ಎಲೈ ಮುನಿಯೇ, ಈರೀತಿಯಾಗಿ ಭದ್ರಾಯುವಿಗೆ ಮಹಾ ಆನಂದವನ್ನುಂಟುಮಾಡಿದ ಪರಮಶ್ರೇಷ್ಠವಾದ ಮಹಾದೇವನ ದ್ವಿಜೇಶ್ವರಾವತಾರವನ್ನು ನಿನಗೆ ವರ್ಣಿಸಿದುದಾಯಿತು.

೭೦. ಪವಿತ್ರವಾದ ಕೀರ್ತಿಯುಳ್ಳ, ಶಿವನ ಅವತಾರವೆನಿಸಿದ ದ್ವಿಜೇಶ್ವರನ ಅತ್ಯದ್ಭುತವಾದ ಪರಮಪಾವನವೆನಿಸಿದ ಈ ಚರಿತವನ್ನು ಕೇಳಿದವನೂ ಓದಿದವನೂ ಶಿವನ ಸಾನ್ನಿಧ್ಯವನ್ನು ಪಡೆಯುವನು.

ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾ ಸಮಾಹಿತಃ ।
ನ ಶ್ಚ್ಯೋತತಿ ಸ್ವಧರ್ಮಾತ್ಸ ಪರತ್ರ ಲಭತೇ ಗತಿಂ ॥ ೭೧ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ದ್ವಿಜೇಶ್ವರಾವತಾರವರ್ಣನಂ ನಾಮ ಸಪ್ತವಿಂಶೋಽಧ್ಯಾಯಃ

---

೭೧ ಯಾವನು ಈ ಚರಿತ್ರವನ್ನು ಪ್ರತಿನಿತ್ಯವೂ ಮನಸ್ಸಿಟ್ಟು ಆಲಿಸುವನೋ ಅಥವಾ ಮತ್ತೊಬ್ಬರಿಗೋಸ್ಕರ ಕೀರ್ತನೆಯನ್ನು ಮಾಡುವನೋ ಆತನು ತನ್ನ ಧರ್ಮದಿಂದ ಭ್ರಷ್ಟನಾಗದೆ ಮುಂದೆ ಸದ್ಗತಿಯನ್ನು ಹೊಂದುವನು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಮೂರನೆಯದಾದ ಶತರುದ್ರಸಂಹಿತೆಯಲ್ಲಿ
ದ್ವಿಜೇಶ್ವರಾವತಾರವರ್ಣನವೆಂಬ ಇಪ್ಪತ್ತೇಳನೆಯ
ಅಧ್ಯಾಯವು ಮುಗಿದುದು

|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅ ಥ ಶ್ರೀ ಶಿ ವ ಮ ಹಾ ಪು ರಾ ಣೇ

## ಶತರುದ್ರಸಂಹಿತಾಯಾಂ

## ಅಷ್ಟಾವಿಂಶೋऽಧ್ಯಾಯಃ

|| ನಂದೀಶ್ವರ ಉವಾಚ ||

ಶೃಣು ಪ್ರಾಜ್ಞ ಪ್ರವಕ್ಷ್ಯಾಮಿ ಶಿವಸ್ಯ ಪರಮಾತ್ಮನಃ |
ಅವತಾರಂ ಪುರಾನಂದಂ ಯತಿನಾಥಾಹ್ವಯಂ ಮುನೇ || ೧ ||

ಅರ್ಬುದಾಚಲಸಂಜ್ಞೇ ತು ಪರ್ವತೇ ಭಿಲ್ಲವಂಶಜಃ |
ಆಹುಕಶ್ಚ ತದಭ್ಯಾಸೇ ವಸತಿ ಸ್ಮ ಮುನೀಶ್ವರ || ೨ ||

---

## ಇಪ್ಪತ್ತೆಂಟನೆಯ ಅಧ್ಯಾಯವು

೧. ಎಲೈ ಪ್ರಜ್ಞಾಶಾಲಿಯಾದ ಮುನಿಯೇ, ಮಹಾ ಆನಂದದಾಯಕವಾದ ಪರಮಾತ್ಮನಾದ ಶಿವನ ಯತಿನಾಥವೆಂಬ ಅವತಾರವನ್ನು ವರ್ಣಿಸುವೆನು.

೨. ಎಲೈ ಮುನಿಯೇ ಅರ್ಬುದವೆಂಬ ಪರ್ವತದಲ್ಲಿ ಭಿಲ್ಲರಜಾತಿಗೆ ಸೇರಿದ ಆಹುಕನೆಂಬ ಭಿಲ್ಲನಿದ್ದನು.

ತತ್ಪತ್ನೀ ಹ್ಯಾಹುಕಾ ನಾಮ ಬಭೂವ ಕಿಲ ಸುವ್ರತಾ ।
ಉಭಾವಪಿ ಮಹಾಶೈವಾವಾಸ್ತಾಂ ತೌ ಶಿವಪೂಜಕೌ　　॥ ೩ ॥

ಕಸ್ಮಿಂಶ್ಚಿತ್ಸಮಯೇ ಭಿಲ್ಲಃ ಶಿವಭಕ್ತಿರತಃ ಸದಾ ।
ಆಹಾರಾರ್ಥಂ ಸ್ವಪತ್ನ್ಯಾಶ್ಚ ಸುದೂರಂ ಸ ಗತೋ ಮುನೇ　　॥ ೪ ॥

ಏತಸ್ಮಿನ್ನಂತರೇ ತತ್ರ ಗೇಹೇ ಭಿಲ್ಲಸ್ಯ ಶಂಕರಃ ।
ಭೂತ್ವಾ ಯತಿವಪುಃ ಸಾಯಂ ಪರೀಕ್ಷಾರ್ಥಂ ಸಮಾಯಯೌ　　॥ ೫ ॥

ತಸ್ಮಿನ್ನವಸರೇ ತತ್ರಾಜಗಾಮ ಸ ಗೃಹಾಧಿಪಃ ।
ಪೂಜನಂ ಚ ಯತೀಶಸ್ಯ ಚಕಾರ ಪ್ರೇಮತಃ ಸುಧೀಃ　　॥ ೬ ॥

ತದ್ಭಾವಸ್ಯ ಪರೀಕ್ಷಾರ್ಥಂ ಪತಿರೂಪಸ್ಸ ಶಂಕರಃ ।
ಮಹಾಲೀಲಾಕರಃ ಪ್ರೀತ್ಯಾ ಭೀತಂ ಪ್ರೋವಾಚ ದೀನಗೀಃ　　॥ ೭ ॥

---

೩ ಅವನಿಗೆ ಆಹುಕೆಯೆಂಬ ಪತಿವ್ರತೆಯಾದ ಹೆಂಡತಿಯೊಬ್ಬಳಿದ್ದಳು. ಅವರೀರ್ವರೂ ಶಿವನಲ್ಲಿ ಅತಿಶಯವಾದ ಭಕ್ತಿಯುಳ್ಳವರಾಗಿ ಶಿವನನ್ನು ಆರಾಧಿಸುತ್ತಾ ಇದ್ದರು

೪ ಓ ಮುನೀಂದ್ರ, ಒಂದು ದಿವಸ ಮಹಾಶಿವಭಕ್ತನಾದ ಆ ಭಿಲ್ಲನು ಆಹಾರವನ್ನು ತರುವುದಕ್ಕೆಂದು ತನ್ನ ಪತ್ನಿಯನ್ನು ಬಿಟ್ಟು ಬಹುದೂರ ಹೊರಟುಹೋದನು.

೫ ಈ ನಡುವೆ ಶ್ರೀ ಶಿವನು ಇವರನ್ನು ಪರೀಕ್ಷಿಸಬೇಕೆಂದು ಎಣಿಸಿ, ಯತಿವೇಷವನ್ನು ತಾಳಿ, ಆ ಭಿಲ್ಲನ ಮನೆಗೆ ಸಂಜೆಯಹೊತ್ತಿನಲ್ಲಿ ಬಂದನು.

೬ ಆ ಸಮಯಕ್ಕೆ ಸರಿಯಾಗಿ ಮನೆಯ ಯಜಮಾನನಾದ ಭಿಲ್ಲನೂ ಬಂದನು. ಆಗ ವಿವೇಕಿಯಾದ ಭಿಲ್ಲನು ಪ್ರೀತಿಯಿಂದ ಆ ಯತಿವರ್ಯನಿಗೆ ಉಪಚರಿಸಿದನು.

೭. ಲೀಲಾಕುಶಲನಾದ ಆ ಶಿವನು ಅವನ ಮನಸ್ಸನ್ನು ಪರೀಕ್ಷಿಸಲೆಳಸಿ, ಹೆದರಿದವನಂತೆ ದೈನ್ಯದಿಂದ ಮಾತಾಡುತ್ತಾ ಅವನನ್ನು ಇಂತೆಂದನು.

॥ ಯತಿನಾಥ ಉವಾಚ ॥

**ಅದ್ಯ ಸ್ಥಲಂ ನಿವಾಸಾರ್ಥಂ ದೇಹಿ ಮೇ ಪ್ರಾತರೇವ ಹಿ ।**
**ಯಾಸ್ಯಾಮಿ ಸರ್ವಥಾ ಭಿಲ್ಲ ಸ್ವಸ್ತಿ ಸ್ಯಾತ್ತವ ಸರ್ವದಾ ॥ ೮ ॥**

॥ ಭಿಲ್ಲ ಉವಾಚ ॥

**ಸತ್ಯಂ ಪ್ರೋಕ್ತಂ ತ್ವಯಾ ಸ್ವಾಮಿಂಚ್ಛೃಣು ಮದ್ವಚನಂ ಚ ತೇ ।**
**ಅತಿಸ್ವಲ್ಪಂ ಸ್ಥಲಂ ಮೇ ಹಿ ಸ್ಯಾನ್ನಿವಾಸಃ ಕಥಂ ತವ ॥ ೯ ॥**

॥ ನಂದೀಶ್ವರ ಉವಾಚ ॥

**ಇತ್ಯುಕ್ತಸ್ಸ ಯತಿಸ್ತೇನ ಗಮನಾಯ ಮತಿಂ ದಧೇ ।**
**ತಾವದ್ಭಿಲ್ಲ್ಯಾ ವಚಃ ಪ್ರೋಕ್ತಂ ಸ್ವಾಮಿನಂ ಸಂವಿಚಾರ್ಯ ವೈ ॥ ೧೦ ॥**

॥ ಭಿಲ್ಲ್ಯುವಾಚ ॥

**ಸ್ವಾಮಿನ್ದೇಹಿ ಯತೇಃ ಸ್ಥಾನಂ ವಿಮುಖಂ ಕುರು ಮಾತಿಥಿಂ ।**
**ಗೃಹಧರ್ಮಂ ವಿಚಾರ್ಯ ತ್ವಮನ್ಯಥಾ ಧರ್ಮಸಂಕ್ಷಯಃ ॥ ೧೧ ॥**

---

೮. ಎಲೈ ಭಿಲ್ಲನೇ, ಈ ರಾತ್ರಿ ಮಲಗಲು ಸ್ವಲ್ಪಜಾಗ ಕೊಡು. ಬೆಳಿಗ್ಗೆ ಎದ್ದು ಹೊರಟುಹೋಗುವೆನು. ನಿನಗೆ ಎಂದೆಂದಿಗೂ ಒಳ್ಳೆಯದಾಗಲಿ ಎನ್ನಲು,

೯. ಆಗ ಭಿಲ್ಲನು, ಎಲೈ ಸ್ವಾಮಿಯೇ ಚೆನ್ನಾಗಿ ಹೇಳಿದೆ. ನನ್ನ ವ್ರತನ್ನಾಲಿಸು. ನನ್ನ ಮನೆ ಬಹು ಕಿರಿದು. ನಿನಗೆ ಜಾಗವೆಲ್ಲಿದೊರೆಯುವುದು ? ಎಂದನು.

೧೦. ಎಲೈ ಮುನಿಯೇ ಹೀಗೆಂದು ಆ ಭಿಲ್ಲನು ನುಡಿಯುತ್ತಲೇ ಆ ಯತಿಯು ಹೊರಡಲನುವಾದನು. ಆಗ ಭಿಲ್ಲನ ಪತ್ನಿಯು ತನ್ನ ಮನಸ್ಸಿನಲ್ಲಿಯೇ ಆಲೋಚಿಸಿಕೊಂಡು ಭಿಲ್ಲನನ್ನು ಕುರಿತು ಇಂತೆಂದಳು.

೧೧. ಎಲೈ ಸ್ವಾಮಿಯೇ, ಯತಿಗೆ ಜಾಗವನ್ನು ನೀಡು ಆತನನ್ನು ನಿರಾಶನನ್ನು ಮಾಡಬೇಡ. ಗೃಹಸ್ಥನಾದವನ ಧರ್ಮವೇನೆಂಬುದಾಗಿ ವಿಚಾರಿಸಿ ಅವನಿಗೆ ನೆಲೆಯನ್ನು ನೀಡು. ಇಲ್ಲದಿದ್ದರೆ ಧರ್ಮಲೋಪವಾಗುವುದು.

ಸ್ಥೀಯತಾಂ ತೇ ಗೃಹಾಭ್ಯಂತಃ ಸುಖೇನ ಯತಿನಾ ಸಹ ।
ಅಹಂ ಬಹಿಸ್ಥಿತಿಂ ಕುರ್ಯಾಮಾಯುಧಾನಿ ಬೃಹಂತ್ಯಪಿ ॥ ೧೨ ॥

॥ ನಂದೀಶ್ವರ ಉವಾಚ ॥

ತಸ್ಯಾಸ್ತದ್ವಚನಂ ಶ್ರುತ್ವಾ ಭಿಲ್ಲ್ಯಾ ಧರ್ಮಾನ್ವಿತಂ ಶಿವಂ ।
ಸ್ವಪತ್ನ್ಯಾ ಮನಸಾ ತೇನ ಭಿಲ್ಲೇನ ಚ ವಿಚಾರಿತಂ ॥ ೧೩ ॥

ಸ್ತ್ರಿಯಂ ಬಹಿಶ್ಚ ನಿಷ್ಕಾಸ್ಯ ಕಥಂ ಸ್ಥೇಯಂ ಮಯಾ ಗೃಹೇ ।
ಯತೇರನ್ಯತ್ರ ಗಮನಮಧರ್ಮಕರಮಾತ್ಮನಃ ॥ ೧೪ ॥

ದ್ವಯಮಪ್ಯುಚಿತಂ ನೈವ ಸರ್ವಥಾ ಗೃಹಮೇಧಿನಃ ।
ಯದ್ಭಾವಿ ತದ್ಭವೇದೇವ ಮಯಾ ಸ್ಥೇಯಂ ಗೃಹಾದ್ಬಹಿಃ ॥ ೧೫ ॥

---

೧೨. ನೀನು ಈ ಯತಿಯೊಡನೆ ಸುಖವಾಗಿ ಒಳಗೆ ಮಲಗಿಕೋ. ನಾನು ಈ ಬಲವಾದ ಆಯುಧಗಳೊಡನೆ(ನಿರ್ಭಯವಾಗಿ)ಹೊರಗಡೆಯೇ ಇರುವೆನು ಎಂದಳು

೧೩ ಓ ಮುನೀಂದ್ರ ಧರ್ಮಸಂಮತವಾಗಿಯೂ ಶುಭಕರವಾಗಿಯೂ ಇರುವ ಭಿಲ್ಲಾಂಗನೆಯು ನುಡಿದ ಮಾತನ್ನು ಕೇಳಿ ಆ ಭಿಲ್ಲನು ತನ್ನ ಮನಸ್ಸಿನಲ್ಲಿಯೇ ವಿಚಾರಮಾಡತೊಡಗಿದನು.

೧೪. ನನ್ನ ಕೈಹಿಡಿದ ಹೆಂಡತಿಯನ್ನು ಹೇಗೆ ತಾನೆ ಹೊರಗೆ ನಿಲ್ಲಿಸಿ ನಾನು ಮನೆಯೊಳಗೆ ನಿಲ್ಲಲಿ? ಯತಿಯನ್ನು ಇನ್ನೆಲ್ಲಿಯಾದರೂ ಕಳುಹಿಸುವುದೆಂದರೆ ಅದೂ ನನಗೆ ಧರ್ಮವಾದುದಲ್ಲ

೧೫. ಯಾವರೀತಿಯಾಗಿ ನೋಡಿದರೂ ಗೃಹಸ್ಥನಾದವನಿಗೆ ಇವೆರಡೂ ತಕ್ಕುದಲ್ಲ. ಏನೇನು ಆಗಬೇಕೆಂದಿದೆಯೋ ಅದೆಲ್ಲವೂ ಆಗಿಯೇ ತೀರಬೇಕಲ್ಲವೇ? ಆದುದರಿಂದ ನಾನು ಮನೆಯ ಹೊರಗಡೆ ನಿಲ್ಲುವೆನು.

ಇತ್ಯಾಗ್ರಹಂ ತದಾ ಕೃತ್ವಾ ಗೃಹಾಂತಃ ಸ್ಥಾಪ್ಯ ತೌ ಮುದಾ ।
ಸ್ವಾಯುಧಾನಿ ಚ ಸಂಸ್ಥಾಪ್ಯ ಭಿಲ್ಲೋಽತಿಷ್ಠದ್ಗೃಹಾದ್ಬಹಿಃ ॥ ೧೬ ॥

ರಾತ್ರೌ ತಂ ಪಶವಃ ಕ್ರೂರಾ ಹಿಂಸಕಾಃ ಸಮಪೀಡಯನ್ ।
ತೇನಾಪಿ ಚ ಯಥಾಶಕ್ತಿ ಕೃತೋ ಯತ್ನೋ ಮಹಾಂಸ್ತದಾ ॥ ೧೭

ಏವಂ ಯತ್ನಂ ಪ್ರಕುರ್ವಾಣಃ ಸ ಭಿಲ್ಲೋ ಬಲವಾನಪಿ ।
ಪ್ರಾರಬ್ಧಾತ್ಪ್ರೇರಿತೈರ್ಹಿಂಸ್ರೈರ್ಬಲಾದಾಸೀಚ್ಚ ಭಕ್ಷಿತಃ ॥ ೧೮ ॥

ಪ್ರಾತರುತ್ಥಾಯ ಸ ಯತಿರ್ದೃಷ್ಟ್ವಾ ಹಿಂಸ್ರೈಶ್ಚ ಭಕ್ಷಿತಂ ।
ಭಿಲ್ಲಂ ವನೇಚರಂ ತಂ ವೈ ದುಃಖಿತೋಽಭೂದತೀವ ಹಿ ॥ ೧೯ ॥

ದುಃಖಿತಂ ತಂ ಯತಿಂ ದೃಷ್ಟ್ವಾ ಭಿಲ್ಲೀ ಸಾ ದುಃಖಿತಾಪಿ ಹಿ ।
ಧೈರ್ಯಾತ್ಸ್ವದುಃಖಂ ಸಂಹೃತ್ಯ ವಚನಂ ಚೇದಮಬ್ರವೀತ್ ॥ ೨೦ ॥

---

೧೬. ಈ ರೀತಿಯಾಗಿ ಮನಸ್ಸಿನಲ್ಲಿ ನಿರ್ಧರಿಸಿ ಆ ಭಿಲ್ಲನು ತನ್ನ ಹೆಂಡತಿಯನ್ನೂ ಆ ಯತಿಯನ್ನೂ ಸಂತೋಷದಿಂದ ಒಳಗಿರುವಂತೆ ಒತ್ತಾಯಪಡಿಸಿ, ತನ್ನ ಆಯುಧಗಳನ್ನು ಬಳಿಯಲ್ಲಿಟ್ಟುಕೊಂಡು ಮನೆಯ ಹೊರಗಡೆ ಮಲಗಿದನು.

೧೭. ರಾತ್ರಿಯೆಲ್ಲಾ ಭಯಂಕರವಾದ ಕಾಡುಮೃಗಗಳು ಆ ಭಿಲ್ಲನನ್ನು ಹಿಂಸೆ ಮಾಡಿದುವು. ಆ ಭಿಲ್ಲನೂ ಸಹ ತನಗೆ ಸಾಧ್ಯವಾದಷ್ಟು ಮಟ್ಟಿಗೆ ಅವುಗಳ ಬಾಧೆಯನ್ನು ತಪ್ಪಿಸಲು ಹೆಣಗಿದನು.

೧೮. ಈರೀತಿ ಶಕ್ತಿಮೀರಿ ಹೆಣಗುತ್ತಿದ್ದ ಆ ಭಿಲ್ಲನು ಬಲಾಢ್ಯನಾದರೂ ಪ್ರಾರಬ್ಧಕರ್ಮಶೇಷದಿಂದ ಆ ಕ್ರೂರಮೃಗಗಳಿಗೆ ಸಿಕ್ಕಿಹೋಗಿ ತಿಂದುಹಾಕಲ್ಪಟ್ಟನು.

೧೯. ಬೆಳಗ್ಗೆ ಎದ್ದೊಡನೆ ಆ ಯತಿಯು ಕ್ರೂರವಾದ ಕಾಡುಮೃಗಗಳಿಂದ ಆ ಭಿಲ್ಲನು ಭಕ್ಷಿಸಲ್ಪಟ್ಟಿರುವುದನ್ನು ಕಂಡು, ಬಹುವಾಗಿ ಶೋಕಿಸಿದನು.

೨೦. ಆ ಭಿಲ್ಲಸ್ತ್ರೀಯು ತಾನೂ ಶೋಕಾರ್ತಳಾಗಿದ್ದರೂ, ಧೈರ್ಯದಿಂದ ತನ್ನ ದುಃಖವನ್ನು ತಡೆದುಕೊಂಡು ಅಳುತ್ತಿರುವ ಆ ಯತಿಯನ್ನು ಇಂತೆಂದಳು.

॥ ಭಿಲ್ಲ್ಯುವಾಚ ॥

ಕಿಮರ್ಥಂ ಕ್ರಿಯತೇ ದುಃಖಂ ಭದ್ರಂ ಜಾತಂ ಯತೇಽಧುನಾ ।
ಧನ್ಯೋಽಯಂ ಕೃತಕೃತ್ಯಶ್ಚ ಯಜ್ಜಾತೋ ಮೃತ್ಯುರೀದೃಶಃ ॥ ೨೧ ॥

ಅಹಂ ಚೈನಂ ಗಮಿಷ್ಯಾಮಿ ಭಸ್ಮಭೂತ್ವಾನಲೇ ಯತೇ ।
ಚಿತಾಂ ಕಾರಯ ಸುಪ್ರೀತ್ಯಾ ಸ್ತ್ರೀಣಾಂ ಧರ್ಮಃ ಸನಾತನಃ ॥ ೨೨ ॥

ಇತಿ ತದ್ವಚನಂ ಶ್ರುತ್ವಾ ಹಿತಂ ಮತ್ವಾ ಸ್ವಯಂ ಯತಿಃ !
ಚಿತಾಂ ವ್ಯರಚಯತ್ಸಾ ಹಿ ಪ್ರವಿವೇಶ ಸ್ವಧರ್ಮತಃ ॥ ೨೩ ॥

ಏತಸ್ಮಿನ್ನಂತರೇ ಸಾಕ್ಷಾತ್ಪುರಃ ಪ್ರಾದುರಭೂಚ್ಛಿವಃ ।
ಧನ್ಯೇ ಧನ್ಯೇ ಇತಿ ಪ್ರೀತ್ಯಾ ಪ್ರಶಂಸಂತಾಂ ಹರೋಽಬ್ರವೀತ್ ॥ ೨೪

---

೨೧　ಎಲೈ ಯತಿಯೇ, ಏತಕ್ಕೆ ವ್ಯಥೆಪಡುವೆ ? ಈಗ ಒಳ್ಳೆಯದೇ ಆಯಿತು ಇಂತಹ ಸಾವು ದೊರೆತಮೇಲೆ ಅವನು ಧನ್ಯನಾದನು. ಕೃತಾರ್ಥನಾದನು

೨೨　ನಾನೂ ಬೆಂಕಿಗೆ ಬಿದ್ದು ಭಸ್ಮೀಭೂತಳಾಗಿ ಈತನೊಡನೆಯೇ ಸೇರುವೆನು ನನಗೆ ಪ್ರೀತಿಯಿಂದ ಚಿತೆಯನ್ನು ಸಿದ್ದಗೊಳಿಸು. ಸ್ತ್ರೀಯರಿಗೆ ಈ ಧರ್ಮವು ಬಹುಹಿಂದಿನಿಂದಲೂ ಬಂದಿರುವುದು.

೨೩.　ಈ ರೀತಿ ಆ ಭಿಲ್ಲಸ್ತ್ರೀಯು ಹೇಳಿದುದನ್ನು ಕೇಳಿ, ಅದೇ ಉಚಿತವಾದುದೆಂದು ಬಗೆದು, ಆ ಯತಿಯು ತಾನೇ ಚಿತಿಯನ್ನು ಸಿದ್ಧಗೊಳಿಸಿದನು ಆ ಭಿಲ್ಲಾಂಗನೆಯೂ ಸಹ ಕೂಡಲೇ ತನ್ನ ಧರ್ಮಾನುಸಾರವಾಗಿ ಆ ಚಿತಿಯಲ್ಲಿ ಪ್ರವೇಶಿಸಿಬಿಟ್ಟಳು.

೨೪.　ಇಷ್ಟರಲ್ಲಿ ಅವಳೆದುರಿಗೆ ಸಾಕ್ಷಾತ್ ಶಂಕರನು ಪ್ರತ್ಯಕ್ಷನಾಗಿ, ನೀನೇ ಧನ್ಯೆ, ಧನ್ಯೆ ಎಂಬುದಾಗಿ ಬಹುಪ್ರೀತಿಯಿಂದ ಹೊಗಳುತ್ತಾ ಅವಳನ್ನು ಕುರಿತು ಇಂತೆಂದು ನುಡಿದನು

॥ ಹರ ಉವಾಚ ॥

ವರಂ ಬ್ರೂಹಿ ಪ್ರಸನ್ನೋಽಸ್ಮಿ ತ್ವದಾಚರಣತೋಽನಘೇ ।
ತವಾದೇಯಂ ನ ವೈ ಕಿಂಚಿದ್ವಶ್ಯೋಽಹಂ ತೇ ವಿಶೇಷತಃ ॥ ೨೫ ॥

॥ ನಂದೀಶ್ವರ ಉವಾಚ ॥

ತಚ್ಛ್ರುತ್ವಾ ಶಂಭುವಚನಂ ಪರಮಾನಂದದಾಯಕಂ ।
ಸುಖಂ ಪ್ರಾಪ್ತಂ ವಿಶೇಷೇಣ ನ ಕಿಂಚಿತ್ಸ್ಮರಣಂ ಯಯೌ ॥ ೨೬ ॥

ತಸ್ಯಾಸ್ತದ್ಗತಿಮಾಲಕ್ಷ್ಯ ಸುಪ್ರಸನ್ನೋ ಹರೋಽಭವತ್ ।
ಉವಾಚ ಚ ಪುನಃ ಶಂಭುರ್ವರಂ ಬ್ರೂಹೀತಿ ತಾಂ ಪ್ರಭುಃ ॥ ೨೭ ॥

॥ ಶಿವ ಉವಾಚ ॥

ಅಯಂ ಯತಿಶ್ಚ ಮದ್ರೂಪೋ ಹಂಸರೂಪೋ ಭವಿಷ್ಯತಿ ।
ಪರಜನ್ಮನಿ ವಾಂ ಪ್ರೀತ್ಯಾ ಸಂಯೋಗಂ ಕಾರಯಿಷ್ಯತಿ ॥ ೨೮ ॥

---

೨೫ ಎಲೈ ಪಾಪರಹಿತಳೇ ನಿನ್ನ ನಡೆವಳಿಕೆಯಿಂದ ನಾನು ಬಹುವಾಗಿ ಮೆಚ್ಚಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೋ. ನಿನಗೆ ಕೊಡದೇ ಇರುವಂತಹುದು ಯಾವುದೂ ಇಲ್ಲ. ನಾನು ಸಂಪೂರ್ಣವಾಗಿ ನಿನಗೆ ಅಧೀನನಾಗಿರುವೆನು ಎಂದನು

೨೬. ಎಲೈ ಮುನೀಂದ್ರನೇ ಈ ರೀತಿ ಶ್ರೀಶಂಕರನು ನುಡಿದ ಮಹಾ ಆನಂದ ಕರವಾದ ಮಾತನ್ನು ಕೇಳಿ, ಆ ಭಿಲ್ಲಾಂಗನೆಯು ಅತಿಶಯವಾದ ಸಂತೋಷವನ್ನು ತಾಳಿದಳು. ಅವಳಿಗೆ ಹಿಂದಿನ ಯಾವ ಸಂಗತಿಯೂ ನೆನಪಾಗಲಿಲ್ಲ

೨೭. ಈ ರೀತಿ ಆನಂದಾತಿಶಯದಿಂದ ಮೈಮರೆತು ನಿಂತುಬಿಟ್ಟ ಆ ಭಿಲ್ಲ ಸ್ತ್ರೀಯ ಸ್ಥಿತಿಯನ್ನು ಕಂಡು, ಶಂಕರನು ಮತ್ತಷ್ಟು ಒಲಿದವನಾಗಿ ಮತ್ತೊಮ್ಮೆ ಅವಳನ್ನು ಕುರಿತು ನಿನಗೆ ಬೇಕಾದ ವರವಾವುದು ? ಕೇಳು ಎಂದನು.

೨೮. ಆಗ ಶಿವನು ಮತ್ತೆ ನುಡಿದನು--ಈ ಯತಿಯು ಮತ್ತಾರೂ ಅಲ್ಲ, ನಾನೇ ಇವನು. ಹಂಸರೂಪವನ್ನು ತಾಳಿ ನಿಮ್ಮಿರ್ವರಿಗೂ ಮುಂದಿನಜನ್ಮದಲ್ಲಿ ಸಮಾಗಮವುಂಟಾಗುವಂತೆ ಪ್ರೀತಿಯಿಂದ ದೌತ್ಯಕಾರ್ಯವನ್ನು ಮಾಡುವನು.

ಿಲ್ಲಶ್ಚ ವೀರಸೇನಶ್ಚ ನೈಷಧೇ ನಗರೇ ವರೇ ।
ುಹಾನ್ಪುತ್ರೋ ನಲೋ ನಾಮ ಭವಿಷ್ಯತಿ ನ ಸಂಶಯಃ　　　　॥ ೨೯ ॥

್ರಂ ಸುತಾ ಭೀಮರಾಜಸ್ಯ ವೈದರ್ಭೇ ನಗರೇಽನಘೇ ।
ಮಯಂತೀ ಚ ವಿಖ್ಯಾತಾ ಭವಿಷ್ಯಸಿ ಗುಣಾನ್ವಿತಾ　　　　॥ ೩೦ ॥

ುವಾಂ ಚೋಭೌ ಮಿಲಿತ್ವಾ ಚ ರಾಜಭೋಗಂ ಸುವಿಸ್ತರಂ ।
ುಕ್ತ್ವಾ ಮುಕ್ತಿಂ ಚ ಯೋಗೀಂದ್ರೈರ್ಲಭ್ಯೇಥೇ ದುರ್ಲಭಾಂ ಧ್ರುವಂ ॥

॥ ನಂದೀಶ್ವರ ಉವಾಚ ॥

ತ್ಯುಕ್ತ್ವಾ ಚ ಸ್ವಯಂ ಶಂಭುರ್ಲಿಂಗರೂಪೋಽಭವತ್ತದಾ ।
ಸ್ಮಾನ್ನ ಚಲಿತೋ ಧರ್ಮಾದಚಲೇಶ ಇತಿ ಸ್ಮೃತಃ　　　　॥ ೩೨ ॥

---

೨೯. ಈ ಭಿಲ್ಲನು ಮುಂದಿನ ಜನ್ಮನಲ್ಲಿ ನೈಷಧವೆಂಬ ಪಟ್ಟಣದಲ್ಲಿ ವೀರಸೇನ ುಹಾರಾಜನಿಗೆ ಮಗನಾಗಿ, ಪ್ರಖ್ಯಾತನಾದ ನಲಚಕ್ರವರ್ತಿಯೆಂಬುದಾಗಿ ಹುಟ್ಟು ನು. ಇದರಲ್ಲಿ ಸಂಶಯವಿಲ್ಲ

೩೦. ನೀನೂ ಸಹ ದಮಯಂತಿಯೆಂಬ ಹೆಸರಿನಿಂದ ಪ್ರಖ್ಯಾತಳಾಗಿ, ರಮ ೀಯವಾದ ವಿದರ್ಭರಾಜಧಾನಿಯಲ್ಲಿ ಭೀಮನರೇಂದ್ರನ ಮಗಳಾಗಿ ಹುಟ್ಟುವೆ

೩೧ ಪರಸ್ಪರ ಪ್ರೇಮಪಾತ್ರರಾದ ನೀವೀರ್ವರೂ ಕಲೆತು, ಅನುಪಮವಾದ ಾಜ್ಯಭೋಗಗಳನ್ನೆಲ್ಲಾ ಅನುಭವಿಸಿ ಕೊನೆಗೆ ಮಹಾಯೋಗಿಗಳಿಗೂ ದುರ್ಲಭವಾದ ನಿಸಿದ ಮೋಕ್ಷಸುಖವನ್ನು ಪಡೆಯುವಿರಿ ಇದು ಖಂಡಿತ ಎಂದನು

೩೨. ಎಲೈ ಮುನಿಯೇ, ಹೀಗೆ ಹೇಳಿ ಶ್ರೀ ಶಿವನು ಅಲ್ಲಿಯೇ ಲಿಂಗ ೂಪವಾಗಿ ನೆಲೆಸಿಬಿಟ್ಟನು. ತನ್ನ ಧರ್ಮದಿಂದ ಸ್ವಲ್ಪವೂ ಚಲಿಸದೆ ಅಲ್ಲಿ ಅವತರಿಸಿ ುದರಿಂದ ಅಚಲೇಶ್ವರನೆಂದೇ ಪ್ರಖ್ಯಾತನಾದನು.

ಸ ಭಿಲ್ಲ ಆಹುಕಶ್ಚಾಪಿ ವೀರಸೇನಸುತೋಽಭವತ್ ।
ನೈಷಧೇ ನಗರೇ ತಾತ ನಲನಾಮಾ ಮಹಾನೃಪಃ ॥ ೩೩ ॥

ಆಹುಕಾ ಸಾ ಮಹಾಭಿಲ್ಲೀ ಭೀಮಸ್ಯ ತನಯಾಽಭವತ್ ।
ವೈದರ್ಭೇ ನಗರೇ ರಾಜ್ಞೋ ದಮಯಂತೀತಿ ವಿಶ್ರುತಾ ॥ ೩೪ ॥

ಯತಿನಾಥಾಹ್ವಯಸ್ಸೋಽಪಿ ಹಂಸರೂಪೋಽಭವಚ್ಛಿವಃ ।
ವಿವಾಹಂ ಕಾರಯಾಮಾಸ ದಮಯಂತ್ಯಾ ನಲೇನ ವೈ ॥ ೩೫ ॥

ಪೂರ್ವಸತ್ಕಾರರೂಪೇಣ ಮಹಾಪುಣ್ಯೇನ ಶಂಕರಃ ।
ಹಂಸರೂಪಂ ವಿಧಾಯೈವ ತಾಭ್ಯಾಂ ಸುಖಮದಾತ್ಪ್ರಭುಃ ॥ ೩೬ ॥

---

೩೩ ಅಪ್ಪಾ, ಆ ಆಹುಕನೆಂಬ ಭಿಲ್ಲನೂ ಸಹ ನಿಷಧರಾಜಧಾನಿಯಲ್ಲಿ ವೀರಸೇನ ಮಹಾರಾಜನಿಗೆ ಮಗನಾಗಿ ಹುಟ್ಟಿ ನಲಚಕ್ರವರ್ತಿಯೆಂಬುದಾಗಿ ಪ್ರಸಿದ್ಧನಾದನು.

೩೪ ಆ ಆಹುಕೆಯೆಂಬ ಭಿಲ್ಲಾಂಗನೆಯೂ ಸಹ, ವಿದರ್ಭರಾಜನಾದ ಭೀಮನರಪಾಲನಿಗೆ ಮಗಳಾಗಿ ಹುಟ್ಟಿ ದಮಯಂತಿಯೆಂಬ ಹೆಸರಿನಿಂದ ಪ್ರಖ್ಯಾತಳಾದಳು.

೩೫. ಯತಿರೂಪವನ್ನು ತಳೆದು ಯತಿನಾಥನೆಂದು ಹೆಸರುಪಡೆದಿದ್ದ ಆ ಶಂಕರನೂ ಸಹ ಹಂಸರೂಪವನ್ನು ತಾಳಿದುದಲ್ಲದೆ ಆ ದಮಯಂತಿಗೂ ನಳನಿಗೂ ಮದುವೆಯನ್ನೂ ಮಾಡಿಸಿದನು.

೩೬. ಹಿಂದಿನ ಜನ್ಮದಲ್ಲಿ ಇವರು ಭಿಲ್ಲರಾಗಿದ್ದಾಗ ತನ್ನನ್ನು ಸತ್ಕರಿಸಿದುದರಿಂದ ಉಂಟಾದ ಮಹಾಪುಣ್ಯದಿಂದ ಶ್ರೀ ಶಂಕರನು ಈ ಜನ್ಮದಲ್ಲಿ ಅವರೀರ್ವರಿಗೂ ತಾನು ಹಂಸರೂಪವನ್ನು ಧರಿಸಿ ಸುಖವನ್ನುಂಟುಮಾಡಿದನು.

ಶಿವೋ ಹಂಸಾವತಾರೋ ಹಿ ನಾನಾವಾರ್ತಾವಿಚಕ್ಷಣಃ ।
ದಮಯಂತ್ಯಾ ನಲಸ್ಯಾಪಿ ಪರಮಾನಂದದಾಯಕಃ ॥ ೩೭ ॥

ಇದಂ ಚರಿತ್ರಂ ಪರಮಂ ಪವಿತ್ರಂ
ಶಿವಾವತಾರಸ್ಯ ಪವಿತ್ರಕೀರ್ತೇಃ ।
ಯತೀಶಸಂಜ್ಞಸ್ಯ ಮಹಾದ್ಭುತಂ ಹಿ
ಹಂಸಾಹ್ವಯಸ್ಯಾಪಿ ವಿಮುಕ್ತಿದಂ ಹಿ ॥ ೩೮ ॥

ಯತೀಶಬ್ರಹ್ಮಹಂಸಾಖ್ಯಾವತಾರಚರಿತಂ ಶುಭಂ ।
ಶೃಣುಯಾಚ್ಛ್ರಾವಯೇದ್ಯೋ ಹಿ ಸ ಲಭೇತ ಪರಾಂ ಗತಿಂ ॥ ೩೯ ॥

ಇದಮಾಖ್ಯಾನಮನಘಂ ಸರ್ವಕಾಮಫಲಪ್ರದಂ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಭಕ್ತಿವರ್ಧನಮುತ್ತಮಂ ॥ ೪೦ ॥

---

೩೭. ಆ ಶಿವನು ಹಂಸರೂಪವನ್ನು ಧರಿಸಿ ಬಹುವಿಧವಾದ ಪ್ರಿಯವಾಕ್ಯಗಳನ್ನು ಆಡುತ್ತಾ ದಮಯಂತಿಗೂ ನಲನಿಗೂ ಮಹಾಸಂತೋಷವನ್ನುಂಟು ಮಾಡಿದನು.

೩೮ ಪಾವನವಾದ ಕೀರ್ತಿಯುಳ್ಳ ಶಿವನ ಅವತಾರವೆನಿಸಿದ ಯತಿನಾಥನ ಚರಿತ್ರವೂ ಹಂಸಪಕ್ಷಿಯ ಚರಿತ್ರವೂ ಮಹಾದ್ಭುತವಾದುದು ಪರಮಪಾವನವಾದುದು ಇದು ಮೋಕ್ಷವನ್ನೂ ಕೊಡುವುದು

೩೯ ಯಾವನು ಈ ಶುಭಕರವಾದ ಯತೀಶನ ಅವತಾರವನ್ನೂ, ಹಂಸಾವತಾರವನ್ನೂ (ಚರಿತ್ರವನ್ನೂ) ಕಿವಿಯಾರ ಕೇಳುವನೋ ಅಥವಾ ಕೀರ್ತನೆಮಾಡುವನೋ ಅವನು ಉತ್ತಮವಾದ ಗತಿಯನ್ನು ಪಡೆಯುವನು

೪೦. ಈ ಚರಿತವು ಪಾವನವಾದುದು. ಬಯಸಿದ ಇಷ್ಟಾರ್ಥಗಳೆಲ್ಲವನ್ನೂ ನೀಡುವುದು ಮತ್ತು ಸ್ವರ್ಗವನ್ನೂ ಯಶಸ್ಸನ್ನೂ ಉಂಟುಮಾಡುವುದು ಆಯುಸ್ಸನ್ನು ಹೆಚ್ಚಿಸುವುದು. ಶಿವನಲ್ಲಿ ಭಕ್ತಿಯನ್ನು ಮತ್ತಷ್ಟು ಬೆಳೆಸುವುದು.

ಶ್ರುತ್ವೈತಚ್ಚರಿತಂ ಶಂಭೋರ್ಯತಿಹಂಸಸ್ವರೂಪಯೋಃ ।
ಇಹ ಸರ್ವಸುಖಂ ಭುಕ್ತ್ವಾ ಸೋಽಂತೇ ಶಿವಪುರಂ ವ್ರಜೇತ್ ॥ ೪೧ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಯತಿನಾಥ ಬ್ರಹ್ಮಹಂಸಾಹ್ವಯ ಶಿವಾವತಾರಚರಿತವರ್ಣನಂ
ನಾಮಾಷ್ಟಾವಿಂಶೋಽಧ್ಯಾಯಃ

---

೪೧. ಶಿವನ ಈ ಯತಿನಾಥಾವತಾರದ ಮತ್ತು ಹಂಸಾವತಾರದ ಚರಿತ್ರವನ್ನು ಕೇಳಿದ ಮಾನವನು ಈ ಲೋಕದಲ್ಲಿ ಸಮಸ್ತ ಸುಖಗಳನ್ನೂ ಅನುಭವಿಸಿ ಕೊನೆಗೆ ಶಿವಲೋಕವನ್ನು ಸೇರುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಯತಿನಾಥಹಂಸಾವತಾರವರ್ಣನವೆಂಬ ಇಪ್ಪತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಏಕೋನತ್ರಿಂಶೋಽಧ್ಯಾಯಃ



॥ ನಂದೀಶ್ವರ ಉವಾಚ ॥

**ಸನತ್ಕುಮಾರ ಶಂಭೋಸ್ತ್ವವತಾರಂ ಪರಮಂ ಶೃಣು ।**
**ನಭಗಜ್ಞಾನದಂ ಕೃಷ್ಣದರ್ಶನಾಹ್ವಯಮುತ್ತಮಂ ॥ ೧ ॥**

**ಇಕ್ಷ್ವಾಕುಪ್ರಮುಖಾ ಆಸಂಚ್ಛ್ರಾದ್ಧದೇವಸುತಾಶ್ಚ ಯೇ ।**
**ನಭಗಸ್ತತ್ರ ನವಮೋ ನಾಭಗಸ್ತತ್ಸುತಃ ಸ್ಮೃತಃ ॥ ೨ ॥**

---

### ಇಪ್ಪತ್ತೊಂಭತ್ತನೆಯ ಅಧ್ಯಾಯವು.

೧ ಎಲೈ ಸನತ್ಕುಮಾರಮುನಿಯೇ, ಇಕ್ಷ್ವಾಕುವಂಶೋತ್ಪನ್ನನಾದ ನಭಗನೆಂಬ ನರಪಾಲನಿಗೆ ಜ್ಞಾನವನ್ನು ಕರುಣಿಸಿದ, ಕೃಷ್ಣದರ್ಶನನೆಂಬ ಹೆಸರಿನ ಪರಮಪಾವನನಾದ ಶಿವನ ಅವತಾರವೃತ್ತಾಂತವನ್ನು ನಿನಗೆ ತಿಳಿಸುವೆನು ಕೇಳು.

೨. ಇಕ್ಷ್ವಾಕುವೇ ಮೊದಲಾದ, ವೈವಸ್ವತಮನುವಿನ ಕುಮಾರರಲ್ಲಿ ನಭಗನೆಂಬುವನು ಒಂಭತ್ತನೆಯವನು. ಅವನ ಮಗನು ನಾಭಾಗನೆಂಬುವನು.

ಅಂಬರೀಷಸುತಸ್ತಸ್ಯ ವಿಷ್ಣುಭಕ್ತೋ ಬಭೂವ ಸಃ ।
ಯಸ್ಯೋಪರಿ ಪ್ರಸನ್ನೋಽಭೂದ್ದುರ್ವಾಸಾ ಬ್ರಹ್ಮಭಕ್ತಿತಃ ॥ ೩ ॥

ಪಿತಾಮಹೋಂಬರೀಷಸ್ಯ ನಭಗೋ ಯಃ ಪ್ರಕೀರ್ತಿತಃ ।
ತಚ್ಚರಿತ್ರಂ ಶೃಣು ಮುನೇ ಯಸ್ಮೈ ಜ್ಞಾನಮದಾಚ್ಛಿವಃ ॥ ೪ ॥

ನಭಗೋ ಮನುಪುತ್ರಸ್ತು ಪಠನಾರ್ಥಂ ಸುಬುದ್ಧಿಮಾನ್ ।
ಚಕ್ರೇ ಗುರುಕುಲೇ ವಾಸಂ ಬಹುಕಾಲಂ ಜಿತೇಂದ್ರಿಯಃ ॥ ೫ ॥

ಏತಸ್ಮಿನ್ಸಮಯೇ ತೇ ವಾ ಇಕ್ಷ್ವಾಕುಪ್ರಮುಖಾಸ್ಸುತಾಃ ।
ತಸ್ಮೈ ಭಾಗಮಕಲ್ಪ್ಯೈವ ಭೇಜುರ್ಭಾಗಾನ್ನಿಜಾನ್ಕ್ರಮಾತ್ ॥ ೬ ॥

ಸ್ವಂ ಸ್ವಂ ಭಾಗಂ ಗೃಹೀತ್ವಾ ತೇ ಬುಭುಜೂ ರಾಜ್ಯಮುತ್ತಮಂ ।
ಅವಿಷಾದಂ ಮಹಾಭಾಗಾ ಪಿತ್ರಾದೇಶಾತ್ಸುಬುದ್ಧಯಃ ॥ ೭ ॥

---

೩. ಆ ನಭಗನಿಗೆ ಮಹಾವಿಷ್ಣುಭಕ್ತಾಗ್ರೇಸರನಾದ ಅಂಬರೀಷನು ಮಗನಾಗಿ ಹುಟ್ಟಿದನು. ಆ ಅಂಬರೀಷನ ಬ್ರಾಹ್ಮಣ ಭಕ್ತಿಗೆ ಮೆಚ್ಚಿಯೇ ದುರ್ವಾಸ ಮಹಾಮುನಿಯು ಆತನ ವಿಷಯದಲ್ಲಿ ಪ್ರಸನ್ನನಾದನು.

೪. ಹಿಂದೆ ನಾನುಹೇಳಿದ ಅಂಬರೀಷನ ತಂದೆಯಾದ ನಭಗಚಕ್ರವರ್ತಿಯ ಚರಿತ್ರೆಯನ್ನು ಆದರದಿಂದ ಆಲಿಸು. ಈತನಿಗೆ ಶ್ರೀ ಶಂಕರನು ದಿವ್ಯವಾದ ಜ್ಞಾನವನ್ನು ಉಪದೇಶಿಸಿದನು.

೫. ವೈವಸ್ವತಮನುವಿನ ಮಗನೂ, ಮಹಾ ಬುದ್ಧಿಶಾಲಿಯೂ ಆದ ಆ ನಭಗನು ವಿದ್ಯಾರ್ಜನೆಯನ್ನು ಮಾಡಲೋಸುಗ, ಗುರುಕುಲದಲ್ಲಿ, ಬಹುದಿವಸಗಳು, ಬ್ರಹ್ಮಚರ್ಯವನ್ನು ಪಾಲಿಸುತ್ತಾ ವಾಸಿಸುತ್ತಿದ್ದನು.

೬. ಈ ಮಧ್ಯದಲ್ಲಿ ಇಕ್ಷ್ವಾಕುಮೊದಲಾದ ಮನುವಿನ ಮಕ್ಕಳು, ಈ ನಭಗನಿಗೆ ಯಾವೊಂದು ಪಾಲನ್ನೂ ಬಿಡದೆ, ತಾವೇ ಎಲ್ಲವನ್ನು ಹಂಚಿಕೊಂಡು, ತಮ್ಮ ತಮ್ಮ ಪಾಲಿಗೆ ಬಂದುದನ್ನು ಕ್ರಮವಾಗಿ ಅನುಭವಿಸತೊಡಗಿದರು.

೭. ಒಳ್ಳೆಯ ಜ್ಞಾನಿಗಳಾದ ಆ ಇಕ್ಷ್ವಾಕು ಪ್ರಭೃತಿಗಳು, ತಂದೆಯ ಅಪ್ಪಣೆಯನ್ನು ಪಡೆದು, ತಮ್ಮ ತಮ್ಮ ಪಾಲಿಗೆಬಂದ ರಾಜ್ಯವನ್ನು ಮನಸ್ಸಿಗೆ ಯಾವೊಂದು ಕೊರತೆಯೂ ಇಲ್ಲದೆ ಅನುಭವಿಸತೊಡಗಿದರು.

ಸ ಪಶ್ಚಾದಾಗತಸ್ತತ್ರ ಬ್ರಹ್ಮಚಾರೀ ಗುರುಸ್ಥಲಾತ್ ।
ನಭಗೋಽಧೀತ್ಯ ಸರ್ವಾಶ್ಚ ಸಾಂಗೋಪಾಂಗಾಃ ಶ್ರುತೀಃ ಕ್ರಮಾತ್ ॥ ೮ ॥

ಭ್ರಾತೃನ್ವಿಲೋಕ್ಯ ನಭಗೋ ವಿಭಕ್ತಾನ್ಸಕಲಾನ್ನಿಜಾನ್ ।
ದಾಯಾರ್ಥೀ ಪ್ರಾಹ ತಾನ್ಸ್ನೇಹಾದಿಕ್ಷ್ವಾಕುಪ್ರಮುಖಾನ್ಮುನೇ ॥ ೯ ॥

॥ ನಭಗ ಉವಾಚ ॥

ಭ್ರಾತರೋಽಭಕ್ತ್ವಕಂ ಮಹ್ಯಂ ದಾಯಂ ಕೃತ್ವಾ ಯಥಾತಥಂ ।
ಸರ್ವೇ ವಿಭಕ್ತಾಸ್ಸುಪ್ರೀತ್ಯಾ ಸ್ವದಾಯಾರ್ಥಾಗತಾಯ ಚ ॥ ೧೦ ॥

ತದಾ ವಿಸ್ಮೃತಮಸ್ಮಾಭಿರಿದಾನೀಂ ಪಿತರಂ ತವ ।
ವಿಭಜಾಮೋ ವಯಂ ಭಾಗಂ ತಂ ಗೃಹಾಣ ನ ಸಂಶಯಃ ॥ ೧೧ ॥

---

೮ ಬಹು ದಿನಗಳು ಕಳೆದಮೇಲೆ, ಬ್ರಹ್ಮಚರ್ಯನಿರತನಾದ ಆ ನಭಗನು, ಅಂಗೋಪಾಂಗಸಹಿತವಾದ ಸಕಲ ವೇದಗಳನ್ನು ಕ್ರಮವಾಗಿ ಅಧ್ಯಯನಮಾಡಿ, ಬಳಿಕ ಗುರುಕುಲದಿಂದ ತನ್ನ ಮನೆಗೆ ಹಿಂದಿರುಗಿ ಬಂದನು

೯. ಆಗ ಆ ನಭಗನು, ತನ್ನ ಅಣ್ಣಂದಿರೆಲ್ಲರೂ, ವಿಭಕ್ತರಾಗಿರುವುದನ್ನು ಕಂಡು, ತಾನೂ ಸಹ ತನ್ನ ಪಾಲನ್ನು ಪಡೆಯಬೇಕೆಂದೆಳಸಿ, ಆ ಇಕ್ಷ್ವಾಕು ಮೊದಲಾದ ತನ್ನ ಅಣ್ಣಂದಿರನ್ನು ಕುರಿತು ಪ್ರೀತಿಯಿಂದ ಇಂತು ನುಡಿದನು

೧೦ ಎಲೈ ಅಣ್ಣಂದಿರಾ, ನನ್ನ ಪಾಲನ್ನು ಪಡೆಯಬೇಕೆಂದು ಬಂದಿರುವ ನನಗೆ ನ್ಯಾಯವಾಗಿ ಸಲ್ಲಬೇಕಾದ ಪಾಲನ್ನು ಹಂಚದೇನೇ ನೀವೆಲ್ಲರೂ ನಿಮ್ಮ ನಿಮ್ಮಲ್ಲೇ ಸಂತೋಷದಿಂದ ಪಾಲುಮಾಡಿಕೊಂಡಿರಲ್ಲವೆ ? ಎನಲು

೧೧. ಆಗ ಆ ಇಕ್ಷ್ವಾಕು ಪ್ರಭೃತಿಗಳು ಆ ನಭಗನನ್ನಿಂತೆಂದರು ನಿಜ, ಆಗ ನಾವು ಮರೆತು ಬಿಟ್ಟೆವು ಈಗ ನಿನ್ನ ಭಾಗಕ್ಕೆ ಇದೋ ನಿನ್ನ ತಂದೆಯನ್ನೇ ಬಿಟ್ಟು ಕೊಟ್ಟಿರುವೆವು. ಈ ಪಾಲನ್ನು ನೀನು ಸ್ವೀಕರಿಸು, ಏನೂ ಸಂಶಯಪಡ ಬೇಡ ಎಂದರು.

ತಚ್ಛ್ರುತ್ವಾ ಭ್ರಾತೃವಚನಂ ನಭಗಃ ಪರವಿಸ್ಮೃತಃ ।
ತದೋಪಕಂಠಮಾಗತ್ಯ ಪಿತರಂ ಸಮಭಾಷತ ॥ ೧೨ ॥

॥ ನಭಗ ಉವಾಚ ॥

ಹೇ ತಾತ ಭ್ರಾತರಃ ಸರ್ವೇ ತ್ಯಕ್ತ್ವಾ ಮಾಂ ವ್ಯಭಜಂಶ್ಚ ತೇ ।
ಪಠನಾರ್ಥಂ ಗತಶ್ಚಾಹಂ ಬ್ರಹ್ಮಚಾರೀ ಗುರೋಃ ಕುಲೇ ॥ ೧೩ ॥

ತತ ಆಗತ್ಯ ಮೇ ಪೃಷ್ಟಾ ದಾಯದಾನಾರ್ಥಮಾದರಾತ್ ।
ತೇ ತ್ವಾಮೂಚುರ್ವಿಭಾಗಂ ಮೇ ತದರ್ಥಮಹಮಾಗತಃ ॥ ೧೪ ॥

॥ ನಂದೀಶ್ವರ ಉವಾಚ ॥

ತದಾಕರ್ಣ್ಯ ವಚಸ್ತಸ್ಯ ಪಿತಾ ತಂ ಪ್ರಾಹ ವಿಸ್ಮಿತಃ ।
ಆಶ್ವಾಸ್ಯ ಶ್ರಾದ್ಧದೇವಸ್ಸ ಸತ್ಯಧರ್ಮರತಂ ಮುನೇ ॥ ೧೫ ॥

---

೧೨. ಹೀಗೆ ತನ್ನ ಅಣ್ಣಂದಿರು ಆಡಿದ ಮಾತನ್ನು ಕೇಳಿ ನಭಗನು ಮಿತಿ ಮೀರಿ ಅಚ್ಚರಿಪಟ್ಟನು. ಆಗ ತನ್ನ ತಂದೆಯ ಬಳಿಗೆ ಬಂದು, ಆತನನ್ನು ಕುರಿತು ಇಂತೆಂದು ನುಡಿದನು.

೧೩. ಎಲೈ ತಂದೆಯೇ, ನನ್ನೀ ಸಹೋದರರೆಲ್ಲರೂ ನನ್ನನ್ನು ಬಿಟ್ಟು ಬಿಟ್ಟು, ಪಾಲುಮಾಡಿಕೊಂಡಿರುವರು. ನಾನು ವಿದ್ಯಾರ್ಜನೆಯನ್ನು ಮಾಡಲೋಸುಗ ಗುರು ಕುಲಕ್ಕೆ ಹೋಗಿ ಅಲ್ಲಿ ಬ್ರಹ್ಮಚರ್ಯದಿಂದ ಅಧ್ಯಯನ ಮಾಡುತ್ತಿದ್ದೆನು.

೧೪. ನಾನು ಆ ಗುರುಕುಲದಿಂದ ಈಗ ಹಿಂದುರಿಗಿದೆನು. ನನ್ನ ಪಾಲನ್ನು ಕೊಡಿರೆಂದು ಇವರನ್ನು ಪ್ರೀತಿಯಿಂದ ಕೇಳಲು, ಇದೋ ನಿನ್ನಪಾಲು ಇದೆಂದು ನಿನ್ನನ್ನೇ ನನಗೆ ತೋರಿದರು. ಆದುದರಿಂದ ನಾನು ನಿನ್ನ ಬಳಿಗೆ ಬಂದೆನು ಎಂದನು.

೧೫. ಎಲೈ ಸನತ್ಕುಮಾರ ಮುನಿಯೇ, ಈ ರೀತಿಯಾಗಿ ಸತ್ಯದಲ್ಲಿಯೂ, ಧರ್ಮದಲ್ಲಿಯೂ ನಿರತನಾದ ಆ ನಭಗನು ಹೇಳಿದ ಮಾತನ್ನು ಕೇಳಿ (ತಂದೆಯಾದ) ವೈವಸ್ವತಮನುವು ವಿಸ್ಮಿತನಾಗಿ ಅವನನ್ನು ಸಮಾಧಾನಪಡಿಸಿ

॥ ಮನುರುವಾಚ ॥

ತದುಕ್ತಂ ಮಾದೃಥಾಸ್ತಾತ ಪ್ರತಾರಣಕರಂ ಹಿ ತತ್ ।
ನ ಹ್ಯಹಂ ಪರಮಂ ದಾಯಂ ಸರ್ವಥಾ ಭೋಗಸಾಧನಂ ॥ ೧೬ ॥

ತಥಾಪಿ ದಾಯಭಾವೇನ ದತ್ತೋಽಹಂ ತೈಃ ಪ್ರತಾರಿಭಿಃ ।
ತವ ವೈ ಜೀವನೋಪಾಯಂ ವದಾಮಿ ಶೃಣು ತತ್ತ್ವತಃ ॥ ೧೭ ॥

ಸತ್ರಮಾಂಗಿರಸಾ ವಿಪ್ರಾಃ ಕುರ್ವಂತ್ಯದ್ಯ ಸುಮೇಧಸಃ ।
ತತ್ರ ಕರ್ಮಣಿ ಮುಹ್ಯಂತಿ ಷಷ್ಠಂ ಷಷ್ಠಮಹಃ ಪ್ರತಿ ॥ ೧೮ ॥

ತತ್ರ ತ್ವಂ ಗಚ್ಛ ನಭಗ ತಾನ್ಸಂಶಂಸ ಮಹಾಕವೇ ।
ಸೂಕ್ತೇ ದ್ವೇ ವೈಶ್ವದೇವೇ ಹಿ ಸತ್ರಂ ಶುದ್ಧಂ ಹಿ ತದ್ಭವೇತ್ ॥ ೧೯ ॥

ತತ್ಕರ್ಮಣಿ ಸಮಾಪ್ತೇ ಹಿ ಸ್ವರ್ಯಾಂತೋ ಬ್ರಾಹ್ಮಣಾಶ್ಚ ತೇ ।
ಧನಂ ದಾಸ್ಯಂತಿ ತೇ ತುಷ್ಟಾಸ್ಸ್ವಸತ್ರಪರಿಶೇಷಿತಂ ॥ ೨೦ ॥

---

೧೬ ಅಪ್ಪಾ! ಅವರ ಮಾತನ್ನು ಒಪ್ಪಬೇಡ, ಅವರು ನಿನ್ನನ್ನು ಮೋಸಗೊಳಿಸುವುದಕ್ಕೋಸ್ಕರ ಹಾಗೆ ಹೇಳಿರುವರು ನಾನು ಎಲ್ಲಿಯಾದರೂ ಅನುಭವಿಸುವುದಕ್ಕೆ ಅರ್ಹವಾಗುವ ದಾಯಭಾಗವೆನಿಸಲು ಸಾಧ್ಯವೇ ?

೧೭ ಹಾಗಿದ್ದರೂ ಸಹ ಆ ಮೋಸಗಾರರು ನನ್ನನ್ನು ದಾಯಭಾಗದಂತೆ ಭಾವಿಸಿ ನಿನಗೆ ತೋರಿಸಿರುವರು ಇರಲಿ, ನಿನಗೀಗ ಯಥಾರ್ಥವಾದ ಜೀವನೋಪಾಯವೇನೆಂಬುದನ್ನು ತಿಳಿಸುವೆನು ಕೇಳು

೧೮-೧೯ ಮಹಾಜ್ಞಾನಿಗಳಾದ ಆಂಗಿರಸರೆಂಬ ಬ್ರಾಹ್ಮಣರು ಈಗ ಯಜ್ಞವೊಂದನ್ನು ಆಚರಿಸುತ್ತಿರುವರು ಅವರು ಪ್ರತಿ ಆರನೆಯ ದಿವಸದಲ್ಲೂ ಯಜ್ಞೀಯ ಕರ್ಮದಲ್ಲಿ ಮರೆವನ್ನು ಹೊಂದುವರು ಆದುದರಿಂದ ಎಲೈ ನಭಗನೇ! ನೀನು ಅಲ್ಲಿಗೆ ಹೋಗಿ, ವಿಶ್ವೇದೇವ ಪ್ರಶಂಸಾತ್ಮಕವಾದ ಎರಡು ಸೂಕ್ತಗಳನ್ನು ಪಾರಾಯಣ ಮಾಡು. ಆಗ ಆ ಯಜ್ಞವು ಯಾವೊಂದು ಲೋಪವೂ ಇಲ್ಲದೆ ಶುದ್ಧವೆನಿಸುವುದು.

೨೦. ತಪಸ್ಸು ಆ ಕರ್ಮವು ಸಮಾಪ್ತಿಯನ್ನು ಹೊಂದಿದನಂತರ ಆ ವಿಪ್ರರು ಸ್ವರ್ಗಲೋಕಕ್ಕೆ ತೆರಳುವರು ಅದಕ್ಕೆ ಮೊದಲು ಸಂತುಷ್ಟರಾದ ಆ ಬ್ರಾಹ್ಮಣರು ಯಜ್ಞದಲ್ಲಿ ಮಿಕ್ಕುಹೋದ ಧನವೆಲ್ಲವನ್ನೂ ನಿನಗೆ ಕೊಡುವರು.

॥ ನಂದೀಶ್ವರ ಉವಾಚ ॥

ತದಾಕರ್ಣ್ಯ ಪಿತುರ್ವಾಕ್ಯಂ ನಭಗಃ ಸತ್ಯಸಾರವಾನ್ ।
ಜಗಾಮ ತತ್ರ ಸುಪ್ರೀತ್ಯಾ ಯತ್ರ ತತ್ಸತ್ರಮುತ್ತಮಂ ॥ ೨೧ ॥

ತದಾಹಃಕರ್ಮಣಿ ಮುನೇ ಸತ್ರೇ ತಸ್ಮಿನ್ಸ ಮಾನವಃ ।
ಸೂಕ್ತೇ ದ್ವೇ ವೈಶ್ವದೇವೇ ಹಿ ಪ್ರೋವಾಚ ಸ್ಪಷ್ಟತಸ್ಸುಧೀಃ ॥ ೨೨ ॥

ಸಮಾಪ್ತೇ ಕರ್ಮಣಿ ತತೋ ವಿಪ್ರಾ ಆಂಗಿರಸಾಶ್ಚ ತೇ ।
ತಸ್ಮೈ ದತ್ವಾ ಯಯುಃ ಸ್ವರ್ಗಂ ಸ್ವಂ ಸ್ವಂ ಸತ್ರಾವಶೇಷಿತಂ ॥ ೨೩ ॥

ತತ್ತದಾ ಸ್ವೀಕರಿಷ್ಯಂತಂ ಸುಸತ್ರಪರಿಶೇಷಿತಂ ।
ವಿಜ್ಞಾಯ ಗಿರಿಶಃ ಸದ್ಯ ಆವಿರ್ಭೂತಃ ಸದೂತಿಕೃತ್ ॥ ೨೪ ॥

---

೨೧. ಓ ಮುನೀಂದ್ರಾ ! ಸತ್ಯವನ್ನೆ ದೃಢವಾಗಿ ನಂಬಿದ್ದ ಆ ನಭಗನು ತಂದೆಯಾಡಿದ ಮಾತನ್ನು ಕೇಳಿ, ಆ ಪಾವನವಾದ ಯಜ್ಞವು ನಡೆಯುತ್ತಿದ್ದ ಸ್ಥಳಕ್ಕೆ ಬಂದನು.

೨೨. ಆ ದಿನದ ಯಜ್ಞೀಯ ಕರ್ಮವು ನಡೆಯುತ್ತಿದ್ದಾಗ ಜ್ಞಾನಿಯಾದ ಆ ಮನುಪುತ್ರನು, ತನ್ನ ತಂದೆಯು ಹೇಳಿದ್ದಂತೆ ಆ ಎರಡು ವೈಶ್ವದೇವಸೂಕ್ತಗಳನ್ನು ಗಟ್ಟಿಯಾಗಿಯೂ ಸ್ಪಷ್ಟವಾಗಿಯೂ ಹೇಳಿದನು.

೨೩. ಅನಂತರ ತಮ್ಮ ಯಜ್ಞವು ಸಾಂಗವಾಗಿ ನೆರವೇರಿತೆಂದು ಸಂತುಷ್ಟರಾದ ಆ ಆಂಗಿರಸರೆಂಬ ವಿಪ್ರರು ಯಜ್ಞದಲ್ಲಿ ಉಳಿದಿದ್ದ ತಮ್ಮ ಧನವನ್ನೆಲ್ಲಾ ಆ ನಭಗನಿಗೆ ಕೊಟ್ಟುಬಿಟ್ಟು ಸ್ವರ್ಗಲೋಕಕ್ಕೆ ತೆರಳಿದರು.

೨೪. ಆಗ ಲೀಲಾಮೂರ್ತಿಯಾದ ಶಿವನು ಆ ಯಜ್ಞದಲ್ಲಿ ಉಳಿದಿದ್ದ ಹಣವನ್ನು ನಭಗನು ತೆಗೆದುಕೊಳ್ಳುವನೆಂಬುವನ್ನು ಅರಿತು, ತಟ್ಟನೆ ಅವನಮುಂದೆ ಪ್ರತ್ಯಕ್ಷನಾದನು.

ಸರ್ವಾಂಗಸುಂದರಃ ಶ್ರೀಮಾನ್ಪುರುಷಃ ಕೃಷ್ಣದರ್ಶನಃ ।
ಭಾವಂ ಸಮೀಕ್ಷಿತುಂ ಭಾಗಂ ದಾತುಂ ಜ್ಞಾನಂ ಪರಂ ಚ ತತ್ ॥ ೨೫ ॥

ಅಥೋ ಸ ಶಂಕರಃ ಶಂಭುಃ ಪರೀಕ್ಷಾಕರ ಈಶ್ವರಃ ।
ಉವಾಚೋತ್ತರತೋಽಭ್ಯೇತ್ಯ ನಭಗಂ ತಂ ಹಿ ಮಾನವಂ ॥ ೨೬ ॥

॥ ಈಶ್ವರ ಉವಾಚ ॥

ಕಸ್ತ್ವಂ ಗೃಹ್ಣಾಸಿ ಪುರುಷ ಮಮೇದಂ ವಾಸ್ತುಕಂ ವಸು ।
ಪ್ರೇಷಿತಃ ಕೇನ ತತ್ಸರ್ವಂ ಸತ್ಯಂ ವದ ಮಮಾಗ್ರತಃ ॥ ೨೭ ॥

॥ ನಂದೀಶ್ವರ ಉವಾಚ ॥

ತಚ್ಛ್ರುತ್ವಾ ತದ್ವಚಸ್ತಾತ ಮಾನವೋ ನಭಗಃ ಕವಿಃ ।
ಪ್ರತ್ಯುವಾಚ ವಿನೀತಾತ್ಮಾ ಪುರುಷಂ ಕೃಷ್ಣದರ್ಶನಂ ॥ ೨೮ ॥

---

೨೫ ಸರ್ವಾವಯವಸೌಂದರ್ಯದಿಂದ ಮೆರೆಯುತ್ತಿದ್ದ ಆ ಕೃಷ್ಣದರ್ಶನ ನೆಂಬ ಪುರುಷನು ಆ ನಭಗನ ಮನಸ್ಸಿನ ಬಗೆಯನ್ನು ಅರಿಯಲೋಸುಗವೂ ಮತ್ತು ಆತನಿಗೆ ದಿವ್ಯಜ್ಞಾನವನ್ನೇ ನಿಜವಾದ ಪಾಲನ್ನಾಗಿ ಕೊಡಬೇಕೆಂದೂ ಬಯಸಿ ಅವನ ಮುಂದೆ ಗೋಚರಿಸಿದನು.

೨೬ ಅನಂತರ ಮನುಪುತ್ರನಾದ ಆ ನಭಗನನ್ನು ಪರೀಕ್ಷಿಸಲೆಳಸಿ ಆ ಶಂಕರನು ಅವನಬಳಿ ಬಂದು ಇಂತೆಂದನು

೨೭ ಎಲೈ ಪುರುಷನೇ, ನೀನಾರು ? ಈ ಯಜ್ಞಶಾಲೆಯಲ್ಲಿ ಬಿಟ್ಟುಹೋದ ವಸ್ತುವನ್ನೆಲ್ಲಾ ತೆಗೆದುಕೊಳ್ಳುತ್ತಿರುವೆ ಇದೆಲ್ಲಾ ನನಗೆ ಸೇರಿದುದು ನಿನ್ನನ್ನಿಲ್ಲಿಗೆ ಯಾರು ಕಳುಹಿಸಿದರು ? ಇದೆಲ್ಲವನ್ನೂ ನನ್ನಮುಂದೆ ನಿಜವಾಗಿ ತಿಳಿಸು ಎಂದನು.

೨೮ ಎಲೈ ಸನತ್ಕುಮಾರನೇ, ಈರೀತಿ ಆ ಪುರುಷನು ಹೇಳಿದ್ದುವನ್ನು ಕೇಳಿ ಮನುಪುತ್ರನೂ ವಿದ್ವಾಂಸನೂ ಆದ ನಭಗನು ವಿನಯದಿಂದ ಆ ಕೃಷ್ಣದರ್ಶನನನ್ನು ಕುರಿತು ಇಂತೆಂದನು.

॥ ನಭಗ ಉವಾಚ ॥

ಮನೋದತ್ತಮೃಷಿಭಿರ್ದತ್ತಂ ವಸು ಯಜ್ಞಗತಂ ಖಲು ।
ಕಥಂ ವಾರಯಸೇ ಮಾಂ ತ್ವಂ ಗೃಹ್ಣಂತಂ ಕೃಷ್ಣದರ್ಶನಂ ॥ ೨೯ ॥

॥ ನಂದೀಶ್ವರ ಉವಾಚ ॥

ಆಕರ್ಣ್ಯ ನಾಭಗಂ ವಾಕ್ಯಮಿದಂ ಸತ್ಯಮುದೀರಿತಂ ।
ಪ್ರತ್ಯುವಾಚ ಪ್ರಸನ್ನಾತ್ಮಾ ಪುರುಷಃ ಕೃಷ್ಣದರ್ಶನಃ ॥ ೩೦ ॥

॥ ಕೃಷ್ಣದರ್ಶನ ಉವಾಚ ॥

ವಿವಾದೇಽಸ್ಮಿನ್ಹಿ ನೌ ತಾತ ಪ್ರಮಾಣಂ ಜನಕಸ್ತವ ।
ಯಾಹಿ ತಂ ಪೃಚ್ಛ ಸ ಬ್ರೂಯಾತ್ತತ್ಪ್ರಮಾಣಂ ತು ಸತ್ಯತಃ ॥ ೩೧ ॥

॥ ನಂದೀಶ್ವರ ಉವಾಚ ॥

ತದಾಕರ್ಣ್ಯ ವಚಸ್ತಸ್ಯ ನಭಗೋ ಮಾನವಃ ಕವಿಃ ।
ಆಗಚ್ಛತ್ಪಿತರಂ ಪ್ರೀತ್ಯಾ ತದುಕ್ತಂ ಪೃಷ್ಟವಾನ್ಮನೇ ॥ ೩೨ ॥

---

೨೯. ಹೇ ಕೃಷ್ಣದರ್ಶನ, ಈ ಯಜ್ಞೀಯ ವಸ್ತುವೆಲ್ಲವನ್ನೂ ಆಂಗಿರಸಋಷಿಗಳು ನನಗೆ ಕೊಟ್ಟರು. ಅದನ್ನೇ ನಾನು ತೆಗೆದುಕೊಳ್ಳುತ್ತಿದ್ದೇನು. ಹೀಗಿರುವಾಗ ನನ್ನನ್ನೇಕೆ ತಡೆಯುತ್ತಿರುವೆ ?

೩೦. ಎಲೈ ಮುನಿಯೇ, ಈರೀತಿ ನಭಗನು ಇದ್ದುದಿದ್ದಂತೆ ಸತ್ಯವಾಗಿ ಹೇಳಿದುದನ್ನು ಕೇಳಿ ಆ ಕೃಷ್ಣದರ್ಶನನೆಂಬ ಪುರುಷನು ಪ್ರಸನ್ನನಾಗಿ ಮರಳಿ ಇಂತೆಂದು ನುಡಿದನು.

೩೧. ಅಪ್ಪಾ, ನಮ್ಮಿಬ್ಬರಿಗೂ ಈಗ ಉಂಟಾಗಿರುವ ಜಗಳದಲ್ಲಿ ನಿಮ್ಮ ತಂದೆಯೇ ನಿರ್ಣಯವನ್ನು ಮಾಡಲಿ, ನಡೆ, ಆತನನ್ನೇ ಕೇಳೋಣ. ಯಾರ ಪಕ್ಷವು ನ್ಯಾಯಸಮ್ಮತವಾದುದೆಂಬುದನ್ನು ಆತನೇ ನಿಜವಾಗಿ ತಿಳಿಸುವನುಎಂದನು.

೩೨. ಓ ಮುನೀಂದ್ರ, ಆ ಮನುಪುತ್ರನೂ ಜ್ಞಾನಿಯೂ ಆದ ನಭಗನು, ಇಂತು ಆ ಪುರುಷನು ಹೇಳಿದುದನ್ನು ಕೇಳಿ ತನ್ನ ತಂದೆಯ ಬಳಿಗೆ ಸಂತೋಷದಿಂದ ಬಂದು ಅವನು ಹೇಳಿದಂತೆಯೇ ಪ್ರಶ್ನೆಮಾಡಿದನು.

ಪುತ್ರೋದಿತಂ ಸಮಾಕರ್ಣ್ಯ ಶ್ರಾದ್ಧದೇವಸ್ಸ ವೈ ಮನುಃ ।
ಸ್ಮೃತ್ವಾ ಶಿವಪದಾಂಭೋಜಂ ಪ್ರಾಪ್ತಸ್ಮೃತಿರುವಾಚ ತಂ ॥ ೩೩ ॥

॥ ಮನುರುವಾಚ ॥

ಹೇ ತಾತ ಶೃಣು ಮದ್ವಾಕ್ಯಂ ಸ ದೇವಃ ಪುರುಷಃ ಶಿವಃ ।
ತಸ್ಯೈವ ಸಕಲಂ ವಸ್ತು ಯಜ್ಞಪ್ರಾಪ್ತಂ ವಿಶೇಷತಃ ॥ ೩೪ ॥

ಅಧ್ವರೋರ್ವರಿತಂ ವಸ್ತು ರುದ್ರಭಾಗಃ ಪ್ರಕೀರ್ತಿತಃ ।
ಇತ್ಯಪಿ ಪ್ರಾಜ್ಞವಾದೋ ಹಿ ಕ್ವಚಿಜ್ಞಾತಸ್ತದಿಚ್ಛಯಾ ॥ ೩೫ ॥

ಸ ದೇವ ಈಶ್ವರಃ ಸರ್ವಂ ವಸ್ತ್ವರ್ಹತಿ ನ ಸಂಶಯಃ ।
ಯಜ್ಞಾವಶಿಷ್ಟಂ ಕಿಮುತ ಪರೇ ತಸ್ಯೇಚ್ಛಯಾ ವಿಭೋಃ ॥ ೩೬ ॥

---

೩೩ ಈರೀತಿ ತನ್ನ ಮಗನು ಪ್ರಶ್ನಿಸಿದುದನ್ನು ಕೇಳಿ ಆ ವೈವಸ್ವತಮನುವು ಶಿವನ ಚರಣಕಮಲಗಳನ್ನು ಧ್ಯಾನಿಸಲು ಅವನಿಗೆ ಸ್ಮರಣೆಯು ಉಂಟಾಯಿತು ಅನಂತರ ಮಗನನ್ನಿಂತೆಂದನು

೩೪ ಅಪ್ಪಾ, ನನ್ನ ಮಾತನ್ನು ಕೇಳು ಆ ಪುರುಷನು ಮತ್ತಾರೂ ಅಲ್ಲ ಸಾಕ್ಷಾತ್ ಶಿವನೆಂದು ತಿಳಿ ಈ ಸಕಲ ಸಮಾರ್ಥವೂ ಆತನದೇ ಯಜ್ಞದಲ್ಲಿ ಉಪಯೋಗಿಸಿ ಮಿಕ್ಕ ವಸ್ತುವಂತೂ ವಿಶೇಷವಾಗಿ ಆತನಿಗೇ ಸೇರತಕ್ಕುದು

೩೫. ಯಜ್ಞದಲ್ಲಿ ಉಳಿದುದೆಲ್ಲವೂ ರುದ್ರಭಾಗವೆಂದೇ ಹೇಳಲ್ಪಟ್ಟಿರುವುದು ಹೀಗೆಂಬುದಾಗಿ ಆತನ ಇಚ್ಛೆಯಿಂದಲೇ ಪ್ರಾಜ್ಞರಾದವರು ಹಿಂದಿನಿಂದಲೂ ಹೇಳುತ್ತಿರುವರು

೩೬. ಈ ಎಲ್ಲ ವಸ್ತುವೂ ಆತನಿಗೇ ಸೇರಿದುದು. ಹೀಗಿರುವಾಗ ಯಜ್ಞದಲ್ಲಿ ಉಳಿದ ಭಾಗವು ಆತನದೆಂದು ಬೇರೆ ಹೇಳಬೇಕೇ ? ಆತನ ಇಚ್ಛೆಯಿಂದಲೇ ಇತರರಿಗೂ ಆ ವಸ್ತುಗಳಮೇಲೆ ಅಧಿಕಾರವು ಉಂಟಾಗುವುದು

ಅನುಗ್ರಹಾರ್ಥಮಾಯಾತಸ್ತವ ತದ್ರೂಪತಃ ಪ್ರಭುಃ ।
ತತ್ರ ತ್ವಂ ಗಚ್ಛ ನಭಗ ಪ್ರಸನ್ನಂ ಕುರು ಸತ್ಕೃತಃ ॥ ೩೭ ॥

ಕ್ಷಮಾಪಯ ಸ್ವಾಪರಾಧಂ ಸುಪ್ರಣಮ್ಯ ಸ್ತುತಿಂ ಕುರು ।
ಸರ್ವಪ್ರಭುಸ್ಸ ಏವೇಶೋ ಯಜ್ಞಾಧೀಶೋಽಖಿಲೇಶ್ವರಃ ॥ ೩೮ ॥

ವಿಷ್ಣುಬ್ರಹ್ಮಾದಯೋ ದೇವಾಃ ಸಿದ್ಧಾಸ್ಸರ್ವರ್ಷಯೋಽಪಿ ಹಿ ।
ತದನುಗ್ರಹತಸ್ತಾತ ಸಮರ್ಥಾಃ ಸರ್ವಕರ್ಮಣಿ ॥ ೩೯ ॥

ಕಿಂ ಬಹೂಕ್ತ್ಯಾತ್ಮಜಶ್ರೇಷ್ಠ ಗಚ್ಛ ತತ್ರಾಶು ಮಾ ಚಿರಂ ।
ಪ್ರಸಾದಯ ಮಹಾದೇವಂ ಸರ್ವಥಾ ಸಕಲೇಶ್ವರಂ ॥ ೪೦ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಸ ಮನುಃ ಶ್ರಾದ್ಧದೇವಶ್ಚ ತನಯಂ ದ್ರುತಂ ।
ಪ್ರೇಷಯಾಮಾಸ ನಿಕಟಂ ಶಂಭೋಸ್ಸೋಽಪಿ ಸಮೇತ್ಯ ತಂ ॥ ೪೧ ॥

---

೩೭. ಆ ಪ್ರಭುವು ನಿನ್ನನ್ನು ಅನುಗ್ರಹಿಸಲೆಂದೇ ಆ ಕೃಷ್ಣದರ್ಶನನೆಂಬ ಪುರುಷನ ರೂಪದಿಂದ ಬಂದಿರುವನು. ಅಪ್ಪಾ ನಭಗ, ನೀನಲ್ಲಿಗೇ ಹೋಗು. ಸತ್ಕ್ರಿ ದಿಂದಲೇ ಆತನನ್ನು ಒಲಿಸಿಕೊ.

೩೮. ನಿನ್ನ ತಪ್ಪನ್ನು ಮನ್ನಿಸಬೇಕೆಂದು ಕೇಳಿಕೋ. ಆತನಿಗೆ ನಮಸ್ಕಾರ ಮಾಡಿ ಸ್ತೋತ್ರವನ್ನು ಮಾಡು. ಆ ಶಂಕರನೇ ಎಲ್ಲರಿಗೂ ಒಡೆಯನು. ಯಜ್ಞ ಪತಿಯೂ ಆತನೇ.

೩೯. ವಿಷ್ಣು, ಬ್ರಹ್ಮ, ಮೊದಲಾದ ದೇವತೆಗಳೂ, ಸಿದ್ಧರೂ, ಸಕಲ ಋಷಿ ಗಳೂ ಆ ಶಂಕರನ ಅನುಗ್ರಹದಿಂದಲೇ ಎಲ್ಲ ಕೆಲಸಗಳಲ್ಲಿಯೂ ಸಮರ್ಥರೆನಿಸಿ ಕೊಂಡಿರುವರು.

೪೦. ಎಲೈ ಸತ್ಪುತ್ರನೇ, ಇನ್ನು ಹೆಚ್ಚುಹೇಳುವುದೇಕೆ ? ತಡಮಾಡಬೇಡ. ಬೇಗನೆ ಆತನಬಳಿಗೆ ತೆರಳು. ಸರ್ವಪ್ರಭುವಾದ ಆ ಶಂಕರನನ್ನು ಸಕಲವಿಧದಲ್ಲಿಯೂ ಮೆಚ್ಚುವಂತೆ ಪ್ರಯತ್ನಿಸು ಎಂದನು.

೪೧. ಎಲೈ ಸನತ್ಕುಮಾರಮುನಿಯೇ, ಈರೀತಿಯಾಗಿ ಆ ವೈವಸ್ವತಮನುವು ಹೇಳಿ ತನ್ನ ಮಗನಾದ ನಭಗನನ್ನು ಆ ಶಿವನ ಬಳಿಗೆ ಕಳುಹಿಸಿದನು. ಬಳಿಕ ಆ ನಭಗನು ಶಿವನ ಬಳಿಗೆ ಬಂದು,

ನಭಗಶ್ಚ ಪ್ರಣಮ್ಯಾಶು ಸಾಂಜಲಿರ್ನತಮಸ್ತಕಃ ।
ಪ್ರೋವಾಚ ಸುಪ್ರಸನ್ನಾತ್ಮಾ ವಿನಯೇನ ಮಹಾಮತಿಃ ॥ ೪೨ ॥

॥ ನಭಗ ಉವಾಚ ॥

ಇದಂ ತವೇಶ ಸರ್ವಂ ಹಿ ವಸ್ತು ತ್ರಿಭುವನೇ ಹಿ ಯತ್ ।
ಇತ್ಯಾಹ ಮೇ ಪಿತಾ ನೂನಂ ಕಿಮುತಾಧ್ವರಶೇಷಿತಂ ॥ ೪೩ ॥

ಅಜಾನತಾ ಮಯಾ ನಾಥ ಯದುಕ್ತಂ ತದ್ವಚೋ ಭ್ರಮಾತ್ ।
ಅಪರಾಧಂ ಕ್ಷಮಸ್ವ ತ್ವಂ ಶಿರಸಾ ತ್ವಾಂ ಪ್ರಸಾದಯೇ ॥ ೪೪ ॥

ಇತ್ಯುಕ್ತ್ವಾ ನಭಗಸ್ಸೋಽತಿದೀನಧೀಸ್ತು ಕೃತಾಂಜಲಿಃ ।
ತುಷ್ಟಾವ ತಂ ಮಹೇಶಾನಂ ಕೃಷ್ಣದರ್ಶನಮಾನತಃ ॥ ೪೫ ॥

ಶ್ರಾದ್ಧದೇವೋಽಪಿ ಶುದ್ಧಾತ್ಮಾ ನತಕಸ್ಸಾಂಜಲಿಸ್ಸುಧೀಃ ।
ತುಷ್ಟಾವ ತಂ ಪ್ರಭುಂ ನತ್ವಾ ಸ್ವಾಪರಾಧಂ ಕ್ಷಮಾಪಯತ್ ॥ ೪೬ ॥

---

೪೨ ತಟ್ಟಗೆ ನಮಸ್ಕಾರಮಾಡಿ ಕೈಗಳನ್ನು ಮುಗಿದುಕೊಂಡು, ತಲೆವಾಗಿ, ಬಹು ವಿನಯದೊಡನೆ ಆ ಶಿವನನ್ನು ಕುರಿತು ಸಂತೋಷದಿಂತೆಂದನು

೪೩ ಎಲೈ ಸ್ವಾಮಿಯೇ, ಈ ಮೂರು ಲೋಕದಲ್ಲಿರುವ ವಸ್ತುವೆಲ್ಲವೂ ನಿನಗೆ ಸೇರಿದುದು. ಹೀಗೆಂದು ನನ್ನ ತಂದೆಯು ನಿಜವಾಗಿ ತಿಳಿಸಿರುವನು ಹೀಗಿರು ವಲ್ಲಿ ಯಜ್ಞದಲ್ಲಿ ಮಿಕ್ಕವಸ್ತುಗಳು ನಿನ್ನದೆಂದು ಮತ್ತೆ ಹೇಳಬೇಕೆ ?

೪೪ ಓ ಪ್ರಭುವೇ, ನಾನು ಏನೂ ತಿಳಿಯದೆ ಹೇಳಿದುದೆಲ್ಲವೂ ಭ್ರಮೆಯ ಮಾತೆಂಬುದಾಗಿ ಭಾವಿಸು. ಈ ತಪ್ಪನ್ನು ಮನ್ನಿಸು ನಿನಗೆ ತಲೆಮುಟ್ಟಿ ನಮಸ್ಕರಿಸಿ, ಪ್ರಸನ್ನನಾಗೆಂದು ಪ್ರಾರ್ಥಿಸುವೆನು

೪೫. ಈರೀತಿ ಬಹುದೈನ್ಯದಿಂದ ಆ ನಭಗನು ಬದ್ಧಾಂಜಲಿಪುಟನಾಗಿ ನಮ ಸ್ಕರಿಸಿ ಆ ಕೃಷ್ಣದರ್ಶನರೂಪದ ಶಿವನನ್ನು ಸ್ತೋತ್ರಮಾಡಿದನು

೪೬. ಆಗ ಮಹಾಜ್ಞಾನಿಯಾದ ವೈವಸ್ವತಮನುವೂ ಅಲ್ಲಿಗೆ ಬಂದು, ಶುದ್ಧ ಮನಸ್ಸಿಂದ ಸಾಷ್ಟಾಂಗವಾಗೆರಗಿ ಕೈಮುಗಿದುಕೊಂಡು ತನ್ನ ಅಪರಾಧವನ್ನು ಮನ್ನಿಸ ಬೇಕೆಂದು ಆ ಶಂಕರನನ್ನು ಸ್ತೋತ್ರಮಾಡಿದನು.

ಏತಸ್ಮಿನ್ನಂತರೇ ತತ್ರ ವಿಷ್ಣುರ್ಬ್ರಹ್ಮಾಖಿಲಃ ಸುಧೀಃ ।
ವಾಸವಾದ್ಯಾ ಸಮಾಜಗ್ಮುಃ ಸಿದ್ಧಾಶ್ಚ ಮುನಯೋಽಪಿ ಹಿ ॥ ೪೭ ॥

ಮಹೋತ್ಸವಂ ಪ್ರಕುರ್ವಂತಃ ಸುಕೃತಾಂಜಲಯೋಽಖಿಲಾಃ ।
ತುಷ್ಟುವುರ್ನತಕಾ ಭಕ್ತ್ಯಾ ಸುಪ್ರಣಮ್ಯ ಪೃಥಕ್ಪೃಥಕ್ ॥ ೪೮ ॥

ಅಥ ರುದ್ರಃ ಪ್ರಸನ್ನಾತ್ಮಾ ಕೃಪಾದೃಷ್ಟ್ಯಾ ವಿಲೋಕ್ಯ ತಾನ್ ।
ಉವಾಚ ನಭಗಂ ಪ್ರೀತ್ಯಾ ಸಸ್ಮಿತಂ ಕೃಷ್ಣದರ್ಶನಃ ॥ ೪೯ ॥

॥ ಕೃಷ್ಣದರ್ಶನ ಉವಾಚ ॥

ಯತ್ತೇ ಪಿತಾವದದ್ಧರ್ಮ್ಯಂ ವಾಕ್ಯಂ ತತ್ತು ತಥೈವ ಹಿ ।
ತ್ವಯಾಪಿ ಸತ್ಯಮುಕ್ತಂ ತತ್ಸಾಧುಸ್ತ್ವಂ ನಾತ್ರ ಸಂಶಯಃ ॥ ೫೦ ॥

ಅತೋಽಹಂ ಸುಪ್ರಸನ್ನೋಽಸ್ಮಿ ಸರ್ವಥಾ ಸುವ್ರತೇನ ತೇ ।
ದದಾಮಿ ಕೃಪಯಾ ತೇ ಹಿ ಜ್ಞಾನಂ ಬ್ರಹ್ಮ ಸನಾತನಂ ॥ ೫೧ ॥

---

೪೭. ಈ ಸಮಯಕ್ಕೆ ಸರಿಯಾಗಿ ಅಲ್ಲಿಗೆ ವಿಷ್ಣುವೂ ಬ್ರಹ್ಮನೂ ಇಂದ್ರಾದಿ ದೇವತೆಗಳೂ ಸಿದ್ಧರೂ ಋಷಿಗಳೂ ಎಲ್ಲರೂ ಬಂದರು.

೪೮. ಅವರೆಲ್ಲರೂ ಮಹತ್ತಾದ ಉತ್ಸವವನ್ನಾಚರಿಸುತ್ತಾ ಭಕ್ತಿಯಿಂದ ವ್ಯೈಬಾಗಿ ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ಬೇರೆಬೇರೆಯಾಗಿ ಸ್ತೋತ್ರ ಮಾಡತೊಡಗಿದರು.

೪೯. ಬಳಿಕ ಪ್ರಸನ್ನನಾದ ಶಂಕರನು ಅವರೆಲ್ಲರನ್ನೂ ಕರುಣಾಪೂರಿತವಾದ ನೋಟದಿಂದ ಕಂಡು ನಸುನಗುತ್ತಾ ಪ್ರೀತಿಯಿಂದ ಆ ನಭಗನನ್ನು ಇಂತೆಂದನು.

೫೦. ನಿಮ್ಮ ತಂದೆಯು ಹೇಳಿದ ಮಾತು ನ್ಯಾಯ-ಸಮ್ಮತವಾದುದು. ಮತ್ತು ವಾಸ್ತವವಾದುದು. ನೀನೂ ಸಹ ನಿಜವನ್ನೇ ನುಡಿದಿರುವೆ. ನೀನು ಸತ್ಪುರುಷನು. ಇದರಲ್ಲಿ ಸಂಶಯವಿಲ್ಲ.

೫೧. ನಿನ್ನೀ ನಿಷ್ಠೆಯಿಂದ ನಾನು ಬಹುವಾಗಿ ಸಂತೋಷಗೊಂಡಿರುವೆನು. ಆದುದರಿಂದ ನಿನ್ನ ಮೇಲೆ ನನಗೆ ಕರುಣೆಯುಂಟಾಗಿರುವುದು. ನಿನಗೆ ಸನಾತನವಾದ ಪರಬ್ರಹ್ಮತತ್ತ್ವದ ಜ್ಞಾನವನ್ನು ಅನುಗ್ರಹಿಸುವೆನು.

ಮಹಾಜ್ಞಾನೀ ಭವ ತ್ವಂ ಹಿ ಸವಿಪ್ರೋ ನಭಗಂ ದ್ರುತಂ ।
ಗೃಹಾಣ ವಸ್ತ್ವಿದಂ ಸರ್ವಂ ಮದ್ದತ್ತಂ ಕೃಪಯಾಧುನಾ ॥ ೫೨ ॥

ಇಹ ಸರ್ವಸುಖಂ ಭುಂಕ್ಷ್ವ ನಿರ್ವಿಕಾರಂ ಮಹಾಮತೇ ।
ಸುಗತಿಂ ಪ್ರಾಪ್ಸ್ಯಸಿ ತ್ವಂ ಹಿ ಸ ವಿಪ್ರಃ ಕೃಪಯಾ ಮಮ ॥ ೫೩ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ತಾತ ಭಗವಾನ್ಸ ರುದ್ರಃ ಸತ್ಯವತ್ಸಲಃ ।
ಸರ್ವೇಷಾಂ ಪಶ್ಯತಾಂ ತೇಷಾಂ ತತ್ರೈವಾಂತರ್ದಧೇ ಹರಃ ॥ ೫೪ ॥

ವಿಷ್ಣುರ್ಬ್ರಹ್ಮಾಪಿ ದೇವಾದ್ಯಾಸ್ಸರ್ವೇ ತೇ ಮುನಿಸತ್ತಮ ।
ಸ್ವಂ ಸ್ವಂ ಧಾಮ ಯಯುಃ ಪ್ರೀತ್ಯ ತಸ್ಯೈ ನತ್ವಾ ದಿಶೇ ಮುದಾ ॥ ೫೫ ॥

ಸಪುತ್ರಃ ಶ್ರಾದ್ಧದೇವೋಽಪಿ ಸ್ವಸ್ಥಾನಮಗಮನ್ಮುದಾ ।
ಭುಕ್ತ್ವಾ ಭೋಗಾನ್ಸುವಿಪುಲಾನ್ಸೋಽಂತೇ ಶಿವಪುರಂ ಯಯೌ ॥ ೫೬ ॥

---

೫೨ ಎಲೈ ನಭಗನೇ, ಬೇಗನೆ ನೀನು ಮಹಾಜ್ಞಾನಿಯಾಗು ಈಗ ನಾನು ಕೃಪೆಯಿಂದ ಕೊಟ್ಟಿರುವ ಈ ವಸ್ತುವೆಲ್ಲವನ್ನೂ ನೀನೇ ತೆಗೆದುಕೋ.

೫೩ ಎಲೈಮಹಾಜ್ಞಾನಿಯೇ, ನೀನು ಈ ಲೋಕದಲ್ಲಿ ಯಾವೊಂದು ವಿಕಾರಕ್ಕೂ ಸಿಲುಕದೆ ಸಕಲ ಸುಖಗಳನ್ನೂ ಅನುಭವಿಸು ನನ್ನ ಅನುಗ್ರಹದಿಂದ ನೀನು ಬ್ರಾಹ್ಮಣರೊಡನೆ ಶ್ರೇಷ್ಠವಾದ ಗತಿಯನ್ನು ಹೊಂದುವೆ ಎಂದನು

೫೪. ಅಪ್ಪಾ ಸನತ್ಕುಮಾರಮುನಿಯೇ, ಈರೀತಿಯಾಗಿ ಸತ್ಯವಚನ ಪ್ರಿಯನೂ ಭಗವಂತನೂ ಆದ ಆ ಶಿವನು ಆ ನಭಗನಿಗೆ ಹೇಳಿ, ಅವರೆಲ್ಲರೂ ನೋಡುತ್ತಿರುವಂತೆ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು

೫೫. ಎಲೈ ಮುನಿಶ್ರೇಷ್ಠನೇ, ಅನಂತರ ವಿಷ್ಣು, ಬ್ರಹ್ಮ ಮೊದಲಾದವರೆಲ್ಲರೂ ಆ ಶಿವನಿದ್ದ ದಿಕ್ಕಿಗೆ ನಮಸ್ಕಾರವನ್ನು ಮಾಡಿ ಸಂತೋಷದಿಂದ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

೫೬. ಇತ್ತಲಾಗಿ ವೈವಸ್ವತಮನುವೂ ಸಹ ತನ್ನ ಮಗನಾದ ನಭಗನೊಡನೆ ಸಂತೋಷದಿಂದ ತನ್ನ ನಗರಕ್ಕೆ ಹಿಂದಿರುಗಿದನು. ಬಳಿಕ ಅನೇಕವಾದ ಸುಖಗಳನ್ನೆಲ್ಲಾ ಉಪಭೋಗಿಸುತ್ತಿದ್ದು ಕೊನೆಗೆ ಶಿವಲೋಕವನ್ನು ಸೇರಿದನು.

ಇತ್ಥಂ ತೇ ಕೀರ್ತಿತೋ ಬ್ರಹನ್ನವತಾರಃ ಶಿವಸ್ಯ ಹಿ ।
ಕೃಷ್ಣದರ್ಶನನಾಮಾ ವೈ ನಭಗಾನಂದದಾಯಕಃ ॥ ೫೭ ॥

ಇದಮಾಖ್ಯಾನಮನಘಂ ಭುಕ್ತಿಮುಕ್ತಿಪ್ರದಂ ಸತಾಂ ।
ಪಠತಾಂ ಶೃಣ್ವತಾಂ ವಾಪಿ ಸರ್ವಕಾಮಫಲಪ್ರದಂ ॥ ೫೮ ॥

ಸ ಏತಚ್ಚರಿತಂ ಪ್ರಾತಸ್ಸಾಯಂ ಚ ಸ್ಮರತೇ ಸುಧೀಃ ।
ಕವಿರ್ಭವತಿ ಮಂತ್ರಜ್ಞೋ ಗತಿಮಂತೇ ಲಭೇತ್ಪರಾಂ ॥ ೫೯ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಕೃಷ್ಣದರ್ಶನಶಿವಾವತಾರವರ್ಣನಂ ನಾಮೈಕೋನತ್ರಿಂಶೋಽಧ್ಯಾಯಃ

---

೫೭. ಎಲೈ ಬ್ರಾಹ್ಮಣೋತ್ತಮನೇ, ಈರೀತಿಯಾಗಿ ನಿನಗೆ ನಭಗಚಕ್ರವರ್ತಿಗೆ ಆನಂದವನ್ನುಂಟುಮಾಡಿದ ಕೃಷ್ಣದರ್ಶನನೆಂಬ ಹೆಸರಿನ ಶಿವನ ಅವತಾರವನ್ನು ವರ್ಣಿಸಿದೆನು.

೫೮. ಸತ್ಪುರುಷರಿಗೆ ಸಕಲ ಭೋಗಗಳನ್ನೂ ಮೋಕ್ಷಸುಖವನ್ನೂ ಕರುಣಿಸುವ ಪಾವನವಾದೀ ಚರಿತ್ರವು ಓದುವವರಿಗೂ ಶ್ರವಣಮಾಡುವವರಿಗೂ ಬಯಸಿದ ಇಷ್ಟಾರ್ಥಗಳೆಲ್ಲವನ್ನೂ ಕೈಗೂಡಿಸುವುದು.

೫೯. ಸರಿಯಾದ ತಿಳುವಳಿಕೆಯುಳ್ಳ ಯಾವ ಮನುಷ್ಯನು ಈ ನಭಗ ಸುಖಪ್ರದವಾದ ಕೃಷ್ಣದರ್ಶನಾವತಾರಚರಿತವನ್ನು ಬೆಳಗ್ಗೆ ಮತ್ತು ಸಾಯಂಕಾಲ ಸ್ಮರಣೆಮಾಡುವನೋ ಆತನು ಮಹಾಜ್ಞಾನಿಯಾಗುವನು ಮತ್ತು ಮಂತ್ರಜ್ಞನಾಗುವನು ಅಲ್ಲದೆ ಕೊನೆಗೆ ಉತ್ತಮವಾದ ಗತಿಯನ್ನೂ ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಶತರುದ್ರಸಂಹಿತೆಯಲ್ಲಿ
ಕೃಷ್ಣದರ್ಶನಾವತಾರವೆಂಬ ಇಪ್ಪತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ತ್ರಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಶೃಣು ತ್ವಂ ಬ್ರಹ್ಮಪುತ್ರಾದ್ಯಾವತಾರಂ ಪರಮೇಶಿತುಃ ।
ಅವಧೂತೇಶ್ವರಾಹ್ವಂ ವೈ ಶಕ್ರಗರ್ವಾಪಹಾರಕಂ ॥ ೧ ॥

ಶಕ್ರಃ ಪುರಾ ಹಿ ಸಗುರುಃ ಸರ್ವದೇವಸಮನ್ವಿತಃ ।
ದರ್ಶನಂ ಕರ್ತುಮೀಶಸ್ಯ ಕೈಲಾಸಮಗಮನ್ಮುನೇ ॥ ೨ ॥

---

### ಮೂವತ್ತನೆಯ ಅಧ್ಯಾಯವು.

೧. ಎಲೈ ಬ್ರಹ್ಮಪುತ್ರನಾದ ಸನತ್ಕುಮಾರಮುನಿಯೇ, ಒನ್ಮೆ ಆ ಪರಮೇಶ್ವರನು ಅವಧೂತೇಶ್ವರನೆಂಬ ಅವತಾರವನ್ನೆತ್ತಿ ಇಂದ್ರನ ಹೆಮ್ಮೆಯನ್ನು ಮುರಿದುಬಿಟ್ಟನು. ಆ ಚರಿತ್ರವನ್ನು ಈಗ ವಿವರಿಸುವೆನು ಕೇಳು.

೨. ಓ ಮುನೀಂದ್ರ, ಹಿಂದೆ ಒಂದಾನೊಂದುಸಲ ದೇವೇಂದ್ರನು ಶ್ರೀ ಶಂಕರನನ್ನು ಸಂದರ್ಶಿಸಬೇಕೆಂದು ಬಗೆದು ಬೃಹಸ್ಪತ್ಯಾಚಾರ್ಯನೊಡನೆಯೂ ಇತರ ಎಲ್ಲ ದೇವತೆಗಳೊಡನೆಯೂ ಕೈಲಾಸಪರ್ವತಕ್ಕೆ ತೆರಳಿದನು.

**ಅಥ ಗುರ್ವಿಂದ್ರಯೋರ್ಜ್ಞಾತ್ವಾಗಮನಂ ಶಂಕರಸ್ತಯೋಃ ।**
**ಪರೀಕ್ಷಿತುಂ ಚ ತದ್ಭಾವಂ ಸ್ವದರ್ಶನರತಾತ್ಮನೋಃ ॥ ೩ ॥**

**ಅವಧೂತಸ್ವರೂಪೋಽಭೂನ್ನಾನಾಲೀಲಾಕರಃ ಪ್ರಭುಃ ।**
**ದಿಗಂಬರೋ ಮಹಾಭೀಮೋ ಜ್ವಲದಗ್ನಿಸಮಪ್ರಭಃ ॥ ೪ ॥**

**ಸೋಽವಧೂತಸ್ವರೂಪೋ ಹಿ ಮಾರ್ಗಮಾರುಧ್ಯ ಸದ್ಗತಿಃ ।**
**ಲಂಬಮಾನಪಟಃ ಶಂಭುರತಿಷ್ಠಚ್ಛೋಭಿತಾಕೃತಿಃ ॥ ೫ ॥**

**ಅಥ ತೌ ಗುರುಶಕ್ರೌ ಚ ಗಚ್ಛಂತೌ ಶಿವಸನ್ನಿಧಿಂ ।**
**ಅದ್ರಾಷ್ಟಾಂ ಪುರುಷಂ ಭೀಮಂ ಮಾರ್ಗಮಧ್ಯೇಽದ್ಭುತಾಕೃತಿಂ ॥ ೬ ॥**

**ಅಥ ಶಕ್ರೋ ಮುನೇಽಪೃಚ್ಛತ್ಸ್ವಾಧಿಕಾರೇಣ ದುರ್ಮದಃ ।**
**ಪುರುಷಂ ತಂ ಸ್ವಮಾರ್ಗಾಂತಃಸ್ಥಿತಮಜ್ಞಾಯ ಶಂಕರಂ ॥ ೭ ॥**

---

೩-೪. ಆಗ ತನ್ನ ದರ್ಶನ ಕಾಂಕ್ಷೆಯಿಂದ ಆ ದೇವೇಂದ್ರಬೃಹಸ್ಪತಿಗಳು ತನ್ನ ಬಳಿಗೆ ಬರುತ್ತಿರುವುದನ್ನರಿತು ಅವರೀರ್ವರ ಮನೋಭಾವವನ್ನು ಪರೀಕ್ಷಿಸಬೇಕೆಂಬ ಕುತೂಹಲದಿಂದ ಆ ನಾನಾಲೀಲಾವಿಶಾರದನಾದ ಶಂಕರನು ಮೈಮೇಲೆ ಬಟ್ಟೆಯಿಲ್ಲದೆ ನಗ್ನನಾಗಿ ಮಹಾಭಯಂಕರವಾದ ರೂಪವನ್ನು ಧರಿಸಿ ಜ್ವಲಿಸುತ್ತಿರುವ ಅಗ್ನಿಯಂತೆ ಬೆಳಗುತ್ತಾ ಅವಧೂತರೂಪವನ್ನು ತಾಳಿದನು.

೫. ಸತ್ಪುರುಷರಿಗೆ ಏಕಮಾತ್ರಶರಣ್ಯನಾದ ಅವಧೂತರೂಪಧಾರಿಯಾದ ಆ ಶಂಕರನು ಉಜ್ಜ್ವಲವಾದ ಆಕೃತಿಯಿಂದ ಮೆರೆಯುತ್ತಾ ದಾರಿಗಡ್ಡಲಾಗಿ ಬಂದು ನಿಂತನು. ಅವನ ಬಟ್ಟೆಯು ಸಡಿಲವಾಗಿ ಎತ್ತೆತ್ತಲೋ ಜೋತಾಡುತ್ತಿತ್ತು.

೬. ಅತ್ತಲಾಗಿ ಶಿವನ ಸನ್ನಿಧಿಗೆ ಬರುತ್ತಿದ್ದ ಇಂದ್ರ ಬೃಹಸ್ಪತಿಗಳಿಬ್ಬರೂ ದಾರಿಯ ನಡುವೆ ನಿಂತಿರುವ ಭಯಂಕರನೂ ಅದ್ಭುತಾಕಾರನೂ ಆದ ಪುರುಷನನ್ನು ಕಂಡರು.

೭. ಎಲೈ ಮುನಿಯೇ, ಅನಂತರ ತನ್ನ ಅಧಿಕಾರದಿಂದ ಕೊಬ್ಬಿ ಮೆರೆಯುತ್ತಿರುವ ಇಂದ್ರನು ತನ್ನ ದಾರಿಯ ನಡುವೆ ಅಡ್ಡಲಾಗಿ ನಿಂತಿರುವ ಆ ಪುರುಷನು ಶಂಕರನೆಂದು ತಿಳಿಯದೆ ಅವನನ್ನು ಇಂತು ಕೇಳತೊಡಗಿದನು.

॥ ಶಕ್ರ ಉವಾಚ ॥

ಕಸ್ತ್ವಂ ದಿಗಂಬರಾಕಾರಾವಧೂತಃ ಕುತ ಆಗತಃ ।
ಕಿಂ ನಾಮ ತವ ವಿಖ್ಯಾತಂ ತತ್ತ್ವತೋ ವದ ಮೇಽಚಿರಂ ॥ ೮ ॥

ಸ್ವಸ್ಥಾನೇ ಸಂಸ್ಥಿತಃ ಶಂಭುಃ ಕಿಂ ವಾನ್ಯತ್ರ ಗತೋಽಧುನಾ ।
ದರ್ಶನಾರ್ಥಂ ಹಿ ತಸ್ಯಾಹಂ ಗಚ್ಛಾಮಿ ಸಗುರುಸ್ಸುರೈಃ ॥ ೯ ॥

॥ ನಂದೀಶ್ವರ ಉವಾಚ ॥

ಶಕ್ರೇಣೇತ್ಥಂ ಸ ಪೃಷ್ಟಶ್ಚ ಕಿಂಚಿನ್ನೋವಾಚ ಪೂರುಷಃ ।
ಲೀಲಾಗೃಹೀತದೇಹಸ್ಸ ಶಂಕರೋ ಮದಹಾ ಪ್ರಭುಃ ॥ ೧೦ ॥

ಶಕ್ರಃ ಪುನರಪೃಚ್ಛತ್ತಂ ನೋವಾಚ ಸ ದಿಗಂಬರಃ ।
ಅವಿಜ್ಞಾತಗತಿಶ್ಶಂಭುರ್ಮಹಾಕೌತುಕಕಾರಕಃ ॥ ೧೧ ॥

---

೮. ಮೈಮೇಲೆ ಬಟ್ಟೆಯಿಲ್ಲದ ನಗ್ನನಾಗಿ ಅವಧೂತವೇಷವನ್ನು ತಳೆದ ನೀನಾರು ? ಎಲ್ಲಿಂದ ಬಂದೆ ? ನಿನ್ನ ಹೆಸರೇನು ? ಇದೆಲ್ಲವನ್ನೂ ಬೇಗನೆ ನಿಜವಾಗಿ ತಿಳಿಸು

೯. ಈಗ ಶ್ರೀ ಶಂಕರನು ತನ್ನ ನಿವಾಸದಲ್ಲಿಯೇ ಇರುವನೇ ? ಅಥವಾ ಇನ್ನೆಲ್ಲಿಯಾದರೂ ಹೊರಟಿರುವನೇ ? ಆತನನ್ನು ಸಂದರ್ಶಿಸಬೇಕೆಂದು ನಾನು ಬೃಹಸ್ಪತ್ಯಾಚಾರ್ಯನೊಂದಿಗೂ ದೇವತೆಗಳೊಡನೆಯೂ ಬಂದಿರುವೆನು ಎಂದನು

೧೦. ಎಲೈ ಮುನೀಂದ್ರನೇ, ಮದಾಂಧರ ಸೊಕ್ಕನ್ನು ಅಡಗಿಸಿಬಿಡುವವನೂ ಪ್ರಭುವೂ ಆದ ಆ ಶಂಕರನು ಬೇಕೆಂಬುದಾಗಿಯೇ ಈರೀತಿ ಆಕೃತಿಯನ್ನು ಧರಿಸಿ ಇಂದ್ರನು ಕೇಳುತ್ತಿದ್ದರೂ ಏನೂ ಉತ್ತರಕೊಡದೆ ಸುಮ್ಮನಿದ್ದನು

೧೧. ತಾನು ಏನುಮಾಡುವನೆಂಬುದು ಯಾರಿಗೂ ತಿಳಿಯದೇ ಇರುವಂತಹ ಅತ್ಯಾಶ್ಚರ್ಯಕರವಾದ ಕೆಲಸಗಳನ್ನು ಮಾಡುವ ಆ ಶಿವನು ಮೈಮೇಲೆ ಬಟ್ಟೆ ಇಲ್ಲದೆ ನಗ್ನನಾಗಿ ಮತ್ತೊಮ್ಮೆ ಇಂದ್ರನು ಕೇಳಿದರೂ ಏನೂ ಮಾತಾಡಲಿಲ್ಲ.

ಪುನಃ ಪುರಂದರೋಽಪೃಚ್ಛತ್ತ್ರೈಲೋಕ್ಯಾಧಿಪತಿಸ್ಸ್ವರಾಟ್ ।
ತೂಷ್ಣೀಮಾಸ ಮಹಾಯೋಗೀ ಮಹಾಲೀಲಾಕರಸ್ಸ ವೈ ॥ ೧೨ ॥

ಇತ್ಥಂ ಪುನಃ ಪುನಃ ಪೃಷ್ಟಃ ಶಕ್ರೇಣ ಸ ದಿಗಂಬರಃ ।
ನೋವಾಚ ಕಿಂಚಿದ್ಭಗವಾನ್ಶಕ್ರದರ್ಪಜಿಘಾಂಸಯಾ ॥ ೧೩ ॥

ಅಥ ಚುಕ್ರೋಧ ದೇವೇಶಸ್ತ್ರೈಲೋಕ್ಯೈಶ್ವರ್ಯಗರ್ವಿತಃ ।
ಉವಾಚ ವಚನಂ ಕ್ರೋಧಾತ್ತಂ ನಿರ್ಭರ್ತ್ಸ್ಯ ಜಟಾಧರಂ ॥ ೧೪ ॥

॥ ಇಂದ್ರ ಉವಾಚ ॥

ಪೃಚ್ಛಮಾನೋಽಪಿ ರೇ ಮೂಢ ನೋತ್ತರಂ ದತ್ತವಾನಸಿ ।
ಅತಸ್ತ್ವಾಂ ಹನ್ಮಿ ವಜ್ರೇಣ ಕಸ್ತೇ ತ್ರಾತಾಸ್ತಿ ದುರ್ಮತೇ ॥ ೧೫ ॥

---

೧೨. ಮೂರು ಲೋಕಗಳಿಗೂ ಒಡೆಯನೂ ಸ್ವರ್ಗಸಾಮ್ರಾಜ್ಯೇಶ್ವರನೂ ಆದ ಆ ಪುರಂದರನು ಮತ್ತೊಮ್ಮೆ ಕೇಳಿದನು. ಅದ್ಭುತವಾದ ಲೀಲೆಗಳನ್ನು ನಡೆಸುವ ಆ ಮಹಾಯೋಗಿಯು ಆಗಲೂ ಸುಮ್ಮನಿದ್ದನು.

೧೩. ಈರೀತಿಯಾಗಿ ಇಂದ್ರನು ಮತ್ತೆಮತ್ತೆ ಕೇಳಿದರೂ ಸಹ ಆ ದಿಗಂಬರ ವೇಷಧಾರಿಯಾದ ಭಗವಂತನು ಅವನ ಅಹಂಕಾರವನ್ನು ಮುರಿಯಬೇಕೆಂಬ ಇಚ್ಛೆಯಿಂದಲೇ ತುಟಿಯನ್ನೆರಡು ಮಾಡಲಿಲ್ಲ.

೧೪. ಬಳಿಕ ತಾನು ತ್ರಿಲೋಕಾಧಿಪತ್ಯವನ್ನು ನಡೆಸುವವನೆಂಬ ಹೆಮ್ಮೆಯಿಂದ ಕೂಡಿದ ಆ ಇಂದ್ರನು ಬಹಳ ಕೋಪವನ್ನು ತಾಳಿದನು. ಆಗ ಅವನು ತಲೆಯೊಳ್ಳಾ ತಿರಿಗಟ್ಟಿಹೋಗಿರುವ ಆ ಪುರುಷನನ್ನು ಗದರಿಸಿ ಕೋಪದಿಂದ ಇಂತೆಂದನು.

೧೫. ಎಲೈ ಬುದ್ಧಿಹೀನನೇ, ನಿನ್ನನ್ನು ಎಷ್ಟುಕೇಳುತ್ತಿದ್ದರೂ ಉತ್ತರವನ್ನೇ ಕೊಡದಿರುವೆ. ಆದುದರಿಂದ ನಿನ್ನನ್ನು ಈ ವಜ್ರಾಯುಧದಿಂದ ಕೊಲ್ಲುವೆನು. ಎಲೈ ದುಷ್ಟನೇ, ನಿನ್ನನ್ನಾರು ಕಾಪಾಡುವರು, ನೋಡೋಣ.

ಇತ್ಯುದೀರ್ಯ ತತೋ ವಜ್ರೀ ಸಂನಿರೀಕ್ಷ್ಯ ಕ್ರುಧಾ ಹಿ ತಂ ।
ಹಂತುಂ ದಿಗಂಬರಂ ವಜ್ರಮುದ್ಯತಂ ಸ ಚಕಾರ ಹ ॥ ೧೬ ॥

ವಜ್ರಹಸ್ತಂ ಚ ತಂ ದೃಷ್ಟ್ವಾ ಶಕ್ರಂ ಶೀಘ್ರಂ ಸದಾಶಿವಃ ।
ಚಕಾರ ಸ್ತಂಭನಂ ತಸ್ಯ ವಜ್ರಪಾತಸ್ಯ ಶಂಕರಃ ॥ ೧೭ ॥

ತತಃ ಸ ಪುರುಷಃ ಕ್ರುದ್ಧಃ ಕರಾಲಾಕ್ಷೋ ಭಯಂಕರಃ ।
ದ್ರುತಮೇವ ಪ್ರಜಜ್ವಾಲ ತೇಜಸಾ ಪ್ರದಹನ್ನಿವ ॥ ೧೮ ॥

ಬಾಹುಪ್ರತಿಷ್ಟಂಭಭುವಾ ಮನ್ಯುನಾಂತಶ್ಚಶೀಪತಿಃ ।
ಸಮುದಹ್ಯತ ಭೋಗೀವ ಮಂತ್ರರುದ್ಧಪರಾಕ್ರಮಃ ॥ ೧೯ ॥

ದೃಷ್ಟ್ವಾ ಬೃಹಸ್ಪತಿಸ್ತ್ವೇನಂ ಪ್ರಜ್ವಲಂತಂ ಸ್ವತೇಜಸಾ ।
ಪುರುಷಂ ತಂ ಧಿಯಾಮಾಸ ಪ್ರಣನಾಮ ಹರಂ ದ್ರುತಂ ॥ ೨೦ ॥

---

೧೬. ಹೀಗೆ ಹೇಳಿ ಇಂದ್ರನು ಕೋಪದಿಂದ ದುರದುರನೆ ನೋಡಿ ಆ ಬರಿಯ ಮೈಯ್ಯ ಜೋಗಿಯನ್ನು ಕೊಲ್ಲಲು ವಜ್ರಾಯುಧವನ್ನು ಎತ್ತಿಹಿಡಿದನು.

೧೭. ಹೀಗೆ ವಜ್ರಾಯುಧವನ್ನು ಮೇಲಕ್ಕೆತ್ತಿ ತನ್ನನ್ನು ಸಂಹರಿಸಲು ಸಿದ್ಧನಾಗಿರುವ ಇಂದ್ರನನ್ನು ಕಂಡು ಆ ಶಂಕರನು ತಟಕ್ಕನೆ ಆ ವಜ್ರಾಯುಧವು ಬೀಳದಂತೆ ಸ್ತಂಭಿಸಿಬಿಟ್ಟನು

೧೮. ಅನಂತರ ಆ ಪುರುಷನು ಕೋಪದಿಂದ ಕಣ್ಣುಗಳನ್ನು ಕೆಕ್ಕರಿಸಿಕೊಂಡು ಭಯಂಕರವಾದ ಆಕಾರವನ್ನು ತಾಳಿ ತನ್ನ ತೇಜಸ್ಸಿನಿಂದಲೇ ಎಲ್ಲವನ್ನೂ ಸುಟ್ಟು ಬಿಡುವವನಂತೆ ಜ್ವಲಿಸತೊಡಗಿದನು.

೧೯. ಆಗ ತನ್ನ ತೋಳು ಅಲುಗಾಡದಂತೆ ಕಟ್ಟಿಹೋದುದರಿಂದ ಕೋಪವು ಮಿತಿಮೀರಿ ಉಕ್ಕುತ್ತಿರಲು, ಮಂತ್ರಕ್ಕೆ ಒಳಗಾಗಿ ತನ್ನಾಟವೇನೂ ನಾಗದೆ ಬುಸುಗುಟ್ಟುತ್ತಿರುವ ಹಾವಿನಂತೆ ಆ ಇಂದ್ರನು ಒಳಗೊಳಗೇ ಕುದಿಯತೊಡಗಿದನು

೨೦. ಆಗ ತನ್ನ ತೇಜಸ್ಸಿನಿಂದ ಬೆಳಗುತ್ತಿರುವ ಆ ಪುರುಷನನ್ನು ಕಂಡು ಬೃಹಸ್ಪತಿಯು ಈತನೇ ಶಿವನೆಂದು ಅರಿತುಕೊಂಡು ಕೂಡಲೇ ಆ ಪುರುಷನಿಗೆ ನಮಸ್ಕಾರಮಾಡಿದನು.

ಕೃತಾಂಜಲಿಪುಟೋ ಭೂತ್ವಾ ತತೋ ಗುರುರುದಾರಧೀಃ ।
ದಂಡವತ್ಪ್ರ ಪುನರ್ನತ್ವಾ ಪ್ರಭುಂ ತುಷ್ಟಾವ ಭಕ್ತಿತಃ ॥ ೨೧ ॥

॥ ಗುರುರುವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಪ್ರಸನ್ನೋ ಭವ ಗೌರೀಶ ಸರ್ವೇಶ್ವರ ನಮೋಽಸ್ತು ತೇ ॥ ೨೨ ॥

ಮಾಯಯಾ ಮೋಹಿತಾಸ್ಸರ್ವೇ ಬ್ರಹ್ಮವಿಷ್ಣ್ವಾದಯೋಽಪಿ ತೇ ।
ತ್ವಾಂ ನ ಜಾನಂತಿ ತತ್ತ್ವೇನ ಜಾನಂತಿ ತ್ವದನುಗ್ರಹಾತ್ ॥ ೨೩ ॥

॥ ನಂದೀಶ್ವರ ಉವಾಚ ॥

ಬೃಹಸ್ಪತಿರಿತಿ ಸ್ತುತ್ವಾ ಸ ತದಾ ಶಂಕರಂ ಪ್ರಭುಂ ।
ಪಾದಯೋಃ ಪಾತಯಾಮಾಸ ತಸ್ಯೇಶಸ್ಯ ಪುರಂದರಂ ॥ ೨೪ ॥

---

೨೧. ಬಳಿಕ ವಿವೇಕಪರಿಜ್ಞಾನವುಳ್ಳ ಆ ಬೃಹಸ್ಪತಿಯು ಪ್ರಭುವಾದ ಆ ಪುರುಷನಿಗೆ ಮತ್ತೊಮ್ಮೆ ನೆಲದಮೇಲೆ ದಂಡವತ್ಪ್ರಣಾಮಮಾಡಿ, ಕೈಗಳನ್ನು ಮುಗಿದುಕೊಂಡು ಭಕ್ತಿಯಿಂದ ಸ್ತೋತ್ರವನ್ನು ಮಾಡಿದನು.

೨೨. ಎಲೈ ದೇವಾದಿದೇವನೇ, ಮಹಾದೇವನೇ, ನೀನು ಮರೆಹೊಕ್ಕವರಲ್ಲಿ ವಾತ್ಸಲ್ಯವುಳ್ಳವನಲ್ಲವೇ ? ಓ ಗೌರೀಕಾಂತ, ನಮ್ಮಲ್ಲಿ ಪ್ರಸನ್ನತೆಯನ್ನು ತೋರು. ಸರ್ವೇಶ್ವರ, ನಿನಗೆ ನಮಸ್ಕಾರವು.

೨೩. ಓ ದೇವ, ನಿನ್ನ ಮಾಯೆಯಿಂದ ಬ್ರಹ್ಮನನ್ನೂ ವಿಷ್ಣುವನ್ನೂ ಮೊದಲುಮಾಡಿಕೊಂಡು ಎಲ್ಲರೂ ಮೋಹಿತರಾಗಿರುವರು. ನಿನ್ನನ್ನು ಯಾರೂ ವಾಸ್ತವವಾಗಿ ಅರಿಯಲಾರರು. ನಿನ್ನ ಅನುಗ್ರಹವು ಉಂಟಾದರೆ ಮಾತ್ರ ಆಗ ತಿಳಿದುಕೊಳ್ಳಲು ಶಕ್ತರಾಗುವರು.

೨೪. ಎಲೈ ಮುನಿಯೇ, ಈರೀತಿಯಾಗಿ ಪ್ರಭುವಾದ ಆ ಶಂಕರನನ್ನು ಬೃಹಸ್ಪತಿಯು ಸ್ತೋತ್ರಮಾಡಿದಮೇಲೆ ಇಂದ್ರನನ್ನು ಆ ಶಂಕರನ ಕಾಲುಗಳಮೇಲೆ ಕೆಡಹಿದನು.

ತತಸ್ತ್ರತ ಸುರಾಚಾರ್ಯಃ ಕೃತಾಂಜಲಿರುದಾರಧೀಃ ।
ಬೃಹಸ್ಪತಿರುವಾಚೇದಂ ಪ್ರಶ್ರಯಾವನತಃ ಸುಧೀಃ ॥ ೨೫ ॥

॥ ಬೃಹಸ್ಪತಿರುವಾಚ ॥

ದೀನನಾಥ ಮಹಾದೇವ ಪ್ರಣತಂ ತವ ಪಾದಯೋಃ ।
ಸಮುದ್ಧರ ಚ ಮಾಂ ತತ್ತ್ವಂ ಕ್ರೋಧಂ ನ ಪ್ರಣಯಂ ಕುರು ॥ ೨೬ ॥

ತುಷ್ಟೋ ಭವ ಮಹಾದೇವ ಪಾಹೀಂದ್ರಂ ಶರಣಾಗತಂ ।
ವಹ್ನಿರೇಷ ಸಮಾಯಾತಿ ಭಾಲನೇತ್ರಸಮುದ್ಭವಃ ॥ ೨೭ ॥

॥ ನಂದೀಶ್ವರ ಉವಾಚ ॥

ಇತ್ಯಾಕರ್ಣ್ಯ ಗುರೋರ್ವಾಕ್ಯಮವಧೂತಾಕೃತಿಃ ಪ್ರಭುಃ ।
ಉವಾಚ ಕರುಣಾಸಿಂಧುರ್ವಿಹಸನ್ಸ ಸದೂತಿಕೃತ್ ॥ ೨೮ ॥

---

೨೫ ಅಪ್ಪಾ ಮುನಿಯೇ, ಅನಂತರ ಮಹಾಜ್ಞಾನಿಯಾದ ದೇವಗುರುವಾದ ಬೃಹಸ್ಪತಿಯು ವಿನಯದಿಂದ ತಲೆವಾಗಿ ಕೈಮುಗಿದುಕೊಂಡು

೨೬ ಎಲೈ ದೀನವತ್ಸಲನೇ, ಮಹಾದೇವನೇ, ನಿನ್ನ ಕಾಲುಗಳಮೇಲೆ ಬಿದ್ದಿರುವ ನನ್ನನ್ನು ಉದ್ಧಾರಮಾಡು. ನಿನ್ನ ಕೋಪವನ್ನು ನಿಲ್ಲಿಸು. ನಮ್ಮಲ್ಲಿ ಪ್ರೀತಿಯನ್ನು ತೋರು

೨೭. ಎಲೈ ಮಹಾದೇವನೇ, ಪ್ರಸನ್ನನಾಗು. ಶರಣಾಗತನಾದ ಇಂದ್ರನನ್ನು ಕಾಪಾಡು. ನಿನ್ನ ಹಣೆಗಣ್ಣಿನಿಂದ ಇದೋ ಬೆಂಕಿಯು ಹೊರಹೊಮ್ಮುತ್ತಿರುವುದು ಎಂದನು.

೨೮. ಎಲೈ ಸನತ್ಕುಮಾರನೇ, ಈರೀತಿಯಾಗಿ ಬೃಹಸ್ಪತಿಯು ಬಿನ್ನವಿಸಿದ ಮಾತನ್ನಾಲಿಸಿ ಕರುಣಾಸಾಗರನೂ ಸತ್ಪುರುಷಪರಿಪಾಲಕನೂ ಆದ ಆ ಅವಧೂತ ರೂಪಧಾರಿಯಾದ ಶಂಕರನು ನಸುನಗುತ್ತಾ ಇಂತೆಂದನು.

॥ ಅವಧೂತ ಉವಾಚ ॥

**ಕ್ರೋಧಾಚ್ಚ ನಿಸ್ಸೃತಂ ತೇಜೋ ಧಾರಯಾಮಿ ಸ್ವನೇತ್ರತಃ ।**
**ಕಥಂ ಹಿ ಕಂಚುಕೀಂ ಸರ್ಪಸ್ಸಂಧತ್ತೇ ಜೋಜ್ಝಿತಾಂ ಪುನಃ ॥ ೨೯ ॥**

॥ ನಂದೀಶ್ವರ ಉವಾಚ ॥

**ಇತಿ ಶ್ರುತ್ವಾ ವಚಸ್ತಸ್ಯ ಶಂಕರಸ್ಯ ಬೃಹಸ್ಪತಿಃ ।**
**ಉವಾಚ ಸಾಂಜಲಿರ್ಭೂಯೋ ಭಯವ್ಯಾಕುಲಮಾನಸಃ ॥ ೩೦ ॥**

॥ ಬೃಹಸ್ಪತಿರುವಾಚ ॥

**ಹೇ ದೇವ ಭಗವನ್ಭಕ್ತಾ ಅನುಕಂಪ್ಯಾಃ ಸದೈವ ಹಿ ।**
**ಭಕ್ತವತ್ಸಲನಾಮೇತಿ ಸ್ವಂ ಸತ್ಯಂ ಕುರು ಶಂಕರ ॥ ೩೧ ॥**

**ಕ್ಷೇಪ್ತುಮನ್ಯತ್ರ ದೇವೇಶ ಸ್ವತೇಜೋತ್ಯುಗ್ರಮರ್ಹಸಿ ।**
**ಉದ್ಧರ್ತಾ ಸರ್ವಭಕ್ತಾನಾಂ ಸಮುದ್ಧರ ಪುರಂದರಂ ॥ ೩೨ ॥**

---

೨೯. ಕೋಪದಿಂದ ಹೊರಹೊಮ್ಮಿದ ಈ ಜ್ವಾಲೆಯನ್ನು ನಾನೆಂತು ತಡೆಯ ಲಾದೀತು ? ಹಾವೇನಾದರೂ ತಾನು ತೊರೆದಿರುವ ಪೊರೆಯನ್ನು ಮತ್ತೆ ಕೂಡಿ ಕೊಳ್ಳುವುದೇ ?

೩೦. ಹೀಗೆಂಬುದಾಗಿ ಆ ಶಿವನು ನುಡಿದ ಮಾತನ್ನು ಕೇಳಿ ಬೃಹಸ್ಪತಿಯು ಮನಸ್ಸಿನಲ್ಲಿ ಭಯದಿಂದ ತಲ್ಲಣಿಸುತ್ತಾ ಬದ್ಧಾಂಜಲಿಪುಟನಾಗಿ ಮತ್ತೊಮ್ಮೆ ಈರೀತಿ ಹೇಳಿದನು.

೩೧. ಎಲೈ ಭಗವಂತನಾದ ಶಂಕರನೇ, ಭಕ್ತರಾದವರು ಯಾವಾಗಲೂ ನಿನ್ನ ಕೃಪೆಗೆ ಪಾತ್ರರಲ್ಲವೇ ? ಭಕ್ತವತ್ಸಲನೆಂಬ ನಿನ್ನ ಹೆಸರನ್ನು ಸತ್ಯವಾದುದನ್ನಾಗಿ ಮಾಡು.

೩೨. ಎಲೈ ದೇವದೇವನೇ, ಅತಿ ಭಯಂಕರವಾದ ಈ ನಿನ್ನ ತೇಜಸ್ಸನ್ನು ಮತ್ತೆಲ್ಲಿಯಾದರೂ ಬಿಸುಟುಬಿಡು. ಎಲ್ಲ ಭಕ್ತರನ್ನೂ ಸಂಕಟಗಳಿಂದ ಪಾರು ಗೊಳಿಸುವ ಕರುಣಾಮೂರ್ತಿಯಾದ ನೀನು ಈ ಇಂದ್ರನನ್ನು ಉದ್ಧಾರಮಾಡು.

॥ ನಂದೀಶ್ವರ ಉವಾಚ ॥

ಇತ್ಯುಕ್ತೋ ಗುರುಣಾ ರುದ್ರೋ ಭಕ್ತವತ್ಸಲನಾಮಭಾಕ್ ।
ಪ್ರತ್ಯುವಾಚ ಪ್ರಸನ್ನಾತ್ಮಾ ಸುರೇಜ್ಯಂ ಪ್ರಣತಾರ್ತಿಹಾ ॥ ३३ ॥

॥ ರುದ್ರ ಉವಾಚ ॥

ಪ್ರೀತಸ್ತೇಽಹಂ ಸುರಾಚಾರ್ಯ ದದಾಮಿ ವರಮುತ್ತಮಂ ।
ಇಂದ್ರಸ್ಯ ಜೀವದಾನೇನ ಜೀವೇತಿ ತ್ವಂ ಪ್ರಥಾಂ ವ್ರಜ ॥ ३४ ॥

ಸಮುದ್ಭೂತೋಽನಲೋ ಯೋಽಯಂ ಭಾಲನೇತ್ರಾತ್ಸುರಾಸಹಃ ।
ಏನಂ ತ್ಯಕ್ಷ್ಯಾಮ್ಯಹಂ ದೂರೇ ಯಥೇಂದ್ರಂ ನೈವ ಪೀಡಯೇತ್ ॥ ३೫ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಸ ಕರೇ ಧೃತ್ವಾ ಸ್ವತೇಜೋಽನಲಮುದ್ಭುತಂ ।
ಭಾಲನೇತ್ರಸಮುದ್ಭೂತಂ ಪ್ರಾಕ್ಷಿಪಲ್ಲವಣಾಂಭಸಿ ॥ ३೬ ॥

---

३३ ಓ ಮುನೀಂದ್ರ, ಈರೀತಿಯಾಗಿ ಬೃಹಸ್ಪತಿಯು ಪ್ರಾರ್ಥಿಸಲು, ಭಕ್ತವತ್ಸಲನೆಂಬ ಬಿರುದುಳ್ಳ, ತನ್ನನ್ನೇ ನಂಬಿರುವಂತಹವರ ದುಃಖಗಳನ್ನು ಪರಿಹರಿಸುವ ಆ ಶಂಕರನು ಸುಪ್ರೀತನಾಗಿ ಆ ದೇವಗುರುವನ್ನು ಕುರಿತು

३४ ಎಲೈ ಸುರಗುರುವೇ, ನಾನು ನಿನಗೆ ಪ್ರಸನ್ನನಾಗಿರುವೆನು ನಿನಗೆ ಶ್ರೇಷ್ಠವಾದ ವರವನ್ನೀಯುವೆನು ಇಂದ್ರನಿಗೆ ಜೀವವನ್ನುಳಿಸಿದುದರಿಂದ ಇನ್ನು ಮೇಲೆ ನೀನು ಜೀವನೆಂಬುದಾಗಿಯೇ ಪ್ರಸಿದ್ಧಿಯನ್ನು ಪಡೆ

३೫. ಎಲೈ ಸುರಾಚಾರ್ಯನೇ, ನನ್ನೀ ಹಣೆಗಣ್ಣಿನಿಂದ ಹುಟ್ಟಿದ ಈ ಸಹಿಸಲಶಕ್ಯವಾದ ತೇಜಸ್ಸು ಇಂದ್ರನನ್ನು ಪೀಡೆಗೊಳಿಸದಂತೆ ಅದನ್ನು ದೂರವಾಗಿ ಬಿಸುಟು ಬಿಡುವೆನು ಎಂದನು

३೬. ಎಲೈ ಮುನಿಯೇ, ಈರೀತಿಯಾಗಿ ಹೇಳಿ ತನ್ನ ಹಣೆಗಣ್ಣಿನಿಂದ ಹುಟ್ಟಿದ ಬೆಂಕಿಯಂತೆ ಪ್ರಜ್ವಲಿಸುತ್ತಿರುವ ಆ ಅದ್ಭುತವಾದ ತೇಜಸ್ಸನ್ನು ಕೈಗೆ ತೆಗೆದುಕೊಂಡು ಲವಣಸಮುದ್ರದಲ್ಲಿ ಎಸೆದುಬಿಟ್ಟನು.

ಅಥೋ ಶಿವಸ್ಯ ತತ್ತೇಜೋ ಭಾಲನೇತ್ರಸಮುದ್ಭವಂ ।
ಕ್ಷಿಪ್ತಂ ಚ ಲವಣಾಂಭೋಧೌ ಸದ್ಯೋ ಬಾಲೋ ಬಭೂವ ಹ ॥ ೩೭ ॥

ಸ ಜಲಂಧರನಾಮಾಭೂತ್ಸಿಂಧುಪುತ್ರೋಽಸುರೇಶ್ವರಃ ।
ತಂ ಜಘಾನ ಮಹೇಶಾನೋ ದೇವಪ್ರಾರ್ಥನಯಾ ಪ್ರಭುಃ ॥ ೩೮ ॥

ಇತ್ಥಂ ಕೃತ್ವಾ ಸುಚರಿತಂ ಶಂಕರೋ ಲೋಕಶಂಕರಃ ।
ಅವಧೂತಸ್ವರೂಪೇಣ ತತಶ್ಚಾಂತರ್ಹಿತೋಽಭವತ್ ॥ ೩೯ ॥

ಬಭೂವುಃ ಸಕಲಾ ದೇವಾಃ ಸುಖಿನಶ್ಚಾತಿನಿರ್ಭಯಾಃ ।
ಗುರುಶಕ್ರೌ ಭಯಾನ್ಮುಕ್ತೌ ಜಗ್ಮತುಃ ಸುಖಮುತ್ತಮಂ ॥ ೪೦ ॥

ಯದರ್ಥೇ ಗಮನೋದ್ಯುಕ್ತೌ ದರ್ಶನಂ ಪ್ರಾಪ್ಯ ತಸ್ಯ ತೌ ।
ಕೃತಾರ್ಥೌ ಗುರುಶಕ್ರೌ ಹಿ ಸ್ವಸ್ಥಾನಂ ಜಗ್ಮತುರ್ಮುದಾ ॥ ೪೧ ॥

---

೩೭. ಶಿವನು ಆರೀತಿ ತನ್ನ ತೇಜಸ್ಸನ್ನು ಲವಣಸಮುದ್ರದಲ್ಲಿ ಬಿಸುಟೊಡನೆಯೇ ಅದು ಆಗತಾನೇ ಹುಟ್ಟಿದ ಓರ್ವಶಿಶುವಿನ ರೂಪವನ್ನು ತಾಳಿತು.

೩೮. ಸಾಗರದಲ್ಲಿ ಹುಟ್ಟಿದ ಆ ಶಿಶುವೇ ಮುಂದೆ ಜಲಂಧರನೆಂದು ಪ್ರಸಿದ್ಧನಾದ ಅಸುರಾಧಿಪತಿಯಾದನು. ಆ ಜಲಂಧರನನ್ನು ಶ್ರೀ ಶಂಕರನೇ ದೇವತೆಗಳ ಪ್ರಾರ್ಥನೆಯಂತೆ ಸಂಹರಿಸಿಬಿಟ್ಟನು.

೩೯. ಈರೀತಿಯಾಗಿ ಲೋಕಕಲ್ಯಾಣಕಾರಕನಾದ ಆ ಶಂಕರನು ಅವಧೂತ ಸ್ವರೂಪದಿಂದ ಲೀಲೆಯನ್ನು ತೋರಿ ಅನಂತರ ಅಂತರ್ಧಾನವನ್ನು ಹೊಂದಿದನು.

೪೦. ಆಗ ಸಕಲ ದೇವತೆಗಳೂ ತಮ್ಮ ಭಯವೆಲ್ಲಾ ತೊಲೆದು ಸುಖದಿಂದಿದ್ದರು. ಅದರಂತೆ ಇಂದ್ರನೂ ಬೃಹಸ್ಪತಿಯೂ ತಮ್ಮ ಕಳವಳವನ್ನು ಬಿಟ್ಟು ಉತ್ತಮವಾದ ಸುಖವನ್ನು ಹೊಂದಿದರು.

೪೧. ಆ ಸುರಗುರುವೂ ದೇವೇಂದ್ರನೂ ಯಾರನ್ನು ಕಾಣಬೇಕೆಂದು ಹೊರಟಿದ್ದರೋ ಆತನನ್ನು ಮಧ್ಯಮಾರ್ಗದಲ್ಲಿಯೇ ಸಂದರ್ಶಿಸಿ ಕೃತಕೃತ್ಯರಾದರಲ್ಲದೆ, ಬಹು ಸಂತೋಷದಿಂದ ತಮ್ಮತಮ್ಮ ನೆಲೆಗಳಿಗೆ ಹಿಂದಿರುಗಿದರು

ಅವಧೂತೇಶ್ವರಾಹ್ವೋಽವತಾರಸ್ತೇ ಕಥಿತೋ ಮಯಾ ।
ಪರಮೇಶಸ್ಯ ಪರಮಾನಂದದಃ ಖಲದಂಡದಃ ॥ ೪೨ ॥

ಇದಮಾಖ್ಯಾನಮನಘಂ ಯಶಸ್ಯಂ ಸ್ವರ್ಗ್ಯಮೇವ ಚ ।
ಭುಕ್ತಿಮುಕ್ತಿಪ್ರದಂ ದಿವ್ಯಂ ಸರ್ವಕಾಮಫಲಪ್ರದಂ ॥ ೪೩ ॥

ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾ ಸಮಾಹಿತಃ ।
ಇಹ ಸರ್ವಸುಖಂ ಭುಕ್ತ್ವಾ ಸೋಽಂತೇ ಶಿವಗತಿಂ ಲಭೇತ್ ॥ ೪೪ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಅವಧೂತೇಶ್ವರ ಶಿವಾವತಾರವರ್ಣನಂ ನಾಮ ತ್ರಿಂಶೋಽಧ್ಯಾಯಃ

---

೪೨ ಈರೀತಿಯಾಗಿ ನಿನಗೆ ಪರಮಾನಂದದಾಯಕವಾದುದೂ, ದುಷ್ಟರಿಗೆ ದಂಡನೆಯನ್ನು ಮಾಡುವುದೂ ಆದ ಪರಮೇಶ್ವರನ ಅವಧೂತೇಶ್ವರವೆಂಬ ಅವತಾರದ ಚರಿತ್ರವನ್ನು ಹೇಳಿದುದಾಯಿತು.

೪೩ ಈ ಚರಿತ್ರವು ಪರಮಪಾವನವಾದುದು, ಯಶಸ್ಕರವಾದುದು, ಸ್ವರ್ಗದಾಯಕವಾದುದು ಮತ್ತು ಭೋಗಭಾಗ್ಯಗಳನ್ನೂ ಮೋಕ್ಷಸುಖವನ್ನೂ ಕೊಡುವಂಥದು ಮತ್ತು ಬಯಸಿದ ಕೋರಿಕೆಗಳೆಲ್ಲವನ್ನೂ ಈಡೇರಿಸುವಂಥದು.

೪೪ ಯಾವಾತನು ಮನಸ್ಸಿಟ್ಟು ಪ್ರತಿನಿತ್ಯವೂ ಈ ಚರಿತ್ರವನ್ನು ಶ್ರವಣ ಮಾಡುವನೋ ಅಥವಾ ಪರರಿಗೆ ಕೇಳುವಂತೆ ಕೀರ್ತನೆಮಾಡುವನೋ ಆತನು ಈ ಲೋಕದಲ್ಲಿ ಎಲ್ಲ ಸುಖಗಳನ್ನೂ ಅನುಭವಿಸಿ ಕೊನೆಗೆ ಶಿವಸಾಯುಜ್ಯವನ್ನು ಪಡೆಯುವನು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಅವಧೂತೇಶ್ವರಾವತಾರವರ್ಣನವೆಂಬ ಮೂವತ್ತನೆಯ
ಅಧ್ಯಾಯವು ಮುಗಿದುದು

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಏಕತ್ರಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

**ಅಥ ವಕ್ಷ್ಯೇ ಮುನಿಶ್ರೇಷ್ಠ ಶಂಭೋಃ ಶೃಣ್ವವತಾರಕಂ ।**
**ಸ್ವಭಕ್ತದಯಯಾ ವಿಪ್ರ ನಾರೀಸನ್ದೇಹಭಂಜಕಂ ॥ ೧ ॥**

**ಆಸೀತ್ಸತ್ಯರಥೋ ನಾಮ್ನಾ ವಿದರ್ಭವಿಷಯೇ ನೃಪಃ ।**
**ಧರ್ಮಾತ್ಮಾ ಸತ್ಯಶೀಲಶ್ಚ ಮಹಾಶೈವಜನಪ್ರಿಯಃ ॥ ೨ ॥**

### ಮೂವತ್ತೊಂದನೆಯ ಅಧ್ಯಾಯವು.

೧. ಎಲೈ ಮುನಿಶ್ರೇಷ್ಠನೇ, ತನ್ನ ಭಕ್ತರಲ್ಲಿ ಇರುವ ದಯೆಯಿಂದ ಆ ಪರಶಿವನು ಬ್ರಾಹ್ಮಣಸ್ತ್ರೀಯೊಬ್ಬಳ ಸಂದೇಹವನ್ನು ನಿವಾರಿಸಿದಂತಹ ಚರಿತ್ರವನ್ನು ನಿನಗೆ ತಿಳಿಸುವೆನು. ಶಿವನ ಅವತಾರದ ಆ ಕಥೆಯನ್ನು ಕೇಳು.

೨. ವಿದರ್ಭದೇಶದಲ್ಲಿ ಸತ್ಯರಥನೆಂಬ ಒಬ್ಬ ದೊರೆಯು ಇದ್ದನು. ಆತನು ಧರ್ಮಾತ್ಮನು, ಸತ್ಯವಾದಿಯು ವಿಶೇಷವಾಗಿ, ಶಿವನನ್ನು ಪೂಜಿಸುವವರ ವಿಷಯದಲ್ಲಿ ವಿಶ್ವಾಸವುಳ್ಳವನು.

**ತಸ್ಯ ರಾಜ್ಞಸ್ಸ್ವಧರ್ಮೇಣ ಮಹೀಂ ಪಾಲಯತೋ ಮುನೇ ।**
**ಮಹಾನ್ಕಾಲೋ ವ್ಯತೀಯಾಯ ಸುಖೇನ ಶಿವಧರ್ಮತಃ ॥ ೩ ॥**

**ಕದಾಚಿತ್ತಸ್ಯ ರಾಜ್ಞಸ್ತು ಶಾಲ್ವೈಶ್ಚ ಪುರರೋಧಿಭಿಃ ।**
**ಮಹಾನ್ರಣೋ ಬಭೂವಾಥ ಬಹುಸೈನ್ಯೈರ್ಬಲೋದ್ಧತೈಃ ॥ ೪ ॥**

**ಸ ವಿದರ್ಭನೃಪಃ ಕೃತ್ವಾ ಸಾರ್ಧಂ ತೈರ್ದಾರುಣಂ ರಣಂ ।**
**ಪ್ರನಷ್ಟೋರುಬಲಃ ಶಾಲ್ವೈರ್ನಿಹತೋ ದೈವಯೋಗತಃ ॥ ೫ ॥**

**ತಸ್ಮಿನ್ನೃಪೇ ಹತೇ ಯುದ್ಧೇ ಶಾಲ್ವೈಸ್ತು ಭಯವಿಹ್ವಲಾಃ ।**
**ಸೈನಿಕಾ ಹತಶೇಷಾಶ್ಚ ಮಂತ್ರಿಭಿಸ್ಸಹ ದುದ್ರುವುಃ ॥ ೬ ॥**

---

೩　ಆ ದೊರೆಯು ಒಳ್ಳೆಯ ಧರ್ಮದಿಂದ ಭೂಮಂಡಲವನ್ನು ಪರಿಪಾಲಿಸುತ್ತಲೂ, ಶಿವನಿಗೆ ಪ್ರೀತಿಕರವಾದ ಧರ್ಮಕಾರ್ಯಗಳನ್ನು ನಡೆಸುತ್ತಲೂ ಇರಲು ಬಹುಸುಖವಾಗಿ ಅನೇಕಕಾಲವು ಕಳೆದುಹೋಯಿತು

೪　ಒಂದಾನೊಂದುಸಲ ಮಹಾಬಲಾಢ್ಯರಾದ ಸಾಲ್ವರೆಂಬುವರು, ಬಹು ಭಾರಿಯಾದ ಸೇನೆಯೊಡಗೂಡಿ ಬಂದು ಈ ದೊರೆಯ ಪಟ್ಟಣಕ್ಕೆ ಮುತ್ತಿಗೆಹಾಕಿದರು　ಆಗ ಬಹುಭಾರಿಯಾದ ಯುದ್ಧವು ಜರುಗಿತು

೫　ವಿದರ್ಭದೇಶದ ಅರಸನು ಆ ಸಾಲ್ವರೊಂದಿಗೆ ಬಹುಘೋರವಾಗಿ ಯುದ್ಧವನ್ನೇನೋ ಮಾಡಿದನು. ಆದರೆ ದೈವವಶದಿಂದ ಎಲ್ಲವೂ ವ್ಯರ್ಥವಾಗಿ ಅಪಾರವಾದ ಆವನ ಸೈನ್ಯವೆಲ್ಲವೂ ಮಡಿದು, ತಾನೂ ಸಹ ಆ ಶತ್ರುಗಳಿಗೆ ಸಿಕ್ಕಿ ಮಡಿದು ಹೋದನು.

೬.　ಈ ರೀತಿ ಯುದ್ಧದಲ್ಲಿ ಆ ಸಾಲ್ವರ ಕೈಗೆ ಸಿಲುಕಿ ತಮ್ಮ ಅರಸನು ಮಡಿಯಲು, ಅಳಿದುಳಿದ ಸೈನಿಕರು ಮಂತ್ರಿಗಳೊಡನೆ ಕಾಲಿಗೆ ಬುದ್ಧಿಹೇಳಿದರು.

ಅಥ ತಸ್ಯ ಮಹಾರಾಜ್ಞೀ ರಾತ್ರೌ ಸ್ವಪುರತೋ ಮುನೇ ।
ಸಂರುದ್ಧಾ ರಿಪುಭಿರ್ಯತ್ನಾದಂತರ್ವತ್ನೀ ಬಹಿರ್ಯಯೌ ॥ ೭ ॥

ನಿರ್ಗತಾ ಶೋಕಸಂತಪ್ತಾ ಸಾ ರಾಜಮಹಿಷೀ ಶನೈಃ ।
ಪ್ರಾಚೀಂ ದಿಶಂ ಯಯೌ ದೂರಂ ಸ್ಮರಂತೀಶಪದಾಂಬುಜಂ ॥ ೮ ॥

ಅಥ ಪ್ರಭಾತೇ ಸಾ ರಾಜ್ಞೀ ದದರ್ಶ ವಿಮಲಂ ಸರಃ ।
ಅತೀತಾ ದೂರಮಧ್ವಾನಂ ದಯಯಾ ಶಂಕರಸ್ಯ ಹಿ ॥ ೯ ॥

ತತ್ರಾಗತ್ಯ ಪ್ರಿಯಾ ರಾಜ್ಞಸ್ಸಂತಪ್ತಾ ಸುಕುಮಾರಿಣೀ ।
ನಿವಾಸಾರ್ಥಂ ಸರಸ್ತೀರೇ ಛಾಯಾವೃಕ್ಷಮುಪಾಶ್ರಯತ್ ॥ ೧೦ ॥

---

೭. ಎಲೈ ಮುನಿಯೇ, ಬಳಿಕ ಆ ಅರಸನ ಮಹಾರಾಣಿಯು, ಸುತ್ತಲೂ ಶತ್ರುಗಳು ಮುತ್ತಿಬಿಟ್ಟಿರುವುದನ್ನು ಅರಿತು, ರಾತ್ರಿಯವೇಳೆಯಲ್ಲಿ ಯಾರಿಗೂ ತಿಳಿಯದಂತೆ ಬಹುಪ್ರಯತ್ನಪಟ್ಟು ಊರಿನಹೊರಗೆ ಬಂದುಬಿಟ್ಟಳು. ಆಗ ಆಕೆಯು ಪೂರ್ಣಗರ್ಭಿಣಿಯಾಗಿದ್ದಳು.

೮. ಆರಾಜಪತ್ನಿಯು ಬಹುವಾಗಿ ದುಃಖಿಸುತ್ತಾ, ಮೆಲ್ಲಮೆಲ್ಲನೆ ನಡೆಯುತ್ತಾ ಶಿವನ ಪಾದಾರವಿಂದಗಳನ್ನು ಹೃದಯದಲ್ಲಿ ಧ್ಯಾನಿಸುತ್ತಾ ಆ ಊರಿನ ಪೂರ್ವದಿಕ್ಕಿನಲ್ಲಿ ಬಹುದೂರ ಹೊರಟುಹೋದಳು.

೯. ಹೀಗೆಯೇ ಬರುತ್ತಿರಲು ಬೆಳಗಾಯಿತು. ಶಿವನ ಕೃಪೆಯಿಂದ ಆ ಮಹಾರಾಣಿಯು ಬಹುದೂರ ಸಾಗಿಬಂದಿದ್ದಳು. ಆಗ ಅವಳು ಶುದ್ಧವಾದ ನೀರುಳ್ಳ ಸರಸ್ಸೊಂದನ್ನು ಕಂಡಳು.

೧೦. ಸುಕುಮಾರಿಯೂ, ವಿದರ್ಭರಾಜನ ಮೋಹದಮಡದಿಯೂ ಆದ ಆಕೆಯು, ಬಹುವಾಗಿ ಬಳಲಿದವಳಾಗಿ, ಮುಂದೆ ಹೋಗಲಾರದೆ ಅದೇ ಸರಸ್ಸಿನ ದಡದಲ್ಲಿಯೇ ಇದ್ದುಬಿಡಬೇಕೆಂದು ನಿಶ್ಚಯಿಸಿ, ನಿಬಿಡವಾದ ನೆರಳುಳ್ಳ ಮರವೊಂದರ ಬುಡವನ್ನು ಆಶ್ರಯಿಸಿದಳು.

ತತ್ರ ದೈವವಶಾದ್ರಾಜ್ಞೀ ಮುಹೂರ್ತೇ ಸದ್ಗುಣಾನ್ವಿತೇ ।
ಅಸೂತ ತನಯಂ ದಿವ್ಯಂ ಸರ್ವಲಕ್ಷಣಲಕ್ಷಿತಂ ॥ ೧೧ ॥

ಅಥ ತಜ್ಜನನೀ ದೈವಾತ್ತೃಷಿತಾತಿ ನೃಪಾಂಗನಾ ।
ಸರೋಽವತೀರ್ಣಾ ಪಾನಾರ್ಥಂ ಗ್ರಸ್ತಾ ಗ್ರಾಹೇಣ ಪಾಥಸಿ ॥ ೧೨ ॥

ಸ ಸುತೋ ಜಾತಮಾತ್ರಸ್ತು ಕ್ಷುತ್ಪಿಪಾಸಾರ್ದಿತೋ ಭೃಶಂ ।
ರುರೋದ ಚ ಸರಸ್ತೀರೇ ವಿನಷ್ಟಪಿತೃಮಾತೃಕಃ ॥ ೧೩ ॥

ತಸ್ಮಿನ್ವನೇ ಕ್ರಂದಮಾನೇ ಜಾತಮಾತ್ರೇ ಸುತೇ ಮುನೇ ।
ಕೃಪಾನ್ವಿತೋ ಮಹೇಶೋಽಭೂದಂತರ್ಯಾಮೀ ಸ ರಕ್ಷಕಃ ॥ ೧೪ ॥

ಪ್ರೇರಿತಾ ಮನಸಾ ಕಾಚಿದೀಶೇನ ತ್ರಾಸಹಾರಿಣಾ ।
ಅಕಸ್ಮಾದಾಗತಾ ತತ್ರ ಭ್ರಮಂತೀ ಭೈಕ್ಷ್ಯಜೀವಿನೀ ॥ ೧೫ ॥

---

೧೧ ಆ ಮಹಾರಾಣಿಯು, ಅದೃಷ್ಟವಶದಿಂದ ಅದೇ ಮರದಬುಡದಲ್ಲಿಯೇ ಶುಭಮುಹೂರ್ತದಲ್ಲಿ ನಕಲ ಸುಲಕ್ಷಣಗಳಿಂದ ಒಪ್ಪುತ್ತಿರುವ ದಿವ್ಯವಾದ ಸುಕುಮಾರನನ್ನು ಹಡೆದಳು.

೧೨. ಅನಂತರ, ಆಗತಾನೇ ಪ್ರಸುವಿಸಿದ ಆ ರಾಜಪತ್ನಿಗೆ ವಿಧಿವಶದಿಂದ ಬಹುವಾಗಿ ಬಾಯಾರಿಕೆಯುಂಟಾಯಿತು. ಆಗ ನೀರನ್ನು ಕುಡಿಯಬೇಕೆಂದು ಸರೋವರದಲ್ಲಿಳಿಯಲು ಅಲ್ಲಿದ್ದ ಮೊಸಳೆಯೊಂದು ಆ ರಾಜಪತ್ನಿಯನ್ನೂ ನುಂಗಿಬಿಟ್ಟಿತು.

೧೩. ಈ ರೀತಿ ದುರ್ವಿಧಿಯ ಆಗ್ರಹಕ್ಕೆ ತುತ್ತಾಗಿ ತಂದೆತಾಯಿಗಳನ್ನು ಕಳೆದುಕೊಂಡ ಆ ಮಗುವು, ಹುಟ್ಟಿದೊಡನೆಯೇ ಹಸಿವು ಬಾಯಾರಿಕೆಗಳು ಬಹುವಾಗಿ ಪೀಡಿಸಲು ಆ ತಿಳಿಗೊಳದ ತಡಿಯಲ್ಲಿ ಅಳಲು ಮೊದಲುಮಾಡಿತು

೧೪. ಎಲ್ಲ ಕಡೆಯಲ್ಲೂ ಅಂತರ್ಯಾಮಿಯಾಗಿ ಇರುವ ಪಾಲಕನಾದ ಆ ಶಂಕರನು, ಈರೀತಿ ಕಾಡಿನಲ್ಲಿ ಆಗತಾನೇ ಹುಟ್ಟಿ ಅಳುತ್ತಿರುವ ಆ ಮಗುವಿನ ವಿಷಯದಲ್ಲಿ ಮರುಕದಿಂದ ಕೂಡಿದನು.

೧೫. ಆಗ ಭಯನಿವಾರಕನೆನಿಸಿದ ಕರುಣಾಳುವಾದ ಶಿವನ ಪ್ರೇರಣೆಯಿಂದ ಆಕಸ್ಮಿಕವಾಗಿ ಒಬ್ಬಾನೊಬ್ಬ ತಿರುಪೆಯ ಹೆಂಗಸು ಅಲ್ಲಲ್ಲಿ ಸುತ್ತಾಡುತ್ತಾ ಆ ಮಗುವಿನ ಬಳಿಗೆ ಬಂದಳು.

ಸಾ ಏಕಹಾಯನಂ ಬಾಲಂ ವಹಂತೀ ವಿಧವಾ ಽಙಂ ।
ಅನಾಥಮೇಕಂ ಕ್ರಂದಂತಂ ಶಿಶುಂ ತತ್ರ ದದರ್ಶ ಹ ॥ ೧೬ ॥

ಸಾ ದೃಷ್ಟ್ವಾ ತತ್ರ ತಂ ಬಾಲಂ ವನೇ ನಿರ್ಮನುಜೇ ಮುನೇ ।
ವಿಸ್ಮಿತಾತಿ ದ್ವಿಜಸ್ತ್ರೀ ಸಾ ಚಿಚಿಂತ ಹೃದಯೇ ಬಹು ॥ ೧೭ ॥

ಅಹೋ ಸುಮಹದಾಶ್ಚರ್ಯಮಿದಂ ದೃಷ್ಟಂ ಮಯಾಧುನಾ ।
ಅಸಂಭಾವ್ಯಮಕಥ್ಯಂ ಚ ಸರ್ವಥಾ ಮನಸಾ ಗಿರಾ ॥ ೧೮ ॥

ಅಚ್ಛಿನ್ನನಾಭಿನಾಲೋಽಯಂ ರಸಾಯಾಂ ಕೇವಲಂ ಶಿಶುಃ ।
ಶೇತೇ ಮಾತೃವಿಹೀನಶ್ಚ ಕ್ರಂದಸ್ತೇಜಸ್ವಿನಾಂ ವರಃ ॥ ೧೯ ॥

ಅಸ್ಯ ಪಿತ್ರಾದಯಃ ಕೇಽಪಿ ನ ಸಂತೀಹ ಸಹಾಯಿನಃ ।
ಕಾರಣಂ ಕಿಂ ಬಭೂವಾಥ ಹ್ಯಹೋ ದೈವಬಲಂ ಮಹತ್ ॥ ೨೦ ॥

---

೧೬. ಆ ತಿರುಪೆಯುವಳು ಗಂಡನಿಲ್ಲದವಳು. ಅವಳೂ ಸಹ ತನ್ನ ಒಂದು ವರ್ಷ ವಯಸ್ಸಿನ ಮಗನನ್ನು ಎತ್ತಿಕೊಂಡು ಬಂದಿದ್ದಳು. ಇಲ್ಲಿಗೆ ಬರಲು, ಯಾರೂ ದಿಕ್ಕಿಲ್ಲದೆ ಅಳುತ್ತಾ ಇರುವ ಆ ಎಳೆಮಗುವನ್ನು ನೋಡಿದಳು.

೧೭. ಆ ತಿರುಪೆಯುವಳಾದ ಬ್ರಾಹ್ಮಣ ಹೆಂಗಸು ಮನುಷ್ಯರ ಹೆಸರೇ ಇಲ್ಲದಂತಹ ಆ ಕಾಡಿನಲ್ಲಿ ಆಗತಾನೆ ಹುಟ್ಟಿದ ಆ ಮಗುವನ್ನು ಕಂಡು ಬಹುವಾಗಿ ಆಶ್ಚರ್ಯಪಟ್ಟಳು. ಬಳಿಕ ತನ್ನ ಮನಸ್ಸಿನಲ್ಲಿ ಈ ರೀತಿ ಯೋಚಿಸತೊಡಗಿದಳು.

೧೮. ಅಬ್ಬಾ, ನಾನೀಗ ನೋಡುತ್ತಿರುವುದು ಬಹು ಆಶ್ಚರ್ಯಕರವಾಗಿದೆ. ಇದನ್ನು ಯಾವರೀತಿಯಿಂದಲಾಗಲೀ ಮನಸ್ಸಿನಲ್ಲಿ ಊಹಿಸಲೂ ಸಾಧ್ಯವಿಲ್ಲ. ಬಾಯಲ್ಲಿ ವರ್ಣಿಸಲೂ ಬರುವುದಿಲ್ಲ.

೧೯. ಅತಿಶಯವಾದ ತೇಜಸ್ಸಿನಿಂದ ಮೆರೆಯುತ್ತಿರುವ ಈ ಶಿಶುವು ಅಳುತ್ತಾ ನೆಲದಮೇಲೆ ಬಿದ್ದಿರುವುದು. ಇದರ ಹೊಕ್ಕುಳ ನಾಳವನ್ನೂ ಸಹ ಕತ್ತರಿಸಿಲ್ಲ. ಇದರ ತಾಯಿಯಾರೋ ಆಕೆಯನ್ನೂ ಕೂಡ ಕಾಣೆನು.

೨೦. ಈ ಮಗುವಿಗೆ ಸಹಾಯಕರಾದ ತಂದೆ ಮೊದಲಾದ ಬಂಧುಗಳೂ ಸಹ ಇಲ್ಲಿ ಕಾಣಿಸುವುದಿಲ್ಲವಲ್ಲಾ. ಇದಕ್ಕೇನು ಕಾರಣವಿರುವುದೋ? ಅಕಟಾ, ದೈವ ಬಲವೇ ಬಹುಹೆಚ್ಚಿನದು.

ನ ಜಾನೇ ಕಸ್ಯ ಪುತ್ರೋऽಯಮಸ್ಯ ಜ್ಞಾತಾತ್ರ ಕೋऽಪಿ ನ ।
ಯತಃ ಪ್ರಚ್ಛಾಮ್ಯಸ್ಯ ಜನ್ಮ ಜಾತಾ ಚ ಕರುಣಾ ಮಯಿ ॥ ೨೧ ॥

ಇಚ್ಛಾಮ್ಯೇನಂ ಪೋಷಿತುಂ ಹಿ ಬಾಲಮೌರಸಪುತ್ರವತ್ ।
ಸಂಪ್ರಷ್ಟುಂ ನೋತ್ಸಹೇऽಜ್ಞಾತ್ವಾ ಕುಲಜನ್ಮಾದಿ ಚಾಸ್ಯ ವೈ ॥ ೨೨ ॥

॥ ನಂದೀಶ್ವರ ಉವಾಚ ।

ಇತಿ ಸಂಚಿಂತ್ಯಮಾನಾಯಾಂ ತಸ್ಯಾಂ ವಿಪ್ರವರಸ್ತ್ರಿಯಾಂ ।
ಕೃಪಾಂ ಚಕಾರ ಮಹತೀಂ ಶಂಕರೋ ಭಕ್ತವತ್ಸಲಃ ॥ ೨೩ ॥

ದಧ್ರೇ ಭಿಕ್ಷುಸ್ವರೂಪಂ ಹಿ ಮಹಾಲೀಲೋ ಮಹೇಶ್ವರಃ ।
ಸರ್ವಥಾ ಭಕ್ತಸುಖದೋ ನಿರುಪಾಧಿಃ ಸ್ವಯಂ ಸದಾ ॥ ೨೪ ॥

---

೨೧ ಈ ಮಗುವು ಯಾರ ಮಗನೋ ಅದು ನನಗೆ ತಿಳಿಯದು. ಇದನ್ನು ಬಲ್ಲವರು ಸಹ ಇಲ್ಲಿ ಯಾರೂ ಇಲ್ಲ. ಈ ಮಗುವು ಹುಟ್ಟಿದ ಬಗೆಯನ್ನು ಯಾರಿಂದ ಅರಿಯಲಿ ? ಇದನ್ನು ಕಂಡರೆ ನನಗೆ ಮರುಕವುಕ್ಕುತ್ತಿರುವುದು.

೨೨. ಈ ಮಗುವನ್ನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಸಾಕ ಬೇಕೆಂದು ಆಸೆಯಾಗುವುದು. ಆದರೆ ಈ ಮಗುವಿನ ಕುಲವಾವುದು ? ಜನ್ಮ ವೃತ್ತಾಂತವೇನು ? ಎಂಬುದನ್ನರಿಯದೆ ಇವನನ್ನು ಮುಟ್ಟಲು ಮನಸ್ಸುಬಾರದೆ ಇರುವುದು.

೨೩. ಎಲೈ ಸನತ್ಕುಮಾರನೇ, ಈ ರೀತಿಯಾಗಿ ಆ ಬ್ರಾಹ್ಮಣ ಹೆಂಗಸು ಆಲೋಚಿಸುತ್ತಿರಲು, ಭಕ್ತರಲ್ಲಿ ವಾತ್ಸಲ್ಯವುಳ್ಳ ಶಿವನು ಕೃಪೆಯನ್ನು ತೋರಿದನು.

೨೪. ತನಗೆ ಎಂದೆಂದಿಗೂ ಯಾವೊಂದು ಉಪಾಧಿಯೂ ಇಲ್ಲವೇ ಇದ್ದರೂ ಭಕ್ತರಿಗೆ ಸದಾಕಾಲದಲ್ಲಿಯೂ ಸುಖವುಂಟಾಗಲೆಂಬ ಆಸೆಯಿಂದ ನಾನಾವಿಧವಾದ ಲೀಲೆಗಳನ್ನು ತೋರುವ ಆ ಮಹೇಶ್ವರನು ಒಬ್ಬ ಭಿಕ್ಷುಕನ ವೇಷವನ್ನು ತಾಳಿದನು.

ತತ್ರಾಜಗಾಮ ಸಹಸಾ ಸ ಭಿಕ್ಷುಃ ಪರಮೇಶ್ವರಃ ।
ಯತ್ರಾಸ್ತಿ ಸಂದೇಹವತೀ ದ್ವಿಜಸ್ತ್ರೀ ಜ್ಞಾತುಮಿಚ್ಛತಿ ॥ ೨೫ ॥

ಭಿಕ್ಷುವರ್ಯಸ್ಸ್ವರೂಪೋಽಸಾವವಿಜ್ಞಾತಗತಿಃ ಪ್ರಭುಃ ।
ತಾಮಾಹ ವಿಪ್ರವನಿತಾಂ ವಿಹಸ್ಯ ಕರುಣಾನಿಧಿಃ ॥ ೨೬ ॥

॥ ಭಿಕ್ಷುವರ್ಯ ಉವಾಚ ॥

ಸಂದೇಹಂ ಕುರು ನೋ ಚಿತ್ತೇ ವಿಪ್ರಭಾಮಿನಿ ಮಾ ಖಿದ ।
ರಕ್ಷೈನಂ ಬಾಲಕಂ ಪ್ರೀತ್ಯಾ ಸುಪವಿತ್ರಂ ಸ್ವಪುತ್ರಕಂ ॥ ೨೭ ॥

ಅನೇನ ಶಿಶುನಾ ಶ್ರೇಯಃ ಪ್ರಾಪ್ಸ್ಯಸೇ ನ ಚಿರಾತ್ಪರಂ ।
ಪುಷ್ಣೀಹಿ ಸರ್ವಥಾ ಹ್ಯೇನಂ ಮಹಾತೇಜಸ್ವಿನಂ ಶಿಶುಂ ॥ ೨೮ ॥

---

೨೫. ಇಂತು ಭಿಕ್ಷುಕನ ವೇಷವನ್ನು ತಳೆದ ಆ ಪರಮೇಶ್ವರನು ನಾನಾ ವಿಧವಾದ ಸಂದೇಹಗಳಿಗೆ ಸಿಲುಕಿ ನಿಜಾಂಶವನ್ನು ತಿಳಿಯಬೇಕೆಂದು ಬಯಸುತ್ತಿವರು ಆ ಬ್ರಾಹ್ಮಣಸ್ತ್ರೀಯು ಇದ್ದಲ್ಲಿಗೆ ಬೇಗನೆ ಬಂದನು.

೨೬. ತನ್ನ ನಡೆವಳಿಕೆಯನ್ನು ಯಾರೂ ಅರಿಯದಿರುವಂತಹ, ಭಿಕ್ಷುರೂಪ ಧಾರಿಯೂ, ಕರುಣಾಸಾಗರನೂ ಆದ ಆ ಪ್ರಭುವು ನಸುನಕ್ಕು ಆ ಬ್ರಾಹ್ಮಣಿಯನ್ನು ಕುರಿತು,

೨೭. ಎಲೈ ಬ್ರಾಹ್ಮಣಸ್ತ್ರೀಯೇ ನಿನ್ನ ಮನಸ್ಸಿನಲ್ಲಿ ಸಂದೇಹಪಡಬೇಡ. ವ್ಯಥೆಪಡಲೂ ಬೇಡ. ಪರಿಶುದ್ಧನಾದ ಈ ಮಗುವನ್ನು ಪ್ರೀತಿಯಿಂದ ನಿನ್ನ ಮಗ ನಂತೆ ಕಾಪಾಡು.

೨೮. ಈ ಮಗುವಿನಿಂದಲೇ ನೀನು ಅತಿಶಯವಾದ ಶ್ರೇಯಸ್ಸನ್ನು ಕೆಲವು ಕಾಲದಲ್ಲಿಯೇ ಪಡೆಯುವೆ. ಆದುದರಿಂದ ಹೇಗಾದರೂ ಮಾಡಿ ಮಹಾತೇಜಶ್ಶಾಲಿ ಯಾದ ಈ ಕುಮಾರನನ್ನು ಚೆನ್ನಾಗಿ ಪೋಷಣೆಮಾಡು ಎಂದನು.

॥ ನಂದೀಶ್ವರ ಉವಾಚ ॥

ಇತ್ಯುಕ್ತವಂತಂ ತಂ ಭಿಕ್ಷುಸ್ವರೂಪಂ ಕರುಣಾನಿಧಿಂ ।
ಸಾ ವಿಪ್ರವನಿತಾ ಶಂಭುಂ ಪ್ರೀತ್ಯಾ ಪಪ್ರಚ್ಛ ಸಾದರಂ ॥ ೨೯ ॥

॥ ವಿಪ್ರವನಿತೋವಾಚ ॥

ತ್ವದಾಜ್ಞಯೈನಂ ಬಾಲಂ ಹಿ ರಕ್ಷಯಿಷ್ಯಾಮಿ ಸ್ವಪುತ್ರವತ್ ।
ಪೋಷ್ಯಾಮಿ ನಾತ್ರ ಸಂದೇಹೋ ಮದ್ಭಾಗ್ಯಾತ್ತ್ವಮಿಹಾಗತಃ ॥ ೩೦ ॥

ತಥಾಪಿ ಜ್ಞಾತುಮಿಚ್ಛಾಮಿ ವಿಶೇಷೇಣ ತು ತತ್ತ್ವತಃ ।
ಕೋಽಯಂ ಕಸ್ಯ ಸುತಶ್ಚಾಯಂ ಕಸ್ತ್ವಮತ್ರ ಸಮಾಗತಃ ॥ ೩೧ ॥

ಮುಹುರ್ಮಮ ಸಮಾಯಾತಿ ಜ್ಞಾನಂ ಭಿಕ್ಷುವರ ಪ್ರಭೋ ।
ತ್ವಂ ಶಿವಃ ಕರುಣಾಸಿಂಧುಸ್ತ್ವದ್ಭಕ್ತೋಽಯಂ ಶಿಶುಃ ಪುರಾ ॥ ೩೨ ॥

---

೨೯. ಓ ಸನತ್ಕುಮಾರ, ಈ ರೀತಿಯಾಗಿ ಭಿಕ್ಷುರೂಪಧಾರಿಯಾದ ಕರುಣಾಸಾಗರನಾದ ಆ ಶಂಕರನು ನುಡಿಯಲು, ಆ ಬ್ರಾಹ್ಮಣ ಪತ್ನಿಯು ಪ್ರೀತಿಯಿಂದಲೂ ಆದರಪೂರ್ವಕವಾಗಿಯೂ ಆತನನ್ನು ಕುರಿತು ಇಂತೆಂದಳು.

೩೦ ನಿನ್ನ ಅಪ್ಪಣೆಯಂತೆಯೇ ಈ ಮಗುವನ್ನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಪೋಷಿಸುವೆನು. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ನನ್ನ ಭಾಗ್ಯದ ದೆಸೆಯಿಂದಲೇ ನೀನು ಇತ್ತಲಾಗಿ ಬಂದೆ.

೩೧. ಆದರೂ ಕೂಡ ಈ ಅಂಶದಲ್ಲಿ ವಿಶೇಷವಾಗಿ ನಿಜಾಂಶವನ್ನು ಅರಿಯ ಬೇಕೆಂದಿದ್ದೇನೆ. ಈ ಮಗುವು ಯಾರು ? ಯಾರ ಮಗನು ? ಇಲ್ಲಿಗೆ ಬಂದಿರುವ ನೀನು ತಾನೇ ಯಾರು ? ತಿಳಿಸು.

೩೨. ಎಲೈ ಭಿಕ್ಷುಕಾಗ್ರಣಿಯೇ, ನನಗೆ ಪುನಃಪುನಃ ಈರೀತಿ ತೋರುತ್ತಿರುವುದು. ಹೇ ಪ್ರಭು, ನೀನೇ ಕರುಣಾಸಾಗರನಾದ ಶ್ರೀ ಶಂಕರನು. ಈ ಹಸುಳೆಯು ಹಿಂದೆ ನಿನ್ನ ಭಕ್ತನಾಗಿದ್ದವನು.

ಕೇನಚಿತ್ಕರ್ಮದೋಷೇಣ ಸಂಪ್ರಾಪ್ತೋಽಯಂ ದಶಾಮಿಮಾಂ ।
ತದ್ಭುಕ್ತ್ವಾ ಪರಮಂ ಶ್ರೇಯಃ ಪ್ರಾಪ್ಸ್ಯತೇ ತ್ವದನುಗ್ರಹಾತ್ ॥ ೩೩ ॥

ತ್ವನ್ಮಾಯಯೈವ ಸಾಹಂ ವೈ ಮಾರ್ಗಭ್ರಷ್ಟಾ ವಿಮೋಹಿತಾ ।
ಆಗತಾ ಪ್ರೇಷಿತಾ ತ್ವತ್ತೋ ಹ್ಯಸ್ಯ ರಕ್ಷಣಹೇತುತಃ ॥ ೩೪ ॥

॥ ನಂದೀಶ್ವರ ಉವಾಚ ॥

ಇತಿ ತದ್ದರ್ಶನಪ್ರಾಪ್ತವಿಜ್ಞಾನಾಂ ವಿಪ್ರಕಾಮಿನೀಂ ।
ಜ್ಞಾತುಕಾಮಾಂ ವಿಶೇಷೇಣ ಪ್ರೋಚೇ ಭಿಕ್ಷುತನುಃಶ್ಶಿವಃ ॥ ೩೫ ॥

॥ ಭಿಕ್ಷುವರ್ಯ ಉವಾಚ ॥

ಶೃಣು ಪ್ರೀತ್ಯಾ ವಿಪ್ರಪತ್ನೀ ಬಾಲಸ್ಯಾಸ್ಯ ಪುರೇಹಿತಂ ।
ಸರ್ವಮಸ್ಯಸ್ಯ ಸುಪ್ರೀತ್ಯಾ ವಕ್ಷ್ಯತೇ ತತ್ತ್ವತೋಽನಘೇ ॥ ೩೬ ॥

---

೩೩. ಆತನು ಯಾವುದೋ ಒಂದು ಕರ್ಮಶೇಷದಿಂದ ಇಂತಹ ಅವಸ್ಥೆಯನ್ನು ಈಗ ಅನುಭವಿಸುತ್ತಿರುವನು. ಇದನ್ನು ಅನುಭವಿಸಿದನಂತರ ನಿನ್ನ ಅನುಗ್ರಹದಿಂದ ಮುಂದೆ ಪರಮಶ್ರೇಷ್ಠವಾದ ಶ್ರೇಯಸ್ಸನ್ನು ಪಡೆಯುವನು.

೩೪. ಈ ಮಗುವನ್ನು ಕಾಪಾಡುವ ಸಲುವಾಗಿಯೇ ನಾನು ನಿನ್ನ ಮಾಯೆಗೆ ಅಧೀನಳಾಗಿ ತಿಳಿಯದವಳಂತೆ ದಾರಿಗಾಣದೆ ತಪ್ಪಿ ನಿನ್ನಿಂದ ಪ್ರೇರಿಸಲ್ಪಟ್ಟು ಇಲ್ಲಿಗೆ ಬಂದಿರುವೆನು ಎಂದಳು.

೩೫. ಓ ಮುನೀಂದ್ರ, ಈರೀತಿ ತನ್ನನ್ನು ಸಂದರ್ಶಿಸಿದ ಮಾತ್ರದಿಂದಲೇ ದಿವ್ಯವಾದ ಜ್ಞಾನವನ್ನು ಪಡೆದಿರುವ ಮತ್ತು ಇನ್ನೂ ವಿವರವಾಗಿ ಎಲ್ಲ ಸಂಗತಿಯನ್ನೂ ತಿಳಿಯಬೇಕೆಂದಿರುವ ಆ ಬ್ರಾಹ್ಮಣಸ್ತ್ರೀಯನ್ನು ಕುರಿತು ಕಪಟಭಿಕ್ಷುವು ಇಂತೆಂದನು.

೩೬. ಎಲೈ ಬ್ರಾಹ್ಮಣಪತ್ನಿಯೇ, ಈ ಶಿಶುವಿನ ಪೂರ್ವಚರಿತವನ್ನು ಪ್ರೀತಿಯಿಂದ ಆಲಿಸು. ಎಲೈ ಪಾಪರಹಿತಳೇ, ಈತನ ಎಲ್ಲ ವೃತ್ತಾಂತವನ್ನೂ ಯಥಾರ್ಥವಾಗಿ ಪ್ರೀತಿಯಿಂದ ತಿಳಿಸುವೆನು.

ಸುತೋ ವಿದರ್ಭರಾಜಸ್ಯ ಶಿವಭಕ್ತಸ್ಯ ಧೀಮತಃ ।
ಅಯಂ ಸತ್ಯರಥಸ್ಯೈವ ಸ್ವಧರ್ಮನಿರತಸ್ಯ ಹಿ ॥ ೩೭ ॥

ಶೃಣು ಸತ್ಯರಥೋ ರಾಜಾ ಹತಃ ಶಾಲ್ವೈ ರಣೇ ಪರೈಃ ।
ತತ್ಪತ್ನೀ ನಿಶಿ ಸುವ್ಯಗ್ರಾ ನಿರ್ಯಯೌ ಸ್ವಗೃಹಾದ್ದ್ರುತಂ ॥ ೩೮ ॥

ಅಸೂತ ತನಯಂ ಚೈನಂ ಸಮಾಯಾತಾ ಪ್ರಗೇऽತ್ರ ಹಿ ।
ಸರೋವತೀರ್ಣಾ ತೃಷಯಾ ಗ್ರಸ್ತಾ ಗ್ರಾಹೇಣ ದೈವತಃ ॥ ೩೯ ॥

॥ ನಂದೀಶ್ವರ ಉವಾಚ ॥

ಇತಿ ತಸ್ಯ ಸಮುತ್ಪತ್ತಿಂ ತತ್ಪಿತುಃ ಸಂಗಮೇ ಮೃತಿಂ ।
ತನ್ಮಾತೃಮರಣಂ ಗ್ರಾಹಾತ್ಸರ್ವಂ ತಸ್ಯೈ ನ್ಯವೇದಯತ್ ॥ ೪೦ ॥

---

೩೭. ಈ ಶಿಶುವು ಮಹಾಶಿವಭಕ್ತನೂ ತನಗೆ ವಿಹಿತವಾದ ಧರ್ಮಗಳಲ್ಲೇ ಆಸಕ್ತನೂ ಮಹಾಜ್ಞಾನಿಯೂ ಆದ ವಿದರ್ಭದೇಶದ ಅರಸನಾದ ಸತ್ಯರಥನೆಂಬ ದೊರೆಯ ಮಗನು.

೩೮. ಆ ಸತ್ಯರಥನು ತನ್ನ ಶತ್ರುಗಳಾದ ಸಾಲ್ವರೊಡನೆ ಯುದ್ಧಮಾಡುತ್ತಿದ್ದಾಗ ಮಡಿದುಹೋದನು. ಆಗ ಅವನ ಹೆಂಡತಿಯು ಬಹುವಾಗಿ ಗಾಬರಿಗೊಂಡು ರಾತ್ರಿಯಹೊತ್ತಿನಲ್ಲಿ ತನ್ನ ಅರಮನೆಯನ್ನು ಬಿಟ್ಟು ಜಾಗ್ರತೆಯಾಗಿ ಹೊರಬಿದ್ದಳು.

೩೯. ಹಾಗೆ ಹೊರಬಿದ್ದು ಬೆಳಗಾಗುವವೇಳೆಗೆ ಇಲ್ಲಿಬಂದಳು. ಇಲ್ಲಿ ಈ ಕುವರನನ್ನು ಹೆತ್ತಳು. ಬಳಿಕ ಬಾಯಾರಿಕೆಯಿಂದ ನೀರುಕುಡಿಯಲೆಳಿಸಿ ಕೊಳಕ್ಕೆ ಇಳಿದಳು. ಆಗ ದೈವದುರ್ವಿಪಾಕದಿಂದ ಅಲ್ಲಿದ್ದ ಮೊಸಳೆಯು ಅವಳನ್ನು ನುಂಗಿಬಿಟ್ಟಿತು ಎಂದನು.

೪೦. ಓ ಮುನೀಂದ್ರ, ಇಂತು ಆ ಭಿಕ್ಷುವು, ಆಶಿಶುವು ಹುಟ್ಟಿದ ಬಗೆಯನ್ನೂ ಅವನ ತಂದೆಯು ಯುದ್ಧದಲ್ಲಿ ಮಡಿದುದನ್ನೂ, ಮತ್ತು ತಾಯಿಯು ಮೊಸಳೆಗೆ ಸಿಕ್ಕಿ ಸತ್ತುದನ್ನೂ ಆ ವಿಪ್ರಪತ್ನಿಗೆ ತಿಳಿಸಿದನು.

**ಅಥ ಸಾ ಬ್ರಾಹ್ಮಣೀ ಸಾ ಹಿ ವಿಸ್ಮಿತಾತಿ ಮುನೀಶ್ವರ ।**
**ಪುನಃ ಪಪ್ರಚ್ಛ ತಂ ಭಿಕ್ಷುಂ ಜ್ಞಾನಿನಂ ಸಿದ್ಧರೂಪಕಂ ॥ ೪೧ ॥**

**॥ ಬ್ರಾಹ್ಮಣ್ಯುವಾಚ ॥**

**ಸ ರಾಜ್ಞೋಽಸ್ಯ ಪಿತಾ ಭಿಕ್ಷೋ ವರಭೋಗಾಂತರೈ ವ ಹಿ ।**
**ಕಸ್ಮಾಚ್ಛಾಲ್ವೈಸ್ಸ್ವರಿಪುಭಿಸ್ಸ್ವಲ್ಪೇಹೈಶ್ಚ ವಿಘಾತಿತಃ ॥ ೪೨ ॥**

**ಕಸ್ಮಾದಸ್ಯ ಶಿಶೋರ್ಮಾತಾ ಗ್ರಾಹೇಣಾಶು ಸುಭಕ್ಷಿತಾ ।**
**ಕಸ್ಮಾದನಾಥೋಽಯಂ ಜಾತೋ ವಿಬಂಧುಶ್ಚೈವ ಜನ್ಮತಃ ॥ ೪೩ ॥**

**ಕಸ್ಮಾತ್ಸುತೋ ಮಮಾಪೀಹ ಸುದರಿದ್ರೋ ಹಿ ಭಿಕ್ಷುಕಃ ।**
**ಭವೇತ್ಕಥಂ ಸುಖಂ ಭಿಕ್ಷೋ ಪುತ್ರಯೋರನಯೋರ್ವದ ॥ ೪೪ ॥**

---

೪೧. ಅನಂತರ ಆ ಬ್ರಾಹ್ಮಣಸ್ತ್ರೀಯು ವಿಶೇಷವಾಗಿ ಆಶ್ಚರ್ಯವನ್ನು ಹೊಂದಿದವಳಾಗಿ ಸಿದ್ಧರೂಪಧಾರಿಯೂ ಜ್ಞಾನಿಯೂ ಆದ ಆ ಭಿಕ್ಷುವನ್ನು ಮತ್ತೆ ಈರೀತಿ ಕೇಳಿದಳು.

೪೨. ಓ ಭಿಕ್ಷುವರ್ಯ, ಈ ಹಸುಳೆಯ ತಂದೆಯಾದ ಆ ಅರಸು ಉತ್ತಮವಾದ ಭೋಗಗಳನ್ನು ಅನುಭವಿಸುವುದರೊಳಗಾಗಿಯೇ ಅಲ್ಪಬಲರಾದ ಆ ಸಾಲ್ವರೆಂಬ ವೈರಿಗಳಿಂದ ಹತನಾದುದೇಕೆ ?

೪೩. ಏತಕ್ಕೋಸ್ಕರ ಈ ಶಿಶುವಿನ ತಾಯಿಯು ಅಷ್ಟುಬೇಗನೆ ಮೊಸಳೆಯ ಬಾಯಿಗೆ ತುತ್ತಾದಳು ? ಏತರ ಸಲುವಾಗಿ ಈ ಶಿಶುವು ಹುಟ್ಟುವಾಗಲೇ ಬಂಧುಗಳನ್ನೆಲ್ಲಾ ಕಳೆದುಕೊಂಡು ಅನಾಥವಾಗಿಬಿಟ್ಟಿತು ?

೪೪. ನನ್ನ ಈ ಮಗನೂ ಕೂಡ ಏತಕ್ಕೋಸ್ಕರ ಕಡುಬಡವನಾಗಿ ಹುಟ್ಟಿ ತಿರುಪೆಮಾಡುತ್ತಿರುವನು ? ಎಲೈ ಭಿಕ್ಷುವೇ, ಈ ಇಬ್ಬರು ಮಕ್ಕಳಿಗೂ ಹೇಗೆ ಸುಖವು ಉಂಟಾಗುವುದು ? ಇದನ್ನು ನನಗೆ ತಿಳಿಸು ಎಂದಳು.

॥ ನಂದೀಶ್ವರ ಉವಾಚ ॥

ಇತಿ ತಸ್ಯಾ ವಚಃ ಶ್ರುತ್ವಾ ಸ ಭಿಕ್ಷುಃ ಪರಮೇಶ್ವರಃ ।
ವಿಪ್ರಪತ್ನ್ಯಾಃ ಪ್ರಸನ್ನಾತ್ಮಾ ಪ್ರೋವಾಚ ವಿಹಸಂಶ್ಚ ತಾಂ ॥ ೪೫ ॥

॥ ಭಿಕ್ಷುವರ್ಯ ಉವಾಚ ॥

ವಿಪ್ರಪತ್ನಿ ವಿಶೇಷೇಣ ಸರ್ವಪ್ರಶ್ನಾನ್ವದಾಮಿ ತೇ ।
ಶೃಣು ತ್ವಂ ಸಾವಧಾನೇನ ಚರಿತ್ರಮಿದಮುತ್ತಮಂ ॥ ೪೬ ॥

ಅಮುಷ್ಯ ಬಾಲಸ್ಯ ಪಿತಾ ಸ ವಿದರ್ಭಮಹೀಪತಿಃ ।
ಪೂರ್ವಜನ್ಮನಿ ಪಾಂಡ್ಯೋಽಸೌ ಬಭೂವ ನೃಪಸತ್ತಮಃ ॥ ೪೭ ॥

ಸ ಶೈವನೃಪತಿರ್ಧರ್ಮಾತ್ಮಾಪಾಲಯನ್ನಿಖಿಲಾಂ ಮಹೀಂ ।
ಸ್ವಪ್ರಜಾ ರಂಜಯಾಮಾಸ ಸರ್ವೋಪದ್ರವನಾಶನಃ ॥ ೪೮ ॥

---

೪೫. ಎಲೈ ಮುನಿಯೇ, ಈರೀತಿ ಆ ಬ್ರಾಹ್ಮಣಪತ್ನಿಯು ಹೇಳಿದ ಮಾತನ್ನು ಕೇಳಿ ಭಿಕ್ಷುಕರೂಪಧಾರಿಯಾದ ಆ ಶಂಕರನು ಪ್ರಸನ್ನನಾಗಿ ನಸುನಗುತ್ತಾ ಆ ವಿಪ್ರಪತ್ನಿಯನ್ನು ಕುರಿತು

೪೬. ಎಲೈ ಬ್ರಾಹ್ಮಣಸ್ತ್ರೀಯೇ, ನಿನ್ನ ಪ್ರಶ್ನೆಗಳಿಗೆಲ್ಲಾ ವಿವರವಾಗಿ ಉತ್ತರವನ್ನು ತಿಳಿಸುವೆನು. ಗಮನವಿಟ್ಟು ಈ ಉತ್ತಮವಾದ ಚರಿತ್ರೆಯನ್ನು ಕೇಳು.

೪೭. ಈ ಹಸುಳೆಯ ತಂದೆಯಾದ ವಿದರ್ಭದೇಶದ ಅರಸು ಹಿಂದಿನ ಜನ್ಮದಲ್ಲಿ ಪಾಂಡ್ಯದೇಶದ ಅರಸನಾಗಿದ್ದನು.

೪೮. ಶಿವಭಕ್ತಾಗ್ರೇಸರನೂ, ಧರ್ಮಾತ್ಮನೂ, ಒದಗುವ ಎಲ್ಲ ಉಪದ್ರವಗಳನ್ನು ಪರಿಹರಿಸುವವನೂ ಆದ ಆ ಪಾಂಡ್ಯಭೂಪಾಲನು ಭೂಮಂಡಲವೆಲ್ಲವನ್ನೂ ಆಳುತ್ತಾ ತನ್ನ ಪ್ರಜೆಗಳನ್ನು ಸಂತೋಷಪಡಿಸುತ್ತಿದ್ದನು.

ಕದಾಚಿತ್ಸ ಹಿ ಸರ್ವೇಶಂ ಪ್ರದೋಷೇ ಪರ್ಯಪೂಜಯತ್ ।
ತ್ರಯೋದಶ್ಯಾಂ ನಿರಾಹಾರೋ ದಿವಾನಕ್ತವ್ರತೀ ಶಿವಂ ॥ ೪೯ ॥

ತಸ್ಯ ಪೂಜಯತಃ ಶಂಭುಂ ಪ್ರದೋಷೇ ಗಿರಿಶಂ ರತೇ ।
ಮಹಾನ್ಸ್ವಬ್ದೋ ಬಭೂವಾಥ ವಿಕಟಸ್ಸರ್ವಥಾ ಪುರೇ ॥ ೫೦ ॥

ತಮಾಕರ್ಣ್ಯ ರವಂ ಸೋಽಥ ರಾಜಾ ತ್ಯಕ್ತ್ವಾಶಿವಾರ್ಚನಃ ।
ರಿಪ್ವಾಗಮನಶಂಕಾತೋ ನಿರ್ಯಯೌ ಭವನಾದ್ಬಹಿಃ ॥ ೫೧ ॥

ಏತಸ್ಮಿನ್ನೇವ ಕಾಲೇ ತು ತಸ್ಯಾಮಾತ್ಯೋ ಮಹಾಬಲೀ ।
ಗೃಹೀತಶಸ್ತ್ರಸಾಮಂತೋ ರಾಜಾಂತಿಕಮುಪಾಯಯೌ ॥ ೫೨ ॥

ತಂ ದೃಷ್ಟ್ವಾ ಶತ್ರುಸಾಮಂತಂ ಮಹಾಕ್ರೋಧೇನ ವಿಹ್ವಲಃ ।
ಅವಿಚಾರ್ಯ ನೃಪಃ ತಸ್ಯ ಶಿರಶ್ಛೇದಮಕಾರಯತ್ ॥ ೫೩ ॥

---

೪೯. ಒಂದಾನೊಂದುದಿವಸ ತ್ರಯೋದಶಿ ತಿಥಿಯಾಗಲು ನಕ್ತವ್ರತಶೀಲನಾದ ಆ ನರಪಾಲನು ಹಗಲುಹೊತ್ತು ಯಾವ ಆಹಾರವನ್ನೂ ತಗೆದುಕೊಳ್ಳದೆ ಪ್ರದೋಷ ಕಾಲದಲ್ಲಿ ಸರ್ವೇಶ್ವರನಾದ ಶಂಕರನನ್ನು ಪೂಜಿಸಿದನು.

೫೦. ಎಲೈ ಮುನಿಯೇ, ಈರೀತಿ ಪ್ರದೋಷಸಮಯದಲ್ಲಿ ಶಿವನನ್ನು ಪೂಜಿಸುತ್ತಿರಲು ಹಿಂದೆ ಎಲ್ಲೂ ಇಲ್ಲದಂತಹ ಮಹಾಭಯಂಕರವಾದ ಗದ್ದಲವು ಆತನ ನಗರದಲ್ಲಿ ಉಂಟಾಯಿತು.

೫೧. ಆ ಗದ್ದಲದ ಸದ್ದನ್ನು ಕೇಳಿ ಆ ದೊರೆಯು ಶತ್ರುಗಳು ಮುತ್ತಿಗೆ ಹಾಕಿರಬಹುದೆಂದು ಭಾವಿಸಿ ಮಾಡುತ್ತಿದ್ದ ಪೂಜೆಯನ್ನು ಅಲ್ಲಿಗೇ ಬಿಟ್ಟುಬಿಟ್ಟು ಮನೆಯ ಹೊರಗೆ ಬಂದನು.

೫೨. ಈ ಸಮಯಕ್ಕೆ ಸರಿಯಾಗಿ ಮಹಾಬಲಾಢ್ಯನಾದ ಅವನ ಮಂತ್ರಿಯು ಆಯುಧಗಳನ್ನು ಹಿಡಿದು ಸಿದ್ಧವಾಗಿ ಬಂದಿರುವ ಸಾಮಂತರಾಜರೊಡನೆ ಆ ದೊರೆಯ ಬಳಿಗೆ ಬಂದನು.

೫೩. ಅವನನ್ನು ನೋಡಿದೊಡನೆಯೇ ಇವನೇ ಶತ್ರುವೆಂದೆಣಿಸಿ ವಿಪರೀತವಾದ ಕೋಪದಿಂದ ಹುಚ್ಚನಾದಂತಾಗಿ, ನ್ಯಾಯವೇನೆಂದು ವಿಚಾರಮಾಡದೆಯೇ ಅವನ ತಲೆಯನ್ನು ಹೊಯಿಸಿಬಿಟ್ಟನು.

ಅಸಮಾಪ್ಯೇಶಪೂಜಾಂ ತಾಮಶುಚಿರ್ನಷ್ಟಧೀರ್ನೃಪಃ ।
ರಾತ್ರೌ ಚಕಾರ ಸುಪ್ರೀತ್ಯಾ ಭೋಜನಂ ನಷ್ಟಮಂಗಲಃ　　॥ ೫೪ ॥

ವಿದರ್ಭೇ ಸೋಽಭವದ್ರಾಜಾ ಜನ್ಮನೀಹ ಶಿವವ್ರತೀ ।
ಶಿವಾರ್ಚನಾಂತರಾಯೇಣ ಪರೈರ್ಭೋಗಾಂತರೇ ಹತಃ　　॥ ೫೫ ॥

ತತ್ಪುತ್ರೋ ಯಃ ಪೂರ್ವಭವೇ ಸೋಽಸ್ಮಿನ್ಜನ್ಮನಿ ತತ್ಸುತಃ ।
ಅಹಮೇವ ಹತೈಶ್ವರ್ಯಃ ಶಿವಪೂಜಾವ್ಯತಿಕ್ರಮಾತ್　　॥ ೫೬ ॥

ಅಸ್ಯ ಮಾತಾ ಪೂರ್ವಭವೇ ಸಪತ್ನೀಂ ಛದ್ಮನಾಹರತ್ ।
ಭಕ್ಷಿತಾ ತೇನ ಪಾಪೇನ ಗ್ರಾಹೇಣಾಽಸ್ಮಿನ್ ಭವೇ ಹಿ ಸಾ　　॥ ೫೭ ॥

---

೫೪. ಶಂಕರನ ಪೂಜೆಯನ್ನು ಸಮಾಪ್ತಿಗೊಳಿಸದೆ ಮತಿಗೆಟ್ಟ ಮಂಗಲಹೀನನಾದ ಆ ದೊರೆಯು ಅಶುಚಿಯಾಗಿಯೇ ರಾತ್ರಿಯಲ್ಲಿ ಸಂತೋಷದಿಂದ ಊಟವನ್ನೂ ಮಾಡಿದನು.

೫೫. ಶಿವನ ವ್ರತವನ್ನು ನಡೆಸುತ್ತಿದ್ದುದರಿಂದ ಈ ಜನ್ಮದಲ್ಲಿ ಅವನು ವಿದರ್ಭದೇಶದ ಅರಸಾಗಿ ಹುಟ್ಟಿದನು. ಶಿವಪೂಜೆಯನ್ನು ಅರ್ಧದಲ್ಲೇ ನಿಲ್ಲಿಸಿಬಿಟ್ಟುದುದರಿಂದ ಈಗ ಸುಖಭೋಗಗಳನ್ನು ಅನುಭವಿಸುವಷ್ಟರಲ್ಲಿಯೇ ಶತ್ರುಗಳಿಂದ ಕೊಲ್ಲಲ್ಪಟ್ಟನು.

೫೬. ಪೂರ್ವಜನ್ಮದಲ್ಲಿ ಯಾವನು ಆ ದೊರೆಗೆ ಮಗನಾಗಿದ್ದನೋ ಅವನೇ ಈಗ ಐಶ್ವರ್ಯವನ್ನೆಲ್ಲಾ ಕಳೆದುಕೊಂಡು ನಿರ್ಗತಿಕವಾದ ಆತನ ಮಗನಾದ ಈ ಹಸುಳೆಯಾಗಿರುವನು. ಇದೆಲ್ಲವೂ ಶಿವಪೂಜೆಗೆ ಒದಗಿದ ಅಡಚಣೆಯಿಂದಾದುದು.

೫೭. ಈ ಹಸುಳೆಯ ತಾಯಿಯೂ ಹಿಂದಿನ ಜನ್ಮದಲ್ಲಿ ತನ್ನ ಸವತಿಯನ್ನು ಮೋಸದಿಂದ ಕೊಲ್ಲಿಸಿದ್ದಳು. ಆ ಪಾಪವಿಶೇಷದ ಫಲದಿಂದ ಈಗ ಅವಳು ಮೊಸಳೆಯ ಬಾಯಿಗೆ ತುತ್ತಾದಳು.

ಏಷಾ ಪ್ರವೃತ್ತಿರೇತೇಷಾಂ ಭವತ್ಯೈ ಪರಿಕೀರ್ತಿತಾ ।
ಅನರ್ಚಿತಾ ಶಿವಾಭಕ್ತ್ಯಾ ಸ್ಪ್ರಾಪ್ನುವಂತಿ ದರಿದ್ರತಾಂ ॥ ೫೮ ॥

ಏಷ ತೇ ತನಯಃ ಪೂರ್ವಜನ್ಮನಿ ಬ್ರಾಹ್ಮಣೋತ್ತಮಃ ।
ಪ್ರತಿಗ್ರಹೈರ್ವಯೋ ನಿನ್ಯೇ ನ ಯಜ್ಞಾದ್ಯೈಸ್ಸುಕರ್ಮಭಿಃ ॥ ೫೯ ॥

ಅತೋ ದಾರಿದ್ರ್ಯಮಾಪನ್ನಃ ಪುತ್ರಸ್ತೇ ದ್ವಿಜಭಾಮಿನಿ ।
ತದ್ದೋಷಪರಿಹಾರಾರ್ಥಂ ಶರಣಂ ಶಂಕರಂ ವ್ರಜ ॥ ೬೦ ॥

ಏತಾಭ್ಯಾಂ ಖಲು ಬಾಲಾಭ್ಯಾಂ ಶಿವಪೂಜಾ ವಿಧೀಯತಾಂ ।
ಉಪವೀತಾನಂತರಂ ಹಿ ಶಿವಃ ಶ್ರೇಯಃ ಕರಿಷ್ಯತಿ ॥ ೬೧ ॥

॥ ನಂದೀಶ್ವರ ಉವಾಚ ॥

ಇತಿ ತಾಮುಪದಿಶ್ಯಾಥ ಭಿಕ್ಷುವರ್ಯತನುಃ ಶಿವಂ ।
ಸ್ವರೂಪಂ ದರ್ಶಯಾಮಾಸ ಪರಮಂ ಭಕ್ತವತ್ಸಲಃ ॥ ೬೨ ॥

---

೫೮. ಇವರೆಲ್ಲರ ಪೂರ್ವಚರಿತ್ರವೆಲ್ಲವನ್ನೂ ನಿನಗೆ ತಿಳಿಸಿದೆನು. ಯಾರು ಶಿವನಲ್ಲಿ ಭಕ್ತಿಯಿಡದೆ, ಆತನನ್ನು ಪೂಜಿಸದೆ ಇರುವರೋ ಅವರು ದಟ್ಟದರಿದ್ರರಾಗುವರು.

೫೯. ಈ ನಿನ್ನ ಮಗನು ಹಿಂದಿನ ಜನ್ಮದಲ್ಲಿ ಬ್ರಾಹ್ಮಣಶ್ರೇಷ್ಠನಾಗಿ ಜನಿಸಿದ್ದನು. ಆದರೆ ತನ್ನ ಪುರುಷಾಯುಸ್ಸನ್ನೆಲ್ಲಾ ಇನ್ನೊಬ್ಬರಿಂದ ದಾನವನ್ನು ಹಿಡಿಯುವುದರಲ್ಲೇ ಕಳೆದನಲ್ಲದೆ ಯಜ್ಞಯಾಗಾದಿ ಸತ್ಕರ್ಮಗಳನ್ನು ಮಾಡಿ ದೇವಬ್ರಾಹ್ಮಣರನ್ನು ದಣಿಸಲಿಲ್ಲ.

೬೦-೬೧. ಎಲೈ ಬ್ರಾಹ್ಮಣಸ್ತ್ರೀಯೇ, ಆದುದರಿಂದ ನಿನ್ನ ಮಗನು ದರಿದ್ರನಾಗಿ ಹುಟ್ಟಿದನು. ಆ ದೋಷಪರಿಹಾರಕ್ಕಾಗಿ ಶ್ರೀ ಶಂಕರನನ್ನು ಮರೆಹೊಗುವವಳಾಗು. ಈ ಇಬ್ಬರು ಬಾಲಕರಿಂದಲೂ ಶಿವನ ಪೂಜೆಯನ್ನು ಮಾಡಿಸು. ಉಪನಯನವು ಬೆಳೆದಮೇಲೆಇವರೀರ್ವರಿಗೂ ಶಿವನು ಶ್ರೇಯಸ್ಸನ್ನು ಕರುಣಿಸುವನು ಎಂದನು.

೬೨. ಎಲೈ ಮುನಿಯೇ, ಈರೀತಿ ಭಿಕ್ಷು (ಸನ್ಯಾಸಿ) ರೂಪಧಾರಿಯಾದ ಆ ಶಿವನು ಭಕ್ತವತ್ಸಲನಾದುದರಿಂದ ಆ ಬ್ರಾಹ್ಮಣಪತ್ನಿಗೆ ತನ್ನ ದಿವ್ಯವಾದ ಸ್ವರೂಪವನ್ನು ತೋರ್ಪಡಿಸಿದನು.

ಅಥ ಸಾ ವಿಪ್ರವನಿತಾ ಜ್ಞಾತ್ವಾ ತಂ ಶಂಕರಂ ಪ್ರಭುಂ ।
ಸುಪ್ರಣಮ್ಯ ಹಿ ತುಷ್ಟಾವ ಪ್ರೇಮ್ಣಾ ಗದ್ಗದಯಾ ಗಿರಾ　　　　॥ ೬೩ ॥

ತತಸ್ಸ ಭಗವಾನ್ ಶಂಭುರ್ಧೃತಭಿಕ್ಷುತನುರ್ದ್ರುತಂ ।
ಪಶ್ಯಂತ್ಯಾ ವಿಪ್ರಪತ್ನ್ಯಾಸ್ತು ತತ್ರೈವಾಂತರಧೀಯತ　　　　॥ ೬೪ ॥

ಅಥ ತಸ್ಮಿನ್ಗತೇ ಭಿಕ್ಷೌ ವಿಶ್ರಬ್ಧಾ ಬ್ರಾಹ್ಮಣೀ ಚ ಸಾ ।
ತಮರ್ಭಕಂ ಸಮಾದಾಯ ಸಸ್ವಪುತ್ರಾ ಗೃಹಂ ಯಯೌ　　　　॥ ೬೫ ॥

ಏಕಚಕ್ರಾಹ್ವಯೇ ರಮ್ಯೇ ಗ್ರಾಮ್ಯೇ ಕೃತನಿಕೇತನಾ ।
ಸ್ವಪುತ್ರಂ ರಾಜಪುತ್ರಂ ಚ ವರಾನ್ನೈಶ್ಚ ವ್ಯವರ್ಧಯತ್　　　　॥ ೬೬ ॥

ಬ್ರಾಹ್ಮಣೈಃ ಕೃತಸಂಸ್ಕಾರೌ ಕೃತೋಪನಯನೌ ಚ ತೌ ।
ವವೃಧಾತೇ ಸ್ವಗೇಹೇ ಚ ಶಿವಪೂಜನತತ್ಪರೌ　　　　॥ ೬೭ ॥

---

೬೩. ಬಳಿಕ ಆ ಬ್ರಾಹ್ಮಣ ಸ್ತ್ರೀಯು ತಾನು ಊಹಿಸಿದ್ದಂತೆ ಆ ಭಿಕ್ಷುವು ನಿಜವಾಗಿಯೂ ಸಾಕ್ಷಾತ್ ಶಿವನೆಂದು ಅರಿತು ಭಕ್ತಿಯಿಂದಲೂ ಪ್ರೇಮದಿಂದಲೂ ನಮಸ್ಕರಿಸಿ ಗದ್ಗದಕಂಠದಿಂದ ಸ್ತೋತ್ರಮಾಡಿದಳು

೬೪. ಬಳಿಕ ಭಿಕ್ಷುವೇಷಧಾರಿಯಾದ ಆ ಶಂಕರನು ಆ ಬ್ರಾಹ್ಮಣಿಯು ನೋಡುತ್ತಿರುವಂತೆಯೇ ಅಲ್ಲಿ ಅಂತರ್ಧಾನನಾದನು

೬೫ ಅನಂತರ ಆ ಬ್ರಾಹ್ಮಣಸ್ತ್ರೀಯು ಶಿವನ ಮಾತಿನಲ್ಲಿ ನಂಬುಗೆಯುಳ್ಳವಳಾಗಿ ಆ ಮಗುವನ್ನೆತ್ತಿಕೊಂಡು ತನ್ನ ಮಗನೊಡನೆ ಮನೆಗೆ ಬಂದಳು.

೬೬. ಮನೋಹರವಾದ ಏಕಚಕ್ರವೆಂಬ ಪುರದಲ್ಲಿ ಮನೆಮಾಡಿದ್ದ ಆ ಬ್ರಾಹ್ಮಣಪತ್ನಿಯು ತನ್ನ ಮಗನನ್ನೂ ಆ ರಾಜಪುತ್ರನನ್ನೂ ಸೊಗಸಾದ ಊಟ ಉಪಚಾರಗಳಿಂದ ಬೆಳೆಸಿದಳು.

೬೭. ಆ ಬಾಲಕರಿಬ್ಬರಿಗೂ ಬ್ರಾಹ್ಮಣರು ವಿಧಿವತ್ತಾಗಿ ಜಾತಕರ್ಮಾದಿ ಸಂಸ್ಕಾರಗಳನ್ನು ನಡೆಸಿದರು. ಕಾಲಕ್ರಮದಲ್ಲಿ ಅವರಿಗೆ ಉಪನಯನವೂ ಜರುಗಿತು. ಅವರು ಸದಾ ಶಿವಪೂಜೆಯಲ್ಲಿ ನಿರತರಾಗಿ ತಮ್ಮ ಮನೆಯಲ್ಲಿ ಬೆಳೆಯುತ್ತಿದ್ದರು.

ತೌ ಶಾಂಡಿಲ್ಯಮುನೇಸ್ತಾತ ನಿದೇಶಾನ್ನಿಯಮಸ್ಥಿತೌ ।
ಪ್ರದೋಷೇ ಚಕ್ರತುಃ ಶಂಭೋಃ ಪೂಜಾಂ ಕೃತ್ವಾ ವ್ರತಂ ಶುಭಂ ॥ ೬೮ ॥

ಕದಾಚಿದ್ದ್ವಿಜಪುತ್ರೇಣ ವಿನಾಽಸೌ ದ್ವಿಜನಂದನಃ ।
ನದ್ಯಾಂ ಸ್ನಾತುಂ ಗತಃ ಪ್ರಾಪ ನಿಧಾನಕಲಶಂ ವರಂ ॥ ೬೯ ॥

ಏವಂ ಪೂಜಯತೋಃ ಶಂಭುಂ ರಾಜದ್ವಿಜಕುಮಾರಯೋಃ ।
ಸುಖೇನೈವ ವ್ಯತೀಯಾಯ ತಯೋರ್ಮಾಸಚತುಷ್ಟಯಂ ॥ ೭೦ ॥

ಏವಮರ್ಚಯತೋಃ ಶಂಭುಂ ಭೂಯೋಽಪಿ ಪರಯಾ ಮುದಾ ।
ಸಂವತ್ಸರೋ ವ್ಯತೀಯಾಯ ತಸ್ಮಿನ್ನೇವ ತಯೋರ್ಗೃಹೇ ॥ ೭೧ ॥

ಸಂವತ್ಸರೇ ವ್ಯತಿಕ್ರಾಂತೇ ಸ ರಾಜತನಯೋ ಮುನೇ ।
ಗತ್ವಾ ವನಾಂತೇ ವಿಪ್ರೇಣ ಶಿವಸ್ಯಾನುಗ್ರಹಾದ್ವಿಭೋಃ ॥ ೭೨ ॥

---

೬೮. ಅಪ್ಪಾ ಮುನಿಯೇ, ಅವರೀರ್ವರೂ ಶಾಂಡಿಲ್ಯಮುನಿಯ ಅಪ್ಪಣೆಯ ಮೇರೆಗೆ ಮಹಾನಿಯಮವನ್ನು ಹಿಡಿದು ಪ್ರದೋಷಕಾಲದಲ್ಲಿ ಶಿವನನ್ನು ಪೂಜಿಸುತ್ತ ವ್ರತವನ್ನು ಕೈಗೊಂಡರು.

೬೯. ಒಂದಾನೊಂದುಸಲ ರಾಜಕುಮಾರನು ಜೊತೆಯಲ್ಲಿರುವಾಗ ಆ ಬ್ರಾಹ್ಮಣನ ಪುತ್ರನು ನದಿಯ ಸ್ನಾನಕ್ಕೆ ಹೊರಟನು. ಆಗ ಬಹು ಭಾರಿಯಾದ ಹಣದ ಬಿಂದಿಗೆಯು ಅವನಿಗೆ ದೊರೆಯಿತು.

೭೦. ಈರೀತಿಯಾಗಿ ಆ ದ್ವಿಜಕುಮಾರನೂ ರಾಜಪುತ್ರನೂ ಶಿವನನ್ನು ಪೂಜಿಸುತ್ತಿರಲು ನಾಲ್ಕುತಿಂಗಳು ಸುಖವಾಗಿ ಕಳೆದುಹೋಯಿತು.

೭೧. ಇದೇರೀತಿ ಮಹಾಸಂತೋಷದಿಂದ ಆ ಪರಶಿವನನ್ನು ಮತ್ತೆ ಅರ್ಚಿಸುತ್ತಿರಲು ಅವರೀರ್ವರಿಗೂ ಆ ಮನೆಯಲ್ಲಿರುವಂತೆಯೇ ಇನ್ನೂ ಒಂದು ವರ್ಷವು ಕಳೆಯಿತು.

೭೨-೭೩. ಎಲೈ ಮುನಿಯೇ, ಆ ಸಂವತ್ಸರವು ಕಳೆದನಂತರ ಒಂದಾನೊಂದು ಸಲ ಆ ರಾಜಪುತ್ರನು ಆ ಬ್ರಾಹ್ಮಣಕುಮಾರನೊಡನೆ ಕಾಡಿನಲ್ಲಿ ಹೋಗುತ್ತಿದ್ದಾಗ ಶಿವಾನುಗ್ರಹದಿಂದ ಅಕಸ್ಮಾತ್ತಾಗಿ ಅಲ್ಲಿಗೆ ಬಂದ ಗಂಧರ್ವಕುಮಾರಿಯೊಬ್ಬಳನ್ನು

ಅಕಸ್ಮಾದಾಗತಾಂ ತತ್ರ ದತ್ತಾಂ ತಜ್ಜನಕೇನ ಹ ।
ವಿವಾಹ್ಯ ಗಂಧರ್ವಸುತಾಂ ಚಕ್ರೇ ರಾಜ್ಯಮಕಂಟಕಂ ॥ ೭೩ ॥

ಯಾ ವಿಪ್ರವನಿತಾ ಪೂರ್ವಂ ತಮಪುಷ್ಣಾತ್ಸ್ವಪುತ್ರವತ್ ।
ಸೈವ ಮಾತಾಭವತ್ತಸ್ಯ ಸ ಭ್ರಾತಾ ದ್ವಿಜನಂದನಃ ॥ ೭೪ ॥

ಇತ್ಥಮಾರಾಧ್ಯ ದೇವೇಶಂ ಧರ್ಮಗುಪ್ತಾಹ್ವಯಸ್ಸ ವೈ ।
ವಿದರ್ಭವಿಷಯೇ ರಾಜ್ಞ್ಯಾ ತಯಾ ಭೋಗಂ ಚಕಾರ ಹ ॥ ೭೫ ॥

ಭಿಕ್ಷುವರ್ಯಾವತಾರಸ್ತೇ ವರ್ಣಿತಶ್ಚ ಮಯಾಧುನಾ ।
ಶಿವಸ್ಯ ಧರ್ಮಗುಪ್ತಾಹ್ವನೃಪಬಾಲಸುಖಪ್ರದಃ ॥ ೭೬ ॥

---

ಕಂಡನು. ಬಳಿಕ ಅವಳ ತಂದೆಯಾದ ಗಂಧರ್ವನು ಆ ಕುಮಾರಿಯನ್ನು ತನಗೆ ಮದುವೆಮಾಡಿಕೊಡಲು ಅವನನ್ನು ಕೈಹಿಡಿದು ನಿಷ್ಕಂಟಕವಾಗಿ ರಾಜ್ಯಭಾರವನ್ನು ಮಾಡತೊಡಗಿದನು.

೭೪. ಯಾವ ಬ್ರಾಹ್ಮಣಪತ್ನಿಯು ಆ ರಾಜಕುಮಾರನನ್ನು ತನ್ನ ಮಗನಂತೆ ಸಾಕಿ ಸಲಹಿದಳೋ ಆಕೆಯನ್ನೇ ತನ್ನ ಸ್ವಂತ ತಾಯಿಯಂತೆ ಎಣಿಸಿದನು ಮತ್ತು ಆ ಬ್ರಾಹ್ಮಣಕುಮಾರನನ್ನು ತನ್ನ ಒಡಹುಟ್ಟಿದ ಅಣ್ಣನಂತೆ ಭಾವಿಸಿದನು

೭೫. ಈರೀತಿಯಾಗಿ ಧರ್ಮಗುಪ್ತನೆಂಬ ಆ ರಾಜಕುಮಾರನು ಶಿವಪೂಜಾ ಪ್ರಭಾವದಿಂದ ತನ್ನ ತಂದೆಯದಾದ ವಿದರ್ಭದೇಶದ ಆಡಳಿತವನ್ನು ನಡೆಸುತ್ತಾ ತನ್ನ ಪ್ರಿಯೆಯಾದ ಗಂಧರ್ವನಂದಿನಿಯೊಂದಿಗೆ ಅನೇಕ ಭೋಗಗಳನ್ನು ಅನುಭವಿಸಿದನು.

೭೬. ಈ ರೀತಿಯಾಗಿ ನಿನಗೆ ಧರ್ಮಗುಪ್ತನೆಂಬ ರಾಜಕುಮಾರನಿಗೆ ಸುಖ ಸಂಪದಗಳನ್ನು ಕರುಣಿಸಿದ ಶಿವನ ಭಿಕ್ಷುವರ್ಯಾವತಾರವನ್ನು ಈಗ ವರ್ಣಿಸಿದೆನು.

ಏತದಾಖ್ಯಾನಮನಘಂ ಪವಿತ್ರಂ ಪಾವನಂ ಮಹತ್ ।
ಧರ್ಮಾರ್ಥಕಾಮಮೋಕ್ಷಾಣಾಂ ಸಾಧನಂ ಸರ್ವಕಾಮದಂ ॥ ೭೭ ॥

ಯ ಏತಚ್ಛೃಣುಯಾನ್ನಿತ್ಯಂ ಶ್ರಾವಯೇದ್ವಾ ಸಮಾಹಿತಃ ।
ಸ ಭುಕ್ತ್ವೇಹಾಖಿಲಾನ್ಕಾಮಾನ್ ಸೋಽನ್ತೇ ಶಿವಪುರಂ ವ್ರಜೇತ್ ॥ ೭೮ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಭಿಕ್ಷುವರ್ಯಾಹ್ವಶಿವಾವತಾರವರ್ಣನಂ ನಾಮ
ಏಕೋನತ್ರಿಂಶೋಽಧ್ಯಾಯಃ

---

೭೭. ಈ ಚರಿತ್ರವು ನಿಷ್ಕಲಂಕವಾದುದು, ಪರಿಶುದ್ಧವಾದುದು, ಕೇಳಿದವರನ್ನೂ ಪಾವನಗೊಳಿಸುವುದು, ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕುವಿಧವಾದ ಪುರುಷಾರ್ಥಗಳಿಗೂ ಸಾಧಕವಾದುದು, ಎಲ್ಲ ಇಷ್ಟಾರ್ಥಗಳನ್ನೂ ಕರುಣಿಸುವಂಥದು.

೭೮. ಈ ಚರಿತ್ರವನ್ನು ಯಾವಾತನು ಪ್ರತಿನಿತ್ಯವೂ ಶ್ರವಣಮಾಡುವನೋ ಅಥವಾ ಮತ್ತೊಬ್ಬರಿಗೆ ಶ್ರವಣಮಾಡಿಸುವನೋ ಆತನು ಈ ಲೋಕದಲ್ಲಿ ತಾನು ಬಯಸಿದ ಎಲ್ಲ ಭೋಗಗಳನ್ನೂ ಅನುಭವಿಸಿ, ಕೊನೆಗೆ ಶಿವನ ಲೋಕವನ್ನು ಸೇರುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಶತರುದ್ರಸಂಹಿತೆಯಲ್ಲಿ
ಭಿಕ್ಷುವರ್ಯಾವತಾರ ವರ್ಣನವೆಂಬ ಮೂವತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ಶತರುದ್ರಸಹಿಂತಾಯಾಂ

## ದ್ವಾತ್ರಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಶೃಣು ತಾತ ಪ್ರವಕ್ಷ್ಯಾಮಿ ಶಿವಸ್ಯ ಪರಮಾತ್ಮನಃ ।
ಸುರೇಶ್ವರಾವತಾರಾಸ್ತೇ ಧೌಮ್ಯಾಗ್ರಜಹಿತಾವಹಂ ॥ ೧ ॥

ವ್ಯಾಘ್ರಪಾದಸುತೋ ಧೀಮಾನುಪಮನ್ಯುಸ್ಸತಾಂ ಪ್ರಿಯಃ ।
ಜನ್ಮಾಂತರೇಣ ಸಂಸಿದ್ಧಃ ಪ್ರಾಪ್ತೋ ಮುನಿಕುಮಾರತಾಂ ॥ ೨ ॥

---

## ಮೂವತ್ತೆರಡನೆಯ ಅಧ್ಯಾಯವು

೧. ನಂದಿಕೇಶ್ವರನು ಸನತ್ಕುಮಾರಮುನಿಯನ್ನು ಕುರಿತು, ಅಪ್ಪಾ, ಧೌಮ್ಯ ಮಹರ್ಷಿಯ ಅಣ್ಣನಿಗೆ ಹಿತವನ್ನುಂಟುಮಾಡಿದಂತಹ ಪರಮಾತ್ಮನಾದ ಶಿವನ ಸುರೇಶ್ವರನೆಂಬ ಅವತಾರವನ್ನು ನಿನಗೆ ವರ್ಣಿಸುವೆನು ಕೇಳು ಎಂದು ಹೇಳತೊಡಗಿದನು.

೨. ಮಹಾಜ್ಞಾನಿಯೂ ಸತ್ಪುರುಷರಿಗೆ ಸಮ್ಮತನೂ ಆದ ಉಪಮನ್ಯುವೆಂಬ ಮುನಿಯು ಪೂರ್ವಜನ್ಮಗಳ ಶುಭಸಂಸ್ಕಾರಬಲದಿಂದ ವ್ಯಾಘ್ರಪಾದನೆಂಬ ಮಹರ್ಷಿಯ ಕುವರನಾಗಿ ಜನಿಸಿದನು.

ಉವಾಸ ಮಾತುಲಗೃಹೇ ಸಮಾತ್ರಾ ಶಿಶುರೇವ ಹಿ ।
ಉಪಮನ್ಯುರ್ವ್ಯಾಘ್ರಪಾದಿಸ್ಸ್ವಾದ್ದರಿದ್ರಶ್ಚ ದೈವತಃ ॥ ೩ ॥

ಕದಾಚಿತ್ಕ್ಷೀರಮತ್ಯಲ್ಪಂ ಪೀತವಾನ್ಮಾತುಲಾಶ್ರಮೇ ।
ಯುಯಾಚೇ ಮಾತರಂ ಪ್ರೀತ್ಯಾ ಬಹುಶೋ ದುಗ್ಧಲಾಲಸಃ ॥ ೪ ॥

ತಚ್ಛ್ರುತ್ವಾ ಪುತ್ರವಚನಂ ತನ್ಮಾತಾ ಚ ತಪಸ್ವಿನೀ ।
ಸಾಂತಃ ಪ್ರವಿಶ್ಯಾಥ ತದಾ ಶುಭೋಪಾಯಮಥಾರಚತ್ ॥ ೫ ॥

ಉಂಛವೃತ್ತ್ಯರ್ಜಿತಾನ್ಬೀಜಾನ್ಪಿಷ್ಟ್ವಾಲೋಡ್ಯ ಜಲೇನ ತಾನ್ ।
ಉಪಲಾಲ್ಯ ಸುತಂ ತಸ್ಮೈ ಸಾ ದದೌ ಕೃತ್ರಿಮಂ ಪಯಃ ॥ ೬ ॥

ಪೀತ್ವಾ ಚ ಕೃತ್ರಿಮಂ ದುಗ್ಧಂ ಮಾತ್ರಾ ದತ್ತಂ ಸ ಬಾಲಕಃ ।
ನೈತತ್ಕ್ಷೀರಮಿತಿ ಪ್ರಾಹ ಮಾತರಂ ಚಾರುದತ್ಪುನಃ ॥ ೭ ॥

---

೩. ಆ ವ್ಯಾಘ್ರಪಾದ ಸುತನಾದ ಉಪಮನ್ಯುವು ಎಳೆತನದಲ್ಲಿಯೇ ದುರದೃಷ್ಟವಶದಿಂದ ಕಡುಬಡತನಕ್ಕೆ ಸಿಲುಕಿ ತಾಯಿಯೊಡನೆ ತನ್ನ ಸೋದರಮಾವನ ಮನೆಯಲ್ಲಿ ವಾಸಮಾಡುತ್ತಿದ್ದನು.

೪. ಒಂದಾನೊಂದುಸಲ ಆ ಉಪಮನ್ಯುವಿಗೆ ತನ್ನ ಮಾವನ ಮನೆಯಲ್ಲಿ ಕುಡಿಯಲು ಸಾಕಾದಷ್ಟು ಹಾಲು ದೊರೆಯದೆ ಎಲ್ಲೋ ಅತಿ ಸ್ವಲ್ಪಮಾತ್ರ ಸಿಕ್ಕಿತು.

೫. ಈರೀತಿ ತನ್ನ ಮಗನು ಕೇಳಲು ಆ ಒಡಪಾಯಿಯಾದ ತಾಯಿಯು ಒಳಗೆಹೋಗಿ ಒಂದು ಯುಕ್ತಿಯನ್ನು ಮಾಡಿದಳು.

೬. ಉಂಛವೃತ್ತಿ (ಕಣಕ್ಕೆ ಹೋಗಿ ಅಲ್ಲಿ ಚೆಲ್ಲಿಹೋಗಿ ಕೆಳಗೆಬಿದ್ದಿರುವ ಕಾಳುಗಳನ್ನು ಒಂದೊಂದಾಗಿ ಆಯ್ದುಕೊಂಡುಬರುವುದು) ಯಿಂದ ಸಿಕ್ಕಿದ ಕಾಳುಗಳನ್ನು ಚೆನ್ನಾಗಿ ಅರೆದು ಆ ಹಿಟ್ಟನ್ನು ನೀರಿನಲ್ಲಿ ಕದಡಿ ಕೃತ್ರಿಮವಾದ ಹಾಲನ್ನು ಮಾಡಿಕೊಂಡುಬಂದು ತನ್ನ ಮಗನನ್ನು ಮುದ್ದಾಡುತ್ತಾ ಅವನಿಗೆ ಅದನ್ನು ಕೊಟ್ಟಳು.

೭. ಹಾಗೆ ತನ್ನ ತಾಯಿಯು ಹಾಲೆಂದು ಹೇಳಿ ಕೊಟ್ಟ ಹಿಟ್ಟಿನ ನೀರನ್ನು ಕುಡಿಯುತ್ತಲೇ ಆ ಎಳೆಯ ಉಪಮನ್ಯುವು ಇದು ಹಾಲಲ್ಲವೆಂದು ಹೇಳಿ ಮತ್ತೆ ಗಟ್ಟಿಯಾಗಿ ಅಳತೊಡಗಿದನು.

ಶ್ರುತ್ವಾ ಸುತಸ್ಯ ರುದಿತಂ ಪ್ರಾಹ ಸಾ ದುಃಖಿತಾ ಸುತಂ ।
ಸಂಮಾರ್ಜ್ಯ ನೇತ್ರೇ ಪುತ್ರಸ್ಯ ಕರಾಭ್ಯಾಂ ಕಮಲಾಕೃತಿಃ ॥ ೮ ॥

॥ ಮಾತೋವಾಚ ॥

ಕ್ಷೀರಮತ್ರ ಕುತೋಽಸ್ಮಾಕಂ ವನೇ ನಿವಸತಾಂ ಸದಾ ।
ಪ್ರಸಾದೇನ ವಿನಾ ಶಂಭೋಃ ಪಯಃಪ್ರಾಪ್ತಿರ್ಭವೇನ್ನ ಹಿ ॥ ೯ ॥

ಪೂರ್ವಜನ್ಮನಿ ಯತ್ಕೃತ್ಯಂ ಶಿವಮುದ್ದಿಶ್ಯ ಹೇ ಸುತ ।
ತದೇವ ಲಭ್ಯತೇ ನೂನಂ ನಾತ್ರ ಕಾರ್ಯಾ ವಿಚಾರಣಾ ॥ ೧೦ ॥

ಇತಿ ಮಾತೃವಚಶ್ಶ್ರುತ್ವಾ ವಾಘ್ರಪಾದಿಸ್ಸ ಬಾಲಕಃ ।
ಪ್ರತ್ಯುವಾಚ ವಿಶೋಕಾತ್ಮಾ ಮಾತರಂ ಮಾತೃವತ್ಸಲಃ ॥ ೧೧ ॥

---

೮. ಆಗ ಆ ಬಡಹೆಂಗಸು ಮಗನು ಅಳುತ್ತಿರುವುದನ್ನು ಕಂಡು ತಾನೂ ವ್ಯಸನಪಡುತ್ತಾ ತಾವರೆಯಂತೆ ಮುದ್ದಾದ ಮಗನ ಕಣ್ಣುಗಳನ್ನು ಕೈಯ್ಯಿಂದ ಒರಸಿ ಅವನನ್ನಿಂತೆಂದಳು.

೯. ಯಾವಾಗಲೂ ಕಾಡಿನ ನಡುವೆ ವಾಸಮಾಡುವ ನಮಗೆ ಹಾಲು ಸಿಕ್ಕುವುದಾದರೂ ಹೇಗೆ? ಆ ಶಂಕರನ ದಯೆಯಿಲ್ಲದಿದ್ದರೆ ಹಾಲು ದೊರೆಯುವುದೇ ಇಲ್ಲವು.

೧೦. ಮಗುವೇ, ಹಿಂದಿನ ಜನ್ಮದಲ್ಲಿ ಶಿವನನ್ನುದ್ದೇಶಿಸಿ ಯಾವುದನ್ನು ಕೊಟ್ಟಿದ್ದೇವೆಯೋ ಅದೇ ನಮಗೆ ಈ ಜನ್ಮದಲ್ಲಿ ದೊರೆಯುವುದು ಇದರಲ್ಲಿ ಸಂಶಯವಿಲ್ಲ.

೧೧. ಈರೀತಿ ತನ್ನ ತಾಯಿಯು ಹೇಳುತ್ತಲೇ ಆ ಬಾಲಕನಾದ ಉಪಮನ್ಯುವು ಅಳುವನ್ನು ನಿಲ್ಲಿಸಿಬಿಟ್ಟನು. ಬಳಿಕ ಆ ಮಾತೃವತ್ಸಲನು ತನ್ನ ತಾಯಿಯನ್ನಿಂತೆಂದನು.

॥ ಬಾಲಕ ಉವಾಚ ॥

ಶೋಕೇನಾಲಮಿಮಂ ಮಾತಃ ಶಂಭುರ್ಯದ್ಯಸ್ತಿ ಶಂಕರಃ ।
ತ್ಯಜ ಶೋಕಂ ಮಹಾಭಾಗೇ ಸರ್ವಂ ಭದ್ರಂ ಭವಿಷ್ಯತಿ ॥ ೧೨ ॥

ಶೃಣು ಮಾತರ್ವಚೋ ಮೇಽದ್ಯ ಮಹಾದೇವೋಽಸ್ತಿ ಚೇತ್ಕ್ವಚಿತ್ ।
ಚಿರಾದ್ವಾ ಹ್ಯಚಿರಾದ್ವಾಪಿ ಕ್ಷೀರೋದಂ ಸಾಧಯಾಮ್ಯಹಂ ॥ ೧೩ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಸ ಶಿಶುಃ ಪ್ರೀತ್ಯಾ ಶಿವಂ ಮೇಽಸ್ತ್ವಿತ್ಯುದೀರ್ಯ ಚ ।
ವಿಸೃಜ್ಯ ತಾಂ ಸುಪ್ರಣಮ್ಯ ತಪಃ ಕರ್ತುಂ ಪ್ರಚಕ್ರಮೇ ॥ ೧೪ ॥

ಹಿಮವತ್ಪರ್ವತಗತಃ ವಾಯುಭಕ್ಷಸ್ಸಮಾಹಿತಃ ।
ಅಷ್ಟೇಷ್ಟಕಾಭಿಃ ಪ್ರಾಸಾದಂ ಕೃತ್ವಾ ಲಿಂಗಂ ಚ ಮೃನ್ಮಯಂ ॥ ೧೫ ॥

---

೧೨. ಅಮ್ಮಾ, ಆ ಶಂಕರನು ಇರುವಪಕ್ಷಕ್ಕೆ ನೀನಳುವುದೇಕೆ? ಎಲೌ ಭಾಗ್ಯವತಿಯೇ, ನಿನ್ನ ಈ ಅಳುವನ್ನು ನಿಲ್ಲಿಸು. ಎಲ್ಲವೂ ಒಳ್ಳೆಯದೇ ಆಗುವುದು.

೧೩. ಅಮ್ಮಾ, ನಾನೀಗ ಹೇಳುವ ಮಾತನ್ನು ಕೇಳು. ಆ ಮಹೇಶ್ವರನು ಎಲ್ಲಿಯಾದರೂ ಇರುವನೇ ಆದರೆ ಸ್ವಲ್ಪ ನಿಧಾನವಾಗಿಯೋ ಇಲ್ಲವೇ ಜಾಗ್ರತೆಯೋ ಆಗಿಯೋ ಕ್ಷೀರಸಮುದ್ರವನ್ನೇ ಪಡೆದುಕೊಂಡುಬರುವೆನು.

೧೪. ಎಲೈ ಮುನಿಯೇ, ಹೀಗೆಂದು ಆ ಬಾಲಕನು ಪ್ರೀತಿಯಿಂದ ತನ್ನ ತಾಯಿಗೆ ಹೇಳಿ ತನಗೆ ಒಳ್ಳೆಯದಾಗಲಿಯೆಂದು ನುಡಿದು ಆಕೆಗೆ ನಮಸ್ಕಾರಮಾಡಿ ಅವಳನ್ನು ಬೀಳ್ಕೊಟ್ಟು ತಪಸ್ಸುಮಾಡಲು ಹೊರಟನು.

೧೫. ಆ ಬಾಲಕನು ಹಿಮವತ್ಪರ್ವತಕ್ಕೆ ಬಂದು ಬರಿಯ ವಾಯುವನ್ನೇ ಆಹಾರವಾಗಿ ಸೇವಿಸುತ್ತಾ ಬಹು ಎಚ್ಚರಿಕೆಯುಳ್ಳವನಾಗಿ ಎಂಟು ಇಟ್ಟಿಗೆಗಳಿಂದ ಸಣ್ಣ ಗುಡಿಯೊಂದನ್ನು ಕಟ್ಟಿ ಅಲ್ಲಿ ಮಣ್ಣಿನಿಂದ ಒಂದು ಲಿಂಗವನ್ನು ಮಾಡಿದನು.

ತತ್ರಾವಾಹ್ಯ ಶಿವಂ ಸಾಂಬಂ ಭಕ್ತ್ಯಾ ಪಂಚಾಕ್ಷರೇಣ ಹ ।
ಪತ್ರಪುಷ್ಪಾದಿಭಿರ್ವನ್ಯೈಸ್ಸಮಾನರ್ಚ ಶಿಶುಃ ಸ ವೈ ॥ ೧೬ ॥

ಧ್ಯಾತ್ವಾ ಶಿವಂ ಚ ತಂ ಸಾಂಬಂ ಜಪನ್ಪಂಚಾಕ್ಷರಂ ಮನುಂ ।
ಸಮಭ್ಯರ್ಚ್ಯ ಚಿರಂ ಕಾಲಂ ಚಚಾರ ಪರಮಂ ತಪಃ ॥ ೧೭ ॥

ತಪಸಾ ತಸ್ಯ ಬಾಲಸ್ಯ ಹ್ಯುಪಮನ್ಯೋರ್ಮಹಾತ್ಮನಃ ।
ಚರಾಚರಂ ಚ ಭುವನಂ ಪ್ರದೀಪಿತಮಭೂನ್ಮುನೇ ॥ ೧೮ ॥

ಏತಸ್ಮಿನ್ನಂತರೇ ಶಂಭುರ್ವಿಷ್ಣ್ವಾದ್ಯೈಃ ಪ್ರಾರ್ಥಿತಃ ಪ್ರಭುಃ ।
ಪರೀಕ್ಷಿತುಂ ಚ ತದ್ಭಕ್ತಿಂ ಶಕ್ರರೂಪೋಽಭವತ್ತದಾ ॥ ೧೯ ॥

ಶಿವಾ ಶಚೀಸ್ವರೂಪಾಭೂದ್ಗಣಾಃ ಸರ್ವೇಽಭವನ್ಸುರಾಃ ।
ಐರಾವತಗಜೋ ನಂದೀ ಸರ್ವಮೇವ ಚ ತನ್ಮಯಂ ॥ ೨೦ ॥

---

೧೬. ಬಳಿಕ ಆ ಮೃಣ್ಮಯಲಿಂಗದಲ್ಲಿ ಪಾರ್ವತೀಸಮೇತನಾದ ಶ್ರೀ ಶಿವನನ್ನು ಭಕ್ತಿಯಿಂದ ಪಂಚಾಕ್ಷರೀಮಂತ್ರವನ್ನುಚ್ಚರಿಸಿ ಆವಾಹನೆಮಾಡಿ ಕಾಡಿನಲ್ಲಿ ಸಿಕ್ಕುವ ಪತ್ರೆ, ಪುಷ್ಪ ಮೊದಲಾದವುಗಳಿಂದ ಅರ್ಚನೆಮಾಡಿದನು.

೧೭. ಜಗಜ್ಜನನೀಸಮೇತನಾದ ಆ ಶಂಕರನನ್ನು ಮನಸ್ಸಿನಲ್ಲಿ ನೆನೆಯುತ್ತಾ ಪಂಚಾಕ್ಷರೀಮಂತ್ರವನ್ನು ಜಪಿಸುತ್ತಾ ಆ ಶಿವನನ್ನು ಅತಿಶಯವಾಗಿ ಪೂಜಿಸುತ್ತಾ ಬಹುದಿವಸಗಳಕಾಲ ಆ ಶಿಶುವು ಬಹುಭಾರಿ ತಪಸ್ಸನ್ನು ಆಚರಿಸಿದನು.

೧೮ ಮಹಾನುಭಾವನಾದ ಆ ಬಾಲ ಉಪಮನ್ಯುವಿನ ತಪಸ್ಸಿನಿಂದ ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ತಳಮಳಿಸತೊಡಗಿತು.

೧೯. ಈ ನಡುವೆ ವಿಷ್ಣು ಮೊದಲಾದ ದೇವತೆಗಳೆಲ್ಲರೂ ಪ್ರಾರ್ಥಿಸಲು, ಪ್ರಭುವಾದ ಆ ಶಂಕರನು ಬಾಲನಾದ ಆ ಉಪಮನ್ಯುವಿನ ಭಕ್ತಿಯನ್ನು ಪರೀಕ್ಷಿಸಲು ಇಂದ್ರನ ರೂಪವನ್ನು ತಾಳಿದನು.

೨೦. ಆಗ ಪಾರ್ವತಿಯು ಶಚಿಯಂತೆ ವೇಷವನ್ನು ತಳೆದಳು. ಪ್ರಮಥರೆಲ್ಲರೂ ದೇವತೆಗಳಂತಾದರು. ನಂದಿಯು ಐರಾವತವೆಂಬ ಆನೆಯಾದನು. ಆ ಶಿವನ ಪರಿವಾರವೆಲ್ಲವೂ ಇಂದ್ರನ ಪರಿವಾರದಂತೆಯೇ ಆಗಿಬಿಟ್ಟಿತು.

ತತಃ ಸಾಂಬಶಿವಃ ಶಕ್ರಸ್ವರೂಪಸ್ಸಗಣೋ ದ್ರುತಂ ।
ಜಗಾಮಾನುಗ್ರಹಂ ಕರ್ತುಮುಪಮನ್ಯೋಸ್ತದಾಶ್ರಮಂ ॥ ೨೧ ॥

ಪರೀಕ್ಷಿತುಂ ಚ ತದ್ಭಕ್ತಿಂ ಶಕ್ರರೂಪಧರೋ ಹರಃ ।
ಪ್ರಾಹ ಗಂಭೀರಯಾ ವಾಚಾ ಬಾಲಕಂ ತಂ ಮುನೀಶ್ವರಂ ॥ ೨೨ ॥

॥ ಸುರೇಶ್ವರ ಉವಾಚ ॥

ತುಷ್ಟೋಽಸ್ಮಿ ತೇ ವರಂ ಬ್ರೂಹಿ ತಪಸಾನೇನ ಸುವ್ರತ ।
ದದಾಮಿ ಚೇಪ್ಸಿತಾನ್ಕಾಮಾನ್ಸರ್ವಾನ್ನಾತ್ರಾಸ್ತಿ ಸಂಶಯಃ ॥ ೨೩ ॥

ಏವಮುಕ್ತಃ ಸ ವೈ ತೇನ ಶಕ್ರರೂಪೇಣ ಶಂಭುನಾ ।
ವರಯಾಮಿ ಶಿವೇ ಭಕ್ತಿಮಿತ್ಯುವಾಚ ಕೃತಾಂಜಲಿಃ ॥ ೨೪ ॥

---

೨೧. ಅನಂತರ ಶ್ರೀ ಶಂಕರನು ಶಿವೆನೊಡನೆಯೂ ಪ್ರಮಥರೊಡನೆಯೂ ಆ ಉಪಮನ್ಯುವನ್ನು ಅನುಗ್ರಹಿಸಬೇಕೆಂಬುದಾಗಿ ಬೇಗನೆ ಅವನ ಆಶ್ರಮಕ್ಕೆ ಬಂದನು.

೨೨. ಓ ಮುನೀಂದ್ರ, ದೇವೇಂದ್ರನಂತೆ ವೇಷವನ್ನು ಧರಿಸಿಬಂದಿದ್ದ ಆ ಶಂಕರನು ಅವನ ಭಕ್ತಿಯನ್ನು ಪರೀಕ್ಷಿಸಲೆಳಸಿ ಆ ಬಾಲಕನನ್ನು ಕುರಿತು ತುಂಬಿದ ದನಿಯಿಂದ ಇಂತೆಂದು ನುಡಿದನು.

೨೩. ಎಲೈ ಮಗುವೇ, ನೀನು ನಿನ್ನ ವ್ರತವನ್ನು ಚೆನ್ನಾಗಿ ನಡೆಸಿರುವೆ. ನಿನ್ನೀ ತಪಸ್ಸಿಗೆ ಮೆಚ್ಚಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೋ. ನೀನು ಬಯಸಿದ ಎಲ್ಲ ಕೋರಿಕೆಗಳನ್ನು ಈಡೇರಿಸಿಕೊಡುವೆನು, ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ ಎಂದನು.

೨೪. ಈರೀತಿಯಾಗಿ ಇಂದ್ರವೇಷಧಾರಿಯಾದ ಇಂದುಧರನು ನುಡಿದುದನ್ನು ಕೇಳಿ ಆ ಬಾಲನು ಕೈಗಳನ್ನು ಮುಗಿದುಕೊಂಡು ಶಿವನಲ್ಲಿಯೇ ನನ್ನ ಭಕ್ತಿಯು ನೆಲಸಿರಲಿ ಎಂಬೀ ವರವೊಂದನ್ನು ಕೇಳಿದನು.

ತನ್ನಿಶಮ್ಯ ಹರಿಃ ಪ್ರಾಹ ಮಾಂ ನ ಜಾನಾಸಿ ಲೇಖಪಂ ।
ತ್ರೈಲೋಕ್ಯಾಧಿಪತಿಂ ಶಕ್ರಂ ಸರ್ವದೇವನಮಸ್ಕೃತಂ　　　॥ ೨೫ ॥

ಮದ್ಭಕ್ತೋ ಭವ ವಿಪ್ರರ್ಷೇ ಮಾಮೇವಾರ್ಚಯ ಸರ್ವದಾ ।
ದದಾಮಿ ಸರ್ವಭದ್ರಂ ತೇ ತ್ಯಜ ರುದ್ರಂ ಚ ನಿರ್ಗುಣಂ　　　॥ ೨೬ ॥

ರುದ್ರೇಣ ನಿರ್ಗುಣೇನಾಲಂ ಕಿಂತೇ ಕಾರ್ಯಂ ಭವಿಷ್ಯತಿ ।
ದೇವಜಾತಿಬಹಿರ್ಭೂತೋ ಯಃ ಪಿಶಾಚತ್ವಮಾಗತಃ　　　॥ ೨೭ ॥

ನಂದೀಶ್ವರ ಉವಾಚ ॥

ತಚ್ಛ್ರುತ್ವಾ ಸ ಮುನೇಃ ಪುತ್ರೋ ಜಪನ್ಪಂಚಾಕ್ಷರಂ ಮನುಂ ।
ಮನ್ಯಮಾನೋ ಧರ್ಮವಿಘ್ನಂ ಪ್ರಾಹ ತಂ ಕರ್ತುಮಾಗತಂ　　　॥ ೨೮ ॥

---

೨೫. ಆ ಮಾತನ್ನು ಕೇಳಿ ಆ ಕಪಟ ದೇವೇಂದ್ರನು ಮತ್ತೆ ಇಂತೆಂದನು ದೇವತೆಗಳಿಗೆಲ್ಲಾ ಒಡೆಯನಾದ ಇಂದ್ರನೆಂಬ ನನ್ನನ್ನು ಕಾಣೆಯಾ ? ಈ ಮೂರು ಲೋಕಗಳಿಗೂ ಅಧಿಪತಿಯು ನಾನು. ನನ್ನನ್ನು ಎಲ್ಲ ದೇವತೆಗಳೂ ನಮಸ್ಕರಿಸುವರು.

೨೬. ಎಲೈ ಬ್ರಹ್ಮರ್ಷಿಯೇ, ನನ್ನಲ್ಲಿ ನಿನ್ನ ಭಕ್ತಿಯನ್ನು ಇಡು ಯಾವಾಗಲೂ ನನ್ನನ್ನೇ ಪೂಜಿಸು ನಿನಗೆ ಎಲ್ಲ ಮಂಗಳಗಳನ್ನೂ ಉಂಟುಮಾಡುವೆನು. ನಿರ್ಗುಣನಾದ ಆ ಶಿವನನ್ನು ಬಿಟ್ಟುಬಿಡು.

೨೭. ಗುಣಶೂನ್ಯನಾದ ಆ ರುದ್ರನನ್ನು ಇನ್ನು ಸಾಕುಮಾಡು. ದೇವತೆಗಳ ಜಾತಿಯಿಂದ ಬಹಿಷ್ಕೃತನಾಗಿ ಪಿಶಾಚತ್ವವನ್ನು ವಹಿಸಿರುವ ಅವನಿಂದ ನಿನ್ನ ಯಾವ ಕೆಲಸವು ತಾನೇ ಆಗುವುದು ? ಎಂದನು.

೨೮ ಓ ಸನತ್ಕುಮಾರ, ಈರೀತಿ ಆ ಕಪಟ ದೇವೇಂದ್ರನು ಆಡಿದಮಾತನ್ನು ಕೇಳಿದೊಡನೆಯೇ ಆ ಮುನಿಪುತ್ರನಾದ ಉಪಮನ್ಯುವು ಪಂಚಾಕ್ಷರೀಮಂತ್ರವನ್ನು ಜಪಿಸುತ್ತಾ ಇವನು ತನ್ನ ತಪಸ್ಸಿಗೆ ವಿಘ್ನವನ್ನು ಮಾಡಲು ಬಂದಿರುವನೆಂದೆಣಿಸಿ ಅವನನ್ನಿಂತೆಂದನು

॥ ಉಪಮನ್ಯುರುವಾಚ ॥

ತ್ವಯೈವಂ ಕಥಿತಂ ಸರ್ವಂ ಭವನ್ನಿಂದಾರತೇನ ವೈ ।
ಪ್ರಸಂಗಾದ್ದೇವದೇವಸ್ಯ ನಿರ್ಗುಣತ್ವಂ ಪಿಶಾಚತಾ ॥ ೨೯ ॥

ತ್ವಂ ನ ಜಾನಾಸಿ ವೈ ರುದ್ರಂ ಸರ್ವದೇವೇಶ್ವರೇಶ್ವರಂ ।
ಬ್ರಹ್ಮವಿಷ್ಣುಮಹೇಶಾನಾಂ ಜನಕಂ ಪ್ರಕೃತೇಃ ಪರಂ ॥ ೩೦ ॥

ಸದಸದ್ವ್ಯಕ್ತಮವ್ಯಕ್ತಂ ಯಮಾಹುರ್ಬ್ರಹ್ಮವಾದಿನಃ ।
ನಿತ್ಯಮೇಕಮನೇಕಂ ಚ ವರಂ ತಸ್ಮಾದ್ವೃಣೋಮ್ಯಹಂ ॥ ೩೧ ॥

ಹೇತುವಾದವಿನಿರ್ಮುಕ್ತಂ ಸಾಂಖ್ಯಯೋಗಾರ್ಥದಂ ಪರಂ ।
ಯಮುಶಂತಿ ಹಿ ತತ್ತ್ವಜ್ಞಾ ವರಂ ತಸ್ಮಾದ್ವೃಣೋಮ್ಯಹಂ ॥ ೩೨ ॥

ನಾಸ್ತಿ ಶಂಭೋಃ ಪರಂ ತತ್ತ್ವಂ ಸರ್ವಕಾರಣಕಾರಣಂ ।
ಬ್ರಹ್ಮವಿಷ್ಣ್ವಾದಿದೇವಾನಾಂ ಶ್ರೇಷ್ಠೋ ಗುಣಪರಾದ್ವಿಭೋಃ ॥ ೩೩ ॥

---

೨೯. ಶಿವದೂಷಣನಿರತನಾದ ನೀನು ಆ ದೇವದೇವನನ್ನು ಸಿಕ್ಕಿದಂತೆ ನಿಂದಿಸುತ್ತಾ ಅವನು ನಿರ್ಗುಣನೆಂದೂ ಪಿಶಾಚನೆಂದೂ ಪ್ರಸಂಗವಶದಿಂದ ಹೇಳಿದೆಯಲ್ಲವೇ.

೩೦. ನೀನು ಆ ಶಿವನನ್ನು ಸರಿಯಾಗಿ ಅರಿಯದಿರುವೆ. ಅವನು ನಿನ್ನಂತಹ ದೇವಾಧೀಶ್ವರರಿಗೂ ಅಧೀಶ್ವರನು. ಬ್ರಹ್ಮವಿಷ್ಣುಮಹೇಶರೆಂಬ ಕಾರಣಪುರುಷರಿಗೂ ಕಾರಣನಾದವನು ಮತ್ತು ಪ್ರಕೃತಿಗೂ ಪರನಾದವನು.

೩೧. ಆತನನ್ನು ಬ್ರಹ್ಮಜ್ಞಾನಿಗಳಾದವರು ಸತ್ತೆಂದೂ ಅಸತ್ತೆಂದೂ, ವ್ಯಕ್ತನೆಂದೂ ಅವ್ಯಕ್ತನೆಂದೂ, ನಿತ್ಯನೆಂದೂ ಏಕನೆಂದೂ ಅನೇಕನೆಂದೂ ಹೇಳುವರು. ನಾನು ಅಂತಹ ಪರಶಿವನಿಂದಲೇ ವರವನ್ನು ಬೇಡುವೆನು.

೩೨. ಯಾವಾತನನ್ನು ತತ್ತ್ವಜ್ಞಾನಿಗಳು ಯುಕ್ತಿವಾದಗಳಿಗೆ ಸಿಲುಕದವನೆಂದೂ ಸಾಂಖ್ಯ, ಯೋಗಗಳ ಅರ್ಥವನ್ನು ಬಲ್ಲವನೆಂದೂ ಪರತತ್ತ್ವವೆಂಬುದಾಗಿಯೂ ಹೇಳುವರೋ ಆ ಶಂಕರನಿಂದಲೇ ವರವನ್ನು ಬೇಡಿ ಪಡೆಯುವೆನು.

೩೩. ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಗಿಂತಲೂ ಮೊದಲಾದವನೂ ಉತ್ಕೃಷ್ಟವಾದ ಗುಣಗಳಿಗೆ ನೆಲೆಯೆನಿಸಿದವನೂ ಸರ್ವವ್ಯಾಪಿಯೂ ಆದ ಆ ಶಿವನಿಗಿಂತಲೂ ಶ್ರೇಷ್ಠವೆನಿಸಿದ ಸರ್ವಕಾರಣಗಳಿಗೂ ಕಾರಣವಾದ ಬೇರೊಂದು ತತ್ತ್ವವಿಲ್ಲ.

ನಾಹಂ ವೃಣೇ ವರಂ ತ್ವತ್ತೋ ನ ವಿಷ್ಣೋರ್ಬ್ರಹ್ಮಣೋಽಪಿ ವಾ ।
ನಾನ್ಯಸ್ಮಾದಮರಾದ್ವಾಪಿ ಶಂಕರೋ ವರದೋಽಸ್ತು ಮೇ ॥ ೩೪ ॥

ಬಹುನಾತ್ರ ಕಿಮುಕ್ತೇನ ವಚ್ಮಿ ತತ್ತ್ವಂ ಮತಂ ಸ್ವಕಂ ।
ನ ಪ್ರಾರ್ಥಯೇ ಪಶುಪತೇರನ್ಯಂ ದೇವಾದಿಕಂ ಸ್ಫುಟಂ ॥ ೩೫ ॥

ಮದ್ಭಾವಂ ಶೃಣು ಗೋತ್ರಾರೇ ಮಯಾದ್ಯಾನುಮಿತಂ ತ್ವಿದಂ ।
ಭವಾಂತರೇ ಕೃತಂ ಪಾಪಂ ಶ್ರುತಾ ನಿಂದಾ ಭವಸ್ಯ ಚೇತ್ ॥ ೩೬ ॥

ಶ್ರುತ್ವಾ ನಿಂದಾಂ ಭವಸ್ಯಾಥ ತತ್ಕ್ಷಣಾದೇವ ಸಂತ್ಯಜೇತ್ ।
ಸ್ವದೇಹಂ ತನ್ನಿಹತ್ಯಾಶು ಶಿವಲೋಕಂ ಸ ಗಚ್ಛತಿ ॥ ೩೭ ॥

ಆಸ್ತಾಂ ತಾವನ್ಮಮೇಚ್ಛೇಯಂ ಕ್ಷೀರಂ ಪ್ರತಿ ಸುರಾಧಮ ।
ನಿಹತ್ಯ ತ್ವಾಂ ಶಿವಾಸ್ತ್ರೇಣ ತ್ಯಜಾಮ್ಯೇತತ್ಕಲೇವರಂ ॥ ೩೮ ॥

---

೩೪ ನೀನಾಗಲೀ, ವಿಷ್ಣುವಾಗಲೀ, ಬ್ರಹ್ಮನಾಗಲೀ ಮತ್ತಾವ ದೇವತೆಯೇ ಆಗಲೀ ತಾವಾಗಿಯೇ ವರವನ್ನು ಕೊಡುತ್ತೇನೆಯೆಂದರೂ ನಾನು ವರವನ್ನು ಕೇಳಿ ಕೊಳ್ಳಲಾರೆನು. ಆ ಶಂಕರನೇ ನನಗೆ ವರವನ್ನು ಕರುಣಿಸಲಿ.

೩೫. ಇನ್ನು ಹೆಚ್ಚಾಗಿ ಹೇಳುವುದರಿಂದೇನು ? ನನ್ನೀ ಅಭಿಪ್ರಾಯವನ್ನು ಸ್ಪಷ್ಟವಾಗಿ ಖಂಡಿತವಾಗಿ ನಿಜವಾಗಿ ತಿಳಿಸುವೆನು ನಾನು ಬೇರೆ ಶ್ರೀ ಶಂಕರನನ್ನು ಬಿಟ್ಟು ಮತ್ತೊಬ್ಬ ದೇವರನ್ನು ವರವನ್ನು ಕೊಡೆಂದು ಬೇಡಿಕೊಳ್ಳಲಾರೆನು.

೩೬. ಎಲೈ ಪರ್ವತವೈರಿಯೇ, ನನ್ನ ಆಶಯವನ್ನು ನಿನಗೆ ತಿಳಿಸುವೆನು ಕೇಳು ಶ್ರೀ ಶಂಕರನ ನಿಂದೆಯನ್ನು ಇಂದು ನಾನು ಕೇಳಿದುದರಿಂದ ಈ ಹಿಂದಿನ ಜನ್ಮಗಳಲ್ಲಿ ನಾನು ಬಹುಪಾಪವನ್ನು ಮಾಡಿರಲೇಬೇಕೆಂದು ಊಹಿಸುವೆನು.

೩೭ ಶಿವನಿಂದೆಯನ್ನು ಕಿವಿಯಿಂದ ಆಲಿಸಿದರೂ ಸಹ ತನ್ನ ದೇಹವನ್ನು ತತ್ಕ್ಷಣವೇ ತೊರೆಯಬೇಕೆಂದಿರುವುದು. ಹಾಗಾದರೆ ಆ ಪಾಪವು ಪರಿಹೃತವಾದಂತಾಗಿ ಅವನು ಶಿವಲೋಕವನ್ನು ಸೇರುವನು.

೩೮. ಎಲೈ ಕ್ಷುದ್ರದೇವತೆಯೇ, ಹಾಲನ್ನು ಬಯಸಿದ ನನ್ನ ಆಸೆಯು ಒತ್ತಟ್ಟಿಗಿರಲಿ. ನಿನ್ನನ್ನೀಗಲೇ ಶಿವನ ಅಸ್ತ್ರದಿಂದಲೇ ಸಂಹರಿಸಿ ಬಳಿಕ ಈ ನನ್ನ ಶರೀರವನ್ನು ತೊರೆಯುವೆನು.

॥ ನಂದೀಶ್ವರ ಉವಾಚ ॥

ಏವಮುಕ್ತ್ವೋಪಮನ್ಯುಸ್ತಂ ಮರ್ತುಂ ವ್ಯವಸಿತಃ ಸ್ವಯಂ ।
ಕ್ಷೀರೇ ವಾಂಛಾಮಪಿ ತ್ಯಕ್ತ್ವಾ ನಿಹಂತುಂ ಶಕ್ರಮುದ್ಯತಃ ॥ ೩೯ ॥

ಭಸ್ಮಾದಾಯ ತದಾಧಾರಾದಘೋರಾಸ್ತ್ರಾಭಿಮಂತ್ರಿತಂ ।
ವಿಸೃಜ್ಯ ಶಕ್ರಮುದ್ದಿಶ್ಯ ನನಾದ ಸ ಮುನಿಸ್ತದಾ ॥ ೪೦ ॥

ಸ್ಮೃತ್ವಾ ಸ್ವೇಷ್ಟಪದದ್ವಂದ್ವಂ ಸ್ವದೇಹಂ ದಗ್ಧುಮುದ್ಯತಃ ।
ಆಗ್ನೇಯೀಂ ಧಾರಣಾಂ ಬಿಭ್ರದುಪಮನ್ಯುರವಸ್ಥಿತಃ ॥ ೪೧ ॥

ಏವಂ ವ್ಯವಸಿತೇ ವಿಪ್ರೇ ಭಗವಾಞ್ಛಕ್ರರೂಪವಾನ್ ।
ವಾರಯಾಮಾಸ ಸೌಮ್ಯೇನ ಧಾರಣಾಂ ತಸ್ಯ ಯೋಗಿನಃ ॥ ೪೨ ॥

ತದ್ವಿಸೃಷ್ಟಮಘೋರಾಸ್ತ್ರಂ ನಂದೀಶ್ವರನಿಯೋಗತಃ ।
ಜಗೃಹೇ ಮಧ್ಯತಃ ಕ್ಷಿಪ್ತಂ ನಂದೀ ಶಂಕರವಲ್ಲಭಂ ॥ ೪೩ ॥

---

೩೯. ಓ ಮುನೀಂದ್ರ, ಈರೀತಿಯಾಗಿ ಉಪಮನ್ಯುವು ಅವನಿಗೆ ಹೇಳಿ ತಾನು ಸಾಯುವೆನೆಂದು ನಿರ್ಧರಿಸಿ ತಾನು ಬಯಸಿದ್ದ ಹಾಲನ್ನೂ ಆಶಿಸದೆ ಆ ಇಂದ್ರವೇಷಧಾರಿಯನ್ನು ಕೊಲ್ಲಲುಜ್ಜುಗಿಸಿದನು.

೪೦. ಆಗ ಆ ಬಾಲಮುನಿಯು ಭಸ್ಮಪಾತ್ರೆಯಿಂದ ಸ್ವಲ್ಪ ಭಸ್ಮವನ್ನು ತೆಗೆದುಕೊಂಡು ಅಘೋರಮಂತ್ರವನ್ನು ಅಭಿಮಂತ್ರಣಮಾಡಿ ಇಂದ್ರನಮೇಲೆ ಅದನ್ನೆಸೆದು ಒಂದುಸಲ ಸಿಂಹನಾದಮಾಡಿದನು.

೪೧. ಬಳಿಕ ತನಗೆ ಇಷ್ಟದೈವವಾದ ಶ್ರೀ ಶಂಕರನ ಪಾದಾರವಿಂದಗಳನ್ನು ನೆನೆಯುತ್ತಾ ಆ ಉಪಮನ್ಯುವು ತನ್ನ ಶರೀರವನ್ನು ತೊರೆಯಲು ದಹಿಸಿಬಿಡಬೇಕೆಂದು ನಿಶ್ಚಯಿಸಿ ಆಗ್ನೇಯಮಂತ್ರವನ್ನು ಜಪಿಸುತ್ತಾ ಕುಳಿತುಬಿಟ್ಟನು.

೪೨. ಈರೀತಿಯಾಗಿ ಆ ಶಿಶುಮುನಿಯು ಉಜ್ಜುಗಿಸಲು ಇಂದ್ರರೂಪಧಾರಿಯಾದ ಆ ಪರಶಿವನು ಆ ಬಾಲಯೋಗಿಯ ಆಗ್ನೇಯಧಾರಣೆಯನ್ನು ತನ್ನ ಸೌಮ್ಯಧಾರಣೆಯಿಂದ ತಡೆದುಬಿಟ್ಟನು.

೪೩. ಅನಂತರ ಶ್ರೀ ಶಂಕರನ ಅಪ್ಪಣೆಯಂತೆ ನಂದಿಯು, ಆ ಉಪಮನ್ಯುವು ಪ್ರಯೋಗಿಸಿದ ಶಿವನಿಗೆ ಪ್ರಿಯವೆನಿಸಿದ ಆ ಅಘೋರಮಂತ್ರಾಭಿಮಂತ್ರಿತವಾದ ಅಸ್ತ್ರವನ್ನು ನಡುವೆಯೇ ಕೈಲಿ ಹಿಡಿದುಬಿಟ್ಟನು.

ಸ್ವರೂಪಮೇವ ಭಗವಾನಾಸ್ಥಾಯ ಪರಮೇಶ್ವರಃ ।
ದರ್ಶಯಾಮಾಸ ವಿಪ್ರಾಯ ಬಾಲೇಂದುಕೃತಶೇಖರಂ ॥ ೪೪ ॥

ಕ್ಷೀರಾರ್ಣವಸಹಸ್ರಂ ಚ ದಧ್ಯಾದೇರರ್ಣವಂ ತಥಾ ।
ಭಕ್ಷ್ಯಭೋಜ್ಯಾರ್ಣವಂ ತಸ್ಮೈ ದರ್ಶಯಾಮಾಸ ಸ ಪ್ರಭುಃ ॥ ೪೫ ॥

ಏವಂ ಸ ದದೃಶೇ ಶಂಭುರ್ದೇವ್ಯಾ ಸಾರ್ಧಂ ವೃಷೋಪರಿ ।
ಗಣೇಶ್ವರೈಸ್ತ್ರಿಶೂಲಾದ್ಯೈರ್ದಿವ್ಯಾಸ್ತ್ರೈರಪಿ ಸಂವೃತಃ ॥ ೪೬ ॥

ದೇವದುಂದುಭಯೋ ನೇದುಃ ಪುಷ್ಪವೃಷ್ಟಿಃ ಪಪಾತ ಹ ।
ವಿಷ್ಣುಬ್ರಹ್ಮೇಂದ್ರಪ್ರಮುಖೈರ್ದೇವೈಶ್ಛನ್ನಾ ದಿಶೋ ದಶ ॥ ೪೭ ॥

ಅಥೋಪಮನ್ಯುರಾನಂದಸಮುದ್ರೋರ್ಮಿಭಿರಾವೃತಃ ।
ಪಪಾತ ದಂಡವದ್ಭೂಮೌ ಭಕ್ತಿನಮ್ರೇಣ ಚೇತಸಾ ॥ ೪೮ ॥

---

೪೪ ಆಗ ಭಗವಂತನಾದ ಆ ಪರಮೇಶ್ವರನು ಬಾಲಚಂದ್ರರೇಖೆಯನ್ನು ತಳೆದ ತನ್ನ ನಿಜರೂಪವನ್ನು ಧರಿಸಿ, ಆ ಬಾಲಮುನಿಯಾದ ಉಪಮನ್ಯುವಿಗೆ ಪ್ರತ್ಯಕ್ಷನಾದನು

೪೫ ಹಾಗೆಯೇ ಆ ಪ್ರಭುವು ಸಾವಿರಾರು ಕ್ಷೀರಸಾಗರಗಳನ್ನೂ, ಮೊಸರು, ತುಪ್ಪ, ಜೇನು ಮೊದಲಾದ ಸಮುದ್ರಗಳನ್ನೂ ಹಾಗೆಯೇ ತಿಂಡಿತಿನಿಸುಗಳ ರಾಶಿರಾಶಿಗಳನ್ನು ಅವನಿಗೆ ತೋರಿಸಿದನು

೪೬. ಆ ಶಂಕರನು ದೇವಿಯಾದ ಪಾರ್ವತಿಯೊಡನೆ ವೃಷಭವನ್ನೇರಿ ಕುಳಿತು ಗಣಾಧಿಪತಿಗಳೊಡನೆಯೂ, ತ್ರಿಶೂಲಾದಿ ದಿವ್ಯಾಯುಧಗಳೊಡನೆಯೂ ಪರಿವೃತನಾಗಿ ಕಂಗೊಳಿಸಿದನು

೪೭. ಆಗ ಅಂತರಿಕ್ಷದಲ್ಲಿ ದೇವದುಂದುಭಿಗಳು ಮೊಳಗಿದುವು ಹೂ ಮಳೆಯು ಸುರಿಯಿತು. ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳಿಂದ ದಿಕ್ಕುಗಳೆಲ್ಲವೂ ಕಿಕ್ಕಿರಿದುಹೋದುವು

೪೮. ಆಗ ಉಪಮನ್ಯುವು ಆನಂದಸಾಗರದ ಅಲೆಗಳಿಂದ ತೊಯ್ದುಹೋದವನಾಗಿ ಭಕ್ತಪರವಶವಾದ ಹೃದಯದಿಂದ ನೆಲದಮೇಲೆ ದಂಡವತ್ತಾಗಿ ನಮಸ್ಕಾರ ಮಾಡಿದನು.

ಏತಸ್ಮಿನ್ಸಮಯೇ ತತ್ರ ಸಸ್ಮಿತೋ ಭಗವಾನ್ಭವಃ ।
ಏಹ್ಯೇಹೀತಿ ಸಮಾಹೂಯ ಮೂರ್ಧ್ನ್ಯಾಘ್ರಾಯ ದದೌ ವರಾನ್ ॥ ೪೯ ॥

॥ ಶಿವ ಉವಾಚ ॥

ವತ್ಸೋಪಮನ್ಯೋ ತುಷ್ಟೋಽಸ್ಮಿ ತ್ವದಾಚರಣತೋ ವರಾತ್ ।
ದೃಢಭಕ್ತೋಽಸಿ ವಿಪ್ರರ್ಷೇ ಮಯಾ ಜಿಜ್ಞಾಸಿತೋಽಧುನಾ ॥ ೫೦ ॥

ಭಕ್ಷ್ಯಭೋಗಾನ್ಯಥಾಕಾಮಂ ಬಾಂಧವೈರ್ಭುಂಕ್ಷ್ವ ಸರ್ವದಾ ।
ಸುಖೀ ಭವ ಸದಾ ದುಃಖನಿರ್ಮುಕ್ತೋ ಭಕ್ತಿಮಾನ್ಮಮ ॥ ೫೧ ॥

ಉಪಮನ್ಯೋ ಮಹಾಭಾಗ ತವಾಂಬೈಷಾ ಹಿ ಪಾರ್ವತೀ ।
ಮಯಾ ಪುತ್ರೀಕೃತೋ ಹ್ಯದ್ಯ ಕುಮಾರತ್ವಂ ಸನಾತನಂ ॥ ೫೨ ॥

---

೪೯. ಆಗ ಶ್ರೀ ಶಂಕರನು ನಸುನಗುತ್ತಾ ಆ ಉಪಮನ್ಯುವನ್ನು ಇತ್ತ ಬಾ ಬಾ ಎಂದು ಪ್ರೀತಿಯಿಂದ ಕರೆದು ತಲೆಯನ್ನು ಮೂಸಿನೋಡಿ ಅವನಿಗೆ ವರಗಳನ್ನು ಇತ್ತನು.

೫೦. ಮಗೂ, ಉಪಮನ್ಯು, ನಿನ್ನ ಈ ತಪಸ್ಸಿನಿಂದ ನಾನು ಬಹುವಾಗಿ ಸಂತೋಷಗೊಂಡಿರುವೆನು. ಎಲೈ ಬ್ರಾಹ್ಮಣಮುನಿಯೇ, ನಿನ್ನ ಭಕ್ತಿಯು ಬಹಳ ದೃಢವಾದುದು. ನಾನೀಗ ನಿನ್ನನ್ನು ಪರೀಕ್ಷೆಮಾಡಿದೆನು.

೫೧. ನಿನ್ನ ಬಂಧುಗಳೆಲ್ಲರೊಡಗೂಡಿ ಮನದಾಸೆ ತೀರುವಂತೆ ಯಾವಾಗಲೂ ಭಕ್ಷ್ಯಗಳನ್ನೂ ಭೋಜ್ಯಗಳನ್ನೂ ಭುಜಿಸುತ್ತಿರು. ನನ್ನಲ್ಲಿ ಭಕ್ತಿಯನ್ನಿಟ್ಟಿರುವ ನೀನು ಯಾವಾಗಲೂ ಸುಖವಾಗಿರು. ದುಃಖವು ನಿನ್ನನ್ನು ಪೀಡಿಸದಿರಲಿ.

೫೨. ಎಲೈ ಮಹಾಭಾಗ್ಯಶಾಲಿಯಾದ ಉಪಮನ್ಯುವೇ, ಇಂದಿನಿಂದ ಈ ಪಾರ್ವತಿಯು ನಿನ್ನ ತಾಯಿಯಾಗಿರುವಳು. ನಾನು ನಿನ್ನನ್ನು ಮಗನನ್ನಾಗಿ ಸ್ವೀಕರಿಸಿರುವೆನು. ನಿನಗೆ ನಮ್ಮ ಕುಮಾರಭಾವವು ಶಾಶ್ವತವಾಗಿರುವುದು.

ದುಗ್ಧದಧ್ಯಾಜ್ಯಮಧುನಾಮರ್ಣವಾಶ್ಚ ಸಹಸ್ರಶಃ ।
ಭಕ್ಷ್ಯಭೋಜ್ಯಾದಿವಸ್ತೂನಾಮರ್ಣವಾಶ್ಚಾಖಿಲಾಸ್ತಥಾ ॥ ೫೩ ॥

ತುಭ್ಯಂ ದತ್ತಾ ಮಯಾ ಪ್ರೀತ್ಯಾ ತ್ವಂ ಗೃಹ್ಣೀಷ್ವ ಮಹಾಮುನೇ ।
ಅಮರತ್ವಂ ತಥಾ ದಕ್ಷ ಗಾಣಪತ್ಯಂ ಚ ಶಾಶ್ವತಂ ॥ ೫೪ ॥

ಪಿತಾಹಂ ತೇ ಮಹಾದೇವೋ ಮಾತಾ ತೇ ಜಗದಂಬಿಕಾ ।
ವರಾನ್ವರಯ ಸುಪ್ರೀತ್ಯಾ ಮನೋಽಭಿಲಷಿತಾನ್ವರಾನ್ ॥ ೫೫ ॥

ಅಜರಶ್ಚಾಮರಶ್ಚೈವ ಭವ ತ್ವಂ ದುಃಖವರ್ಜಿತಃ ।
ಯಶಸ್ವೀ ವರತೇಜಸ್ವೀ ದಿವ್ಯಜ್ಞಾನೀ ಮಹಾಪ್ರಭುಃ ॥ ೫೬ ॥

---

೫೩. ನಾನೀಗ ನಿನಗೆ ಪ್ರೀತಿಯಿಂದ ಸಾವಿರಗಟ್ಟಲೆ ಹಾಲು, ಮೊಸರು, ತುಪ್ಪ, ಜೇನುಗಳ ಸಮುದ್ರಗಳನ್ನೂ ಹಾಗೆಯೇ ಭಕ್ಷ್ಯ, ಭೋಜ್ಯವಸ್ತುಗಳ ಸಾಗರಗಳನ್ನೂ ರುಚಿನೋಡಲೆಂದು ಕರುಣಿಸಿರುವೆನು ಎಲೈ ಮಹಾಮುನಿಯೇ, ಅವನ್ನು ಸ್ವೀಕರಿಸು

೫೪ ಮತ್ತು ಎಲೈ ಸಾಮರ್ಥ್ಯಶಾಲಿಯೇ, ನಿನಗೆ ಸಾವಿಲ್ಲದಿರಲಿ. ನೀನು ಎಂದೆಂದಿಗೂ ನನ್ನ ಗಣಾಧಿಪತಿಯಾಗಿ ಬಾಳು.

೫೫. ಮಹಾದೇವನೆನಿಸಿದ ನಾನೇ ನಿನಗೆ ತಂದೆಯಾಗಿರುವೆನು ಜಗನ್ಮಾತೆಯಾದ ಈ ಸರ್ವಮಂಗಳೆಯೇ, ನಿನಗೆ ತಾಯಿಯಾಗಿರುವಳು ನಿನ್ನ ಮನಸ್ಸಿಗೆ ಬೇಕಾದ ಉತ್ತಮವಾದ ವರಗಳನ್ನು ಸಂತೋಷದಿಂದ ಕೇಳು

೫೬. ನಿನ್ನನ್ನು ಮುಪ್ಪು ಸಾವೂ ಬಳಿಸಾರದಿರಲಿ. ನಿನಗೆ ವ್ಯಸನವೆಂಬುದೇ ಇಲ್ಲದಿರಲಿ. ನೀನು ಮಹಾಕೀರ್ತಿಶಾಲಿಯಾಗು. ಒಳ್ಳೆಯ ತೇಜಸ್ಸಿನಿಂದ ಮೆರೆಯುವವನಾಗು. ದಿವ್ಯವಾದ ಜ್ಞಾನವುಳ್ಳವನಾಗು ಎಂದನು.

ಅಥ ಶಂಭುಃ ಪ್ರಸನ್ನಾತ್ಮಾ ಸ್ಮೃತ್ವಾ ತಸ್ಯ ತಪೋ ಮಹತ್ ।
ಪುನರ್ದಶ ವರಾನ್ದಿವ್ಯಾನ್ಮುನಯೇ ಹ್ಯುಪಮನ್ಯವೇ ॥ ೫೭ ॥

ವ್ರತಂ ಪಾಶುಪತಂ ಜ್ಞಾನಂ ವ್ರತಯೋಗಂ ಚ ತತ್ತ್ವತಃ ।
ದದೌ ತಸ್ಮೈ ಪ್ರವಕ್ತೃತ್ವಂ ಪಾಟವಂ ಚ ನಿಜಂ ಪದಂ ॥ ೫೮ ॥

ಏವಂ ದತ್ವಾ ಮಹಾದೇವಃ ಕರಾಭ್ಯಾಮುಪಗೃಹ್ಯ ತಂ ।
ಮೂರ್ಧ್ನ್ಯಾಘ್ರಾಯ ಸುತಸ್ತೇಽಯಮಿತಿ ದೇವ್ಯೈ ನ್ಯವೇದಯತ್ ॥ ೫೯ ॥

ದೇವೀ ಚ ಶೃಣ್ವತೀ ಪ್ರೀತ್ಯಾ ಮೂರ್ಧ್ನಿ ದೇಶೇ ಕರಾಂಬುಜಂ ।
ವಿನ್ಯಸ್ಯ ಪ್ರದದೌ ತಸ್ಮೈ ಕುಮಾರಪದಮಕ್ಷಯಂ ॥ ೬೦ ॥

---

೫೭-೫೮. ಅನಂತರ ಆ ಮಹೇಶ್ವರನು ಉಪಮನ್ಯುವೆಸಗಿದ ಕಠಿಣವಾದ ತಪಶ್ಚರ್ಯೆಯನ್ನು ನೆನೆದು ಮತ್ತೆ ಹತ್ತು ವರಗಳನ್ನಿತ್ತುದಲ್ಲದೆ ಅವನಿಗೆ ಪಾಶುಪತವ್ರತವನ್ನು ಉಪದೇಶಮಾಡಿ, ರಹಸ್ಯವಾದ ಆ ಪಾಶುಪತಜ್ಞಾನವನ್ನೂ ಅದರ ನಿಯಮಪೂರ್ವಕವಾದ ವಿಧಿಗಳನ್ನು ಚೆನ್ನಾಗಿ ತಿಳಿಸಿ, ಬಳಿಕ ಸೊಗಸಾದ ವಾಗ್ಮಿತೆಯನ್ನೂ, ಚಾತುರ್ಯವನ್ನೂ, ತನ್ನ ಲೋಕದಲ್ಲಿ ನಿವಾಸವನ್ನೂ ಅವನಿಗೆ ಅನುಗ್ರಹಿಸಿದನು.

೫೯. ಈರೀತಿಯಾಗಿ ಆ ಶಂಕರನು ವರಗಳನ್ನಿತ್ತಬಳಿಕ ಆ ಉಪಮನ್ಯುವನ್ನು ಎರಡು ಕೈಗಳಿಂದಲೂ ಎತ್ತಿಹಿಡಿದುಕೊಂಡು ಪ್ರೀತಿಯಿಂದ ತಲೆಯನ್ನು ಮೂಸಿನೋಡಿ ಇದೋ ನಿನ್ನ ಮಗನಿವನು ಎಂದು ತನ್ನ ದೇವಿಯಾದ ಪಾರ್ವತಿಗೆ ಅರುಹಿದನು.

೬೦. ಆ ಮಾತನ್ನು ಕೇಳಿ ಜಗಜ್ಜನನಿಯು ಪ್ರೀತಿಯಿಂದ ಆ ಉಪಮನ್ಯುವಿನ ತಲೆಯಮೇಲೆ ಕಮಲದಂತೆ ಕಂಗೊಳಿಸುವ ತನ್ನ ಕೈಯ್ಯನ್ನಿಟ್ಟು ನಾಶರಹಿತವಾದ ಕುಮಾರಪದವಿಯನ್ನು ಅನುಗ್ರಹಿಸಿದಳು.

ಕ್ಷೀರಾಬ್ಧಿಮಪಿ ಸಾಕಾರಂ ಕ್ಷೀರಸ್ವಾದುಕರೋದಧಿಃ ।
ಉಪಾಸ್ಥಾಸ್ಯ ದದೌ ತಸ್ಮೈ ಪಿಂಡೀಭೂತಮನಶ್ವರಂ ॥ ೬೧ ॥

ಯೋಗೈಶ್ವರ್ಯಂ ಸದಾ ತುಷ್ಟಂ ಬ್ರಹ್ಮವಿದ್ಯಾಮನಶ್ವರಾಂ ।
ಸಮೃದ್ಧಿಂಪರಮಾಂ ತಸ್ಮೈ ದದೌ ಸಂತುಷ್ಟಮಾನಸಃ ॥ ೬೨ ॥

ಸೋಽಪಿ ಲಬ್ಧ್ವಾ ವರಾನ್ದಿವ್ಯಾನ್ಕುಮಾರತ್ವಂ ಚ ಸರ್ವದಾ ।
ತಸ್ಮಾಚ್ಛಿವಾಚ್ಚ ತಸ್ಯಾಶ್ಚ ಶಿವಾಯಾ ಮುದಿತೋಽಭವತ್ ॥ ೬೩ ॥

ತತಃ ಪ್ರಸನ್ನ ಚೇತಸ್ಕಃ ಸುಪ್ರಣಮ್ಯ ಕೃತಾಂಜಲಿಃ ।
ಯಯಾಚೇ ಸ ವರಂ ಪ್ರೀತ್ಯಾ ದೇವದೇವಾನ್ಮಹೇಶ್ವರಾತ್ ॥ ೬೪ ॥

॥ ಉಪಮನ್ಯುರುವಾಚ ॥

ಪ್ರಸೀದ ದೇವದೇವೇಶ ಪ್ರಸೀದ ಪರಮೇಶ್ವರ ।
ಸ್ವಭಕ್ತಿಂ ದೇಹಿ ಪರಮಾಂ ದಿವ್ಯಾಮವ್ಯಭಿಚಾರಿಣೀಂ ॥ ೬೫ ॥

---

೬೧. ಬಳಿಕ ಆ ಉಪಮನ್ಯುವಿಗೆ ಆ ಶಂಕರನು ಎಂದೆಂದಿಗೂ ಮುಗಿದು ಹೋಗದಿರುವಂತೆ ನಿಜವಾದ ರೂಪದಿಂದ ಕಾಣಿಸುತ್ತಾ ಬಳಿಯಲ್ಲಿದ್ದ ಕ್ಷೀರಸಮುದ್ರವನ್ನು ತನ್ನ ಅಂಗೈಯ್ಯೆಲ್ಲಾ ಹಾಲಿನಿಂದ ತೊಯ್ದು ಮಧುರವಾಗುವಹಾಗೆ ಮೊತ್ತವಾಗಿ ಎತ್ತಿಕೊಟ್ಟನು.

೬೨. ಮತ್ತೆ ಆ ಸಂತೋಷಭರಿತನಾದ ಶಂಕರನು ಅವನಿಗೆ ಯೋಗಶಾಸ್ತ್ರ ನಿಷ್ಣಾತತೆಯನ್ನೂ, ಸರ್ವದಾ ಸಂತೋಷವನ್ನೂ, ಅವಿನಾಶಿಯೆನಿಸಿದ ಬ್ರಹ್ಮಜ್ಞಾನವನ್ನೂ, ಮಹತ್ತಾದ ಸಂಪತ್ತನ್ನೂ ಕರುಣಿಸಿದನು.

೬೩ ಆ ಉಪಮನ್ಯುವು ಇಂತು ತನಗೆ ಶಿವನೂ ಶಿವೆಯೂ ಇತ್ತ ದಿವ್ಯವಾದ ವರಗಳನ್ನೂ, ಶಾಶ್ವತವಾದ ಕುಮಾರಪದವಿಯನ್ನೂ, ಪಡೆದು ಬಹುಸಂತೋಷವನ್ನು ತಾಳಿದನು.

೬೪. ಅನಂತರ ಪ್ರಸನ್ನವಾದ ಮನಸ್ಸುಳ್ಳ ಆ ಉಪಮನ್ಯುಕುಮಾರನು ಸಾಷ್ಟಾಂಗವಾಗಿ ನಮಸ್ಕರಿಸಿ ಅಂಜಲಿಬದ್ಧನಾಗಿ ಆ ದೇವದೇವನಾದ ಮಹೇಶ್ವರನಿಂದ ವರವನ್ನು ಬೇಡಿದನು.

೬೫. ಎಲೈ ದೇವದೇವನೇ, ಪ್ರಸನ್ನನಾಗು ಓ ಪರಮೇಶ್ವರ, ಪ್ರಸನ್ನನಾಗು. ನಿನ್ನನ್ನು ಬಿಟ್ಟು ಮತ್ತೊಬ್ಬರಲ್ಲಿ ನೆಲಸದಂತೆ ಪರಮಾದ್ಭುತವಾದ ಭಕ್ತಿಯು ಎಂದೆಂದಿಗೂ ನನ್ನಲ್ಲಿ ನೆಲಸುವಂತೆ ಅನುಗ್ರಹದೋರು.

ಶ್ರದ್ಧಾಂ ದೇಹಿ ಮಹಾದೇವ ಸ್ವಸಂಬಂಧಿಷು ಮೇ ಸದಾ ।
ಸ್ವದಾಸ್ಯಂ ಪರಮಂ ಸ್ನೇಹಂ ಸ್ವಸಾನ್ನಿಧ್ಯಂ ಚ ಸರ್ವದಾ ॥ ೬೬ ॥

॥ ನಂದೀಶ್ವರ ಉವಾಚ ॥

ಏವಮುಕ್ತ್ವಾ ಪ್ರಸನ್ನಾತ್ಮಾ ಹರ್ಷಗದ್ಗದಯಾ ಗಿರಾ ।
ತುಷ್ಟಾವ ಸ ಮಹಾದೇವಮುಪಮನ್ಯುರ್ದ್ವಿಜೋತ್ತಮಃ ॥ ೬೭ ॥

ಏವಮುಕ್ತಶ್ಶಿವಸ್ತೇನ ಸರ್ವೇಷಾಂ ಶೃಣ್ವತಾಂ ಪ್ರಭುಃ ।
ಪ್ರತ್ಯುವಾಚ ಪ್ರಸನ್ನಾತ್ಮೋಪಮನ್ಯುಂ ಸಕಲೇಶ್ವರಃ ॥ ೬೮ ॥

॥ ಶಿವ ಉವಾಚ ॥

ವತ್ಸೋಪಮನ್ಯೋ ಧನ್ಯಸ್ತ್ವಂ ಮಮ ಭಕ್ತೋ ವಿಶೇಷತಃ ।
ಸರ್ವಂ ದತ್ತಂ ಮಯಾ ತೇ ಹಿ ಯದ್ವೃತ್ತಂ ಭವತಾಽನಘ ॥ ೬೯ ॥

---

೬೬. ಎಲೈ ಮಹೇಶ್ವರನೇ, ನನ್ನ ಬಂಧುಬಳಗದಲ್ಲಿ ಎಂದೆಂದಿಗೂ ನನಗೆ ವಿಶ್ವಾಸವಿರುವಂತೆ ಕರುಣಿಸುವುದಲ್ಲದೆ ಪರಮಪಾವನವಾದ ನಿನ್ನ ಸೇವೆಯು ಎಂದೆಂದಿಗೂ ಘಟಿಸಿರುವಂತೆಯೂ ನಿನ್ನ ಪ್ರೀತಿಯು ಯಾವಾಗಲೂ ನನ್ನಮೇಲೆ ಇರುವಂತೆಯೂ ಸರ್ವದಾ ನನ್ನ ಬಳಿಯಲ್ಲಿಯೇ ನೀನಿರುವಂತೆಯೂ ಕರುಣಿಸು ಎಂದನು.

೬೭. ಎಲೈ ಮುನಿಯೇ, ಈರೀತಿಯಾಗಿ ಹೇಳಿ ಆ ಉಪಮನ್ಯುವು ಸಂತೋಷದಿಂದ ಕಂಠವು ಗದ್ಗದವಾಗಲು ಪ್ರಸನ್ನವಾದ ಮನಸ್ಸಿನಿಂದ ಆ ಮಹಾದೇವನನ್ನು ಸ್ತೋತ್ರಮಾಡಿದನು.

೬೮. ಬಳಿಕ ಹೀಗೆ ಪ್ರಾರ್ಥಿಸಲ್ಪಟ್ಟ ಆ ಶಂಕರನು ಪ್ರಸನ್ನಚಿತ್ತನಾಗಿ ಎಲ್ಲರೂ ಕೇಳುವಂತೆ ಆ ಉಪಮನ್ಯುಕುಮಾರನನ್ನಿಂತೆಂದನು.

೬೯. ಎಲೈ ಕಲಂಕರಹಿತನಾದ ಉಪಮನ್ಯುಕುಮಾರನೇ, ನನ್ನಲ್ಲಿ ಮಿತಿಮೀರಿದ ಭಕ್ತಿಯುಳ್ಳ ನೀನು ಧನ್ಯನು. ನೀನು ಕೇಳಿದ ವರಗಳೆಲ್ಲವನ್ನೂ ನಾನೀಗ ಕೊಟ್ಟಿರುವೆನು.

ಅಜರಶ್ಚಾಮರಶ್ಚ ತ್ವಂ ಸರ್ವದಾ ದುಃಖವರ್ಜಿತಃ ।
ಸರ್ವಪೂಜ್ಯೋ ನಿರ್ವಿಕಾರೀ ಭಕ್ತಾನಾಂ ಪ್ರವರೋ ಭವ ॥ ೭೦ ॥

ಅಕ್ಷಯಾ ಬಾಂಧವಾಶ್ಚೈವ ಕುಲಂ ಗೋತ್ರಂ ಚ ತೇ ಸದಾ ।
ಭವಿಷ್ಯತಿ ದ್ವಿಜಶ್ರೇಷ್ಠ ಮಯಿ ಭಕ್ತಿಶ್ಚ ಶಾಶ್ವತೀ ॥ ೭೧ ॥

ಸಾನ್ನಿಧ್ಯಂ ಚಾಶ್ರಮೇ ನಿತ್ಯಂ ಕರಿಷ್ಯಾಮಿ ಮುನೇ ತವ ।
ತಿಷ್ಠ ವತ್ಸ ಯಥಾಕಾಮಂ ನೋತ್ಕಂಠಾಂ ಚ ಕರಿಷ್ಯಸಿ ॥ ೭೨ ॥

॥ ನಂದೀಶ್ವರ ಉವಾಚ ॥

ಏವಮುಕ್ತ್ವಾ ಸ ಭಗವಾಂಸ್ತಸ್ಮೈ ದತ್ವಾ ವರಾನ್ವರಾನ್ ।
ಸಾಂಬಶ್ಚ ಸಗಣಸ್ಸದ್ಯಸ್ತತ್ರೈವಾಂತರ್ದಧೇ ಪ್ರಭುಃ ॥ ೭೩ ॥

---

೭೦. ನಿನ್ನನ್ನು ಮುಪ್ಪು ಸಾವೂ ಪೀಡಿಸದಿರಲಿ. ನಿನಗೆ ಎಂದೆಂದಿಗೂ ದುಃಖವೆನ್ನುವುದೇ ಒದಗದಿರಲಿ. ನಿನ್ನನ್ನು ಸಕಲರೂ ಪೂಜಿಸುವಂತಾಗಲಿ. ಯಾವೊಂದು ವಿಕಾರವೂ ನಿನ್ನನ್ನು ಮೋಹಗೊಳಿಸದಿರಲಿ. ನೀನು ನನ್ನ ಭಕ್ತರಲ್ಲೆಲ್ಲಾ ಬಹು ಮೇಲಾದವನೆನೆಸಿ ಬಾಳು.

೭೧. ನಿನ್ನ ಬಂಧುಗಳೆಲ್ಲರೂ ನಾಶರಹಿತರಾಗಿರಲಿ. ನಿನ್ನ ಸಂತತಿಯೂ ವಂಶವೂ ಕೊನೆಯಿಲ್ಲದೆ ಇರಲಿ. ಎಲೈ ವಿಪ್ರವರ್ಯನೇ, ನನ್ನಲ್ಲಿ ನಿನ್ನ ಭಕ್ತಿಯು ಎಂದೆಂದಿಗೂ ಅಚ್ಚಳಿಯದೆ ನಿಲ್ಲುವುದು.

೭೨. ಎಲೈ ಮುನಿಯೇ, ನಿನ್ನ ಆಶ್ರಮದಲ್ಲಿಯೇ ನಾನು ಯಾವಾಗಲೂ ನೆಲೆಸಿರುವೆನು. ನೀನು ಇನ್ನುಮೇಲೆ ಸ್ವಲ್ಪವೂ ಮನಸ್ಸಿನಲ್ಲಿ ದುಗುಡವನ್ನು ತಾಳದೆ ನಿನ್ನಿಷ್ಟಬಂದಂತೆ ಸುಖವಾಗಿರು ಎಂದನು.

೭೩. ಓ ಸನತ್ಕುಮಾರ, ಈರೀತಿಯಾಗಿ ಆ ಭಗವಂತನು ಅವನಿಗೆ ಉತ್ತಮವಾದ ವರಗಳನ್ನಿತ್ತು ಪಾರ್ವತಿಯೊಡನೆಯೂ, ಗಣಗಳೊಡನೆಯೂ ಕೂಡಿ ಅಲ್ಲಿಂದ ಕಣ್ಮರೆಯಾದನು.

ಉಪಮನ್ಯುಃ ಪ್ರಸನ್ನಾತ್ಮಾ ಪ್ರಾಪ್ಯ ಶಂಭೋರ್ವರಾನ್ವರಾನ್ ।
ಜಗಾಮ ಜನನೀಸ್ಥಾನಂ ಮಾತ್ರೇ ಸರ್ವಮವರ್ಣಯತ್ ॥ ೭೪ ॥

ತಚ್ಛ್ರುತ್ವಾ ತಸ್ಯ ಜನನೀ ಮಹಾಹರ್ಷಮವಾಪ ಸಾ ।
ಸರ್ವಪೂಜ್ಯೋಽಭವತ್ಸೋಽಪಿ ಸುಖಂ ಪ್ರಾಪಾಧಿಕಂ ಸದಾ ॥ ೭೫ ॥

ಇತ್ಥಂ ತೇ ವರ್ಣಿತಸ್ತಾತ ಶಿವಸ್ಯ ಪರಮಾತ್ಮನಃ ।
ಸುರೇಶ್ವರಾವತಾರೋ ಹಿ ಸರ್ವದಾ ಸುಖದಃ ಸತಾಂ ॥ ೭೬ ॥

ಇದಮಾಖ್ಯಾನಮನಘಂ ಸರ್ವಕಾಮಫಲಪ್ರದಂ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಭುಕ್ತಿಮುಕ್ತಿಪ್ರದಂ ಸತಾಂ ॥ ೭೭ ॥

---

೭೪. ಹೀಗೆ ಶಿವನಿಂದ ಶ್ರೇಷ್ಠವಾದ ವರಗಳನ್ನು ಪಡೆದು ಸುಪ್ರೀತನಾದ ಆ ಉಪಮನ್ಯುಕುಮಾರನು ತನ್ನ ತಾಯಿಯಿದ್ದ ಬಳಿಗೆ ಬಂದು ಆಕೆಗೆ ಆ ಎಲ್ಲ ಸಂಗತಿಯನ್ನೂ ತಿಳಿಸಿದನು.

೭೫. ಅದನ್ನು ಕೇಳಿ ಆ ತಾಯಿಯು ಬಹುವಾಗಿ ಸಂತೋಷವನ್ನು ತಾಳಿದಳು. ಆ ಉಪಮನ್ಯುವೂ ಸಹ ಎಲ್ಲರಿಂದಲೂ ಮನ್ನಣೆಯನ್ನು ಹೊಂದಿದನು. ಬಹುಮೇಲಾದ ಸುಖವನ್ನೂ ಅನುಭವಿಸಿದನು.

೭೬. ಅಪ್ಪಾ, ಈರೀತಿಯಾಗಿ ಸತ್ಪುರುಷರಿಗೆ ಸರ್ವಕಾಲದಲ್ಲಿಯೂ ಸುಖದಾಯಕವೆನಿಸಿದ ಆ ಪರಮಪುರುಷನಾದ ಶಿವನ ಸುರೇಶ್ವರಲೀಲೆಯನ್ನು ನಿನಗೆ ವರ್ಣಿಸಿದೆನು.

೭೭. ಈ ಚರಿತವು ಪಾಪರಹಿತವಾದುದು. ಬಯಸಿದ ಕೋರಿಕೆಗಳೆಲ್ಲವನ್ನೂ ಈಡೇರಿಸುವಂತಹುದು. ಸ್ವರ್ಗದಾಯಕವೆನಿಸಿದುದು. ಯಶಸ್ಕರವಾದುದು. ಆಯುಸ್ಸನ್ನು ಹೆಚ್ಚಿಸುವಂತಹುದು. ಸತ್ಪುರುಷರಿಗೆ ಭೋಗಮೋಕ್ಷಗಳನ್ನು ಈಯುವಂತಹುದು.

**ಯ ಏತಚ್ಛೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।**
**ಇಹ ಸರ್ವಸುಖಂ ಭುಕ್ತ್ವಾ ಸೋಽಂತೇ ಶಿವಗತಿಂ ಲಭೇತ್ ॥ ೭೮ ॥**

**ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಸುರೇಶ್ವರಾಖ್ಯಶಿವಾವತಾರವರ್ಣನಂ ನಾಮ ದ್ವಾತ್ರಿಂಶೋಽಧ್ಯಾಯಃ**

---

೭೮. ಯಾವನು ಈ ಚರಿತ್ರವನ್ನು ಭಕ್ತಿಯಿಂದ ಮನವಿಟ್ಟು ಆಲಿಸುವನೋ ಅಥವಾ ಮತ್ತೊಬ್ಬರು ಕೇಳುವಂತೆ ಕೀರ್ತನೆಮಾಡುವನೋ ಆತನು ಈ ಲೋಕದಲ್ಲಿ ಎಲ್ಲ ಸುಖಗಳನ್ನೂ ಅನುಭವಿಸಿ ಕೊನೆಗೆ ಶಿವಸನ್ನಿಧಿಯನ್ನು ಸೇರುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಸುರೇಶ್ವರಾವತಾರವರ್ಣನವೆಂಬ ಮೂವತ್ತೆರಡನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ತ್ರಯಸ್ತ್ರಿಂಶೋಽಧ್ಯಾಯಃ



**॥ ನಂದೀಶ್ವರ ಉವಾಚ ॥**

**ಸನತ್ಕುಮಾರ ಸುಪ್ರೀತ್ಯಾ ಶಿವಸ್ಯ ಪರಮಾತ್ಮನಃ ।**
**ಅವತಾರಂ ಶೃಣು ವಿಭೋರ್ಜಟಿಲಾಹ್ವಂ ಸುಪಾವನಂ ॥ ೧ ॥**

**ಪುರಾ ಸತೀ ದಕ್ಷಕನ್ಯಾ ತ್ಯಕ್ತ್ವಾ ದೇಹಂ ಪಿತುರ್ಮಖೇ ।**
**ಸ್ವಪಿತ್ರಾಽನಾದೃತಾ ಜಜ್ಞೇ ಮೇನಾಯಾಂ ಹಿಮಭೂಧರಾತ್ ॥ ೨ ॥**

---

### ಮೂವತ್ತಮೂರನೆಯ ಅಧ್ಯಾಯವು.

೧. ಎಲೈ ಸನತ್ಕುಮಾರಮುನಿಯೇ, ಸರ್ವವ್ಯಾಪಿಯೂ ಪರಮಪುರುಷನೂ ಆದ ಆ ಶಂಕರನ ಪರಮಪಾವನವಾದ ಜಟಿಲನೆಂಬ ಅವತಾರದ ಕಥೆಯನ್ನು ವಿವರಿಸುವೆನು ಕೇಳು.

೨. ಹಿಂದೆ ದಕ್ಷಬ್ರಹ್ಮನ ಮಗಳಾದ ಸತೀದೇವಿಯು, ತನ್ನ ತಂದೆಯಿಂದ ಅವಮಾನಿತಳಾಗಿ ಆತನು ಮಾಡುತ್ತಿದ್ದ ಯಜ್ಞಶಾಲೆಯಲ್ಲಿ ತನ್ನ ಶರೀರವನ್ನು ತೊರೆದು ಬಳಿಕ ಹಿಮವಂತನಿಗೂ ಮೇನಾದೇವಿಗೂ ಮಗಳಾಗಿ ಹುಟ್ಟಿದಳು.

ಸಾ ಗತ್ವಾ ಗಹನೇಽರಣ್ಯೇ ತೇಪೇ ಸುವಿಮಲಂ ತಪಃ ।
ಶಂಕರಂ ಪತಿಮಿಚ್ಛಂತೀ ಸಖೀಭ್ಯಾಂ ಸಂಯುತಾ ಶಿವಾ ॥ ೩ ॥

ತತ್ತಪಃ ಸುಪರೀಕ್ಷಾರ್ಥಂ ಸಪ್ತರ್ಷೀನ್ಪ್ರೇಷಯಚ್ಛಿವಃ ।
ತಪಃಸ್ಥಾನಂ ತು ಪಾರ್ವತ್ಯಾ ನಾನಾಲೀಲಾವಿಶಾರದಃ ॥ ೪ ॥

ತೇ ಗತ್ವಾ ತತ್ರ ಮುನಯಃ ಪರೀಕ್ಷಾಂ ಚಕ್ರುರಾದರಾತ್ ।
ತಸ್ಯಾಃ ಸುಯತ್ನತೋ ನೈವ ಸಮರ್ಥಾ ಹ್ಯಭವಂಶ್ಚ ತೇ ॥ ೫ ॥

ತತ್ರಾಗತ್ಯ ಶಿವಂ ನತ್ವಾ ವೃತ್ತಾಂತಂ ಚ ನಿವೇದ್ಯ ತತ್ ।
ತದಾಜ್ಞಾಂ ಸಮನುಪ್ರಾಪ್ಯ ಸ್ವಲೋಕಂ ಜಗ್ಮುರಾದರಾತ್ ॥ ೬ ॥

ಗತೇಷು ತೇಷು ಮುನಿಷು ಸ್ವಸ್ಥಾನಂ ಶಂಕರಃ ಸ್ವಯಂ ।
ಪರೀಕ್ಷಿತುಂ ಶಿವಾವೃತ್ತಮೈಚ್ಛತ್ಸೂತಿಕರಃ ಪ್ರಭುಃ ॥ ೭ ॥

---

೩. ಆ ಸರ್ವಮಂಗಳೆಯು ಶ್ರೀ ಶಂಕರನನ್ನೇ ಕೈಹಿಡಿಯಬೇಕೆಂದು ನಿಶ್ಚೈಸಿ ನಟ್ಟವಾದ ಅರಣ್ಯವೊಂದನ್ನು ತನ್ನಿರ್ವರು ಗೆಳತಿಯರೊಡನೆ ಒಳಹೊಕ್ಕು, ಶುದ್ಧವಾದ ತಪಸ್ಸನ್ನಾಚರಿಸಿದಳು.

೪. ನಾನಾವಿಧವಾದ ಲೀಲೆಗಳನ್ನು ತೋರುವುದರಲ್ಲಿ ಚದುರನಾದ ಆ ಶಿವನು ಆ ಪಾರ್ವತಿಯ ತಪಸ್ಸನ್ನು ಪರೀಕ್ಷಿಸಲೋಸುಗ ಸಪ್ತರ್ಷಿಗಳನ್ನು ಅವಳು ತಪಸ್ಸು ಮಾಡುತ್ತಿದ್ದೆಡೆಗೆ ಕಳುಹಿಸಿದನು.

೫. ಆ ಸಪ್ತರ್ಷಿಗಳು ಅವಳು ತಪಸ್ಸುಮಾಡುತ್ತಿದ್ದಲ್ಲಿಗೆ ಹೋಗಿ ಕುತೂಹಲದಿಂದ ಪರೀಕ್ಷೆಮಾಡತೊಡಗಿದರು. ಆದರೇನು ? ಅವರೆಷ್ಟೇ ಪ್ರಯತ್ನಿಸಿದರೂ ಒಂದು ಹುಳುಕನ್ನು ಕಂಡುಹಿಡಿಯಲೂ ಅವರಿಗೆ ಸಾಧ್ಯವಾಗಲಿಲ್ಲ.

೬. ಬಳಿಕ ಅವರು ಅಲ್ಲಿಂದ ಶಿವನ ಬಳಿಗೆ ಬಂದು ಆ ಸಂಗತಿಯೆಲ್ಲವನ್ನೂ ತಿಳಿಸಿ ಅವನ ಅಪ್ಪಣೆಯನ್ನು ಪಡೆದು ತಂತಮ್ಮ ಲೋಕಕ್ಕೆ ತೆರಳಿದರು.

೭. ಇತ್ತ ಸಪ್ತರ್ಷಿಗಳು ತಮ್ಮ ಲೋಕಕ್ಕೆ ತೆರಳುತ್ತಲೇ ಅತ್ತ ಅದ್ಭುತಲೀಲಾಮೂರ್ತಿಯಾದ ಆ ಶಂಕರನು ತಾನೇ ಹೋಗಿ ಆ ಪರ್ವತರಾಜನಂದಿನಿಯ ನಡೆವಳಿಕೆಯನ್ನು ಪರೀಕ್ಷಿಸಬೇಕೆಂದು ಮನಸ್ಸುಮಾಡಿದನು.

ಸುಪ್ರಸನ್ನಸ್ತಪಸ್ವೀಚ್ಛಾಶಮನಾದಯಮೀಶ್ವರಃ ।
ಬ್ರಹ್ಮಚರ್ಯಸ್ವರೂಪೋಽಭೂತ್ತದಾದ್ಭುತತರಃ ಪ್ರಭುಃ ॥ ೮ ॥

ಅತೀವ ಸ್ಥವಿರೋ ವಿಪ್ರದೇಹಧಾರೀ ಸ್ವತೇಜಸಾ ।
ಪ್ರಜ್ವಲನ್ಮನಸಾ ಹೃಷ್ಟೋ ದಂಡೀ ಛತ್ರೀ ಮಹೋಜ್ಜ್ವಲಃ ॥ ೯ ॥

ಧೃತ್ವೈವಂ ಜಾಟಿಲಂ ರೂಪಂ ಜಗಾಮ ಗಿರಿಜಾವನಂ ।
ಅತಿಪ್ರೀತಿಯುತಶ್ಶಂಭುಶ್ಶಂಕರೋ ಭಕ್ತವತ್ಸಲಃ ॥ ೧೦ ॥

ತತ್ರಾಪಶ್ಯತ್ಸ್ಥಿತಾಂ ದೇವೀಂ ಸಖೀಭಿಃ ಪರಿವಾರಿತಾಂ ।
ವೇದಿಕೋಪರಿ ಶುದ್ಧಾಂ ತಾಂ ಶಿವಾಮಿವ ವಿಧೋಃ ಕಲಾಂ ॥ ೧೧ ॥

ಶಂಭುರ್ನಿರೀಕ್ಷ್ಯ ತಾಂ ದೇವೀಂ ಬ್ರಹ್ಮಚಾರಿಸ್ವರೂಪವಾನ್ ।
ಉಪಕಂಠಂ ಯಯೌ ಪ್ರೀತ್ಯಾ ಚೋತ್ಸುಖೀ ಭಕ್ತವತ್ಸಲಃ ॥ ೧೨ ॥

---

೮. ಬಳಿಕ ತನ್ನ ಅಭಿಲಾಷೆಯನ್ನು ನೆರವೇರಿಸಲು ಆ ಶಂಕರನು ಮಹಾ ಸಂತೋಷದಿಂದ ಬ್ರಹ್ಮಚಾರಿವೇಷವನ್ನು ತಾಳಿದನು.

೯. ಆ ಶಂಕರನು ಅತಿಶಯವಾದ ತೇಜಸ್ಸಿನಿಂದ ಮೆರೆಯುತ್ತಾ ಬಹು ಮುದಿಯನಾದ ಬ್ರಾಹ್ಮಣನಂತೆ ಆಕಾರವನ್ನು ತಾಳಿ ಕೋಲೂರಿಕೊಂಡು ಛತ್ರಿಯನ್ನು ಹಿಡಿದು ಮನಸ್ಸಿನಲ್ಲಿ ಹರ್ಷವನ್ನು ತಾಳಿ ಅಲ್ಲಿಗೆ ಹೊರಟನು.

೧೦. ಭಕ್ತವತ್ಸಲನಾದ ಆ ಶಿವನು ಇಂತು ಮಹಾಪ್ರೀತಿಯಿಂದ ಜಡೆಗಟ್ಟಿದ ಮುದಿಬ್ರಹ್ಮಚಾರಿಯ ವೇಷವನ್ನು ತಳೆದು ಆ ಪರ್ವತರಾಜನಂದಿನಿಯು ತಪಸ್ಸು ಮಾಡುತ್ತಿದ್ದ ಕಾಡಿಗೆ ಬಂದನು.

೧೧. ಅಲ್ಲಿ ತನ್ನ ಸಖಿಯರೊಡನೆ ಪರಿವೃತಳಾಗಿ ಒಂದಾನೊಂದು ವೇದಿಕೆಯ ಮೇಲೆ ಕುಳಿತು ಶುದ್ಧವಾಗಿ ತಪವಂಗೈಯ್ಯುತ್ತಿರುವ ಆ ಗಿರಿರಾಜಕುಮಾರಿಯನ್ನು ಮಂಗಲಮಯವಾದ ಚಂದ್ರರೇಖೆಯಂತೆ ಕಂಡನು.

೧೨. ಬಳಿಕ ಭಕ್ತರಲ್ಲಿ ವಾತ್ಸಲ್ಯವುಳ್ಳ ಬ್ರಹ್ಮಚಾರಿವೇಷಧಾರಿಯಾದ ಆ ಶಿವನು ಕುತೂಹಲದಿಂದ ಅವಳಬಳಿ ಸಾರಿದನು.

**ಆಗತಂ ಸಾ ತದಾ ದೃಷ್ಟ್ವಾ ಬ್ರಾಹ್ಮಣಂ ತೇಜಸಾದ್ಭುತಂ ।**
**ಅಂಗೇಷು ಲೋಮಶಂ ಶಾಂತಂ ದಂಡಚರ್ಮಸಮನ್ವಿತಂ ॥ ೧೩ ॥**

**ಬ್ರಹ್ಮಚರ್ಯಧರಂ ವೃದ್ಧಂ ಜಟಿಲಂ ಸಕಮಂಡಲುಂ ।**
**ಅಪೂಜಯತ್ಪರಪ್ರೀತ್ಯಾ ಸರ್ವಪೂಜೋಪಹಾರಕೈಃ ॥ ೧೪ ॥**

**ತತಸ್ಸಾ ಪಾರ್ವತೀ ದೇವೀ ಪೂಜಿತಂ ಪರಯಾ ಮುದಾ ।**
**ಕುಶಲಂ ಪರ್ಯಪೃಚ್ಛತಂ ಬ್ರಹ್ಮಚಾರಿಣಮಾದರಾತ್ ॥ ೧೫ ॥**

**ಬ್ರಹ್ಮಚಾರಿಸ್ವರೂಪೇಣ ಕಸ್ತ್ವಂ ಹಿ ಕುತ ಆಗತಃ ।**
**ಇದಂ ವನಂ ಭಾಸಯಸಿ ವದ ವೇದವಿದಾಂ ವರ ॥ ೧೬ ॥**

---

೧೩-೧೪. ಆಗ ಆ ದೇವಿಯು ಅದ್ಭುತವಾದ ತೇಜಸ್ಸಿನಿಂದ ಮೆರೆಯುತ್ತಿರುವ ಮುದಿಯನಾದ ಬ್ರಾಹ್ಮಣ ಬ್ರಹ್ಮಚಾರಿಯು ತನ್ನ ಬಳಿ ಬರುತ್ತಿರುವುದನ್ನು ಕಂಡಳು. ಅವನ ಮೈಯ್ಯೆಲ್ಲಾ ಕೂದಲು ಬೆಳೆದಿದ್ದುವು ಆತನು ಮಹಾಶಾಂತನಾಗಿದ್ದನು. ಅವನ ಕೈಯ್ಯಲ್ಲಿ ದಂಡವೂ ಕಮಂಡಲವೂ ಶೋಭಿಸುತ್ತಿದ್ದುವು. ನಡುವಿನಲ್ಲಿ ಮೃಗ ಚರ್ಮವು ರಂಜಿಸುತ್ತಿತ್ತು. ಅವನ ತಲೆಯಲ್ಲಿ ಜಡೆಗಳು ನೇತಾಡುತ್ತಿದ್ದುವು. ಅವನನ್ನು ಕಂಡೊಡನೆಯೇ ಆಕೆಯು ಮಹಾಸಂತೋಷದಿಂದ ಎಲ್ಲರೀತಿಯ ಉಪಚಾರಗಳಿಂದ ಆತನನ್ನು ಸತ್ಕರಿಸಿದಳು.

೧೫. ಪಾರ್ವತಿಯು ಆತನನ್ನು ಸತ್ಕರಿಸಿದನಂತರ ಆದರದಿಂದ ಆ ಬ್ರಹ್ಮಚಾರಿಯ ಯೋಗಕ್ಷೇಮವನ್ನು ವಿಚಾರಿಸಿದಳು.

೧೬. ಎಲೈ ಬ್ರಹ್ಮಚಾರಿಯೇ, ನಿನ್ನೀಸ್ವರೂಪದಿಂದ ಈ ದಟ್ಟಡವಿಯನ್ನೆಲ್ಲಾ ಬೆಳಗುತ್ತಿರುವೆ. ನೀನು ಯಾರು ? ಎಲ್ಲಿಂದ ಬಂದೆ ? ಎಲೈ ವೇದವಿದನೇ, ಇವೆಲ್ಲವನ್ನೂ ನನಗೆ ತಿಳಿಸು ಎಂದನು.

॥ ನಂದೀಶ್ವರ ಉವಾಚ ॥

ಇತಿ ಪೃಷ್ಟಸ್ತು ಪಾರ್ವತ್ಯಾ ಬ್ರಹ್ಮಚಾರೀ ಸ ವೈ ದ್ವಿಜಃ ।
ಪ್ರತ್ಯುವಾಚ ದ್ರುತಂ ಪ್ರೀತ್ಯಾ ಶಿವಾಭಾವಪರೀಕ್ಷಯಾ ॥ ೧೭ ॥

॥ ಬ್ರಹ್ಮಚಾರ್ಯುವಾಚ ॥

ಅಹಮಿಚ್ಛಾಭಿಗಾಮೀ ಚ ಬ್ರಹ್ಮಚಾರೀ ದ್ವಿಜಸ್ಸ್ವೈ ।
ತಪಸ್ವೀ ಸುಖದೋಽನ್ಯೇಷಾಮುಪಕಾರೀ ನ ಸಂಶಯಃ ॥ ೧೮ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಬ್ರಹ್ಮಚಾರೀ ಸ ಶಂಕರೋ ಭಕ್ತವತ್ಸಲಃ ।
ತಸ್ಥಿವಾನುಪಕಂಠಂ ಸ ಗೋಪಾಯನ್ರೂಪಮಾತ್ಮನಃ ॥ ೧೯ ॥

॥ ಬ್ರಹ್ಮಚಾರ್ಯುವಾಚ ॥

ಕಿಂ ಬ್ರವೀಮಿ ಮಹಾದೇವಿ ಕಥನೀಯಂ ನ ವಿದ್ಯತೇ ।
ಮಹಾನರ್ಥಕರಂ ವೃತ್ತಂ ದೃಶ್ಯತೇ ವಿಕೃತಂ ಮಹತ್ ॥ ೨೦ ॥

---

೧೭. ಎಲೈ ಸನತ್ಕುಮಾರಮುನಿಯೇ, ಈರೀತಿಯಾಗಿ ಪರ್ವತರಾಜಪುತ್ರಿಯು ಕೇಳಲು, ಆಕೆಯ ಮನೋಭಾವವನ್ನು ಪರೀಕ್ಷಿಸಬೇಕೆಂದು ಬ್ರಾಹ್ಮಣಬ್ರಹ್ಮಚಾರಿಯ ವೇಷವನ್ನು ತಳೆದ ಆ ಶಂಕರನು ಪ್ರೀತಿಯಿಂದ ಬೇಗನೆ ಇಂತೆಂದನು.

೧೮. ನಾನು ನನ್ನ ಇಚ್ಛೆಬಂದಂತೆ ತಿರುಗಾಡುವ ಬ್ರಹ್ಮಚಾರಿಯು. ನಾನು ತಪಸ್ಸಿನಲ್ಲಿಯೇ ತೊಡಗಿರುವೆನು. ಮತ್ತೊಬ್ಬರಿಗೆ ಸುಖವನ್ನೂ ಉಪಕಾರವನ್ನೂ ಮಾಡುವುದೇ ನನ್ನ ಕೆಲಸವು. ಇದು ಖಂಡಿತವಾದುದು.

೧೯. ಎಲೈ ಮುನಿಯೇ, ಹೀಗೆ ಹೇಳಿ ಬ್ರಹ್ಮಚಾರಿಯ ವೇಷವನ್ನು ತಳೆದ ಭಕ್ತವತ್ಸಲನಾದ ಆ ಶಂಕರನು ತನ್ನ ನಿಜರೂಪದ ಸುಳಿವು ಸ್ವಲ್ಪವೂ ಸಿಗದಂತೆ ಅವಳ ಬಳಿಯಲ್ಲಿಯೇ ಕುಳಿತುಬಿಟ್ಟನು.

೨೦. ಆಗ ಬ್ರಹ್ಮಚಾರಿಯು ಅವಳನ್ನಿಂತೆಂದನು :—ಎಲೈ ಮಹಾದೇವಿಯೆ, ನಾನೇನು ಹೇಳಲಿ. ನಾನೇನು ಹೇಳುವುದಕ್ಕೂ ಸಾಧ್ಯವಿಲ್ಲವಾಗಿದೆ. ಈಗ ಮಹಾ ಅನರ್ಥಕಾರಿಯೂ ವಿಕಾರವಾದುದೂ ಆದ ನಡೆವಳಿಕೆಯೇ ಕಂಡುಬರುತ್ತಿದೆ.

ನವೇ ವಯಸಿ ಸದ್ಭೋಗಸಾಧನೇ ಸುಖಕಾರಣೇ ।
ಮಹೋಪಚಾರಸದ್ಭೋಗೈರ್ವ್ಯರ್ಥೈವ ತ್ವಂ ತಪಸ್ಯಸಿ ॥ ೨೧ ॥

ಕಾ ತ್ವಂ ಕಸ್ಯಾಪಿ ತನಯಾ ಕಿಮರ್ಥಂ ವಿಜನೇ ವನೇ ।
ತಪಶ್ಚರಸಿ ದುರ್ಧರ್ಷಂ ಮುನಿಭಿಃ ಪ್ರಯತಾತ್ಮಭಿಃ ॥ ೨೨ ॥

॥ ನಂದೀಶ್ವರ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಪ್ರಹಸ್ಯ ಪರಮೇಶ್ವರೀ ।
ಉವಾಚ ವಚನಂ ಪ್ರೀತ್ಯಾ ಬ್ರಹ್ಮಚಾರಿಣಮುತ್ತಮಂ ॥ ೨೩ ॥

॥ ಪಾರ್ವತ್ಯುವಾಚ ॥

ಶೃಣು ವಿಪ್ರ ಬ್ರಹ್ಮಚಾರಿನ್ಮದ್ವೃತ್ತಮಖಿಲಂ ಮುನೇ ।
ಜನ್ಮ ಮೇ ಭಾರತೇವರ್ಷೇ ಸಾಂಪ್ರತಂ ಹಿಮವದ್ಗೃಹೇ ॥ ೨೪ ॥

---

೨೧. ನಾನಾವಿಧವಾದ ಉಪಚಾರಗಳಿಂದಲೂ ಒಳ್ಳೆಯ ಭೋಗಗಳಿಂದಲೂ ಕೂಡಿ ಸುಖಕ್ಕೆ ಆಗರವೆನಿಸಿರುವ ಈ ಹೊಸ ಯೌವನದಲ್ಲಿ ನೀನು ಇಂತು ವ್ಯರ್ಥವಾಗಿ ತಪಸ್ಸಮಾಡುತ್ತಿರುವೆಯಲ್ಲವೇ ?

೨೨. ನೀನಾರು ? ಯಾರ ಮಗಳು ? ಏತಕ್ಕೋಸ್ಕರ ಈ ಜನವಿಹೀನವಾದ ಕಗ್ಗಾಡಿನಲ್ಲಿ ಮಹಾಜಿತೇಂದ್ರಿಯರಾದ ಮುನಿಗಳಿಗೂ ಅಸಾಧ್ಯವೆನಿಸಿದಂತಹ ತಪಸ್ಸನ್ನು ಮಾಡುತ್ತಿರುವೆ ? ಎಂದನು.

೨೩. ಎಲೈ ಮುನಿಯೇ, ಈರೀತಿ ಆ ಬ್ರಹ್ಮಚಾರಿಯಾಡಿದ ಮಾತನ್ನು ಕೇಳಿ ಆ ಜಗನ್ಮಾತೆಯು ನಸುನಕ್ಕು ಆದರದಿಂದ ಅವನನ್ನು ಕುರಿತು,

೨೪. ಎಲೈ ಬ್ರಾಹ್ಮಣ ಬ್ರಹ್ಮಚಾರಿಯೇ, ನನ್ನ ವೃತ್ತಾಂತವೆಲ್ಲವನ್ನೂ ತಿಳಿಸುವೆನು ಕೇಳು. ನಾನೀಗ ಭರತವರ್ಷದಲ್ಲಿ ಪರ್ವತರಾಜನಾದ ಹಿಮವಂತನ ಮನೆಯಲ್ಲಿ ಹುಟ್ಟಿರುವೆನು.

ಪೂರ್ವಂ ದಕ್ಷಗೃಹೇ ಜನ್ಮ ಸತೀ ಶಂಕಗಕಾಮಿನೀ ।
ಯೋಗೇನ ತ್ಯಕ್ತದೇಹಾಹಂ ತಾತೇನ ಪತಿನಿಂದಿನಾ ॥ ೨೫ ॥

ಅತ್ರ ಜನ್ಮನಿ ಸಂಪ್ರಾಪ್ಯ ಸುಪುಣ್ಯೇನ ಶಿವೋ ದ್ವಿಜ ।
ಮಾಂ ತ್ಯಕ್ತ್ವಾ ಭಸ್ಮಸಾತ್ಕೃತ್ವಾ ಮನ್ಮಥಂ ಸ ಜಗಾಮ ಹ ॥ ೨೬ ॥

ಪ್ರಯಾತೇ ಶಂಕರೇ ತಾಪಾದ್ವ್ರೀಡಿತಾಹಂ ಪಿತುರ್ಗೃಹಾತ್ ।
ಆಗಚ್ಛಮತ್ರ ತಪಸೇ ಗುರುವಾಕ್ಯೇನ ಸಂಯುತಾ ॥ ೨೭ ॥

ಮನಸಾ ವಚಸಾ ಸಾಕ್ಷಾತ್ಕರ್ಮಣಾ ಪತಿಭಾವತಃ ।
ಸತ್ಯಂ ಬ್ರವೀಮಿ ನೋಽಸತ್ಯಂ ಸಂವೃತಃ ಶಂಕರೋ ಮಯಾ ೨೮ ॥

ಜಾನಾಮಿ ದುರ್ಲಭಂ ವಸ್ತು ಕಥಂ ಪ್ರಾಪ್ಯಂ ಮಯಾ ಭವೇತ್ ।
ತಥಾಪಿ ಮನಸೌತ್ಸುಕ್ಯಾತ್ತಪ್ಯತೇ ಮೇ ತಪೋಽಧುನಾ ॥ ೨೯ ॥

---

೨೫. ನಾನು ಪೂರ್ವಜನ್ಮದಲ್ಲಿ ದಕ್ಷಬ್ರಹ್ಮನ ಮಗಳಾಗಿ ಹುಟ್ಟಿ ಸತೀದೇವಿಯೆಂದು ಹೆಸರಾಗಿ ಶ್ರೀ ಶಂಕರನ ಅರ್ಧಾಂಗಿಯಾಗಿದ್ದೆನು. ನಮ್ಮ ತಂದೆಯು ನನ್ನ ಪತಿಯನ್ನು ದೂಷಣೆಮಾಡಲು ಅದನ್ನು ಸಹಿಸದೆ ಯೋಗದಿಂದ ಆ ದೇಹವನ್ನು ನೀಗಿದೆನು.

೨೬. ನಾನೀ ಜನ್ಮದಲ್ಲಿ ನನ್ನ ಸುಕೃತವಿಶೇಷದಿಂದ ಆ ಶಿವನನ್ನು ಒಮ್ಮೆ ಸಂಧಿಸಿದ್ದೆನು. ಎಲೈ ಬ್ರಾಹ್ಮಣನೇ, ಆದರೆ ಆ ಶಿವನು ನನ್ನನ್ನು ತೊರೆದು ಮನ್ಮಥನನ್ನು ಸುಟ್ಟು ಬೂದಿಮಾಡಿ ಹೊರಟೇಹೋದನು.

೨೭. ಹಾಗೆ ನನ್ನನ್ನು ತೊರೆದು ಶಂಕರನು ಹೊರಟುಹೋಗಲು ನನಗೆ ಮಿತಿಮೀರಿದ ನಾಚಿಕೆಯುಂಟಾಯಿತು. ಅನಂತರ ತಂದೆತಾಯಿಗಳ ಅಪ್ಪಣೆಪಡೆದು ಅವರ ಮನೆಯಿಂದ ಹೊರಟು ತಪಸ್ಸಿಗೋಸ್ಕರ ಇಲ್ಲಿಗೆ ಬಂದೆನು.

೨೮. ನಾನು ನಿಜವಾಗಿ ಹೇಳುವೆನು. ಎಂದಿಗೂ ಸುಳ್ಳುಹೇಳಲಾರೆನು. ಮನಸ್ಸಿನಿಂದಲೂ ಮಾತಿನಿಂದಲೂ ನಡೆವಳಿಕೆಯಿಂದಲೂ ಸರ್ವಪ್ರಕಾರದಿಂದಲೂ ಆ ಶಂಕರನನ್ನೇ ಪತಿಯಾಗಿ ವರಿಸಿರುವೆನು.

೨೯. ಸಿಗಲಾರದ ವಸ್ತುವನ್ನು ನಾನು ಪಡೆಯುವುದಾದರೂ ಹೇಗೆ ಎಂದು ಅರಿಯದೆ ಕೊಳ್ಳುವೆನು. ಆದರೂ ಕೂಡ ಈಗ ನನ್ನ ಮನಸ್ಸಿನ ಕುತೂಹಲದಿಂದ ತಪಸ್ಸನ್ನು ಆಚರಿಸುತ್ತಿರುವೆನು.

ಹಿತ್ವೇಂದ್ರಪ್ರಮುಖಾನ್ದೇವಾನ್ವಿಷ್ಣುಂ ಬ್ರಹ್ಮಾಣಮಪ್ಯಹಂ ।
ಪತಿಂ ಪಿನಾಕಪಾಣಿಂ ವೈ ಪ್ರಾಪ್ತುಮಿಚ್ಛಾಮಿ ಸತ್ಯತಃ ॥ ೩೦ ॥

॥ ನಂದೀಶ್ವರ ಉವಾಚ ॥

ಇತ್ಯೇವಂ ವಚನಂ ಶ್ರುತ್ವಾ ಪಾರ್ವತ್ಯಾ ಹಿ ಸುನಿಶ್ಚಿತಂ ।
ಮುನೇ ಸ ಜಟಿಲೋ ರುದ್ರೋ ವಿಹಸನ್ವಾಕ್ಯಮಬ್ರವೀತ್ ॥ ೩೧ ॥

॥ ಜಟಿಲ ಉವಾಚ ॥

ಹಿಮಾಚಲಸುತೇ ದೇವಿ ಕಾ ಬುದ್ಧಿಃ ಸ್ವೀಕೃತಾ ತ್ವಯಾ ।
ರುದ್ರಾರ್ಥಂ ವಿಬುಧಾನ್ಹಿತ್ವಾ ಕರೋಷಿ ವಿಪುಲಂ ತಪಃ ॥ ೩೨ ॥

ಜಾನಾಮ್ಯಹಂ ಚ ತಂ ರುದ್ರಂ ಶೃಣು ತ್ವಂ ಪ್ರವದಾಮಿ ತೇ ।
ವೃಷಧ್ವಜಸ್ಸ ರುದ್ರೋ ಹಿ ವಿಕೃತಾತ್ಮಾ ಜಟಾಧರಃ ॥ ೩೩ ॥

---

೩೦ ಸತ್ಯವಾಗಿಯೂ ದೇವೇಂದ್ರ ಪ್ರಭೃತಿಗಳಾದ ದೇವತೆಗಳನ್ನೂ ವಿಷ್ಣುವನ್ನೂ ಬ್ರಹ್ಮನನ್ನೂ ನಾನು ಒಲ್ಲೆನು ಪಿನಾಕಧರನಾದ ಆ ಪರಶಿವನೊಬ್ಬನನ್ನೇ ನಾನು ಪತಿಯಾಗಿ ವರಿಸಿರುವೆನು ಎಂದಳು

೩೧ ಎಲೈ ಸನತ್ಕುಮಾರಮುನಿಯೇ, ಈರೀತಿಯಾಗಿ ಪಾರ್ವತಿಯು ಖಂಡಿತವಾಗಿ ನುಡಿದ ನುಡಿಯನ್ನು ಆಲಿಸಿ ಆ ಕೃತ್ರಿಮ ಜಟಾಧಾರಿಯಾದ ಶಿವನು ನಸುನಗುತ್ತಾ ಅವಳನ್ನು ಕುರಿತು ಇಂತೆಂದನು

೩೨. ಎಲೈ ಹಿಮಗಿರಿನಂದಿನಿಯೇ, ನಿನಗೇಕೆ ಇಂತಹ ಬುದ್ಧಿಯುಂಟಾಯಿತು ? ದೇವತೆಗಳೆಲ್ಲರನ್ನೂ ಬಿಟ್ಟುಬಿಟ್ಟು ಆ ರುದ್ರನಿಗೋಸ್ಕರ ಏತಕ್ಕೆ ಈ ಭಾರಿ ತಪಸ್ಸನ್ನು ಮಾಡುತ್ತಿರುವೆ ?

೩೩ ನಾನೂ ಸಹ ಆ ರುದ್ರನನ್ನು ಚೆನ್ನಾಗಿಬಲ್ಲೆನು. ಕೇಳು, ತಿಳಿಸುವೆನು. ಅವನು ಎತ್ತನ್ನೇರಿ ಎಲ್ಲಿಗಾದರೂ ಹೊರಡುವನು. ಅವನ ರೂಪವನ್ನು ನೋಡಲಾಗುವುದಿಲ್ಲ. ಅಷ್ಟು ವಿಕಾರವಾದುದು ಆತನ ರೂಪು ಮತ್ತು ಆತನ ತಲೆಯೆಲ್ಲಾ ತಿರಿಗಟ್ಟಿಹೋಗಿದೆ.

ಏಕಾಕೀ ಚ ಸದಾ ನಿತ್ಯಂ ವಿರಾಗೀ ಚ ವಿಶೇಷತಃ ।
ತಸ್ಮಾತ್ತ್ವಂ ತೇನ ರುದ್ರೇಣ ಮನೋ ಯೋಕ್ತುಂ ನ ಚಾರ್ಹಸಿ ॥ ೩೪ ॥

ಸರ್ವಂ ವಿರುದ್ಧರೂಪಾದಿ ತವ ದೇವಿ ಹರಸ್ಯ ಚ ।
ಮಹ್ಯಂ ನ ರೋಚತೇ ಹ್ಯೇತದ್ಯದೀಚ್ಛಸಿ ತಥಾ ಕುರು ॥ ೩೫ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಚ ಪುನಾ ರುದ್ರೋ ಬ್ರಹ್ಮಚಾರಿಸ್ವರೂಪವಾನ್ ।
ನಿನಿಂದ ಬಹುಧಾತ್ಮಾನಂ ತದಗ್ರೇ ತಾಂ ಪರೀಕ್ಷಿತುಂ ॥ ೩೬ ॥

ತಚ್ಛ್ರುತ್ವಾ ಪಾರ್ವತೀ ದೇವೀ ವಿಪ್ರವಾಕ್ಯಂ ದುರಾಸಹಂ ।
ಪ್ರತ್ಯುವಾಚ ಮಹಾಕ್ರುದ್ಧಾ ಶಿವನಿಂದಾಪರಂ ಚ ತಂ ॥ ೩೭ ॥

---

೩೪. ಅಲ್ಲದೆ ಆ ರುದ್ರನು ಯಾವಾಗಲೂ ಒಂಟಿಯಾಗಿಯೇ ಇರುವನು. ಅಲ್ಲದೆ ಅವನಿಗೆ ಹತ್ತುಜನರಂತೆ ಸಂಸಾರಮಾಡಿಕೊಂಡಿರಲು ಹೆಚ್ಚಾಗಿ ಆಸೆಯೇ ಇಲ್ಲದಿರುವುದು. ಆದುದರಿಂದ ನೀನು ಅಂತಹವನೊಡನೆ ಮದುವೆಯಾಗಲು ಮನಸ್ಸು ಮಾಡುವುದು ಸರಿಯಾದುದಲ್ಲ.

೩೫. ಎಲೌ ದೇವಿ, ನಿನಗೂ ಆ ಹರನಿಗೂ ರೂಪು ಮೊದಲಾದ ಪ್ರತಿಯೊಂದರಲ್ಲಿಯೂ ಸ್ವಲ್ಪವೂ ಹೊಂದಿಕೆಯೇ ಆಗಲಾರದು. ನನಗಂತೂ ಇದು ಸರ್ವಥಾ ಒಪ್ಪಿಗೆಯಿಲ್ಲ. ಇದರಮೇಲೆ ನಿನ್ನ ಇಷ್ಟ, ಹೇಗಾದರೂ ಮಾಡು ಎಂದನು.

೩೬. ಎಲೈ ಸನತ್ಕುಮಾರನೇ, ಈರೀಯಾಗಿ ಬ್ರಹ್ಮಚಾರಿಯ ವೇಷವನ್ನು ತಳೆದಿದ್ದ ಆ ಶಂಕರನು ಅವಳನ್ನು ಪರೀಕ್ಷಿಸುವದಕ್ಕೋಸ್ಕರ ಅವಳೆದುರಿಗೆ ಬಹುವಿಧವಾಗಿ ತನ್ನನ್ನು ಜರೆದಾಡಿದನು.

೩೭. ಈರೀತಿಯಾಗಿ ಕಿವಿಯಿಂದ ಕೇಳಲಸಾಧ್ಯವಾದ ಆ ಬ್ರಾಹ್ಮಣನ ಬೈಗಳನ್ನು ಕೇಳಿ ಆ ಪಾರ್ವತಿಯು ಕಡುಕೋಪವನ್ನು ತಾಳಿದಳು. ಆಗ ಅವಳು ಶಿವನಿಂದಾನಿರತನಾದ ಆ ಬ್ರಹ್ಮಚಾರಿಯನ್ನಿಂತೆಂದಳು.

ಏತಾವದ್ಧಿ ಮಯಾ ಜ್ಞಾತಂ ಕಶ್ಚಿದ್ಧರ್ನ್ಮೋ ಭವಿಷ್ಯತಿ ।
ಪರಂ ತು ಸಕಲಂ ಜ್ಞಾತಮವಧ್ಯೋ ದೃಶ್ಯತೇಽಧುನಾ ॥ ೩೮ ॥

ಬ್ರಹ್ಮಚಾರಿಸ್ವರೂಪೇಣ ಕಶ್ಚಿತ್ತ್ವಂ ಧೂರ್ತ ಆಗತಃ ।
ಶಿವನಿಂದಾ ಕೃತಾ ಮೂಢ ತ್ವಯಾ ಮನ್ಯುರಭೂನ್ಮಮ ॥ ೩೯ ॥

ಶಿವಂ ತ್ವಂ ಚ ನ ಜಾನಾಸಿ ಶಿವಾ ತ್ವಂ ಹಿ ಬಹಿರ್ಮುಖಃ ।
ತ್ವತ್ಪೂಜಾ ಚ ಕೃತಾ ಯನ್ಮೇ ತಸ್ಮಾತ್ತಾಪಯುತಾಽಭವಂ ॥ ೪೦ ॥

ಶಿವನಿಂದಾಂ ಕರೋತೀಹ ತತ್ತ್ವಮಜ್ಞಾಯ ಯಃ ಪುಮಾನ್ ।
ಆಜನ್ಮಸಂಚಿತಂ ಪುಣ್ಯಂ ತಸ್ಯ ಭಸ್ಮೀಭವತ್ಯುತ ॥ ೪೧ ॥

---

೩೮. ನಾನಿದುವರೆಗೂ ನಿನ್ನನ್ನು ಯಾವನೋ ಒಬ್ಬ ಪುಣ್ಯಪುರುಷನೆಂದೆಣಿಸಿದ್ದೆನು. ಆದರೆ ಈಗ ಎಲ್ಲವೂ ತಿಳಿಯಿತು ನಿನ್ನನ್ನು ವಧಿಸಬಾರದಾದುದರಿಂದ ಸುಮ್ಮನಿರುವೆನು.

೩೯. ನೀನಾರೋ ಬ್ರಹ್ಮಚಾರಿಯ ವೇಷವನ್ನು ಧರಿಸಿಬಂದಿರುವ ಕೊರಮನೆ ಆಗಿರುವೆ ಎಲೈ ಮೂರ್ಖನೇ, ಶಿವನಿಂದೆಯನ್ನು ನೀನು ಮಾಡಿರುವೆ ಅದಕ್ಕೇ ನನಗೆ ಕೋಪವು ಬಂದಿರುವುದು.

೪೦. ನೀನು ಮಂಗಲಸ್ವರೂಪನಾದ ಆ ಶಿವನನ್ನು ಸರಿಯಾಗಿ ತಿಳಿಯದಿರುವೆ. ನಿನಗೆ ಶುದ್ಧವಾದ ಅಂತಶ್ಚಕ್ಷುಸ್ಸು ಇಲ್ಲ. ಕೇವಲ ಜಡವಾದ ದೃಷ್ಟಿಯನ್ನು ಹೊಂದಿರುವೆ. ನಿನಗೆ ಪೂಜೆಯನ್ನು ಮಾಡಿದೆನಲ್ಲವೇ ? ಆದುದರಿಂದ ಈಗ ನಾನು ಪರಿತಪಿಸುತ್ತಿರುವೆನು.

೪೧. ಯಾವನು ನಿಜಾಂಶವನ್ನರಿಯದೆ ಶಿವನ ನಿಂದೆಯನ್ನು ಮಾಡುವನೋ ಆ ಪುರುಷನು ಹುಟ್ಟಿದಾರಭ್ಯ ಸಂಪಾದಿಸಿದ ಪುಣ್ಯವೆಲ್ಲವೂ ಸುಟ್ಟು ಭಸ್ಮವಾಗಿ ಹೋಗುವುದು.

ಶಿವವಿದ್ವೇಷಿಣಂ ಸ್ಪೃಷ್ಟ್ವಾ ಪ್ರಾಯಶ್ಚಿತ್ತಂ ಸಮಾಚರೇತ್ ॥ ೪೨ ॥

ರೇ ರೇ ದುಷ್ಟ ತ್ವಯಾ ಪ್ರೋಕ್ತಮಹಂ ಜಾನಾಮಿ ಶಂಕರಂ ।
ನಿಶ್ಚಯೇನ ನ ವಿಜ್ಞಾತಃ ಶಿವ ಏವ ಪರಃ ಪ್ರಭುಃ ॥ ೪೩ ॥

ಯಥಾ ತಥಾ ಭವೇದ್ರುದ್ರೋ ಮಾಯಯಾ ಬಹುರೂಪವಾನ್ ।
ಮಮಾಭೀಷ್ಟಪ್ರದೋಽತ್ಯಂತಂ ನಿರ್ವಿಕಾರಃ ಸತಾಂ ಪ್ರಿಯಃ ॥ ೪೪ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾಸ್ತೇ ಶಿವಾ ದೇವೀ ಶಿವತತ್ತ್ವಂ ಜಗಾದ ಸಾ ।
ಯತ್ರ ಬ್ರಹ್ಮತಪಾ ರುದ್ರಃ ಕಥ್ಯತೇ ನಿರ್ಗುಣೋಽವ್ಯಯಃ ॥ ೪೫ ॥

ತದಾಕರ್ಣ್ಯ ವಚೋ ದೇವ್ಯಾ ಬ್ರಹ್ಮಚಾರೀ ಸ ವೈ ದ್ವಿಜಃ ।
ಪುನರ್ವಚನಮಾದಾತುಂ ಯಾವದೇವ ಪ್ರಚಕ್ರಮೇ ॥ ೪೬ ॥

---

೪೨-೪೩. ನಿನ್ನಂತಹ ಶಿವವಿದ್ವೇಷಿಯನ್ನು ಮುಟ್ಟಿದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾದೀತು. ಛೀ ಛೀ ದುಷ್ಟನೇ, ನೀನು ಸರಿಯಾಗಿ ಆ ಶಂಕರನನ್ನು ಅರಿಯೆ. ನೀನು ಹೇಳಿದ ಆ ಶಿವನನ್ನು ನಾನು ಚೆನ್ನಾಗಿಬಲ್ಲೆನು. ಅವನೊಬ್ಬನೇ ಎಲ್ಲರಿಗೂ ಮೇಲಾದವನು.

೪೪. ಮಾಯೆಯಿಂದ ನಾನಾರೂಪಗಳನ್ನು ಧರಿಸಬಲ್ಲ ಆ ಶಂಕರನು ಹೇಗಾದರೂ ಇರಬಹುದು. ಯಾವೊಂದು ವಿಕಾರಕ್ಕೂ ಸಿಲುಕದವನೂ ಸತ್ಪುರುಷರಿಗೆ ಏಕಮಾತ್ರಾವಲಂಬನನೂ ಆದ ಆ ಶಿವನೇ ನನ್ನ ಇಷ್ಟಾರ್ಥವನ್ನು ನೆರವೇರಿಸುವನು.

೪೫. ಓ ಸನತ್ಕುಮಾರ, ಹೀಗೆ ನುಡಿದು ಆ ಶಿವೆಯು ಶಿವತತ್ತ್ವವನ್ನು ಕೊನೆಗೆ ವಿವರಿಸಿದಳು. ಶಂಕರನೂ ಮಹಾಬ್ರಹ್ಮಜ್ಞಾನಿಯೂ ಗುಣರಹಿತನೂ ನಾಶಶೂನ್ಯನೂ ಎಂಬುದಾಗಿ ಆ ತತ್ತ್ವವು ಸಾರುವುದು.

೪೬. ಈರೀತಿ ಆ ಗಿರಿರಾಜಕುಮಾರಿಯು ಹೇಳಿದ ಮಾತನ್ನು ಕೇಳಿ ಆ ಕಪಟಬ್ರಹ್ಮಚಾರಿಯು ಪುನಃ ಬೇರೊಂದು ಮಾತನ್ನು ಆಡಬೇಕೆನ್ನುವಷ್ಟರೊಳಗೆ,

ಪ್ರೋವಾಚ ಗಿರಿಜಾ ತಾವತ್ಸ್ವಸಖೀಂ ವಿಜಯಾಂ ದ್ರುತಂ ।
ಶಿವಾಸಕ್ತಮನೋವೃತ್ತಿಃ ಶಿವನಿಂದಾಪರಾಙ್ಮುಖೀ　　॥ ೪೭ ॥

॥ ಗಿರಿಜೋವಾಚ ॥

ವಾರಣೀಯಃ ಪ್ರಯತ್ನೇನ ಸಖ್ಯಯಂ ಹಿ ದ್ವಿಜಾಧಮಃ ।
ಪುನರ್ವಕ್ತುಮನಾಶ್ಚಾಯಂ ಶಿವನಿಂದಾಂ ಕರಿಷ್ಯತಿ　　॥ ೪೮ ॥

ನ ಕೇವಲಂ ಭವೇತ್ಪಾಪಂ ನಿತದಃಕರ್ತುಃ ಶಿವಸ್ಯ ಹಿ ।
ಯೋ ವೈ ಶೃಣೋತಿ ತನ್ನಿಂದಾಂ ಪಾಪಭಾಕ್ಸ ಭವೇದಿಹ　　॥ ೪೯ ॥

ಶಿವನಿಂದಾಕರೋ ವಧ್ಯಸ್ಸರ್ವಥಾ ಶಿವಕಿಂಕರೈಃ ।
ಬ್ರಾಹ್ಮಣಶ್ಚೇತ್ಸ ವೈ ತ್ಯಾಜ್ಯೋ ಗಂತವ್ಯಂ ತತ್ಸ್ಥಲಾದ್ದ್ರುತಂ　　॥ ೫೦ ॥

---

೪೭. ಶಿವನಿಂದೆಯನ್ನು ಕೇಳಲೂ ಹೇಸುವವಳೂ, ಶಿವನಲ್ಲಿಯೇ ನೆಟ್ಟಮನಸ್ಸುಳ್ಳವಳೂ ಆದ ಆ ಗಿರಿನಂದಿನಿಯು ತನ್ನ ಗೆಳತಿಯಾದ ವಿಜಯೆಯನ್ನು ಕುರಿತು ಇಂತೆಂದಳು.

೪೮. ಎಲೈ ಸಖಿಯೇ, ಹೇಗಾದರೂ ಮಾಡಿ ಈ ದುಷ್ಟ ಬ್ರಾಹ್ಮಣನನ್ನು ತಡೆದು ನಿಲ್ಲಿಸು. ಇವನು ಮತ್ತೆ ಏನೇನೋ ಹರಟುವಂತಿದೆ ಮರಳಿ ಶಿವನ ನಿಂದೆಯನ್ನೇ ಮಾಡಬಹುದು.

೪೯. ಶಿವನನ್ನು ನಿಂದಿಸಿದವನು ಮಾತ್ರವೇ ಪಾಪಕ್ಕೆ ಈಡಾಗುವನು ಎಂದಲ್ಲ. ಆ ಶಿವನಿಂದನೆಯನ್ನು ಕೇಳಿದವನೂ ಸಹ ಪಾಪಕ್ಕೆ ಗುರಿಯಾಗುವನು.

೫೦. ಶಿವನ ಕಿಂಕರರಾದವರು ಶಿವನಿಂದೆಯನ್ನು ಮಾಡುವವರನ್ನು ಕೊಂದೇ ಬಿಡಬೇಕು. ಅಂತಹವನು ಬ್ರಾಹ್ಮಣನಾದಪಕ್ಷಕ್ಕೆ ಅವನನ್ನು ತ್ಯಾಗಮಾಡಿಬಿಡಬೇಕು. ಇಲ್ಲವೇ ಆ ಜಾಗದಿಂದ ತಟ್ಟನೆ ಎದ್ದು ಬಂದುಬಿಡಬೇಕು.

ಅಯಂ ದುಷ್ಟಃ ಪುನರ್ನಿಂದಾಂ ಕರಿಷ್ಯತಿ ಶಿವಸ್ಯ ಹಿ ।
ಬ್ರಾಹ್ಮಣತ್ವಾದವಧ್ಯಶ್ಚ ತ್ಯಾಜ್ಯೋಽದೃಶ್ಯಶ್ಚ ಸರ್ವಥಾ ॥ ೫೧ ॥

ಸ್ಥಲಮೇತದ್ದ್ರುತಂ ಹಿತ್ವಾ ಯಾಸ್ಯಾವೋಽನ್ಯತ್ರ ಮಾ ಚಿರಂ ।
ಯಥಾ ಸಂಭಾಷಣಂ ನ ಸ್ಯಾದನೇನಾವಿದುಷಾ ಪುನಃ ॥ ೫೨ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಚೋಮಯಾ ಯಾವತ್ಪದಮುತ್ಕ್ಷಿಪ್ಯತೇ ಮುನೇ ।
ಅಸೌ ತಾವಚ್ಛಿವಃ ಸಾಕ್ಷಾದಾಲಲಂಬೇ ಪಟಂ ಸ್ವಯಂ ॥ ೫೩ ॥

ಕೃತ್ವಾ ಸ್ವರೂಪಂ ದಿವ್ಯಂ ಚ ಶಿವಾಧ್ಯಾನಂ ಯಥಾ ತಥಾ ।
ದರ್ಶಯಿತ್ವಾ ಶಿವಾಯೈ ತಾಮುವಾಚಾವಾಙ್ಮುಖೀಂ ಶಿವಃ ॥ ೫೪ ॥

---

೫೧. ಈ ದುಷ್ಟನು ಪುತ್ತೆ ಶಿವನಿಂದೆಯನ್ನು ಮಾಡುವಂತೆ ತೋರುವನು. ಇವನು ಬ್ರಾಹ್ಮಣನಾದುದರಿಂದ ಇವನನ್ನು ಕೊಲ್ಲಬಾರದು. ಇವನನ್ನು ತ್ಯಜಿಸಿ ಹೊರಡಬೇಕು. ಇಂತಹವನನ್ನು ಖಂಡಿತವಾಗಿಯೂ ನೋಡಬಾರದು.

೫೨. ಅವಿವೇಕಿಯಾದ ಇವನೊಡನೆ ಮತ್ತೆ ಮಾತು ಜರುಗದಹಾಗೆ ತಡೆ ಮಾಡದೆ ಈ ಜಾಗವನ್ನಾದರೂ ಬಿಟ್ಟು ಬೇಗನೆ ಬೇರೊಂದುಕಡೆಗೆ ಹೊರಟು ಹೋಗೋಣ ಎಂದಳು.

೫೩. ಎಲೈ ಸನತ್ಕುಮಾರಮುನಿಯೇ, ಹೀಗೆ ಹೇಳಿ ಆ ಉಮಾದೇವಿಯು ತನ್ನ ಕಾಲನ್ನು ಅಲ್ಲಿಂದ ತೆರೆಯುವಷ್ಟರಲ್ಲಿಯೇ ಆ ಶಿವನು ತಟ್ಟನೆ ತನ್ನ ನಿಜರೂಪ ದಿಂದ ಅವಳ ಸೆರಗನ್ನು ಹಿಡಿದು ನಿಂತನು.

೫೪. ಆ ಶಂಕರನು, ಆ ಶಿವೆಯು ತನ್ನನ್ನು ಯಾವರೀತಿಯಲ್ಲಿ ಧ್ಯಾನಮಾಡು ತ್ತಿದ್ದಳೋ ಅದೇರೀತಿಯಲ್ಲಿ ತನ್ನ ಸ್ವರೂಪದನ್ನು ಧರಿಸಿ ಅವಳಿಗೆ ಪ್ರತ್ಯಕ್ಷನಾದುದಲ್ಲದೆ ನಾಚಿಕೆಯಿಂದ ತಲೆಬಗ್ಗಿಸಿ ನಿಂತಿರುವ ಆ ಸರ್ವಮಂಗಳೆಯನ್ನು ಕುರಿತು ಇಂತು ನುಡಿದನು.

॥ ಶಿವ ಉವಾಚ ॥

**ಕುತ್ರ ತ್ವಂ ಯಾಸಿ ಮಾಂ ಹಿತ್ವಾ ನ ತ್ವಂ ತ್ಯಾಜ್ಯಾ ಮಯಾ ಶಿವೇ ।**
**ಮಯಾ ಪರೀಕ್ಷಿತಾಸಿ ತ್ವಂ ದೃಢಭಕ್ತಾಸಿ ಮೇಽನಘೇ ॥ ೫೫ ॥**

**ಬ್ರಹ್ಮಚಾರಿಸ್ವರೂಪೇಣ ಭಾವಮಿಚ್ಛುಸ್ತ್ವದೀಯಕಂ ।**
**ತವೋಪಕಂಠಮಾಗತ್ಯ ಪ್ರಾವೋಚಂ ವಿವಿಧಂ ವಚಃ ॥ ೫೬ ॥**

**ಪ್ರಸನ್ನೋಽಸ್ಮಿ ದೃಢಂ ಭಕ್ತ್ಯಾ ಶಿವೇ ತವ ವಿಶೇಷತಃ ।**
**ಚಿತ್ತೇಪ್ಸಿತಂ ವರಂ ಬ್ರೂಹಿ ನಾದೇಯಂ ವಿದ್ಯತೇ ತವ ॥ ೫೭ ॥**

**ಅದ್ಯ ಪ್ರಭೃತಿ ತೇ ದಾಸಸ್ತಪೋಭಿಃ ಪ್ರೇಮನಿರ್ಭರೇ ।**
**ಕೃತೋಽಸ್ಮಿ ತವ ಸೌಂದರ್ಯಾತ್ಕ್ಷಣ ಏಕೋ ಯುಗಾಯತೇ ॥ ೫೮ ॥**

---

೫೫. ಎಲೌ ಶಿವೆಯೇ, ನನ್ನನ್ನು ಬಿಟ್ಟು ಎಲ್ಲಿಗೆಹೋಗುವೆ ? ನಾನು ಇನ್ನು ನಿನ್ನನ್ನು ಎಂದಿಗೂ ಬಿಟ್ಟಿರಲಾರೆನು. ಈರೀತಿ ನಾನು ನಿನ್ನನ್ನು ಪರೀಕ್ಷೆಮಾಡಿದೆನು ಎಲೈ ನಿಷ್ಕಲಂಕಚರಿತೆಯೇ, ನೀನು ನನ್ನಲ್ಲಿ ದೃಢವಾದ ಭಕ್ತಿಯನ್ನಿಟ್ಟಿರುವೆ.

೫೬. ನಿನ್ನ ಮನಸ್ಸಿನ ಬಗೆಯನ್ನರಿಯಲೋಸುಗ ಬ್ರಹ್ಮಚಾರಿಯ ವೇಷ ವನ್ನು ತಾಳಿ ನಿನ್ನ ಬಳಿಗೆ ಬಂದು ಬಗೆಬಗೆಯಾಗಿ ಹರಟೆಗಳನ್ನಾಡಿದೆನು.

೫೭. ಎಲೌ ಶಿವೆಯೇ, ನಿನ್ನ ದೃಢವಾದ ಭಕ್ತಿಗೋಸ್ಕರ ನಾನು ಬಹುವಾಗಿ ಮೆಚ್ಚಿರುವೆನು. ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳಿಕೋ. ನಿನಗೆ ಕೊಡ ಬಾರದಂತಹುದು ಯಾವುದೂ ಇಲ್ಲ.

೫೮ ತುಂಬಿದ ಅನುರಾಗವುಳ್ಳ ಎಲೆ ಸುಂದರಿಯೇ, ಇಂದು ಮೊದಲು ಗೊಂಡು ನಿನ್ನ ತಪಸ್ಸುಗಳಿಗೆ ಮೆಚ್ಚಿದುದಲ್ಲದೆ ನಿನ್ನ ರೂಪಕ್ಕೆ ಮನಸೋತು ನಿನ್ನ ಸೇವಕನಾಗಿರುವೆನು. ನಿನ್ನನ್ನು ಬಿಟ್ಟಿರಲು ಒಂದುಕ್ಷಣವೂ ಯುಗವೆನಿಸುವುದು. ನೀನು ಈ ನಾಚಿಕೆಯನ್ನು ಬಿಡು. ನೀನು ಎಂದೆಂದಿಗೂ ನನ್ನ ಮಡದಿಯೇ ಅಲ್ಲವೇ ?

ತ್ಯಜ್ಯತಾಂ ಚ ತ್ವಯಾ ಲಜ್ಜಾ ಮಮ ಪತ್ನೀ ಸನಾತನೀ ।
ಏಹಿ ಪ್ರಿಯೇ ತ್ವಯಾ ಸಾಕಂ ದ್ರುತಂ ಯಾಮಿ ಸ್ವಕಂ ಗಿರಿಂ ॥ ೫೯ ॥

ಇತ್ಯುಕ್ತವತಿ ದೇವೇಶೇ ಶಿವಾತಿಮುದಮಾಪ ಸಾ ।
ತಪೋದುಃಖಂ ತು ಯತ್ಸರ್ವಂ ತಜ್ಜಹೌ ದ್ರುತಮೇವ ಹಿ ॥ ೬೦ ॥

ತತಃ ಪ್ರಹೃಷ್ಟಾ ಸಾ ದೃಷ್ಟ್ವಾ ದಿವ್ಯರೂಪಂ ಶಿವಸ್ಯ ತತ್ ।
ಪ್ರತ್ಯುವಾಚ ಪ್ರಭುಂ ಪ್ರೀತ್ಯಾ ಲಜ್ಜಯಾಧೋಮುಖೀ ಶಿವಾ ॥ ೬೧ ॥

॥ ಶಿವೋವಾಚ ॥

ಯದಿ ಪ್ರಸನ್ನೋ ದೇವೇಶ ಕರೋಷಿ ಚ ಕೃಪಾಂ ಮಯಿ ।
ಪತಿರ್ಮೇ ಭವ ದೇವೇಶ ಇತ್ಯುಕ್ತಶ್ಶಿವಯಾ ಶಿವಃ ॥ ೬೨ ॥

---

೫೯. ಎಲೌ ಪ್ರಿಯಳೇ, ಇತ್ತಬಾ. ನಿನ್ನೊಡನೆ ಜಾಗ್ರತೆಯಾಗಿ ನನ್ನ ಕೈಲಾಸ ಪರ್ವತಕ್ಕೆ ಹೊರಟುಹೋಗುವೆನು.

೬೦. ಹೀಗೆಂಬುದಾಗಿ ಆ ದೇವತೆಗಳೆಲ್ಲರಿಗೂ ಪ್ರಭುವಾದ ಆ ಪರಶಿವನು ನುಡಿಯಲು ಸರ್ವಮಂಗಳೆಯು ಮಹಾಸಂತೋಷವನ್ನು ತಾಳಿದಳು. ಅದುವರೆಗೆ ಅವಳು ಪಟ್ಟಿದ್ದ ತಪಸ್ಸಿನ ಶ್ರಮವೆಲ್ಲವನ್ನೂ ಕ್ಷಣಮಾತ್ರದಲ್ಲಿಯೇ ಮರೆತು ಬಿಟ್ಟಳು.

೬೧. ಆಗ ಸಂತೋಷಾತಿಶಯದಿಂದ ಕೂಡಿದ ಆ ಪರ್ವತರಾಜಕುಮಾರಿಯು ಶಿವನ ಅದ್ಭುತವಾದ ಆ ದಿವ್ಯಸ್ವರೂಪವನ್ನು ಕಂಡು ಹಿಗ್ಗಿ, ನಾಚಿಕೆಯಿಂದ ತಲೆವಾಗಿ ನೆಲವನ್ನು ನೋಡುತ್ತಾ ಆ ಪ್ರಭುವನ್ನು ಕುರಿತು ಪ್ರೀತಿಯಿಂದ ಇಂತೆಂದಳು.

೬೨. ಎಲೈ ದೇವಾಧೀಶ್ವರನೇ, ನೀನು ನನ್ನ ವಿಷಯದಲ್ಲಿ ಒಲಿದಿರುವಪಕ್ಷ ದಲ್ಲಿ ಮತ್ತು ನನ್ನಮೇಲೆ ನಿನ್ನ ಕೃಪೆಯು ಇರುವಪಕ್ಷದಲ್ಲಿ ಬೇಗನೆ ನನ್ನ ಪಾಣಿ ಗ್ರಹಣಮಾಡು. ಹೀಗೆಂದು ಪಾರ್ವತಿಯು ಹೇಳಲು,

ಗೃಹೀತ್ವಾ ವಿಧಿವತ್ಪಾಣಿಂ ಕೈಲಾಸಂ ಸ ತಯಾ ಯಯೌ ।
ಪತಿಂ ತಂ ಗಿರಿಜಾ ಪ್ರಾಪ್ಯ ದೇವಕಾರ್ಯಂ ಚಕಾರ ಸಾ ॥ ೬೩ ॥

ಇತಿ ಪ್ರೋಕ್ತಸ್ತು ತೇ ತಾತ ಬ್ರಹ್ಮಚಾರಿಸ್ವರೂಪಕಃ ।
ಶಿವಾವತಾರೋ ಹಿ ಮಯಾ ಶಿವಾಭಾವಪರೀಕ್ಷಕಃ ॥ ೬೪ ॥

ಇದಮಾಖ್ಯಾನಮನಘಂ ಪರಮಂ ವ್ಯಾಕೃತಂ ಮಯಾ ।
ಯ ಏತಚ್ಛೃಣುಯಾತ್ಪ್ರೀತ್ಯಾ ಸ ಸುಖೀ ಗತಿಮಾಪ್ನುಯಾತ್ ॥ ೬೫ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಬ್ರಹ್ಮಚಾರಿಶಿವಾವತಾರವರ್ಣನಂ ನಾಮ
ತ್ರಯಸ್ತ್ರಿಂಶೋಽಧ್ಯಾಯಃ

೬೩. ಆ ಶಿವನು ವಿಧಿಪೂರ್ವಕವಾಗಿ ಆಕೆಯ ಪಾಣಿಗ್ರಹಣಮಾಡಿ ಅವಳೊಡನೆ ತನ್ನ ನಿವಾಸವಾದ ಕೈಲಾಸಕ್ಕೆ ಹೊರಟುಹೋದನು. ಇಂತು ಆ ಗಿರಿಜೆಯು ಶಿವನನ್ನು ಮದುವೆಯಾಗಿ ದೇವತೆಗಳ ಕಾರ್ಯವನ್ನು ನೆರವೇರಿಸಿದಳು.

೬೪. ಅಪ್ಪಾ, ಸನತ್ಕುಮಾರಮುನಿಯೇ, ಈರೀತಿಯಾಗಿ ನಿನಗೆ ಸಾಕ್ಷಾತ್ ಪರಶಿವೆಯ ಮನೋಭಾವವನ್ನು ಪರೀಕ್ಷಿಸಿದ ಬ್ರಹ್ಮಚಾರಿರೂಪವಾದ ಶಿವನ ಅವತಾರವನ್ನು ವರ್ಣಿಸಿದೆನು.

೬೫ ನಾನೀಗ ಹೇಳಿದ ಈ ಉಪಾಖ್ಯಾನವು ಪರಿಶುದ್ಧವಾದುದು. ಇದನ್ನು ಪ್ರೀತಿಯಿಂದ ಯಾವನು ಕೇಳುವನೋ ಆತನು ಅನೇಕ ಸುಖಗಳನ್ನು ಅನುಭವಿಸಿ ಕೊನೆಗೆ ಸದ್ಗತಿಯನ್ನು ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತಯಲ್ಲಿ
ಬ್ರಹ್ಮಚಾರಿಶಿವಾವತಾರವರ್ಣನವೆಂಬ ಮೂವತ್ತ
ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಹಿಂತಾಯಾಂ

## ಚತುಸ್ತ್ರಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

**ಸನತ್ಕುಮಾರ ಸರ್ವಜ್ಞ ಶಿವಸ್ಯ ಪರಮಾತ್ಮನಃ ।**
**ಅವತಾರಂ ಶೃಣು ವಿಭೋಸ್ಸುನರ್ತಕನಟಾಹ್ವಯಂ ॥ ೧ ॥**

**ಯದಾ ಹಿ ಕಾಲಿಕಾ ದೇವೀ ಪಾರ್ವತೀ ಹಿಮವತ್ಸುತಾ ।**
**ತೇಪೇ ತಪಸ್ಸುವಿಮಲಂ ವನಂ ಗತ್ವಾ ಶಿವಾಪ್ತಯೇ ॥ ೨ ॥**

---

### ಮೂವತ್ತನಾಲ್ಕನೆಯ ಅಧ್ಯಾಯವು.

೧. ನಂದೀಶ್ವರನು ಸನತ್ಕುಮಾರಮಹರ್ಷಿಯನ್ನು ಕುರಿತು, ಎಲೈ ಸರ್ವಜ್ಞನೇ, ಎಲ್ಲ ವಸ್ತುಗಳಲ್ಲೂ ವ್ಯಾಪಿಸಿರತಕ್ಕವನೂ ಪರಮಾತ್ಮನೂ ಆದ ಆ ಶಿವನ ಸುನರ್ತಕನಟನೆಂಬ ಅವತಾರದ ವೃತ್ತಾಂತವನ್ನು ವಿವರಿಸುವೆನು, ಕೇಳು ಎಂದು ಹೇಳತೊಡಗಿದನು.

೨-೩. ಯಾವಾಗ ಹಿಮವಂತನ ಮಗಳೂ, ಕಾಲಿಕಾದೇವಿಯೂ ಆದ ಪಾರ್ವತಿಯು ಶಿವನನ್ನು ಪಡೆಯುಲೋಸುಗ ಕಾಡಿಗೆ ಹೋಗಿ. ಮಹಾಪರಿಶುದ್ಧವಾದ

ತದಾ ಶಿವಃ ಪ್ರಸನ್ನೋಽಭೂತ್ತಸ್ಯಾಸ್ಸ್ವತಪಸೋ ಮುನೇ ।
ತದ್ವೃತ್ತಸುಪರೀಕ್ಷಾರ್ಥಂ ವರಂ ದಾತುಂ ಮುದಾ ಯಯೌ ॥ ೩ ॥

ಸ್ವರೂಪಂ ದರ್ಶಯಾಮಾಸ ತಸ್ಯೈ ಸುಪ್ರೀತಮಾನಸಃ ।
ವರಂ ಬ್ರೂಹೀತಿ ಚೋವಾಚ ತಾಂ ಶಿವಾಂ ಶಂಕರೋ ಮುನೇ ॥ ೪ ॥

ತಚ್ಛ್ರುತ್ವಾ ಶಂಭುವಚನಂ ದೃಷ್ಟ್ವಾ ತದ್ರೂಪಮುತ್ತಮಂ ।
ಸುಜಹರ್ಷ ಶಿವಾತೀವ ಪ್ರಾಹ ತಂ ಸುಪ್ರಣಮ್ಯ ಸಾ ॥ ೫ ॥

॥ ಪಾರ್ವತ್ಯುವಾಚ ॥

ಯದಿ ಪ್ರಸನ್ನೋ ದೇವೇಶ ಮಹ್ಯಂ ದೇಯೋ ವರೋ ಯದಿ ।
ಪತಿರ್ಭವ ಮಮೇಶಾನ ಕೃಪಾಂ ಕುರು ಮಮೋಪರಿ ॥ ೬ ॥

---

ತಪಸ್ಸನ್ನಾಚರಿಸಿದಳೋ ಆಗ ಅವಳ ತಪಸ್ಸಿಗೆ ಶಿವನು ಮೆಚ್ಚಿದವನಾಗಿ, ಅವಳ ನಡವಳಿಕೆಯನ್ನು ಪರಿಶೀಲಿಸಬೇಕೆಂದೂ, ವರಗಳನ್ನು ಕೊಡಬೇಕೆಂದೂ ಮನಸ್ಸುಮಾಡಿ ಸಂತೋಷದಿಂದ ಅವಳ ಬಳಿಗೆ ಬಂದನು.

೪ ಎಲೈ ಮುನಿಯೇ, ಆ ಶಂಕರನು ಸಂತುಷ್ಟಾಂತರಂಗನಾಗಿ ಆ ಸರ್ವಮಂಗಳೆಗೆ ತನ್ನ ನಿಜರೂಪವನ್ನು ತೋರಿಸಿದುದಲ್ಲದೆ ನಿನಗೆ ಬೇಕಾದ ವರವೇನೆಂಬುದನ್ನು ಕೇಳು ಎಂದನು.

೫ ಹೀಗೆ ಶಂಕರನು ನುಡಿದುದನ್ನು ಕೇಳಿ ಆತನ ದಿವ್ಯವಾದ ರೂಪವನ್ನು ಕಂಡು ಆ ಪಾರ್ವತಿಯು ಬಹುವಾಗಿ ಸಂತೋಷವನ್ನು ತಾಳಿ ಅವನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ ಇಂತೆಂದಳು.

೬. ಎಲೈ ದೇವೇಶನೇ, ನೀನು ಪ್ರಸನ್ನನಾಗಿರುವಪಕ್ಷದಲ್ಲಿ ಮತ್ತು ನನಗೆ ವರವನ್ನು ಕೊಡಬೇಕೆಂದಿರುವಪಕ್ಷದಲ್ಲಿ ನನ್ನಮೇಲೆ ಕೃಪೆಯಿಟ್ಟು ನನ್ನ ಪಾಣಿಯನ್ನು ಗ್ರಹಣಮಾಡು.

**ಪಿತುರ್ಗೃಹೇ ಮಯಾ ಸಮ್ಯಗ್ಗಮ್ಯತೇ ತ್ವದನುಜ್ಞಯಾ ।**
**ಗಂತವ್ಯಂ ಭವತಾ ನಾಥ ಮತ್ಪಿತುಃ ಪಾರ್ಶ್ವತಃ ಪ್ರಭೋ ॥ ೭ ॥**

**ಯಾಚಸ್ವ ಮಾಂ ತತೋ ಭಿಕ್ಷುಃ ಖ್ಯಾಪಯಂಶ್ಚ ಯಶಃ ಶುಭಂ ।**
**ಪಿತುರ್ಮೇ ಸಫಲಂ ಸರ್ವಂ ಕುರು ಪ್ರೀತ್ಯಾ ಗೃಹಾಶ್ರಮಂ ॥ ೮ ॥**

**ತತೋ ಯಥೋಕ್ತವಿಧಿನಾ ಕರ್ತುಮರ್ಹಸಿ ಭೋ ಪ್ರಭೋ ।**
**ವಿವಾಹಂ ತ್ವಂ ಮಹೇಶಾನ ದೇವಾನಾಂ ಕಾರ್ಯಸಿದ್ಧಯೇ ॥ ೯ ॥**

**ಕಾಮಂ ಮೇ ಪೂರಯ ವಿಭೋ ನಿರ್ವಿಕಾರೋ ಭವಾನ್ಸದಾ ।**
**ಭಕ್ತವತ್ಸಲನಾಮಾ ಹಿ ತವ ಭಕ್ತಾಸ್ಮ್ಯಹಂ ಸದಾ ॥ ೧೦ ॥**

**॥ ನಂದೀಶ್ವರ ಉವಾಚ ॥**

**ಇತ್ಯುಕ್ತಸ್ಸ ತಯಾ ಶಂಭುರ್ಮಹೇಶೋ ಭಕ್ತವತ್ಸಲಃ ।**
**ತಥಾಸ್ತ್ವಿತಿ ವಚಃ ಪ್ರೋಚ್ಯಾಂತರ್ಹಿತಸ್ಸ್ವಗಿರಿಂ ಯಯೌ ॥ ೧೧ ॥**

---

೭. ನಾನೀಗ ನಿನ್ನ ಒಪ್ಪಿಗೆಯನ್ನು ಪಡೆದು ತಂದೆಯ ಮನೆಗೆ ಹೋಗುವೆನು. ಹೇ ನಾಥ, ಈಗ ನೀನೇ ನಮ್ಮ ತಂದೆಯ ಬಳಿಗೆ ಹೋಗಿ

೮. ನಿನ್ನ ಕೀರ್ತಿಯನ್ನು ಮತ್ತಷ್ಟು ಬೆಳಗಿಸುತ್ತಾ ಭಿಕ್ಷುಕನಂತೆ ನಮ್ಮ ತಂದೆಯಿಂದ ನನ್ನನ್ನು ಬೇಡುವವನಾಗು. ಈರೀತಿಯಾಗಿ ನಮ್ಮ ತಂದೆಯ ಗೃಹಸ್ಥಾಶ್ರಮವು ಸಫಲವಾಗುವಂತೆ ಪ್ರೀತಿಯಿಂದ ಅನುಗ್ರಹಿಸು.

೯. ಅನಂತರ ಎಲೈ ಪ್ರಭುವೇ, ದೇವತೆಗಳ ಕಾರ್ಯವು ಸಿದ್ಧಿಸಲು ವಿಧ್ಯುಕ್ತವಾಗಿ ನನ್ನೊಡನೆ ಮದುವೆಯನ್ನು ನೆರವೇರಿಸು.

೧೦. ಎಲೈ ವಿಭುವೇ, ನನ್ನೀ ಆಸೆಯನ್ನು ಕೈಗೂಡುವಂತೆ ಮಾಡು. ನೀನು ಯಾವಾಗಲೂ ಯಾವೊಂದು ವಿಕಾರಕ್ಕೂ ಸಿಲುಕದವನು. ನೀನು ಯಾವಾಗಲೂ ಭಕ್ತರಲ್ಲಿ ವಾತ್ಸಲ್ಯವುಳ್ಳವನೆಂದು ಪ್ರಸಿದ್ಧನಾಗಿರುವೆಯಲ್ಲವೇ. ನಾನು ಎಂದೆಂದಿಗೂ ನಿನ್ನ ಭಕ್ತಳೇ ಆಗಿರುವೆನು ಎಂದಳು.

೧೧. ಈರೀತಿಯಾಗಿ ಪಾರ್ವತಿಯಿಂದ ಪ್ರಾರ್ಥಿಸಲ್ಪಟ್ಟ ಭಕ್ತವತ್ಸಲನಾದ ಆ ಶಿವನು ಹಾಗೆಯೇ ಆಗಲೆಂದು ನುಡಿದು ತನ್ನ ನಿವಾಸವಾದ ಕೈಲಾಸಕ್ಕೆ ತೆರಳಿದನು.

ಪಾರ್ವತ್ಯಪಿ ತತಃ ಪ್ರೀತ್ಯಾ ಸ್ವಸಖೀಭ್ಯಾಂ ವಯೋನ್ವಿತಾ ।
ಜಗಾಮ ಸ್ವಪಿತುರ್ಗೇಹಂ ರೂಪಂ ಕೃತ್ವಾ ತು ಸಾರ್ಥಕಂ ॥ ೧೨ ॥

ಪಾರ್ವತ್ಯಾಗಮನಂ ಶ್ರುತ್ವಾ ಮೇನಯಾ ಸ ಹಿಮಾಚಲಃ ।
ಪರಿವಾರಯುತೋ ದ್ರಷ್ಟುಂ ಸ್ವಸುತಾಂ ತಾಂ ಯಯೌ ಮುದಾ ॥ ೧೩ ॥

ದೃಷ್ಟ್ವಾ ತಾಂ ಸುಪ್ರಸನ್ನಾಸ್ಯಾಮಾಸಯಾಮಾಸತುರ್ಗೃಹಂ ।
ಕಾರಯಾಮಾಸತುಃ ಪ್ರೀತ್ಯಾ ಮಹಾನಂದೌ ಮಹೋತ್ಸವಂ ॥ ೧೪ ॥

ಧನಂ ದದೌ ದ್ವಿಜಾದಿಭ್ಯೋ ಮೇನಾ ಗಿರಿವರಸ್ತಥಾ ।
ಮಂಗಲಂ ಕಾರಯಾಮಾಸ ಸವೇದಧ್ವನಿಮಾದರಾತ್ ॥ ೧೫ ॥

ತತಃ ಸ್ವಕನ್ಯಯಾ ಸಾರ್ಧಮುವಾಚ ಪ್ರಾಂಗಣೇ ಮುದಾ ।
ಮೇನಾ ಚ ಹಿಮವಾಞ್ಛೈಲಃ ಸ್ನಾತುಂ ಗಂಗಾಂ ಜಗಾಮ ಸಃ ॥ ೧೬ ॥

---

೧೨ ಪಾರ್ವತಿಯೂ ಸಹ ತನ್ನ ರೂಪವು ಈರೀತಿ ಸಾರ್ಥಕವಾಗಲು ತನ್ನ ಸಖಿಗಳೀರ್ವರೊಡಗೂಡಿ ತನ್ನ ತಂದೆಯ ಮನೆಗೆ ಬಂದಳು.

೧೩ ಪಾರ್ವತಿಯು ಬರುತ್ತಿರುವಳೆಂಬುದನ್ನು ಕೇಳಿ ಹಿಮವಂತನು ಮಹಾ ಸಂತೋಷದಿಂದ ತನ್ನ ಮಡದಿಯಾದ ಮೇನೆಯೊಡನೆಯೂ ಮತ್ತು ಪರಿಜನರೊಡನೆಯೂ ಕೂಡಿ ಅವಳನ್ನು ಎದುರುಗೊಳ್ಳಲು ಹೊರಟನು.

೧೪ ಆ ತಾಯಿತಂದೆಗಳಿಬ್ಬರೂ, ಕೃತಕೃತ್ಯಳಾಗಿ ಹಿಂದಿರುಗಿದ ಪ್ರಸನ್ನವದನೆಯಾದ ಆ ಪಾರ್ವತಿಯನ್ನು ಕಂಡು ಆನಂದಾತಿಶಯವನ್ನು ತಾಳಿ ಮಹಾಸಂತೋಷದಿಂದ ಉತ್ಸವವನ್ನು ಆಚರಿಸಿದರು.

೧೫. ಆಗ ಮೇನಾದೇವಿಯೂ ಹಿಮವಂತನೂ ಬ್ರಾಹ್ಮಣಾದಿಗಳಿಗೆ ಅನೇಕವಾಗಿ ಧನಕನಕಾದಿಗಳನ್ನು ಇತ್ತರು. ವೇದಮಂತ್ರಗಳ ದಿವ್ಯಧ್ವನಿಯೊಡನೆ ಮಂಗಲಕಾರ್ಯವನ್ನು ನಡೆಸಿದರು.

೧೬. ಅನಂತರ ತನ್ನ ಮಗಳೊಂದಿಗೆ ಮೇನೆಯು ಸಂತೋಷಭರಿತಳಾಗಿ ತನ್ನ ಮನೆಯಲ್ಲಿದ್ದಳು. ಒಂದು ದಿನ ಹಿಮವಂತನು ಸ್ನಾನಕ್ಕೆಂದು ಗಂಗೆಗೆ ಹೊರಟನು.

ಏತಸ್ಮಿನ್ನಂತರೇ ಶಂಭುಃ ಸುಲೀಲೋ ಭಕ್ತವತ್ಸಲಃ ।
ಸುನರ್ತಕನಟೋ ಭೂತ್ವಾ ಮೇನಕಾಸನ್ನಿಧಿಂ ಯಯೌ ॥ ೧೭ ॥

ಶೃಂಗಂ ವಾಮೇ ಕರೇ ಧೃತ್ವಾ ದಕ್ಷಿಣೇ ಡಮರುಂ ತಥಾ ।
ಪೃಷ್ಠೇ ಕಂಥಾಂ ರಕ್ತವಾಸಾ ನೃತ್ಯಗಾನವಿಶಾರದಃ ॥ ೧೮ ॥

ತತಸ್ತು ನಟರೂಪೋಽಸೌ ಮೇನಕಾಸ್ತ್ರಾಂಗಣೇ ಮುದಾ ।
ಚಕ್ರೇ ಸ ನೃತ್ಯಂ ವಿವಿಧಂ ಗಾನಂ ಚಾತಿಮನೋಹರಂ ॥ ೧೯ ॥

ಶೃಂಗಂ ಚ ಡಮರುಂ ತತ್ರ ವಾದಯಾಮಾಸ ಸುಧ್ವನಿಂ ।
ಮಹೋಲೀಂ ವಿವಿಧಾಂ ಪ್ರೀತ್ಯಾ ಸ ಚಕಾರ ಮನೋಹರಂ ॥ ೨೦ ॥

ತಂ ದ್ರಷ್ಟುಂ ನಾಗರಾಸ್ಸರ್ವೇ ಪುರುಷಾಶ್ಚ ಸ್ತ್ರಿಯಸ್ತಥಾ ।
ಆಜಗ್ಮುಸ್ಸಹಸಾ ತತ್ರ ಬಾಲಾ ವೃದ್ಧಾ ಅಪಿ ಧ್ರುವಂ ॥ ೨೧ ॥

---

೧೭. ಈ ಸಮಯಕ್ಕೆ ಸರಿಯಾಗಿ ನಾನಾಲೀಲಾವಿಶಾರದನಾದ ಆ ಶಂಕರನು ಸೊಗಸಾಗಿ ನರ್ತನಮಾಡುವ ಒಬ್ಬಾನೊಬ್ಬ ನಟನವೇಷವನ್ನು ತಾಳಿ ಮೇನಾದೇವಿಯ ಬಳಿಗೆ ಬಂದನು.

೧೮. ಅವನು ಎಡಗೈಯಲ್ಲಿ ಶೃಂಗವೆಂಬ ಒಂದುಬಗೆಯ ವಾದ್ಯವನ್ನು (ಕೊಂಬು) ಬಲಗೈಯಲ್ಲಿ ಡಮರುವನ್ನೂ ಧರಿಸಿದ್ದನು. ಹೆಗಲಮೇಲೆ ಒಂದು ಬೊಂತೆಯನ್ನು ಹೊದೆದಿದ್ದನು. ಕೆಂಪುಬಟ್ಟೆಯನ್ನುಟ್ಟಿದ್ದನು. ಅವನು ನೃತ್ಯದಲ್ಲೂ ಗಾಯನದಲ್ಲೂ ಕುಶಲನಾಗಿದ್ದನು.

೧೯. ಅನಂತರ ಆ ನಟವೇಷಧಾರಿಯಾದ ಶಂಕರನು ಮೇನಾದೇವಿಯ ಮನೆಯ ಅಂಗಳದಲ್ಲಿ ಬಗೆಬಗೆಯಾಗಿ ನರ್ತನವನ್ನು ಮಾಡಿದನು ಮತ್ತು ಬಹು ಇಂಪಾಗಿ ಸಂಗೀತವನ್ನು ಹಾಡಿದನು.

೨೦. ಆಗಾಗ ಶೃಂಗವೆಂಬ ವಾದ್ಯವನ್ನೂ ಡಮರುವನ್ನೂ ಮಧುರವಾಗಿ ಬಾಜಿಸಿದನು. ಈರೀತಿಯಾಗಿ ಅವನು ಪ್ರೀತಿಯಿಂದ ನಾನಾವಿಧವಾದ ಅದ್ಭುತಲೀಲೆಯನ್ನು ಮನೋಹರವಾಗಿ ತೋರ್ಪಡಿಸಿದನು.

೨೧. ಆ ಲೀಲೆಯನ್ನು ನೋಡಲು ಆ ಪಟ್ಟಣದ ಎಲ್ಲ ಗಂಡಸರೂ ಹೆಂಗಸರೂ ಹುಡುಗರೂ ಮುದುಕರೂ ಬೇಗಬೇಗನೆ ಅಲ್ಲಿಗೆ ಬಂದರು.

**ಶ್ರುತ್ವಾ ಸುಗೀತಂ ತಂ ದೃಷ್ಟ್ವಾ ಸುನೃತ್ಯಂ ಚ ಮನೋಹರಂ ।**
**ಸಹಸಾ ಮುಮುಹುಃ ಸರ್ವೇ ಮೇನಾಪಿ ಚ ತದಾ ಮುನೇ ॥ ೨೨ ॥**

**ತತೋ ಮೇನಾಶು ರತ್ನಾನಿ ಸ್ವರ್ಣಪಾತ್ರಸ್ಥಿತಾನಿ ಚ ।**
**ತಸ್ಮೈ ದಾತುಂ ಯಯೌ ಪ್ರೀತ್ಯಾ ತದೂತಿಪ್ರೀತಮಾನಸಾ ॥ ೨೩ ॥**

**ತಾನಿ ನ ಸ್ವೀಚಕಾರಾಸೌ ಭಿಕ್ಷಾಂ ಚೇತೇ ಶಿವಾಂ ಚ ತಾಂ ।**
**ಪುನಸ್ಸುನೃತ್ಯಂ ಗಾನಂ ಚ ಕೌತುಕಾತ್ಕರ್ತುಮುದ್ಯತಃ ॥ ೨೪ ॥**

**ಮೇನಾ ತದ್ವಚನಂ ಶ್ರುತ್ವಾ ಚುಕೋಪಾತಿಸುವಿಸ್ಮಿತಾ ।**
**ಭಿಕ್ಷುಕಂ ಭರ್ತ್ಸಯಾಮಾಸ ಬಹಿಷ್ಕರ್ತುಮಿಯೇಷ ಸಾ ॥ ೨೫ ॥**

**ಏತಸ್ಮಿನ್ನಂತರೇ ತತ್ರ ಗಂಗಾತೋ ಗಿರಿರಾಡ್ಯಯೌ ।**
**ದದರ್ಶ ಪುರತೋ ಭಿಕ್ಷುಂ ಪ್ರಾಂಗಣಸ್ಥಂ ನರಾಕೃತಿಂ ॥ ೨೬ ॥**

---

೨೨ ಓ ಸನತ್ಕುಮಾರ, ಅವನ ಇಂಪಾದ ಸಂಗೀತವನ್ನು ಕೇಳುತ್ತಲೂ ಮತ್ತು ಮನೋಹರವಾದ ನರ್ತನವನ್ನು ಕಾಣುತ್ತಲೂ ಅವರೆಲ್ಲರೂ ಮೈಮರೆತು ಬಿಟ್ಟರು ಮೇನೆಯೂ ಸಹ ಮೈಮರೆತಳು

೨೩ ಅವನ ಆ ಲೀಲೆಯನ್ನು ಕಂಡು ಬಹುವಾಗಿ ಹಿಗ್ಗಿದವಳಾಗಿ ಮೇನಾ ದೇವಿಯು ಬಗೆಬಗೆಯಾದ ರತ್ನಗಳನ್ನು ಚಿನ್ನದ ಹರಿವಾಣಗಳಲ್ಲಿ ತುಂಬಿಕೊಂಡು ಬಂದು ಅವನಿಗೆ ಪ್ರೀತಿಯಿಂದ ಕೊಡಹೋದಳು

೨೪ ಆದರೆ ಆ ನಟನು ಅವುಗಳನ್ನೊಲ್ಲದೆ ಮೇನೆಯ ಮಗಳಾದ ಪಾರ್ವತಿಯನ್ನೇ ಬೇಡಿದನು. ಬಳಿಕ ತಿರುಗಿ ಕುತೂಹಲದಿಂದ ನರ್ತಿಸಲೂ ಹಾಡಲೂ ಮೊದಲುಮಾಡಿದನು

೨೫. ಮೇನೆಯು ಆ ಮಾತನ್ನು ಕೇಳುತ್ತಲೇ ಬೆಚ್ಚಿಬಿದ್ದಳು. ಬಳಿಕ ಬಹು ಕೋಪವನ್ನು ತಾಳಿ ನೃತ್ಯದಿಂದ ಹೊಟ್ಟೆಹೊರೆಯುವ ಆ ನರ್ತಕನನ್ನು ಬೈದು ದಲ್ಲದೆ ಹೊರಕ್ಕೆ ದೂಡಿಸಲು ಮನಸ್ಸುಮಾಡಿದಳು

೨೬ ಈ ಸಮಯಕ್ಕೆ ಸರಿಯಾಗಿ ಗಂಗೆಗೆ ಸ್ನಾನಕ್ಕೆ ಹೋಗಿದ್ದ ಹಿಮವಂತನು ಅಲ್ಲಿಗೆ ಹಿಂದಿರುಗಿ ಬಂದನು ಬಳಿಕ ತನ್ನ ಎದುರುಗಡೆ ಮನೆಯ ಅಂಗಳದಲ್ಲಿ ನಿಂತಿದ್ದ ಮನುಷ್ಯನಂತೆ ಆಕೃತಿಯುಳ್ಳ ಭಿಕ್ಷುಕನಟನನ್ನು ಕಂಡನು

ಶ್ರುತ್ವಾ ಮೇನಾಮುಖಾದ್ವೃತ್ತಂ ತತ್ಸರ್ವಂ ಸುಚುಕೋಪ ಸಃ ।
ಆಜ್ಞಾಂ ಚಕಾರಾನುಚರಾನ್ಬಹಿಃಕರ್ತುಂ ಚ ಭಿಕ್ಷುಕಂ ॥ ೨೭ ॥

ಮಹಾಗ್ನಿಮಿವ ದುಸ್ಸ್ಪರ್ಶಂ ಪ್ರಜ್ವಲಂತಂ ಸುತೇಜಸಂ ।
ನ ಶಶಾಕ ಬಹಿಃ ಕರ್ತುಂ ಕೋಽಪಿ ತಂ ಮುನಿಸತ್ತಮ ॥ ೨೮ ॥

ತತಃ ಸ ಭಿಕ್ಷುಕಸ್ತಾತ ನಾನಾಲೀಲಾವಿಶಾರದಃ ।
ದರ್ಶಯಾಮಾಸ ಶೈಲಾಯ ಸ್ವಪ್ರಭಾವಮನಂತಕಂ ॥ ೨೯ ॥

ಶೈಲೋ ದದರ್ಶ ತಂ ತತ್ರ ವಿಷ್ಣುರೂಪಧರಂ ದ್ರುತಂ ।
ತತೋ ಬ್ರಹ್ಮಸ್ವರೂಪಂ ಚ ಸೂರ್ಯರೂಪಂ ತತಃ ಕ್ಷಣಾತ್ ॥ ೩೦ ॥

ತತೋ ದದರ್ಶ ತಂ ತಾತ ರುದ್ರರೂಪಂ ಮಹಾದ್ಭುತಂ ।
ಪಾರ್ವತೀಸಹಿತಂ ರಮ್ಯಂ ವಿಹಸಂತಂ ಸುತೇಜಸಂ ॥ ೩೧ ॥

---

೨೭. ಆಗ ಮೇನೆಯು ಎಲ್ಲ ಸಂಗತಿಯನ್ನೂ ತಿಳಿಸುತ್ತಲೇ ಮಿತಿಮೀರಿದ ಕೋಪವನ್ನು ತಾಳಿ ತನ್ನ ಆಳುಗಳನ್ನು ಕರೆದು ಆ ಭಿಕ್ಷುಕನನ್ನು ಹೊರಗಟ್ಟುವಂತೆ ಅಪ್ಪಣೆಮಾಡಿದನು.

೨೮. ಎಲೈ ಮುನಿಶ್ರೇಷ್ಠನೇ, ಉರಿಯುತ್ತಿರುವ ಬೆಂಕಿಯ ರಾಶಿಯಂತೆ ಮುಟ್ಟುವುದಕ್ಕೆ ಅಸಾಧ್ಯನಾಗಿ ಎಣೆಯಿಲ್ಲದ ತೇಜಸ್ಸಿನಿಂದ ಜ್ವಲಿಸುತ್ತಿರುವ ಆ ನಟನನ್ನು ಹೊರದೂಡಲು ಯಾವನಿಗೂ ಸಾಧ್ಯವಾಗಲಿಲ್ಲ.

೨೯. ಅಪ್ಪಾ, ಬಳಿಕ ನಾನಾವಿಧವಾದ ಲೀಲೆಗಳನ್ನು ತೋರುವುದರಲ್ಲಿ ಚದುರನೆನಿಸಿದ ಆ ಕಪಟಭಿಕ್ಷುಕನು ಆ ಹಿಮವಂತನಿಗೆ ಅಪಾರವಾದ ತನ್ನ ಪ್ರಭಾವವನ್ನು ತೋರಿಸಲಾರಂಭಿಸಿದನು.

೩೦. ಅವನು ಹಿಮವಂತನಿಗೆ ಆಕ್ಷಣದಲ್ಲಿ ವಿಷ್ಣುವಿನಂತೆ ಕಾಣಿಸಿಕೊಂಡನು. ಮರುಗಳಿಗೆಯಲ್ಲಿಯೇ ಬ್ರಹ್ಮನಂತೆ ತೋರಿದನು. ಆಮೇಲೆ ಕ್ಷಣಮಾತ್ರದಲ್ಲಿಯೇ ಸೂರ್ಯನಂತೆ ಕಾಣಿಸಿದನು.

೩೧. ಅಪ್ಪಾ, ಆ ಆಶ್ಚರ್ಯವನ್ನೇನು ಹೇಳಲಿ ? ಪುನಃ ಮತ್ತೊಂದು ಗಳಿಗೆಯಲ್ಲೇ ಒಳ್ಳೆಯ ತೇಜಸ್ಸಿನಿಂದ ಮನೋಹರವಾಗಿ ಕಂಗೊಳಿಸುತ್ತಾ ಶಿವನಂತೆ ವೇಷವನ್ನು ತಾಳಿ ಪಾರ್ವತಿಯೊಡನೆ ಕೂಡಿ ನಸುನಗುತ್ತಾ ಗೋಚರನಾದನು.

ಏವಂ ಸ ಬಹುರೂಪಾಣಿ ತಸ್ಯ ತತ್ರ ದದರ್ಶ ಸಃ ।
ಸುವಿಸ್ಮಿತೋ ಬಭೂವಾಶು ಪರಮಾನಂದಸಂಪ್ಲುತಃ　　॥ ೩೨ ॥

ಅಥಾಸೌ ಭಿಕ್ಷುವರ್ಯೋ ಹಿ ತಸ್ಮಾತ್ತಸ್ಯಾಶ್ಚ ಸುಂತಿಕೃತ್ ।
ಭಿಕ್ಷಾಂ ಯಯಾಚೇ ದುರ್ಗಾಂ ತಾಂ ನಾನ್ಯಜ್ಜಗ್ರಾಹ ಕಿಂಚನ　　॥ ೩೩ ॥

ತತಶ್ಚಾಂತರ್ದಧೇ ಭಿಕ್ಷುಸ್ವರೂಪಃ ಪರಮೇಶ್ವರಃ ।
ಸ್ವಾಲಯಂ ಸ ಜಗಾಮಾಶು ದುರ್ಗಾವಾಕ್ಯಪ್ರಚೋದಿತಃ　　॥ ೩೪ ॥

ತದಾ ಬಭೂವ ಸುಜ್ಞಾನಂ ಮೇನಾಶೈಲೇಶಯೋರಪಿ ।
ಆವಾಂ ಶಿವೋ ವಂಚಯಿತ್ವಾ ಗತವಾನ್ಸ್ವಾಲಯಂ ವಿಭುಃ　　॥ ೩೫ ॥

ಅಸ್ಮೈ ದೇಯಾ ಸ್ವಕನ್ಯೇಯಂ ಪಾರ್ವತೀ ಸುತಪಸ್ವಿನೀ ।
ಏವಂ ವಿಚಾರ್ಯ ಚ ತಯೋಃ ಶಿವೇ ಭಕ್ತಿರಭೂತ್ಪರಾ　　॥ ೩೬ ॥

---

೩೨　ಈರೀತಿಯಾಗಿ ಆ ನರ್ತಕನು ತೋರಿದ ಅನೇಕ ರೂಪಗಳನ್ನು ಕಂಡು ಹಿಮವಂತನು ಬಹುವಾಗಿ ಅಚ್ಚರಿಗೊಂಡನಲ್ಲದೆ ಅತಿಶಯವಾಗಿ ಆನಂದವನ್ನೂ ಹೊಂದಿದನು

೩೩. ಆಮೇಲೆ ಪುನಃ ಆ ಲೀಲಾವಿಶಾರದನಾದ ಭಿಕ್ಷುಕನು ಆ ಮೇನೆಯನ್ನೂ ಹಿಮವಂತನನ್ನೂ ಕುರಿತು ಪಾರ್ವತಿಯನ್ನು ಭಿಕ್ಷೆಯಾಗಿ ಕೊಡುವಂತೆ ಬೇಡಿದನು　ಮತ್ತೇನನ್ನೂ ಪಡೆಯಲಿಲ್ಲ.

೩೪. ಈರೀತಿ ಪಾರ್ವತಿಯು ತನ್ನನ್ನು ಪ್ರಾರ್ಥಿಸಿಕೊಂಡಿದ್ದಂತೆ ಭಿಕ್ಷು ರೂಪದಿಂದ ಬಂದು ಅವಳನ್ನು ಕೊಡುವಂತೆ ಮೇನೆಯನ್ನೂ ಹಿಮವಂತನನ್ನೂ ಯಾಚಿಸಿ ಆ ಪರಮೇಶ್ವರನು ಅಲ್ಲಿಂದ ಕಣ್ಮರೆಯಾಗಿ ಕೂಡಲೆ ತನ್ನ ನಿವಾಸಕ್ಕೆ ಹೊರಟುಹೋದನು

೩೫. ಆಗ ಪರಮಪುರುಷನಾದ ಆ ಶಿವನು ತಮ್ಮನ್ನು ಈರೀತಿ ವಂಚಿಸಿ ಹೊರಟುಹೋದನೆಂದು ಮೇನೆಗೂ ಹಿಮವಂತನಿಗೂ ತಿಳಿವಳಿಕೆಯುಂಟಾಯಿತು

೩೬. ಆಗ ಈತನಿಗೇನೇ ಮಹಾತಪಸ್ವಿನಿಯಾದ ನಮ್ಮ ಮಗಳಾದ ಈ ಪಾರ್ವತಿಯನ್ನು ಕೊಟ್ಟು ಮದುವೆಮಾಡಬೇಕೆಂದು ನಿಶ್ಚಯಿಸಿದರು ಬಳಿಕ ಅವರಿಗೆ ಶಿವನಲ್ಲಿ ಭಕ್ತಿಯು ಬಹುವಾಗಿ ಹೆಚ್ಚಿತು.

ಅತೋ ರುದ್ರೋ ಮಹೋತಿಶ್ಚ ಕೃತ್ವಾ ಭಕ್ತಮುದಾವಹಂ ।
ವಿವಾಹಂ ಕೃತವಾನ್ಪ್ರೀತ್ಯಾ ಪಾರ್ವತ್ಯಾ ಸ ವಿಧಾನತಃ । ॥ ೩೭ ॥

ಇತಿ ಪ್ರೋಕ್ತಸ್ತು ತೇ ತಾತ ಸುನರ್ತಕನಟಾಹ್ವಯಃ
ಶಿವಾವತಾರೋ ಹಿ ಮಯಾ ಶಿವಾವಾಕ್ಯಪ್ರಪೂರಕಃ ॥ ೩೮ ॥

ಇದಮಾಖ್ಯಾನಮನಘಂ ಪರಮಂ ವ್ಯಾಹೃತಂ ಮಯಾ ।
ಯ ಏತಚ್ಛೃಣುಯಾತ್ಪ್ರೀತ್ಯಾ ಸ ಸುಖೀ ಗತಿಮಾಪ್ನುಯಾತ್ ॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಸುನರ್ತಕನಟಾಹ್ವಶಿವಾವತಾರವರ್ಣನಂ ನಾಮ
ಚತುಸ್ತ್ರಿಂಶೋಽಧ್ಯಾಯಃ.

---

೩೭. ಅನಂತರ ಅತ್ಯದ್ಭುತವಾದ ಲೀಲೆಗಳನ್ನು ತೋರುವುದರಲ್ಲಿ ಚದುರನೆನಿಸಿದ ಆ ಮಹೇಶ್ವರನು ಭಕ್ತರಿಗೆ ಮತ್ತಷ್ಟು ಸಂತೋಷವು ಹೆಚ್ಚುವಂತೆ ಪ್ರೀತಿಯಿಂದ ಆ ಪಾರ್ವತಿಯನ್ನು ವಿಧಿಪೂರ್ವಕವಾಗಿ ಮದುವೆಯಾದನು.

೩೮. ಅಪ್ಪಾ ಸನತ್ಕುಮಾರ, ಈರೀತಿಯಾಗಿ ನಿನಗೆ ಸುನರ್ತಕನಟನೆಂಬ ಹೆಸರಿನ, ಪಾರ್ವತಿಯ ಮಾತನ್ನು ನಡೆಸಿದ ಶಿವನ ಅವತಾರದ ಚರಿತ್ರೆಯನ್ನು ವರ್ಣಿಸಿದೆನು.

೩೯. ನಾನೀಗ ಬಣ್ಣಿಸಿದ ಈ ಆಖ್ಯಾನವು ಪರಮಪಾವನವಾದುದು, ಮಹಾಶ್ರೇಷ್ಠವಾದುದು. ಇದನ್ನು ಯಾವನು ಪ್ರೀತಿಯಿಂದ ಕೇಳುವನೋ ಅವನು ಈ ಲೋಕದಲ್ಲಿ ಸುಖಗಳನ್ನನುಭವಿಸಿ ಕೊನೆಗೆ ಶ್ರೇಷ್ಠವಾದ ಗತಿಯನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಶತರುದ್ರಸಂಹಿತೆಯಲ್ಲಿ
ಸುನರ್ತಕನಟನೆಂಬ ಹೆಸರಿನ ಶಿವಾವತಾರದ ವರ್ಣನವೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಪಂಚತ್ರಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

**ಸನತ್ಕುಮಾರ ಸರ್ವಜ್ಞ ಶಿವಸ್ಯ ಪರಮಾತ್ಮನಃ ।**
**ಅವತಾರಂ ಶೃಣು ವಿಭೋಃಸ್ಸಾಧುವೇಷದ್ವಿಜಾಹ್ವಯಂ ॥ ೧ ॥**

**ಮೇನಾಹಿಮಾಲಯೋಃರ್ಭಕ್ತಿಂ ಶಿವೇ ಜ್ಞಾತ್ವಾ ಮಹೋತ್ತಮಾಂ ।**
**ಚಿಂತಾಮಾಪುಸ್ಸುರಾಸ್ಸರ್ವೇ ಮಂತ್ರಯಾಮಾಸುರಾದರಾತ್ ॥ ೨ ॥**

---

## ಮೂವತ್ತೈದನೆಯ ಅಧ್ಯಾಯವು.

೧. ಎಲೈ ಸರ್ವಜ್ಞನಾದ ಸನತ್ಕುಮಾರನೇ, ಪರಮಾತ್ಮನಾದ ಆ ಶಿವನು ಸಾಧುವೇಷದ್ವಿಜನೆಂಬ ಅವತಾರವನ್ನು ಎತ್ತಿದ ವೃತ್ತಾಂತವನ್ನು ನಿನಗೆ ವಿವರಿಸುವೆನು ಕೇಳು

೨. ಹಿಂದೆ ತಿಳಿಸಿದಂತೆ ಮೇನಾದೇವಿಗೂ ಹಿಮವಂತನಿಗೂ ಶಿವನಲ್ಲಿ ಭಕ್ತಿಯು ಹೆಚ್ಚುಹೆಚ್ಚಾಗಿ ಬೆಳೆಯುತ್ತಿರುವುದನ್ನು ಕಂಡು ದೇವತೆಗಳೆಲ್ಲರಿಗೂ ಮನಸ್ಸಿನಲ್ಲಿ ವ್ಯಾಕುಲವುಂಟಾಯಿತು. ಆಗ ಅವರೆಲ್ಲರೂ ಒಂದೆಡೆ ಸೇರಿ ಆಲೋಚನೆ ಮಾಡಿದರು.

ಏಕಾಂತಭಕ್ತ್ಯಾ ಶೈಲಶ್ಚೇತ್ಕನ್ಯಾಂ ದಾಸ್ಯತಿ ಶಂಭವೇ ।
ಧ್ರುವಂ ನಿರ್ವಾಣತಾಂ ಸದ್ಯಃ ಸಂಪ್ರಾಪ್ಸ್ಯತಿ ಶಿವಸ್ಯ ವೈ ॥ ೩ ॥

ಅನಂತರತ್ನಾಧಾರೋಽಸೌ ಚೇತ್ಪ್ರಯಾಸ್ಯತಿ ಮೋಕ್ಷತಾಂ ।
ರತ್ನಗರ್ಭಾಭಿಧಾ ಭೂಮಿರ್ಮಿಥ್ಯೈವ ಭವಿತಾ ಧ್ರುವಂ ॥ ೪ ॥

ಅಸ್ಥಿರತ್ವಂ ಪರಿತ್ಯಜ್ಯ ದಿವ್ಯರೂಪಂ ವಿಧಾಯ ಸಃ ।
ಕನ್ಯಾಂ ಶೂಲಭೃತೇ ದತ್ವಾ ಶಿವಲೋಕಂ ಗಮಿಷ್ಯತಿ ॥ ೫ ॥

ಮಹಾದೇವಸ್ಯ ಸಾರೂಪ್ಯಂ ಪ್ರಾಪ್ಯ ಶಂಭೋರನುಗ್ರಹಾತ್ ।
ತತ್ರ ಭುಕ್ತ್ವಾ ಮಹಾಭೋಗಾಂಸ್ತತೋ ಮೋಕ್ಷಮವಾಪ್ಸ್ಯತಿ ॥ ೬ ॥

ಇತ್ಯಾಲೋಚ್ಯ ಸುರಾಸ್ಸರ್ವೇ ಜಗ್ಮುರ್ಗುರುಗೃಹಂ ಮುನೇ ।
ಚಕ್ರುರ್ನಿವೇದನಂ ಗತ್ವಾ ಗುರವೇ ಸ್ವಾರ್ಥಸಾಧಕಾಃ ॥ ೭ ॥

---

೩. ಆ ಹಿಮವಂತನೇನಾದರೂ ಅನನ್ಯಭಕ್ತಿಯಿಂದ ತನ್ನ ಮಗಳಾದ ಪಾರ್ವತಿಯನ್ನು ಶಿವನಿಗೆ ಇತ್ತಿದ್ದೇ ಆದರೆ ಆ ಒಡನೆಯೇ ಅವನು ಶಿವಾನುಗ್ರಹದಿಂದ ಮೋಕ್ಷವನ್ನು ಹೊಂದುವನು.

೪. ಎಲ್ಲಾವಿಧವಾದ ಸಮಸ್ತ ರತ್ನಗಳಿಗೂ ನೆಲೆಯೆನಿಸಿದ ಈ ಹಿಮವಂತನು ಮೋಕ್ಷವನ್ನು ಪಡೆದುಬಿಟ್ಟರೆ ರತ್ನಗರ್ಭೆಯೆಂಬುದಾಗಿ ಈ ಭೂಮಿಯು ಪಡೆದಿರುವ ಹೆಸರು ಸುಳ್ಳಾಗುವುದು ಖಂಡಿತ.

೫. ತನ್ನ ಮಗಳನ್ನು ಶಿವನಿಗೆ ಇತ್ತೊಡನೆಯೇ ಆ ಹಿಮವಂತನು ತನ್ನ ಅಚಲವಾದ ಈ ಪರ್ವತರೂಪವನ್ನು ತ್ಯಜಿಸಿ ದಿವ್ಯವಾದ ಶರೀರವನ್ನು ಧಾರಣೆ ಮಾಡಿ ಶಿವಲೋಕವನ್ನು ಕುರಿತು ತೆರಳುವನು.

೬. ಆ ಶಿವನ ಅನುಗ್ರಹದಿಂದ ಅವನಂತೆಯೇ ಹೋಲುವ ಆಕೃತಿಯನ್ನೂ ವೇಷವನ್ನೂ ಪಡೆದು ಆ ಶಿವಲೋಕದಲ್ಲಿ ದಿವ್ಯವಾದ ಅನೇಕ ಭೋಗಗಳನ್ನು ಅನುಭವಿಸಿ ಕೊನೆಗೆ ಮೋಕ್ಷವನ್ನೂ ಪಡೆಯುವನು.

೭. ಈರೀತಿಯಾಗಿ ಆ ದೇವತೆಗಳೆಲ್ಲರೂ ತಮ್ಮಲ್ಲಿ ಆಲೋಚಿಸಿಕೊಂಡು ಬೃಹಸ್ಪತಿಯ ಮನೆಗೆ ಹೋದರು. ಬಳಿಕ ಆ ಸ್ವಾರ್ಥತತ್ಪರರು ತಾವು ಬಂದಿರುವುದೇಕೆಂಬುದನ್ನು ವಿವರಿಸಿದರು.

॥ ದೇವಾ ಊಚುಃ ॥

ಗುರೋ ಹಿಮಾಲಯಗೃಹಂ ಗಚ್ಛಾಸ್ಮತ್ಕಾರ್ಯಾರ್ಥಸಿದ್ಧಯೇ ।
ಕೃತ್ವಾ ನಿಂದಾಂ ಮಹೇಶಸ್ಯ ಗಿರಿಭಕ್ತಿಂ ನಿವಾರಯ　　॥ ೮ ॥

ಸ್ವಶ್ರದ್ಧಯಾ ಸುತಾಂ ದತ್ವಾ ಶಿವಾಯ ಸ ಗಿರಿರ್ಗುರೋ ।
ಲಭೇತ ಮುಕ್ತಿಮತ್ರೈವ ಧರಣ್ಯಾಂ ಸ ಹಿ ತಿಷ್ಠತು　　॥ ೯ ॥

ಇತಿ ದೇವವಚಃ ಶ್ರುತ್ವಾ ಪ್ರೋವಾಚ ಚ ವಿಚಾರ್ಯ ತಾನ್　　॥ ೧೦ ॥

॥ ಗುರುರುವಾಚ ॥

ಕಶ್ಚಿನ್ಮನ್ಯೇ ಚ ಯುಷ್ಮಾಕಂ ಗಚ್ಛೇಚ್ಛೈಲಾಂತಿಕಂ ಸುರಾಃ ।
ಸಂಪಾದಯೇತ್ಸ್ವಾಭಿಮತಮಹಂ ತತ್ಕರ್ತುಮಕ್ಷಮಃ　　॥ ೧೧ ॥

೮. ಎಲೈ ಆಚಾರ್ಯನೇ, ನಮ್ಮ ಕೆಲಸವನ್ನು ನೆರವೇರಿಸಿಕೊಡುವ ಸಲುವಾಗಿ ನೀನು ಹಿಮವಂತನ ಮನೆಗೆ ಹೋಗು ಬಳಿಕ ಶಂಕರನನ್ನು ಸಿಕ್ಕಿದಂತೆ ನಿಂದಿಸಿ ಆ ಹಿಮವಂತನಿಗೆ ಆತನಲ್ಲಿ ನೆಲೆಸಿರುವ ಭಕ್ತಿಯನ್ನು ತಪ್ಪಿಸು

೯ ಆ ಶಿವನಲ್ಲಿರುವ ವಿಶೇಷವಾದ ಶ್ರದ್ಧೆಯಿಂದ ಆ ನಗರಾಜನು ತನ್ನ ಮಗಳನ್ನು ಇತ್ತು ಮೋಕ್ಷವನ್ನು ಪಡೆದುಬಿಟ್ಟಾನು. ಅವನು ಈ ಭೂಮಿಯಲ್ಲಿಯೇ ನೆಲಸಿರುವಂತಾಗಲಿ

೧೦. ಹೀಗೆಂದು ದೇವತೆಗಳು ಹೇಳಿದುದನ್ನು ಕೇಳಿ ಆ ಬೃಹಸ್ಪತ್ಯಾಚಾರ್ಯನು ತನ್ನ ಮನಸ್ಸಿನಲ್ಲಿ ವಿಚಾರಮಾಡಿ ಅವರನ್ನಿಂತೆಂದನು

೧೧. ಎಲೈ ದೇವತೆಗಳಿರಾ, ನಿಮ್ಮೊಳಗೇ ಯಾರಾದರೂ ಒಬ್ಬರು ಹಿಮವಂತನ ಬಳಿಗೆ ಹೋಗಿ ನಿಮ್ಮ ಕೆಲಸವನ್ನು ನೆರವೇರಿಸಿಕೊಂಡುಬನ್ನಿರಿ ನನ್ನಿಂದ ಈ ಕೆಲಸವನ್ನು ಮಾಡಲು ಸಾಧ್ಯವಿಲ್ಲ.

ಅಥ ವಾ ಗಚ್ಛತ ಸುರಾ ಬ್ರಹ್ಮಲೋಕಂ ಸವಾಸವಾಃ ।
ತಸ್ಮೈ ವೃತ್ತಂ ಕಥಯ ಸ್ವಂ ಸ ವಃ ಕಾರ್ಯಂ ಕರಿಷ್ಯತಿ ॥ ೧೨ ॥

॥ ನಂದೀಶ್ವರ ಉವಾಚ ॥

ತಚ್ಛ್ರುತ್ವಾ ತೇ ಸಮಾಲೋಕ್ಯ ಜಗ್ಮುರ್ವಿಧಿಸಭಾಂ ಸುರಾಃ ।
ಸರ್ವಂ ನಿವೇದಯಾಮಾಸುಸ್ತದ್ವೃತ್ತಂ ಪುರತೋ ವಿಧೇಃ ॥ ೧೩ ॥

ಅವೋಚತ್ತಾನ್ವಿಧಿಃ ಶ್ರುತ್ವಾ ತದ್ವಚಃ ಸುವಿಚಿಂತ್ಯ ವೈ ।
ನಾಹಂ ಕರಿಷ್ಯೇ ತನ್ನಿಂದಾಂ ದುಃಖದಾಂ ಕಲಹರಾಂ ಸದಾ ॥ ೧೪ ॥

ಸುರಾ ಗಚ್ಛತ ಕೈಲಾಸಂ ಸಂತೋಷಯತ ಶಂಕರಂ ।
ಪ್ರಸ್ಥಾಪಯತ ತಂ ದೇವಂ ಹಿಮಾಲಯಗೃಹಂ ಪ್ರತಿ ॥ ೧೫ ॥

---

೧೨. ಇಲ್ಲದಿದ್ದರೆ ನೀವೆಲ್ಲರೂ ಇಂದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮನ ಬಳಿಗೆ ಹೋಗಿ ಈ ಸಂಗತಿಯನ್ನು ತಿಳಿಸಿರಿ. ಆತನು ನಿಮ್ಮ ಕೆಲಸವನ್ನು ಮಾಡಿ ಕೊಡುವನು ಎಂದನು.

೧೩. ಎಲೈ ಮುನಿಯೇ, ಈರೀತಿ ಬೃಹಸ್ಪತಿಯಾಡಿದ ಮಾತನ್ನು ಕೇಳಿ ಅವರೆಲ್ಲರೂ ತಮ್ಮತಮ್ಮಲ್ಲೇ ಆಲೋಚಿಸಿಕೊಂಡು ಬ್ರಹ್ಮನ ಸಭೆಗೆ ಹೋಗಿ ಅಲ್ಲಿ ಆತನಿಗೆ ಆ ಸಂಗತಿಯೆಲ್ಲವನ್ನೂ ಬಿನ್ನವಿಸಿದರು.

೧೪. ಅವರು ಹೇಳಿದುದನ್ನು ಕೇಳಿ ಬ್ರಹ್ಮನು ಬಹುವಾಗಿ ತನ್ನಲ್ಲಿ ಆಲೋಚನೆಮಾಡಿ ಅವರನ್ನಿಂತೆಂದನು. ದುಃಖಪ್ರದವೂ ಕಲಹಕಾರಣವೂ ಆದ ಆ ಶಿವನಿಂದೆಯನ್ನು ನನ್ನಕೈಲಿ ಮಾಡಲು ಸಾಧ್ಯವಿಲ್ಲ.

೧೫. ಎಲೈ ದೇವತೆಗಳಿರಾ, ಆದುದರಿಂದ ನೀವು ಕೈಲಾಸಕ್ಕೆ ಹೋಗಿ ಅಲ್ಲಿ ಆ ಶಂಕರನನ್ನು ಸಂತೋಷಗೊಳಿಸಿರಿ. ಆಮೇಲೆ ಆತನನ್ನೇ ಹಿಮವಂತನ ಮನೆಗೆ ಕಳುಹಿಸಿಕೊಡಿರಿ.

ಸ ಗಚ್ಛೇದಥ ಶೈಲೇಶಮಾತ್ಮನಿಂದಾಂ ಕರೋತು ವೈ ।
ಪರನಿಂದಾ ವಿನಾಶಾಯ ಸ್ವನಿಂದಾ ಯಶಸೇ ಮತಾ ॥ ೧೬ ॥

॥ ನಂದೀಶ್ವರ ಉವಾಚ ॥

ತತಸ್ತೇ ಪ್ರಯಯುಃ ಶೀಘ್ರಂ ಕೈಲಾಸಂ ನಿಖಿಲಾಸ್ಸುರಾಃ ।
ಸುಪ್ರಣಮ್ಯ ಶಿವಂ ಭಕ್ತ್ಯಾ ತದ್ವೃತಂ ನಿಖಿಲಾ ಜಗುಃ ॥ ೧೭ ॥

ತಚ್ಛೃತ್ವಾ ದೇವವಚನಂ ಸ್ವೀ ಚಕಾರ ಮಹೇಶ್ವರಃ ।
ನೇವಾನ್ಸಯಾಪಯಾಮಾಸ ತಾನಾಶ್ವಾಸ್ಯ ವಿಹಸ್ಯ ಸಃ ॥ ೧೮ ॥

ತತಃ ಸ ಭಗವಾಞ್ಛಂಭುರ್ಮಹೇಶೋ ಭಕ್ತವತ್ಸಲಃ ।
ಗಂತುಮೈಚ್ಛಚ್ಛೈಲಮೂಲಂ ಮಾಯೇಶೋ ನ ವಿಕಾರವಾನ್ ॥ ೧೯ ॥

ದಂಡೀ ಛತ್ರೀ ದಿವ್ಯವಾಸಾ ಬಿಭ್ರತ್ತಿಲಕಮುಜ್ಜ್ವಲಂ ।
ಕರೇ ಸ್ಫಟಿಕಮಾಲಾಂ ಚ ಶಾಲಗ್ರಾಮಂ ಗಲೇ ದಧತ್ ॥ ೨೦ ॥

---

೧೬ ಆತನೇ ಆ ಹಿಮವಂತನ ಬಳಿಗೆ ಹೋಗಲಿ ತನ್ನ ನಿಂದೆಯನ್ನು ತಾನೇ ಮಾಡಲಿ. ಏಕೆಂದರೆ, ಇನ್ನೊಬ್ಬರ ನಿಂದೆಯನ್ನು ಮಾಡಿದರೆ ವಿನಾಶವುಂಟಾಗುವುದು. ಆತ್ಮನಿಂದೆಯನ್ನು ಮಾಡಿದಲ್ಲಿ ಯಶಸ್ಸು ಉಂಟಾಗುವುದು

೧೭ ಎಲೈ ಮುನಿಯೇ, ಆಗ ಅವರೆಲ್ಲರೂ ಬ್ರಹ್ಮನ ಮಾತಿನಂತೆ ಬೇಗನೆ ಕೈಲಾಸಕ್ಕೆ ತೆರಳಿದರು. ಅಲ್ಲಿ ಭಕ್ತಿಯಿಂದ ಶಂಕರನಿಗೆ ನಮಸ್ಕಾರಮಾಡಿ ತಾವು ಬಂದುದೇಕೆಂಬುದನ್ನು ಬಿನ್ನವಿಸಿದರು

೧೮. ಆ ದೇವತೆಗಳೆಲ್ಲರ ಮೊರೆಯನ್ನು ಆಲಿಸಿ. ಆ ಶಂಕರನು ನಸುನಕ್ಕು ಅವರೆಲ್ಲರನ್ನೂ ಸಂತೈಸಿ, ಹಾಗೆಯೇ ಆಗಲೆಂದು ಒಪ್ಪಿ ಅವರನ್ನು ಕಳುಹಿಸಿ ಕೊಟ್ಟನು.

೧೯ ಅನಂತರ ಮಾಯೆಗೆ ಅಧೀಶನೂ ವಿಕಾರವರ್ಜಿತನೂ ಭಕ್ತವತ್ಸಲನೂ ಆದ ಆ ಮಹೇಶ್ವರನು ಹಿಮವಂತನಬಳಿಗೆ ಹೋಗಲು ಮನಸ್ಸುಮಾಡಿದನು.

೨೦-೨೧. ಆಗ ಕೈಯ್ಯಲ್ಲಿ ದಂಡ, ಛತ್ರಿ, ಉಡಲು ಸೊಗಸಾದ ಬಟ್ಟೆ, ಹಣೆಯಲ್ಲಿ ಮೆರೆಯುತ್ತಿರುವ ತಿಲಕ, ಕೈಯ್ಯಲ್ಲಿ ಸ್ಫಟಿಕದಸರ, ಕೊರಳಲ್ಲಿ ಶಾಲಗ್ರಾಮಶಿಲೆಯ

ಜಪನ್ನಾಮ ಹರೇರ್ಭಕ್ತ್ಯಾ ಸಾಧುವೇಷಧರೋ ದ್ವಿಜಃ ।
ಹಿಮಾಚಲಂ ಜಗಾಮಾಶು ಬಂಧುವರ್ಗೈಃ ಸಮನ್ವಿತಂ ॥ ೨೧ ॥

ತಂ ಚ ದೃಷ್ಟ್ವಾ ಸಮುತ್ತಸ್ಥೌ ಸಗಣೋऽಪಿ ಹಿಮಾಲಯಃ ।
ನನಾಮ ದಂಡವದ್ಭೂಮೌ ಸಾಷ್ಟಾಂಗಂ ವಿಧಿಪೂರ್ವಕಂ ॥ ೨೨ ॥

ತತಃಪ್ರಪಚ್ಛ ಶೈಲೇಶಸ್ತಂ ದ್ವಿಜಂ ಕೋ ಭವಾನಿತಿ ।
ಉವಾಚ ಶೀಘ್ರಂ ವಿಪ್ರೇಂದ್ರಸ್ಸ ಯೋಗ್ಯದ್ರಿಂ ಮಹಾದರಾತ್ ॥ ೨೩ ॥

॥ ಸಾಧುದ್ವಿಜ ಉವಾಚ ॥

ಸಾಧುದ್ವಿಜಾಹ್ವಃ ಶೈಲಾಹಂ ವೈಷ್ಣವಃ ಪರಮಾರ್ಥದೃಕ್ ।
ಪರೋಪಕಾರೀ ಸರ್ವಜ್ಞಃ ಸರ್ವಗಾಮೀ ಗುರೋರ್ಬಲಾತ್ ॥ ೨೪ ॥

---

ಹಾರ, ಬಾಯಲ್ಲಿ ಶ್ರೀಹರಿಯ ನಾಮಾವಳಿಗಳು ಕಂಗೊಳಿಸುತ್ತಿರಲು ಪರಮಸಾಧು ವಾದ ಬ್ರಾಹ್ಮಣನಂತೆ ವೇಷವನ್ನು ತಾಳಿ, ಬಂಧುಬಾಂಧವರೊಡನೆ ಪರಿವೃತನಾಗಿರುವ ಹಿಮವಂತನ ಬಳಿಗೆ ಬೇಗನೆ ಬಂದನು.

೨೨. ಅವನನ್ನು ಕಾಣುತ್ತಲೇ ಹಿಮವಂತನು ತನ್ನ ಪರಿವಾರದೊಡನೆ ಝುಗ್ಗನೆ ಮೇಲೆದ್ದು ನಿಂತು ಆತನಿಗೆ ವಿಧಿಪೂರ್ವಕವಾಗಿ ನೆಲದಮೇಲೆ ಸಾಷ್ಟಾಂಗ ವಾಗಿ ದಂಡವತ್ಪ್ರಣಾಮವನ್ನು ಮಾಡಿದನು.

೨೩. ಬಳಿಕ ಆ ನಗಾಧಿರಾಜನು ಆ ಬ್ರಾಹ್ಮಣನನ್ನು ಕುರಿತು ನೀನಾರೆಂದು ಕೇಳಲು, ಯೋಗನಿರತನಾದ ಆ ಬ್ರಾಹ್ಮಣನು ಆದರದಿಂದ ಬೇಗನೆ ಹೇಳತೊಡ ಗಿದನು.

೨೪. ಎಲೈ ಶೈಲೇಂದ್ರನೇ, ಸಾಧುದ್ವಿಜನೆಂದು ನನ್ನ ಹೆಸರು. ನಾನು ಶ್ರೀಹರಿಯ ಸೇವಕನು. ಪರಮಾರ್ಥವೇನೆಂಬುದನ್ನು ಚೆನ್ನಾಗಿಬಲ್ಲೆನು. ಪರೋಪ ಕಾರದಲ್ಲಿಯೇ ಯಾವಾಗಲೂ ತೊಡಗಿರುವೆನು. ನನ್ನ ಗುರುವಿನ ಅನುಗ್ರಹದಿಂದ ನಾನು ಎಲ್ಲವನ್ನೂ ಬಲ್ಲೆನು. ಎಲ್ಲೆಡೆಯಲ್ಲಿಯೂ ಹೋಗಿಬರಬಲ್ಲೆನು.

ಮಯಾ ಜ್ಞಾತಂ ಸ್ವವಿಜ್ಞಾನಾತ್ಸ್ವಸ್ಥಾನೇ ಶೈಲಸತ್ತಮ ।
ತಚ್ಛೃಣು ಪ್ರೀತಿತೋ ವಚ್ಮಿ ಹಿತ್ವಾ ದಂಭಂ ತವಾಂತಿಕಂ ॥ ೨೫ ॥

ಶಂಕರಾಯ ಸುತಾಂ ದಾತುಂ ತ್ವಮಿಚ್ಛಸಿ ನಿಜೋದ್ಭವಾಂ ।
ಇಮಾಂ ಪದ್ಮಾಸಮಾಂ ರಮ್ಯಾಮಜ್ಞಾತಕುಲಶೀಲಿನೇ ॥ ೨೬ ॥

ಇಯಂ ಮತಿಸ್ತೇ ಶೈಲೇಂದ್ರ ನ ಯುಕ್ತಾ ಮಂಗಲಪ್ರದಾ ।
ನಿಬೋಧ ಜ್ಞಾನಿನಾಂ ಶ್ರೇಷ್ಠ ನಾರಾಯಣಕುಲೋದ್ಭವ ॥ ೨೭ ॥

ಪಶ್ಯ ಶೈಲಾಧಿಪತ್ವಂ ಚ ನ ತಸ್ಯೈಕೋಽಸ್ತಿ ಬಾಂಧವಃ ।
ಬಾಂಧವಾನ್ಸ್ವಸ್ಪ್ರಯತ್ನೇನ ಪೃಚ್ಛ ಮೇನಾಂ ಚ ಸ್ವಪ್ರಿಯಾಂ ॥ ೨೮ ॥

---

೨೫ ಎಲೈ ಶೈಲೇಂದ್ರನೇ, ನಾನಿರುವಕಡೆಯಲ್ಲಿಯೇ ನನ್ನ ಬಲದಿಂದ ತಿಳಿದಿರುವುದನ್ನು ನಿನಗೆ ತಿಳಿಸುವೆನು ಆದುದರಿಂದ ನಿನ್ನೆದುರು ನನ್ನ ದಂಭವನ್ನೇನೂ ತೋರ್ಪಡಿಸದೆ ಪ್ರೀತಿಯಿಂದ ಇದ್ದ ಸಂಗತಿಯನ್ನೇ ತಿಳಿಸುವೆನು. ನೀನು ನಿನ್ನ ಮಗಳನ್ನು ಶಂಕರನಿಗಿತ್ತು ಮದುವೆಮಾಡಬೇಕೆಂದಿರುವೆಯಷ್ಟೆ

೨೬. ಲಕ್ಷ್ಮಿಯಂತೆ ಮನೋಹರವಾಗಿ ಕಂಗೊಳಿಸುವ ಈಕೆಯನ್ನು ಕುಲಶೀಲಗಳೊಂದೂ ತಿಳಿಯದ ಅವನಿಗೆ ಕೊಡುವುದೇ ?

೨೭. ಎಲೈ ಶೈಲರಾಜನೇ, ಅಮಂಗಲಕರವಾದ ಈ ಬುದ್ಧಿಯು ನಿನಗೆ ಖಂಡಿತವಾಗಿಯೂ ತಕ್ಕುದಲ್ಲ. ಎಲೈ ಜ್ಞಾನಿಗಳಲ್ಲೆಲ್ಲಾ ಹೆಸರಾದವನೇ, ನಾರಾಯಣ ವಂಶದಲ್ಲಿ ನೀನು ಹುಟ್ಟಿರುವೆ ಚೆನ್ನಾಗಿ ವಿವೇಕವನ್ನು ತಂದುಕೋ

೨೮. ಎಲೈ ಗಿರಿಚಕ್ರವರ್ತಿಯೇ, ನೋಡು ಅವನಿಗೆ ಒಬ್ಬ ಬಂಧುವೂ ಇಲ್ಲ ನಿನ್ನ ಬಂಧುಗಳನ್ನು ಕೇಳು ಅಥವಾ ಪ್ರಿಯಪತ್ನಿಯಾದ ಮೇನೆಯನ್ನು ಕೇಳು.

**ಸರ್ವಾನ್ಸಂಪೃಚ್ಛ ಯತ್ನೇನ ಮೇನಾದೀನ್ಪಾರ್ವತೀಂ ವಿನಾ ।**
**ರೋಗಿಣೋ ನೌಷಧಂ ಶೈಲ ಕುಪಥ್ಯಂ ರೋಚತೇ ಸದಾ ॥ ೨೯ ॥**

**ನ ತೇ ಪಾತ್ರಾನುರೂಪಶ್ಚ ಪಾರ್ವತೀದಾನಕರ್ಮಣಿ ।**
**ಮಹಾಜನಃ ಸ್ಮೇರಮುಖಃ ಶ್ರುತಿಮಾತ್ರಾದ್ಭವಿಷ್ಯತಿ ॥ ೩೦ ॥**

**ನಿರಾಶ್ರಯಸ್ಸದಾಸಂಗೋ ವಿರೂಪೋ ನಿರ್ಗುಣೋಽವ್ಯಯಃ ।**
**ಸ್ಮಶಾನವಾಸೀ ವಿಕಟೋ ವ್ಯಾಲಗ್ರಾಹೀ ದಿಗಂಬರಃ ॥ ೩೧ ॥**

**ವಿಭೂತಿಭೂಷಣೋ ವ್ಯಾಲವರಾವೇಷ್ಟಿತಮಸ್ತಕಃ ।**
**ಸರ್ವಾಶ್ರಮಪರಿಭ್ರಷ್ಟಸ್ತ್ವವಿಜ್ಞಾತಗತಿಸ್ಸದಾ ॥ ೩೨ ॥**

---

೨೯. ಮೇನೆ ಮೊದಲಾದ ಅವರೆಲ್ಲರನ್ನೂ ಚೆನ್ನಾಗಿ ಕೇಳು, ವಿಚಾರಿಸು ಆದರೆ ಪಾರ್ವತಿಯನ್ನು ಕೇಳಬೇಡ. ರೋಗಿಗೆ ಔಷಧವು ಸೇರದಿರುವುದು, ಅಪಥ್ಯವು ಮಾತ್ರ ಚೆನ್ನಾಗಿ ಹಿಡಿಸುವುದು ಸಹಜವಷ್ಟೆ.

೩೦. ಪಾರ್ವತಿಯನ್ನು ಮದುವೆಮಾಡಿಕೊಡಲು ಅವನು ಅನುರೂಪನೇ ? ಸರಿಯಾದ ಪಾತ್ರನೇ ? ಈ ಸಂಗತಿಯನ್ನು ಕೇಳುತ್ತಲೇ ಜನರೆಲ್ಲರೂ ಪರಸ್ಪರ ಮುಖವನ್ನು ನೋಡಿ ನಗಲು ಮೊದಲುಮಾಡುವರು.

೩೧. ಅವನಿಗೆ ನಿಲ್ಲಲು ನೆಲೆಯಿಲ್ಲ ಮತ್ತು ಜೊತೆಗೆ ಯಾರೂ ಇಲ್ಲ. ಅವನು ವಿಕೃತವಾದ ರೂಪವುಳ್ಳವನು. ಅವನಲ್ಲಿ ಎಣಿಸುವಂತಹ ಗುಣವೊಂದೂ ಇಲ್ಲ ಮತ್ತು ಅವನು ಖರ್ಚುಮಾಡದ ಕಡುಲೋಭಿ, ಶ್ಮಶಾನದಲ್ಲಿ ವಾಸಮಾಡುವನು. ಅವನನ್ನು ನೋಡಲು ಅಸಹ್ಯವಾಗುವುದು. ಅವನು ಹಾವುಗಳನ್ನು ಹಾಕಿಕೊಂಡಿರುವನು. ಮೈಮೇಲೆ ಬಟ್ಟೆಯೂ ಇಲ್ಲದೆ ನಾಚಿಕೆಯಿಲ್ಲದಿರುವನು.

೩೨. ಅವನಿಗೆ ಬೂದಿಯೇ ಮೈಮೇಲಿನ ಒಡವೆ. ಜೊತೆಗೆ ಜಡೆಯಮೇಲೆ ಸುತ್ತಿಕೊಂಡಿರುವ ಹಾವು ಬೇರೆ. ಅವನು ಎಲ್ಲಾರೀತಿಯ ಆಶ್ರಮಗಳಿಂದಲೂ ಭ್ರಷ್ಟನಾಗಿರುವನು. ಅವನ ನಡತೆಯೆಂತಹುದೆಂಬುದನ್ನು ಯಾರೂ ಯಾವಾಗಲೂ ಅರಿಯರು ಎಂದನು.

॥ ಬ್ರಹ್ಮೋವಾಚ ॥

ಇತ್ಯಾದ್ಯುಕ್ತ್ವಾ ವಚಸ್ತಥ್ಯಂ ಶಿವನಿಂದಾಪರಂ ಸ ಹಿ ।
ಜಗಾಮ ಸ್ವಾಲಯಂ ಶೀಘ್ರಂ ನಾನಾಲೀಲಾಕರಃ ಶಿವಃ ॥ ೩೩ ॥

ತಚ್ಛ್ರುತ್ವಾ ವಿಪ್ರವಚನಮುಭೌತಾಂ ಚ ತನೂ ತಯೋಃ ।
ವಿಪರೀತಾನರ್ಥಪರೇ ಕಿಂ ಕರಿಷ್ಯಾವಹೇ ಧ್ರುವಂ ॥ ೩೪ ॥

ತತೋ ರುದ್ರೋ ಮಹೋತಿಂ ಚ ಕೃತ್ವಾ ಭಕ್ತಮುದಾವಹಾಂ ।
ವಿವಾಹಯಿತ್ವಾ ಗಿರಿಜಾಂ ದೇವಕಾರ್ಯಂ ಚಕಾರ ಸಃ ॥ ೩೫ ॥

ಇತಿ ಪ್ರೋಕ್ತಸ್ತು ತೇ ತಾತ ಸಾಧುವೇಷೋ ದ್ವಿಜಾಹ್ವಯಃ ।
ಶಿವಾವತಾರೋ ಹಿ ಮಯಾ ದೇವಕಾರ್ಯಕರಃ ಪ್ರಭೋ ॥ ೩೬ ॥

---

೩೩ ಅಪ್ಪಾ ಮುನಿಯೇ, ಈರೀತಿಯಾಗಿ ಇನ್ನೂ ಏನೇನೋ ಶಿವನಿಂದೆಯನ್ನೇ ಒಳಗೊಂಡ ಮಾತುಗಳನ್ನಾಡಿ ವಿವಿಧಲೀಲಾವಿನೋದಿಯಾದ ಆ ಶಂಕರನು ಅಲ್ಲಿಂದೆದ್ದು ತನ್ನ ಮನೆಗೆ ಸರಸರನೆ ಬಂದುಬಿಟ್ಟನು

೩೪ ಹೀಗೆಂಬುದಾಗಿ ನುಡಿದ ಆ ಬ್ರಾಹ್ಮಣನ ಮಾತನ್ನು ಕೇಳಿ ಆ ಮೇನಾ ಹಿಮವಂತರಿಬ್ಬರಿಗೂ ವಿಪರೀತವಾದ ಅನರ್ಥಗಳನ್ನು ಕಲ್ಪಿಸಿಕೊಂಡು ಈಗೇನು ಮಾಡೋಣವೆಂದು ಚಿಂತೆಗೀಡಾದರು.

೩೫ ಅನಂತರ ಶಂಕರನು ಭಕ್ತರ ಸಂತೋಷವು ಹೆಚ್ಚುವಂತಹ ಅದ್ಭುತವಾದ ಲೀಲೆಯನ್ನು ತೋರ್ಪಡಿಸಿ ಆ ಗಿರಿನಂದಿನಿಯನ್ನು ಮದುವೆಯಾದನು. ದೇವತೆಗಳ ಕೆಲಸವನ್ನೂ ಮಾಡಿದನು.

೩೬ ಅಪ್ಪಾ, ನಿನಗೆ ಈರೀತಿಯಾಗಿ ದೇವತೆಗಳ ಕೆಲಸವನ್ನು ನೆರವೇರಿಸಿಕೊಟ್ಟ ಸಾಧುವೇಷದ್ವಿಜನೆಂಬ ಹೆಸರಿನ ಶಿವನ ಅವತಾರವನ್ನು ವರ್ಣಿಸಿದುದಾಯಿತು.

**ಇದಮಾಖ್ಯಾನಮನಘಂ ಸ್ವರ್ಗ್ಯಮಾಯುಷ್ಯಮುತ್ತಮಂ ।**
**ಯಃ ಪಠೇಚ್ಛೃಣುಯಾದ್ವಾಪಿ ಸ ಸುಖೀ ಗತಿಮಾಪ್ನುಯಾತ್ ॥ ೩೭ ॥**

**ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಸಾಧುದ್ವಿಜಶಿವಾವತಾರವರ್ಣನಂ ನಾಮ ಪಂಚತ್ರಿಂಶೋಽಧ್ಯಾಯಃ**

---

೩೭. ಪಾಪರಹಿತವೂ ಸ್ವರ್ಗದಾಯಕವೂ ಆಯುವರ್ಧಕವೂ ಶ್ರೇಷ್ಠವೂ ಆದ ಈ ಉಪಾಖ್ಯಾನವನ್ನು ಯಾವನು ಓದುವನೋ ಇಲ್ಲವೇ ಕೇಳುವನೋ ಅವನು ಇಹದಲ್ಲಿ ಸುಖಿಯಾಗಿದ್ದು ಕೊನೆಗೆ ಉತ್ತಮವಾದ ಗತಿಯನ್ನು ಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಶತರುದ್ರಸಂಹಿತೆಯಲ್ಲಿ ಶಿವನ ಸಾಧುವೇಷದ್ವಿಜಾವತಾರವರ್ಣನವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀ ||

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಷಟ್ತ್ರಿಂಶೋಽಧ್ಯಾಯಃ



॥ ನಂದೀಶ್ವರ ಉವಾಚ ॥

ಸನತ್ಕುಮಾರ ಸರ್ವಜ್ಞ ಶಿವಸ್ಯ ಪರಮಾತ್ಮನಃ ।
ಅವತಾರಂ ಶೃಣು ವಿಭೋರಶ್ವತ್ಥಾಮಾಹ್ವಯಂ ಪರಂ ॥ ೧ ॥

ಬೃಹಸ್ಪತೇರ್ಮಹಾಬುದ್ಧೇರ್ದೇವರ್ಷೇರಂಶತೋ ಮುನೇ ।
ಭರದ್ವಾಜಾತ್ಸಮುತ್ಪನ್ನೋ ದ್ರೋಣೋಽಯೋನಿಜ ಆತ್ಮವಾನ್ ॥ ೨ ॥

## ಮೂವತ್ತಾರನೆಯ ಅಧ್ಯಾಯವು

೧. ನಂದೀಶ್ವರನಿಂತೆಂದನು :— ಎಲೈ ಸರ್ವಜ್ಞನಾದ ಸನತ್ಕುಮಾರಮುನಿಯೇ, ಆ ಪರಮಪುರುಷನಾದ ಶಿವನ ಶ್ರೇಷ್ಠವಾದ ಅಶ್ವತ್ಥಾಮಾವತಾರ ವೃತ್ತಾಂತವನ್ನು ನಿನಗೆ ವಿವರಿಸುವೆನು ಕೇಳು.

೨ ಮಹಾಧೀಮಂತನಾದ ಸುರುಗುರುವಾದ ಬೃಹಸ್ಪತಿಯ ಅಂಶದಿಂದ ಭರದ್ವಾಜಮಹರ್ಷಿಗೆ ಅಯೋನಿಜನಾದ ಮಗನೆನಿಸಿ ಆತ್ಮಜ್ಞಾನಿಯಾದ ದ್ರೋಣಾಚಾರ್ಯನು ಹುಟ್ಟಿದನು.

ಧನುರ್ಭೃತಾಂ ವರಃ ಶೂರೋ ವಿಪ್ರರ್ಷಿಸ್ಸರ್ವಶಾಸ್ತ್ರವಿತ್ ।
ಬೃಹತ್ಕೀರ್ತಿರ್ಮಹಾತೇಜಾ ಯಃ ಸರ್ವಾಸ್ತ್ರವಿದುತ್ತಮಃ ॥ ೩ ॥

ಧನುರ್ವೇದೇ ಚ ವೇದೇ ಚ ನಿಷ್ಣಾತಂ ಯಂ ವಿದುರ್ಬುಧಾಃ ।
ವರಿಷ್ಠಂ ಚಿತ್ರಕರ್ಮಾಣಂ ದ್ರೋಣಂ ಸ್ವಕುಲವರ್ಧನಂ ॥ ೪ ॥

ಕೌರವಾಣಾಂ ಸ ಆಚಾರ್ಯ ಆಸೀತ್ಸ್ವಬಲತೋ ದ್ವಿಜ ।
ಮಹಾರಥಿಷು ವಿಖ್ಯಾತಃ ಷಟ್ಸು ಕೌರವಮುಧ್ಯತಃ ॥ ೫ ॥

ಸಾಹಾಯ್ಯಾರ್ಥಂ ಕೌರವಾಣಾಂ ಸ ತೇಪೇ ವಿಪುಲಂ ತಪಃ ।
ಶಿವಮುದ್ದಿಶ್ಯ ಪುತ್ರಾರ್ಥಂ ದ್ರೋಣಾಚಾರ್ಯೋ ದ್ವಿಜೋತ್ತಮಃ ॥ ೬ ॥

---

೩. ಆತನು ಧನುರ್ಧಾರಿಗಳಲ್ಲಿ ಮೊದಲನೆಯವನು, ಮಹಾಸಾಹಸಿಯು, ಬ್ರಾಹ್ಮಣರಿಗೆ ತಿಲಕಪ್ರಾಯನು, ಎಲ್ಲಾ ಶಾಸ್ತ್ರಗಳನ್ನೂ ಚೆನ್ನಾಗಿಬಲ್ಲವನು, ವಿಶಾಲ ವಾದ ಕೀರ್ತಿಯುಳ್ಳವನು, ಮಹಾತೇಜಸ್ವಿಯು, ಸರ್ವಶಾಸ್ತ್ರಗಳನ್ನೂ ಬಲ್ಲವರಲ್ಲಿ ಮೇಲೆನಿಸಿದವನು.

೪. ಆತನನ್ನು ಬಲ್ಲವರೆಲ್ಲರೂ ಧನುರ್ವೇದದಲ್ಲಿಯೂ ವೇದದಲ್ಲಿಯೂ ಪಾರಂಗತನೆಂದೂ ಮಹಾಶ್ರೇಷ್ಠನೆಂದೂ ಅದ್ಭುತಚರಿತ್ರನೆಂದೂ ತನ್ನ ವಂಶವನ್ನು ಬೆಳಗಿಸುವವನೆಂದೂ ಶ್ಲಾಘಿಸುತ್ತಿದ್ದರು.

೫. ಆ ದ್ರೋಣಾಚಾರ್ಯನು ತನ್ನ ಸಾಮರ್ಥ್ಯದಿಂದಲೇ ಕೌರವರಿಗೆ ಗುರುವೆನಿಸಿದುದಲ್ಲದೆ ಕೌರವನ ಬಳಿ ಪ್ರಖ್ಯಾತರಾಗಿದ್ದ ಆರುಮಂದಿ ಮಹಾರಥರಲ್ಲಿ ಒಳ್ಳೆಯ ಹೆಸರನ್ನು ಪಡೆದಿದ್ದನು.

೬ ಬ್ರಾಹ್ಮಣೋತ್ತಮನಾದ ಆ ದ್ರೋಣಾಚಾರ್ಯನು ಕೌರವರಿಗೆ ಸಹಾಯವುಂಟಾಗಲಿ ಎಂಬಾಸೆಯಿಂದ ಮಗನನ್ನು ಪಡೆಯಬೇಕೆಂದು ನಿಶ್ಚಯಿಸಿ ಶಿವನನ್ನು ಕುರಿತು ಬಹು ದೊಡ್ಡ ತಪಸ್ಸನ್ನು ಮಾಡಿದನು.

ತತಃ ಪ್ರಸನ್ನೋ ಭಗವಾಞ್ಛಂಕರೋ ಭಕ್ತವತ್ಸಲಃ ।
ಆವಿರ್ಬಭೂವ ಪುರತೋ ದ್ರೋಣಸ್ಯ ಮುನಿಸತ್ತಮ ॥ ೭ ॥

ತಾಂ ದೃಷ್ಟ್ವಾ ಸ ದ್ವಿಜೋ ದ್ರೋಣಸ್ತುಷ್ಟಾವಾಶು ಪ್ರಣಮ್ಯ ತಂ ।
ಮಹಾಪ್ರಸನ್ನಹೃದಯೋ ನತಕಸ್ಸುಕೃತಾಂಜಲಿಃ ॥ ೮ ॥

ತಸ್ಯ ಸ್ತುತ್ಯಾ ಚ ತಪಸಾ ಸಂತುಷ್ಟಃ ಶಂಕರಃ ಪ್ರಭುಃ ।
ವರಂ ಬ್ರೂಹೀತಿ ಚೋವಾಚ ದ್ರೋಣಂ ತಂ ಭಕ್ತವತ್ಸಲಃ ॥ ೯ ॥

ತಚ್ಛ್ರುತ್ವಾ ಶಂಭುವಚನಂ ದ್ರೋಣಃ ಪ್ರಾಹಾಥ ಸನ್ನತಃ ।
ಸ್ವಾಂಶಜಂ ತನಯಂ ದೇಹಿ ಸರ್ವಾಜೇಯಂ ಮಹಾಬಲಂ ॥ ೧೦ ॥

ತಚ್ಛ್ರುತ್ವಾ ದ್ರೋಣವಚನಂ ಶಂಭುಃ ಪ್ರೋಚೇ ತಥಾಸ್ತ್ವಿತಿ ।
ಅಭೂದಂತರ್ಹಿತಸ್ತತ್ರ ಕೌತುಕೀ ಸುಖಕೃನ್ಮನೇ ॥ ೧೧ ॥

---

೭. ಎಲೈ ಮುನಿಶ್ರೇಷ್ಠನೇ, ಅನಂತರ ಆವನ ತಪಸ್ಸಿಗೆ ಮೆಚ್ಚಿ ಭಕ್ತವತ್ಸಲನಾದ ಶಿವನು ಆತನ ಎದುರಿಗೆ ಪ್ರತ್ಯಕ್ಷನಾದನು

೮ ಅವನನ್ನು ಕಾಣುತ್ತಲೇ ಆ ದ್ರೋಣಾಚಾರ್ಯನು ತಟ್ಟನೆ ಎದ್ದು ಅತಿಶಯವಾದ ಸಂತೋಷದಿಂದ ವೈಬಾಗಿ ನಮಸ್ಕರಿಸಿ ಕೈಮುಗಿದುಕೊಂಡು ಸ್ತೋತ್ರ ಮಾಡಿದನು.

೯ ಭಕ್ತರನ್ನು ಮಕ್ಕಳಂತೆ ಕಾಣುವ ಆ ಶಂಕರನು ದ್ರೋಣಾಚಾರ್ಯನು ಮಾಡಿದ ತಪಸ್ಸಿಗೂ ಸ್ತುತಿಗೂ ಬಹು ಸುಪ್ರೀತನಾಗಿ ನಿನಗೇನು ವರವು ಬೇಕೋ ಕೇಳು ಎಂದನು

೧೦. ಶಂಕರನು ಹೀಗೆ ನುಡಿದುದನ್ನು ಕೇಳಿ ದ್ರೋಣನು ಮತ್ತಷ್ಟು ವಿನೀತನಾಗಿ ನಿನ್ನ ಅಂಶದಿಂದ ಕೂಡಿದ, ಯಾರಿಗೂ ಗೆಲಲಸಾಧ್ಯನೆನಿಸಿದ ಮಹಾಬಲಶಾಲಿಯಾದ ಕುಮಾರನೋರ್ವನನ್ನು ಕರುಣಿಸು ಎಂದು ಪ್ರಾರ್ಥಿಸಿದನು

೧೧ ಎಲೈ ಮುನಿಯೇ, ಇಂತು ದ್ರೋಣನು ಬೇಡಿದುದನ್ನು ಕೇಳಿ ಲೋಕಸುಖಕರನೂ ಮಹಾಲೀಲಾವಿನೋದಿಯೂ ಆದ ಆ ಶಂಕರನು ಹಾಗೆಯೇ ಆಗಲೆಂದು ಅನುಗ್ರಹಿಸಿ ಅಲ್ಲಿಂದ ಕಣ್ಮರೆಯಾದನು.

ದ್ರೋಣೋಽಪಗಚ್ಛತ್ಸ್ವಂ ಧಾಮ ಮಹಾಹೃಷ್ಟೋ ಗತಭ್ರಮಃ ।
ಸ್ವಪತ್ನ್ಯೈ ಕಥಯಾಮಾಸ ತದ್ವೃತ್ತಂ ಸಕಲಂ ಮುದಾ ॥ ೧೨ ॥

ಅಥಾವಸರಮಾಸಾದ್ಯ ರುದ್ರಃ ಸರ್ವಾಂತಕಃ ಪ್ರಭುಃ ।
ಸ್ವಾಂಶೇನ ತನಯೋ ಜಜ್ಞೇ ದ್ರೋಣಸ್ಯ ಸ ಮಹಾಬಲಃ ॥ ೧೩ ॥

ಅಶ್ವತ್ಥಾಮೇತಿ ವಿಖ್ಯಾತಸ್ಸ ಬಭೂವ ಕ್ಷಿತೌ ಮುನೇ ।
ಪ್ರವೀರಃ ಕಂಜಪತ್ರಾಕ್ಷಃ ಶತ್ರುಪಕ್ಷಕ್ಷಯಂಕರಃ ॥ ೧೪ ॥

ಯೋ ಭಾರತೇ ರಣೇ ಖ್ಯಾತಃ ಪಿತುರಾಜ್ಞಾಮವಾಪ್ಯ ಚ ।
ಸಹಾಯಕೃದ್ಬಭೂವಾಥ ಕೌರವಾಣಾಂ ಮಹಾಬಲಃ ॥ ೧೫ ॥

ಯಮಾಶ್ರಿತ್ಯ ಮಹಾವೀರಂ ಕೌರವಾಸ್ಸುಮಹಾಬಲಾಃ ।
ಭೀಷ್ಮಾದಯೋ ಬಭೂವುಸ್ತೇಽಜೇಯಾ ಅಪಿ ದಿವೌಕಸಾಂ ॥ ೧೬ ॥

---

೧೨. ಭ್ರಮವರ್ಜಿತನಾದ ಆ ದ್ರೋಣಾಚಾರ್ಯನೂ ಸಹ ಮಹಾಸಂತೋಷಭರಿತನಾಗಿ ತನ್ನ ಮನೆಗೆ ಹೋಗಿ ಆ ವೃತ್ತಾಂತವೆಲ್ಲವನ್ನೂ ತನ್ನ ಮಡದಿಗೆ ತಿಳಿಸಿದನು.

೧೩. ಅನಂತರ ಒಳ್ಳೆಯ ಸಮಯವನ್ನು ನೋಡಿ ಸರ್ವಸಂಹಾರಕಾರಿಯಾದ ಆ ರುದ್ರನು ತನ್ನ ಅಂಶದಿಂದ ಆ ದ್ರೋಣನಿಗೆ ಮಹಾಬಲಶಾಲಿಯಾದ ಮಗನಾಗಿ ಹುಟ್ಟಿದನು.

೧೪. ಓ ಮುನೀಂದ್ರ, ಕಮಲದಂತೆ ಕಣ್ಣುಳ್ಳ, ಶತ್ರುಗಳನ್ನು ಸದೆಬಡಿಯುವ ಆ ಮಹಾವೀರನು ಭೂಮಿಯಲ್ಲಿ ಅಶ್ವತ್ಥಾಮನೆಂಬ ಹೆಸರಿನಿಂದ ಪ್ರಸಿದ್ಧನಾದನು.

೧೫. ಮಹಾಭಾರತಸಂಗ್ರಾಮದಲ್ಲಿ ಆತನು ತನ್ನ ತಂದೆಯ ಅಪ್ಪಣೆಯನ್ನು ಪಡೆದು ಕೌರವರ ಸಹಾಯಕ್ಕೆ ನಿಂತನು.

೧೬. ಆ ಮಹಾವೀರನ ಬೆಂಬಲವನ್ನು ಪಡೆದೇ ಭೀಷ್ಮನೇ ಮೊದಲಾದ ಕೌರವರು ದೇವತೆಗಳಿಗೂ ಸಗ್ಗದವರಾದರು.

**ಯುದ್ಧೇ ಯಾತ್ಪಾಂಡವಾಸ್ಸರ್ವೇ ಕೌರವಾಞ್ಜೇತುಮಕ್ಷಮಾಃ ।**
**ಆಸನ್ನಷ್ಟಾ ಮಹಾವೀರಾ ಅಪಿ ಸರ್ವೇ ಚ ಕೋವಿದಾಃ ॥ ೧೭ ॥**

**ಕೃಷ್ಣೋಪದೇಶತಶ್ಶಂಭೋಸ್ತಪಃ ಕೃತ್ವಾತಿದಾರುಣಂ ।**
**ಪ್ರಾಪ್ಯ ಚಾಸ್ತ್ರಂ ಶಂಭುವರಾಞ್ಜಿಗ್ಯೇ ತಾನರ್ಜುನಸ್ತತಃ ॥ ೧೮ ॥**

**ಅಶ್ವತ್ಥಾಮಾ ಮಹಾವೀರೋ ಮಹಾದೇವಾಂಶಜೋ ಮುನೇ ।**
**ತಥಾಪಿ ತದ್ಭಕ್ತಿವಶಃ ಸ್ವಪ್ರತಾಪಮದರ್ಶಯತ್ ॥ ೧೯ ॥**

**ವಿನಾಶ್ಯ ಪಾಂಡವಸುತಾನ್ ಶಿಕ್ಷಿತಾನಪಿ ಯತ್ನತಃ ।**
**ಕೃಷ್ಣಾದಿಭಿರ್ಮಹಾವೀರೈರನಿವಾರ್ಯಬಲಃ ಪರೈಃ ॥ ೨೦ ॥**

**ಪುತ್ರಶೋಕೇನ ವಿಕಲಮಾಪತಂತಂ ತಮರ್ಜುನಂ ।**
**ರಥೇನಾಚ್ಯುತವಂತಂ ಹಿ ದೃಷ್ಟ್ವಾ ಸ ಚ ಪರಾದ್ರವತ್ ॥ ೨೧ ॥**

---

೧೭ ಆತನ ಭಯದಿಂದ ಮಹಾವೀರರೂ ರಣಪಂಡಿತರೂ ಆದ ಆ ಪಾಂಡವರು ಕೌರವರನ್ನು ಜಯಿಸಲಾರದೆ ನಷ್ಟಪ್ರಾಯರಾದರು

೧೮. ಅನಂತರ ಅರ್ಜುನನು ಕೃಷ್ಣನ ಉಪದೇಶದಂತೆ ಮಹಾಘೋರವಾದ ತಪಸ್ಸುಮಾಡಿ ಶಿವನ ಕೃಪೆಗೆ ಪಾತ್ರನಾಗಿ ಆತನಿಂದ ಪಾಶುಪತಾಸ್ತ್ರವನ್ನು ಪಡೆದು ಆ ಕೌರವರೆಲ್ಲರನ್ನೂ ಜಯಿಸಿದನು

೧೯. ರುದ್ರಾಂಶಸಂಭೂತನಾದ ಅಶ್ವತ್ಥಾಮನು ಮಹಾವೀರನಾದರೂ ಆತನ ಭಕ್ತಿಗೆ ಅಧೀನನಾಗಿ ತನ್ನ ಪ್ರತಾಪವನ್ನು ತೋರ್ಪಡಿಸಿದನು

೨೦. ಬಹು ಚೆನ್ನಾಗಿ ಅಸ್ತ್ರವಿದ್ಯೆಯಲ್ಲಿ ಶಿಕ್ಷಿತರಾದ ಮತ್ತು ಕೃಷ್ಣ ಮೊದಲಾದ ಮಹಾವೀರರ ಸಹಾಯವುಳ್ಳ ಆ ಪಾಂಡವರ ಮಕ್ಕಳನ್ನು, ಮತ್ತಿತರರು ತನ್ನನ್ನು ಗೆಲ್ಲಲು ಸಾಧ್ಯವಿಲ್ಲದಂತಹ ಪರಾಕ್ರಮವುಳ್ಳ ಆ ಅಶ್ವತ್ಥಾಮನು ಕೊಂದು ಬಿಟ್ಟನು.

೨೧. ಉಪಪಾಂಡವರ ವಧಾನಂತರ ಪುತ್ರಶೋಕಪೀಡಿತನಾದ ಆ ಅರ್ಜುನನು ಕೃಷ್ಣನೊಡನೆ ರಥವನ್ನೇರಿ ಬರುತ್ತಿರುವುದನ್ನು ಕಂಡು ಆ ಅಶ್ವತ್ಥಾಮನು ಯುದ್ಧಭೂಮಿಯಿಂದ ಕಾಲ್ದೆಗೆದಿದ್ದನು.

ಅಸ್ತ್ರಂ ಬ್ರಹ್ಮಶಿರೋ ನಾಮ ತದುಪರ್ಯರ್ಜುನಸ್ಯ ಹಿ ।
ತತಃ ಪ್ರಾದುರಭೂತ್ತೇಜಃ ಪ್ರಚಂಡಂ ಸರ್ವತೋ ದಿಶಂ ॥ ೨೨ ॥

ಪ್ರಾಣಾಪದಮಭಿಪ್ರೇಕ್ಷ್ಯ ಸೋಽರ್ಜುನಃ ಕ್ಲೇಶಸಂಯುತಃ ।
ಉವಾಚ ಕೃಷ್ಣಂ ವಿಕ್ರಾಂತೋ ನಷ್ಟತೇಜಾ ಮಹಾಭಯಃ ॥ ೨೩ ॥

॥ ಅರ್ಜುನ ಉವಾಚ ॥

ಕಿಮಿದಂ ಸ್ವಿತ್ಕುತೋ ವೇತಿ ಕೃಷ್ಣ ಕೃಷ್ಣ ನ ವೇದ್ಮ್ಯಹಂ ।
ಸರ್ವತೋಮುಖಮಾಯಾತಿ ತೇಜಶ್ಚೇದಂ ಸುದುಸ್ಸಹಂ ॥ ೨೪ ॥

॥ ನಂದೀಶ್ವರ ಉವಾಚ ॥

ಶ್ರುತ್ವಾರ್ಜುನವಚಶ್ಚೇದಂ ಸ ಕೃಷ್ಣಶ್ಶೈವಸತ್ತಮಃ ।
ದಧ್ಯೌ ಶಿವಂ ಸದಾರಂ ಚ ಪ್ರತ್ಯಾಹಾರ್ಜುನಮಾದರಾತ್ ॥ ೨೫ ॥

---

೨೨. ಆಗ ಆ ಅಶ್ವತ್ಥಾಮನು ಬ್ರಹ್ಮಶಿರಸ್ಸೆಂಬ ಅಸ್ತ್ರವನ್ನು ಅರ್ಜುನನಮೇಲೆ ಪ್ರಯೋಗಿಸಿಬಿಟ್ಟನು. ಬಳಿಕ ಮಹಾಭಯಂಕರವಾದ ತೇಜಸ್ಸು ಎಲ್ಲಾ ದಿಕ್ಕುಗಳಲ್ಲಿಯೂ ಹೊತ್ತಿಕೊಂಡು ಉರಿಯತೊಡಗಿತು.

೨೩. ಆಗ ತನ್ನ ಪ್ರಾಣಕ್ಕೆ ಆಪತ್ತುಬಂದೊದಗಿದುದನ್ನು ಕಂಡು ಮಹಾಭಯದಿಂದ ತತ್ತಳಿಸುತ್ತಾ ಅರ್ಜುನನು ಬಹುವಾಗಿ ಬಳಲಿ ಕಂದಿಹೋದಂತಾಗಿ ಕೃಷ್ಣನನ್ನಿಂತೆಂದನು.

೨೪. ಕೃಷ್ಣಾ, ಕೃಷ್ಣಾ, ಇದೇನೆಂದು ನನಗೆ ತಿಳಿಯದು. ಎಲ್ಲಿಂದ ಬರುತ್ತಿದೆಯೆಂದೂ ತಿಳಿಯದು. ಅವುದೋ ಅಸಾಧ್ಯವಾದ ಮಹಾತೇಜಸ್ಸು ಎಲ್ಲಾಕಡೆಗಳಿಂದಲೂ ಮುತ್ತಿಕೊಂಡು ಬರುತ್ತಿದೆ ಎಂದು ಮೊರೆಯಿಟ್ಟನು.

೨೫. ಎಲೈ ಮುನಿಯೇ, ಈರೀತಿ ಅರ್ಜುನನು ಮೊರೆಯಿಟ್ಟುದನ್ನು ಕೇಳಿ ಶಿವಭಕ್ತೋತ್ತಮನಾದ ಆ ಕೃಷ್ಣನು ಪಾರ್ವತೀಸಮೇತನಾದ ಶಿವನನ್ನು ಧ್ಯಾನಿಸಿ ಆದರದಿಂದ ಅರ್ಜುನನ್ನಿಂತೆಂದನು.

॥ ಕೃಷ್ಣ ಉವಾಚ ॥

ವೇತ್ಥೀದಂ ದ್ರೋಣಪುತ್ರಸ್ಯ ಬ್ರಾಹ್ಮಮಸ್ತ್ರಂ ಮಹೋಲ್ಬಣಂ ।
ನ ಹ್ಯಸ್ಯಾನ್ಯತಮಂ ಕಿಂಚಿದಸ್ತ್ರಂ ಪ್ರತ್ಯವಕರ್ಶನಂ ॥ ೨೬ ॥

ಶಿವಂ ಸ್ಮರ ದ್ರುತಂ ಶಂಭುಂ ಸ್ವಪ್ರಭುಂ ಭಕ್ತರಕ್ಷಕಂ ।
ಯೇನ ದತ್ತಂ ಹಿ ತೇ ಸ್ವಾಸ್ತ್ರಂ ಸರ್ವಕಾರ್ಯಕರಂ ಪರಂ ॥ ೨೭ ॥

ಜಹ್ಯಸ್ತ್ರತೇಜ ಉನ್ನದ್ಧಂ ತ್ವಂ ತಚ್ಛೈವಾಸ್ತ್ರತೇಜಸಾ ।
ಇತ್ಯುಕ್ತ್ವಾ ಚ ಸ್ವಯಂ ಕೃಷ್ಣಶ್ಶಿವಂ ದಧ್ಯೌ ತದರ್ಥಕಃ ॥ ೨೮ ॥

ತಚ್ಛ್ರುತ್ವಾ ಕೃಷ್ಣವಚನಂ ಪಾರ್ಥಃ ಸ್ಮೃತ್ವಾ ಶಿವಂ ಹೃದಿ ।
ಸ್ಪೃಷ್ಟ್ವಾಪಸ್ತಂ ಪ್ರಣಮ್ಯಾಶು ಚಿಕ್ಷೇಪಾಸ್ತ್ರಂ ತತೋ ಮುನೇ ॥ ೨೯ ॥

---

೨೬ ಅರ್ಜುನಾ, ಇದು ದ್ರೋಣಪುತ್ರನಾದ ಅಶ್ವತ್ಥಾಮನು ಬಿಟ್ಟ ಬ್ರಹ್ಮ ಶಿರೋಸ್ತ್ರವೆಂದು ತಿಳಿ. ಇದನ್ನು ನಿಗ್ರಹಿಸುವಂತಹ ಬೇರೊಂದು ಅಸ್ತ್ರವು ಇಲ್ಲ

೨೭. ಸಕಲ ಕಾರ್ಯಸಾಧಕವಾದುದೂ ಮಹಾಶ್ರೇಷ್ಠವೂ ಆದ ಪಾಶುಪತ ವೆಂಬ ತನ್ನ ಅಸ್ತ್ರವನ್ನು ನಿನಗೆ ಇತ್ತ ಭಕ್ತವತ್ಸಲನೂ ಸ್ವಾಮಿಯೂ ಆದ ಆ ಶಂಕರ ನನ್ನು ಬೇಗ ಧ್ಯಾನಮಾಡು

೨೮. ಆ ಪಾಶುಪತಾಸ್ತ್ರದ ತೇಜಸ್ಸಿನಿಂದ ಈ ಮೇರೆಮೀರಿ ಬರುತ್ತಿರುವ ಅಸ್ತ್ರದ ತೇಜಸ್ಸನ್ನು ಅಡಗಿಸು ಹೀಗೆಂದು ನುಡಿದು ಕೃಷ್ಣನು ಆ ಅಸ್ತ್ರದ ತೇಜಸ್ಸು ಶಮನವಾಗುವಂತೆ ಶಂಕರನನ್ನು ಧ್ಯಾನಮಾಡಿದನು

೨೯. ಎಲೈ ಮುನಿಯೇ, ಈರೀತಿ ಕೃಷ್ಣನು ನುಡಿದ ಮಾತನ್ನು ಕೇಳಿ ಅರ್ಜುನನು ಶ್ರೀ ಶಂಕರನನ್ನು ಮನಸ್ಸಿನಲ್ಲಿ ಸ್ಮರಿಸಿ ನಮಸ್ಕಾರಮಾಡಿ ಬೇಗನೆ ನೀರನ್ನು ತೆಗೆದುಕೊಂಡು ಆಚಮನಮಾಡಿ ಆ ಅಸ್ತ್ರವನ್ನು ಬಿಟ್ಟನು.

**ಯದ್ವ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಂ ।**
**ಶೈವಾಸ್ತ್ರತೇಜಸಾ ಸದ್ಯಸ್ಸಮಶಾಮ್ಯನ್ಮಹಾಮುನೇ ॥ ೩೦ ॥**

**ಮಂಸ್ಥಾ ಮಾ ಹ್ಯೇತದಾಶ್ಚರ್ಯಂ ಸರ್ವಚಿತ್ರಮಯೇ ಶಿವೇ ।**
**ಯಸ್ಸ್ವಶಕ್ತ್ಯಾಖಿಲಂ ವಿಶ್ವಂ ಸೃಜತ್ಯವತಿ ಹನ್ತ್ಯಜಃ ॥ ೩೧ ॥**

**ಅಶ್ವತ್ಥಾಮೋ ತತೋ ಜ್ಞಾತ್ವಾ ವೃತ್ತಮೇತಚ್ಛಿವಾಂಶಜಃ ।**
**ಶೈವಂ ನ ವಿವ್ಯಥೇ ಕಿಂಚಿಚ್ಛಿವೇಚ್ಛಾತುಷ್ಟಧೀರ್ಮುನೇ ॥ ೩೨ ॥**

**ಅಥ ದ್ರೋಣಿರಿದಂ ವಿಶ್ವಂ ಕೃತ್ಸ್ನಂ ಕರ್ತುಮಪಾಂಡವಂ ।**
**ಉತ್ತರಾಗರ್ಭಗಂ ಬಾಲಂ ನಾಶಿತುಂ ಮನ ಆದಧೇ ॥ ೩೩ ॥**

---

೩೦. ಓ ಮುನೀಂದ್ರ, ಆ ಬ್ರಹ್ಮಶಿರಸ್ಸೆಂಬ ಅಸ್ತ್ರವೇನೋ ಎಂದಿಗೂ ವ್ಯರ್ಥವಾಗದಂತಹುದು ಮತ್ತು ಪ್ರತಿಕ್ರಿಯೆಯೇ ಇಲ್ಲದಂತಹುದು. ಆದರೂ ಶಿವನ ಪಾಶುಪತಾಸ್ತ್ರದ ತೇಜಸ್ಸಿನಿಂದ ತಟ್ಟನೆ ಅಡಗಿಹೋಯಿತು.

೩೧. ನಾನಾವಿಧವಾದ ಆಶ್ಚರ್ಯಗಳಿಗೆ ನೆಲೆಯಾದ ಆ ಶಿವನಲ್ಲಿ ಇದೊಂದು ಆಶ್ಚರ್ಯವಾದಂಶವೇ ಅಲ್ಲ. ಜನ್ಮವೇ ಇಲ್ಲದಂತಹ ಆ ಶಿವನು ಲೀಲಾಮಾತ್ರದಿಂದಲೇ ಈ ನಿಖಿಲ ಪ್ರಪಂಚವನ್ನೂ ಸೃಷ್ಟಿಸುವನು, ಪಾಲಿಸುವನು, ಸಂಹರಿಸುವನು.

೩೨. ಓ ಮುನೀಂದ್ರ, ಬಳಿಕ ಶಿವಾಂಶಸಂಭೂತನಾದ ಅಶ್ವತ್ಥಾಮನು ಇದೆಲ್ಲವೂ ಶಿವನ ಕಾರ್ಯವೆಂದು ಅರಿತು ಶಿವನ ಇಚ್ಛೆಗೆ ಸಂತೋಷಪಟ್ಟು ಸ್ವಲ್ಪವೂ ವ್ಯಥೆಪಡಲಿಲ್ಲ.

೩೩. ಆಮೇಲೆ ದ್ರೋಣಪುತ್ರನು ಈ ಸಕಲ ಪ್ರಪಂಚದಲ್ಲಿ ಎಲ್ಲಿಯೂ ಪಾಂಡವರು ಇಲ್ಲದಿರುವಂತೆ ಮಾಡಬೇಕೆಂದೆಣಿಸಿ ಉತ್ತರೆಯ ಗರ್ಭದಲ್ಲಿರುವ ಶಿಶುವನ್ನು ಕೊಲ್ಲಲು ಮನಸ್ಸುಮಾಡಿದನು.

ಬ್ರಹ್ಮಾಸ್ತ್ರಮನಿವಾರ್ಯಂ ತದನ್ಯೈರಸ್ತ್ರೈರ್ಮಹಾಪ್ರಭಂ ।
ಉತ್ತರಾಗರ್ಭಮುದ್ದಿಶ್ಯ ಚಿಕ್ಷೇಪ ಸ ಮಹಾಪ್ರಭುಃ ॥ ೩೪ ॥

ತತಶ್ಚ ಸೋತ್ತರಾ ಜಿಷ್ಣುವಧೂರ್ವಿಕಲಮಾನಸಾ ।
ಕೃಷ್ಣಂ ತುಷ್ಟಾವ ಲಕ್ಷ್ಮೀಶಂ ದಹ್ಯಮಾನಾ ತದಸ್ತ್ರತಃ ॥ ೩೫ ॥

ತತಃ ಕೃಷ್ಣಃ ಶಿವಂ ಧ್ಯಾತ್ವಾ ಹೃದಾ ನುತ್ವಾ ಪ್ರಣಮ್ಯ ಚ ।
ಅಪಾಂಡವಮಿದಂ ಕರ್ತುಂ ದ್ರೌಣ್ಯೈರಸ್ತ್ರಮಬುಧ್ಯತ ॥ ೩೬ ॥

ಸ್ವರಕ್ಷಾರ್ಥೇಂದ್ರದತ್ತೇನ ತದಸ್ತ್ರೇಣ ಸುವರ್ಚಸಾ ।
ಸುದರ್ಶನೇನ ತಸ್ಯಾಶ್ಚ ವ್ಯಧಾದ್ರಕ್ಷಾಂ ಶಿವಾಜ್ಞಯಾ ॥ ೩೭ ॥

ಸರೂಪಂ ಶಂಕರಾದೇಶಾತ್ಕೃತಂ ಶೈವವರೇಣ ಹ ।
ಕೃಷ್ಣೇನ ಚರಿತಂ ಜ್ಞಾತ್ವಾ ವಿಮನಸ್ಕಃ ಶನೈರಭೂತ್ ॥ ೩೮ ॥

---

೩೪. ಬೇರಾವ ಅಸ್ತ್ರಗಳೂ ಅದನ್ನು ಅಡಗಿಸಲಾರದಂತಹ, ಮಹಾಜ್ವಾಲೆಯನ್ನು ಚೆದರುತ್ತಿರುವ ಬ್ರಹ್ಮಾಸ್ತ್ರವನ್ನು ತೆಗೆದುಕೊಂಡು ಉತ್ತರೆಯ ಗರ್ಭಕ್ಕೆ ಗುರಿಯಿಟ್ಟು ಪ್ರಯೋಗಿಸಿದನು

೩೫ ಬಳಿಕ ಅರ್ಜುನನ ಸೊಸೆಯಾದ ಆ ಉತ್ತರೆಯು ಬಹುಭೀತಳಾಗಿ ಆ ಅಸ್ತ್ರದ ಬೇಗೆಗೆ ಸಿಲುಕಿ ಪರಿತಪಿಸುತ್ತಾ ಲಕ್ಷ್ಮೀಪತಿಯಾದ ಶ್ರೀಕೃಷ್ಣನನ್ನು ಸಲಹೆಂದು ಸ್ತೋತ್ರಮಾಡಿದಳು

೩೬ ಅನಂತರ ಶ್ರೀಕೃಷ್ಣನು ತನ್ನ ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸಿ ಆತನಿಗೆ ನಮಸ್ಕರಿಸಿ, ಇದು ಅಶ್ವತ್ಥಾಮನು ಪಾಂಡವರೇ ಇಲ್ಲದಿರುವಂತೆ ಬಿಟ್ಟ ಬ್ರಹ್ಮಾಸ್ತ್ರವೆಂದು ಅರಿತನು

೩೭. ಆಗ ಶಿವನ ಅಪ್ಪಣೆಯಿಂದ ಆತ್ಮರಕ್ಷಣೆಗಾಗಿ ಹಿಂದೆ ಕೊಡಲ್ಪಟ್ಟಿದ್ದ ಮಹಾಪ್ರಭಾವಯುತವಾದ ಸುದರ್ಶನವೆಂಬ ಆ ಶಿವನ ಅಸ್ತ್ರದಿಂದಲೇ ಆ ಉತ್ತರೆಯನ್ನು ಕಾಪಾಡಿದನು.

೩೮. ಬಳಿಕ ಶೈವಾಗ್ರಣಿಯಾದ ಶ್ರೀಕೃಷ್ಣನು ಶಿವನ ಅಪ್ಪಣೆಯಂತೆ ನಡೆಸಿದ ಈ ವೃತ್ತಾಂತವೆಲ್ಲವನ್ನೂ ಅರಿತು ಸ್ವಲ್ಪಮಟ್ಟಿಗೆ ಖೇದವನ್ನು ತಾಳಿದನು.

ತತಸ್ಸ ಕೃಷ್ಣಃ ಪ್ರೀತಾತ್ಮಾ ಪಾಂಡವಾನ್ಸಕಲಾನಪಿ ।
ಅಪಾತಯತ್ತದಂಘ್ರ್ಯೋಸ್ತು ತುಷ್ಟಯೇ ತಸ್ಯ ಶೈವರಾಟ್ ॥ ೩೯ ॥

ಅಥ ದ್ರೌಣಿಃ ಪ್ರಸನ್ನಾತ್ಮಾ ಪಾಂಡವಾನ್ಕೃಷ್ಣಮೇವ ಚ ।
ನಾನಾವರಾನ್ದದೌ ಪ್ರೀತ್ಯಾ ಸೋಽಶ್ವತ್ಥಾಮಾಸುಗೃಹ್ಯ ಚ ॥ ೪೦ ॥

ಇತ್ಥಂ ಮಹೇಶ್ವರಸ್ತಾತ ಚಕ್ರೇ ಲೀಲಾಂ ಪರಾಂ ಪ್ರಭುಃ ।
ಅವತೀರ್ಯ ಕ್ಷಿತೌ ದ್ರೌಣಿರೂಪೇಣ ಮುನಿಸತ್ತಮ ॥ ೪೧ ॥

ಶಿವಾವತಾರೋಽಶ್ವತ್ಥಾಮಾ ಮಹಾಬಲಪರಾಕ್ರಮಃ ।
ತ್ರೈಲೋಕ್ಯಸುಖದೋಽದ್ಯಾಪಿ ವರ್ತತೇ ಜಾಹ್ನವೀತಟೇ ॥ ೪೨ ॥

ಅಶ್ವತ್ಥಾಮಾವತಾರಸ್ತೇ ವರ್ಣಿತಶ್ಶಂಕರಪ್ರಭೋಃ ।
ಸರ್ವಸಿದ್ಧಿಕರಶ್ಚಾಪಿ ಭಕ್ತಾಭೀಷ್ಟಫಲಪ್ರದಃ ॥ ೪೩ ॥

---

೩೯. ಅನಂತರ ಶಿವಭಕ್ತೋತ್ತಮನಾದ ಆ ಶ್ರೀ ಕೃಷ್ಣನು ಸಂತೋಷಭರಿತನಾಗಿ ಎಲ್ಲ ಪಾಂಡವರನ್ನೂ ಕರೆದುಕೊಂಡುಹೋಗಿ ಆ ಅಶ್ವತ್ಥಾಮನು ಪ್ರಸನ್ನನಾಗಲು ಅವನ ಕಾಲುಗಳಮೇಲೆ ಬೀಳಿಸಿದನು.

೪೦. ಆಗ ದ್ರೋಣಪುತ್ರನಾದ ಅಶ್ವತ್ಥಾಮನು ಪ್ರಸನ್ನನಾಗಿ ಆ ಪಾಂಡವರಿಗೂ ಕೃಷ್ಣನಿಗೂ ಅನೇಕ ವರಗಳನ್ನು ಪ್ರೀತಿಯಿಂದ ಇತ್ತನು.

೪೧. ಎಲೈ ಮುನಿಶ್ರೇಷ್ಠನೇ, ಈರೀತಿಯಾಗಿ ಪ್ರಭುವಾದ ಮಹೇಶ್ವರನು ಭೂಮಿಯಲ್ಲಿ ಅಶ್ವತ್ಥಾಮನ ರೂಪದಿಂದವತರಿಸಿ ಮಹಾಶ್ರೇಷ್ಠವಾದ ಲೀಲೆಯನ್ನು ತೋರ್ಪಡಿಸಿದನು.

೪೨. ಮಹಾಬಲಿಷ್ಠನೂ ಅಸೀಮಸಾಹಸಿಯೂ ಶಿವಾವತಾರನೂ ಆದ ಅಶ್ವತ್ಥಾಮನು ಮೂರು ಲೋಕಕ್ಕೂ ಮಂಗಳವನ್ನು ಕರುಣಿಸುತ್ತಾ ಈಗಲೂ ಗಂಗಾತೀರದಲ್ಲಿಯೇ ನೆಲೆಸಿರುವನು.

೪೩. ಸಕಲವಿಧವಾದ ಸಿದ್ಧಿಗಳನ್ನು ಕೊಡುವುದೂ ಭಕ್ತರ ಮನೋರಥಗಳನ್ನು ನೆರವೇರಿಸುವುದೂ ಆದ, ಪ್ರಭುವಾದ ಶಂಕರನ ಅಶ್ವತ್ಥಾಮಾವತಾರವನ್ನು ನಿನಗೆ ವರ್ಣಿಸಿದೆನು.

ಯ ಇದಂ ಶೃಣುಯಾದ್ಭಕ್ತ್ಯಾ ಕೀರ್ತಯೇದ್ವಾ ಸಮಾಹಿತಃ ।
ಸ ಸಿದ್ಧಿಂ ಪ್ರಾಪ್ನುಯಾದಿಷ್ಟಾಮಂತೇ ಶಿವಪುರಂ ವ್ರಜೇತ್ ॥ ೪೪ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾ
ಮಶ್ವತ್ಥಾಮಶಿವಾವತಾರವರ್ಣನಂನಾಮ
ಷಟ್ತ್ರಿಂಶೋಽಧ್ಯಾಯಃ

---

೪೪ ಯಾವನು ಈ ಚರಿತವನ್ನು ಒಮ್ಮನಸ್ಸಿನಿಂದಲೂ ಭಕ್ತಿಯಿಂದಲೂ ಆಲಿಸುವನೋ ಅಥವಾ ಕೀರ್ತನಮಾಡುವನೋ ಅವನು ತನ್ನ ಮನಸ್ಸಿಗೆ ಬೇಕಾದ ಸಿದ್ಧಿಗಳನ್ನು ಪಡೆದು ಕೊನೆಗೆ ಶಿವಲೋಕವನ್ನು ಸೇರುವನು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಅಶ್ವತ್ಥಾಮಾವತಾರವರ್ಣನವೆಂಬ ಮೂವತ್ತಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ಶತರುದ್ರಸಂಹಿತಾಯಾಂ

## ಸಪ್ತತ್ರಿಂಶೋಽಧ್ಯಾಯಃ

ನಂದೀಶ್ವರ ಉವಾಚ ॥

**ಶೃಣು ಪ್ರಾಜ್ಞ ಕಿರಾತಾಖ್ಯಮವತಾರಂ ಪಿನಾಕಿನಃ ।**
**ಮೂಕಂ ಚ ಹತವಾನ್ಪ್ರೀತೋ ಯೋಽರ್ಜುನಾಯ ವರಂ ದದೌ ॥ ೧ ॥**

**ಸುಯೋಧನ ಜಿತಾಸ್ತೇ ವೈ ಪಾಂಡವಾಃ ಪ್ರವರಾಶ್ಚ ತೇ ।**
**ದ್ರೌಪದ್ಯಾ ಚ ತಯಾ ಸಾಧ್ವ್ಯಾ ದ್ವೈತಾಖ್ಯಂ ವನಮಾಯಯುಃ ॥ ೨ ॥**

---

### ಮೂವತ್ತೇಳನೆಯ ಅಧ್ಯಾಯವು

೧. ಎಲೈ ಪ್ರಾಜ್ಞನಾದ ಸನತ್ಕುಮಾರಮುನಿಯೇ, ಆ ಪಿನಾಕಧಾರಿಯು ಕಿರಾತವೆಂಬ ಅವತಾರವನ್ನೆತ್ತಿ ಮೂಕದಾನವನನ್ನು ಸಂಹರಿಸಿದುದನ್ನೂ ಪ್ರೀತಿಯಿಂದ ಅರ್ಜುನನಿಗೆ ವರವಿತ್ತುದನ್ನೂ ನಿನಗೆ ವರ್ಣಿಸುವೆನು.

೨. ದುರ್ಯೋಧನನಿಂದ ದ್ಯೂತದಲ್ಲಿ ಪರಾಜಿತರಾದ ಮಹಾವೀರರಾದ ಪಾಂಡವರು ಸಾಧ್ವಿಯಾದ ದ್ರೌಪದಿಯೊಡನೆ ದ್ವೈತ್ಯವನಕ್ಕೆ ಬಂದರು.

ತತ್ರೈವ ಸೂರ್ಯದತ್ತಾಂ ವೈ ಸ್ಥಾಲೀಂ ಚಾಶ್ರಿತ್ಯ ತೇ ತದಾ ।
ಕಾಲಂ ಚ ಯಾಪಯಾಮಾಸುಸ್ಸುಖೇನ ಕಿಲ ಪಾಂಡವಾಃ ॥ ೩ ॥

ಛಲಾರ್ಥಂ ಪ್ರೇರಿತಸ್ತೇನ ದುರ್ವಾಸಾ ಮುನಿಪುಂಗವಃ ।
ಸುಯೋಧನೇನ ವಿಪ್ರೇಂದ್ರ ಪಾಂಡವಾಂತಿಕಮಾದರಾತ್ ॥ ೪ ॥

ಛಾತ್ರೈಃ ಸ್ವೈರಯುತೈಸ್ಸಾರ್ಧಂ ಯಯಾಚೇ ತತ್ರ ತಾನ್ಮುದಾ ।
ಭೋಜ್ಯಂ ಚಿತ್ತೇಪ್ಸಿತಂ ವೈ ಸ ತೇಭ್ಯಶ್ಚೈವ ಸಮಾಗತಃ ॥ ೫ ॥

ಸ್ವೀಕೃತ್ಯ ಪಾಂಡವೈಸ್ತೈಸ್ತೈಃ ಸ್ನಾನಾರ್ಥಂ ಪ್ರೇಷಿತಾಸ್ತದಾ ।
ದುರ್ವಾಸಃಪ್ರಮುಖಾಶ್ಚೈವ ಮುನಯಶ್ಚ ತಪಸ್ವಿನಃ ॥ ೬ ॥

ಅಥ ತೇ ಪಾಂಡವಾಃ ಸರ್ವೇ ಅನ್ನಾಭಾವಾನ್ಮುನೀಶ್ವರ ।
ದುಃಖಿತಾಶ್ಚ ತದಾ ಪ್ರಾಣಾಂಸ್ತ್ಯಕ್ತುಂ ಚಿತ್ತೇ ಸಮಾದಧುಃ ॥ ೭ ॥

---

೩ ಅಲ್ಲಿ ಸೂರ್ಯನನುಗ್ರಹಿಸಿದ ಅಕ್ಷಯಪಾತ್ರೆಯನ್ನು ಪಡೆದು ಆ ಪಾಂಡವರು ಸುಖದಿಂದ ಕಾಲಯಾಪನೆಮಾಡುತ್ತಿದ್ದರು.

೪ ಆಗ ದುರ್ಯೋಧನನು ಸುಮ್ಮನಿರದೆ ಆ ಪಾಂಡವರ ಬಳಿಗೆ ದುರ್ವಾಸ ಮಹರ್ಷಿಯನ್ನು ಅವರಿಗೆ ಹಿಂಸೆಯನ್ನುಂಟುಮಾಡುವಂತೆ ಕಳುಹಿಸಿಕೊಟ್ಟನು.

೫. ಆ ಮಹರ್ಷಿಯು ಹಾಗೆಯೇ ಆಗಲೆಂದು ತನ್ನ ಹತ್ತುಸಾವಿರ ಶಿಷ್ಯರೊಡನೆ ಪಾಂಡವರಾಶ್ರಮಕ್ಕೆ ಬಂದು ಪ್ರೀತಿಯಿಂದ ತನಗೆ ಬೇಕಾದ ರೀತಿಯಲ್ಲಿ ಊಟವನ್ನಿತ್ತು ಉಪಚರಿಸಬೇಕೆಂದು ಕೇಳಿದನು

೬ ಆಗ ಪಾಂಡವರು ಹಾಗೆಯೇ ಆಗಲೆಂದು ಒಪ್ಪಿ ಆ ದೂರ್ವಾಸಪ್ರಭೃತಿಗಳಾದ ಮಹರ್ಷಿಗಳನ್ನು ಸ್ನಾನಮಾಡಿ ಬರುವಂತೆ ಕಳುಹಿಸಿಕೊಟ್ಟರು.

೭. ಅನಂತರ ಆ ಪಾಂಡವರು ತಮಗೆ ಅಷ್ಟು ಜನರನ್ನು ತೃಪ್ತಿಪಡಿಸಲು ಸಾಕಷ್ಟು ಅನ್ನವಿಲ್ಲವೆಂದು ಬಹುವಾಗಿ ನೊಂದಿದವರಾಗಿ ತಮ್ಮ ಪ್ರಾಣವನ್ನು ತೊರೆಯಲು ನಿರ್ಧರಿಸಿದರು.

ದ್ರೌಪದ್ಯಾ ಚ ಸ್ಮೃತಃ ಕೃಷ್ಣ ಆಗತಸ್ತತ್ಕ್ಷಣಾದಪಿ ।
ಶಾಕಂ ಚ ಭಕ್ಷಯಿತ್ವಾ ತು ತೇಷಾಂ ತೃಪ್ತಿಂ ಸಮಾದಧತ್ ॥ ೮ ॥

ದುರ್ವಾಸಾಶ್ಚ ತದಾ ಶಿಷ್ಯಾಂಸ್ತೃಪ್ತಾನ್ ಜ್ಞಾತ್ವಾ ಯಯೌ ಪುನಃ ।
ಪಾಂಡವಾಃ ಕೃಚ್ಛ್ರನಿರ್ಮುಕ್ತಾಃ ಕೃಷ್ಣಸ್ಯ ಕೃಪಯಾ ತದಾ ॥ ೯ ॥

ಅಥ ತೇ ಪಾಂಡವಾಃ ಕೃಷ್ಣಂ ಪಪ್ರಚ್ಛುಃ ಕಿಂ ಭವಿಷ್ಯತಿ ।
ಬಲವಾಞ್ಛತ್ರುರುತ್ಪನ್ನಃ ಕಿಂ ಕಾರ್ಯಂ ತದ್ವದ ಪ್ರಭೋಃ ॥ ೧೦ ॥

॥ ನಂದೀಶ್ವರ ಉವಾಚ ॥

ಇತಿ ಪೃಷ್ಟಸ್ತದಾ ತೈಸ್ತು ಶ್ರೀಕೃಷ್ಣಃ ಪಾಂಡವೈರ್ಮುನೇ ।
ಸ್ಮೃತ್ವಾ ಶಿವಪದಾಂಭೋಜೌ ಪಾಂಡವಾನಿದಮಬ್ರವೀತ್ ॥ ೧೧ ॥

---

೮. ಆಗ ದ್ರೌಪದಿಯು ಶ್ರೀ ಕೃಷ್ಣನನ್ನು ನೆನೆಯಲು ಒಡನೆಯೇ ಆ ಸ್ವಾಮಿಯು ಅಲ್ಲಿ ಪ್ರತ್ಯಕ್ಷನಾಗಿ ಒಂದು ಚೂರು ಸೊಪ್ಪನ್ನು ತಿಂದುಬಿಟ್ಟು ಆ ಮಹರ್ಷಿಗಳಿಗೆಲ್ಲರಿಗೂ ತೃಪ್ತಿಯನ್ನುಂಟುಮಾಡಿಸಿದನು.

೯. ಆಗ ತನ್ನ ಶಿಷ್ಯರೆಲ್ಲರೂ ಹೊಟ್ಟೆತುಂಬಿ ತೃಪ್ತರಾಗಿರುವುದನ್ನರಿತು ದುರ್ವಾಸಮುನಿಯು ಹಾಗೆಯೇ ಹೊರಟುಹೋದನು. ಈರೀತಿಯಾಗಿ ಕೃಷ್ಣನ ಕೃಪೆಯಿಂದ ಪಾಂಡವರು ಆಗಿನ ಕಷ್ಟದಿಂದ ಬಿಡುಗಡೆಹೊಂದಿದರು.

೧೦. ಬಳಿಕ ಆ ಪಾಂಡವರು ಕೃಷ್ಣನನ್ನು ಕುರಿತು, ಎಲೈ ಪ್ರಭುವೇ, ನಮ್ಮ ಶತ್ರುವು ಈಗ ಬಲಾಢ್ಯನಾಗಿರುವನು. ನಾವೀಗೇನು ಮಾಡಬೇಕು ? ಮುಂದೇನಾಗುವುದು ಹೇಳು ಎಂದು ಕೇಳಿದರು.

೧೧. ಓ ಮುನೀಂದ್ರ, ಈರೀತಿಯಾಗಿ ಪಾಂಡವರ ಮಾತನ್ನು ಕೇಳಿ, ಶ್ರೀ ಕೃಷ್ಣನು ಶಿವನ ಅಡಿದಾವರೆಗಳನ್ನು ಮನದಲ್ಲಿ ನೆನೆದು ಇಂತೆಂದು ನುಡಿದನು.

॥ ಶ್ರೀಕೃಷ್ಣ ಉವಾಚ ॥

ಶ್ರೂಯತಾಂ ಪಾಂಡವಾಃ ಶ್ರೇಷ್ಠಾಃ ಶ್ರುತ್ವಾ ಕರ್ತವ್ಯಮೇವ ಹಿ ।
ಮದ್ವೃತ್ತಾಂತಂ ವಿಶೇಷೇಣ ಶಿವಸೇವಾಸಮನ್ವಿತಂ ॥ ೧೨ ॥

ದ್ವಾರಕಾಂ ಚ ಮಯಾ ಗತ್ವಾ ಶತ್ರೂಣಾಂ ವಿಜಿಗೀಷಯಾ ।
ವಿಚಾರ್ಯ ಚೋಪದೇಶಾಂಶ್ಚ ಉಪಮನ್ಯೋರ್ಮಹಾತ್ಮನಃ ॥ ೧೩ ॥

ಮಯಾ ಹ್ಯಾರಾಧಿತಃ ಶಂಭುಃ ಪ್ರಸನ್ನಃ ಪರಮೇಶ್ವರಃ ।
ಬಟುಕೇ ಪರ್ವತಶ್ರೇಷ್ಠೇ ಸಪ್ತಮಾಸಂ ಸುಸೇವಿತಃ ॥ ೧೪ ॥

ಇಷ್ಟಾನ್ಯಾಮಾನದಾನ್ಮಹ್ಯಂ ವಿಶ್ವೇಶಶ್ಚ ಸ್ವಯಂ ಸ್ಥಿತಃ ।
ತತ್ಪ್ರಭಾವಾನ್ಮಯಾ ಸರ್ವಸಾಮರ್ಥ್ಯಂ ಲಬ್ಧಮುತ್ತಮಂ ॥ ೧೫ ॥

ಇದಾನೀಂ ಸೇವ್ಯತೇ ದೇವೋ ಭುಕ್ತಿಮುಕ್ತಿಫಲಪ್ರದಃ ।
ಯೂಯಂ ಸೇವತ ತಂ ಶಂಭುಮಪಿ ಸರ್ವಸುಖಾವಹಂ ॥ ೧೬ ॥

---

೧೨. ಎಲೈ ಪಾಂಡವರಿರಾ, ಶಿವನ ಸೇವೆಯನ್ನೊಳಗೊಂಡ ನನ್ನ ಸಂಗತಿಯನ್ನು ವಿಶೇಷವಾಗಿ ನಿಮಗೆ ತಿಳಿಸುವೆನು, ಕೇಳಿರಿ ಅದರಂತೆಯೇ ನೀವು ಅವಶ್ಯವಾಗಿ ನಡೆಯಬೇಕು.

೧೩-೧೪. ನಾನು ದ್ವಾರಕೆಗೆ ತೆರಳಿದಮೇಲೆ ಶತ್ರುಗಳನ್ನೆಲ್ಲಾ ಗೆಲ್ಲಬೇಕೆಂದು ನಿಶ್ಚಯಿಸಿ ಮಹಾತ್ಮನಾದ ಉಪಮನ್ಯು ಮಹಾಮುನಿಯಿಂದ ಉಪದೇಶಗಳನ್ನು ಪಡೆದು ವಟುಕವೆಂಬ ಪರ್ವತಶ್ರೇಷ್ಠಕ್ಕೆ ಹೋಗಿ ಅಲ್ಲಿ ಏಳುತಿಂಗಳಕಾಲ ಆ ಪರಮೇಶ್ವರನನ್ನು ಆರಾಧಿಸಿದೆನು. ಬಳಿಕ ಆ ಶಂಕರನು ನನಗೆ ಪ್ರಸನ್ನನಾದನು.

೧೫. ಆ ಜಗದೀಶನು ನನಗೆ ಪ್ರತ್ಯಕ್ಷನಾಗಿ ನನಗಿಷ್ಟವಾದ ವರಗಳನ್ನಿತ್ತನು. ಆ ವರ ಪ್ರಭಾವದಿಂದ ನಾನು ಎಲ್ಲರಿಗಿಂತಲೂ ಹೆಚ್ಚಿನ ಸಾಮರ್ಥ್ಯವನ್ನು ಪಡೆದೆನು.

೧೬. ಈಗಲೂ ಸಹ ಭೋಗಮೋಕ್ಷಪ್ರದಾಯಕನಾದ ಆ ಶಿವನನ್ನೇ ಸೇವಿಸುತ್ತಿರುವೆನು. ನೀವೂ ಸಹ ಸಕಲ ಸುಖದಾಯಕನಾದ ಆ ಶಂಭುವನ್ನು ಆರಾಧಿಸಿರಿ.

॥ ನಂದೀಶ್ವರ ಉವಾಚ ॥

**ಇತ್ಯುಕ್ತ್ವಾಂತರ್ದಧೇ ಕೃಷ್ಣ ಆಶ್ವಾಸ್ಯಾಥ ಚ ಪಾಂಡವಾನ್ ।**
**ದ್ವಾರಕಾಮಗಮಚ್ಛೀಘ್ರಂ ಸ್ಮರಂಚ್ಛಿವಪದಾಂಬುಜಂ ॥ ೧೭ ॥**

**ಪಾಂಡವಾ ಅಥ ಭಿಲ್ಲಂ ಚ ಪ್ರೇಷಯಾಮಾಸುರೋಜಸಾ ।**
**ಗುಣಾನಾಂ ಚ ಪರೀಕ್ಷಾರ್ಥಂ ತಸ್ಯ ದುರ್ಯೋಧನಸ್ಯ ಚ ॥ ೧೮ ॥**

**ಸೋಽಪಿ ಸರ್ವಂ ಚ ತತ್ರತ್ಯಂ ದುರ್ಯೋಧನಗುಣೋದಯಂ ।**
**ಸಮೀಚೀನಂ ಚ ತಜ್ಜ್ಞಾತ್ವಾ ಪುನಃ ಪ್ರಾಪ ಪ್ರಭೂನ್ಪ್ರತಿ ॥ ೧೯ ॥**

**ತದುಕ್ತಂ ತೇ ನಿಶಮ್ಯೈವಂ ದುಃಖಂ ಪ್ರಾಪುರ್ಮುನೀಶ್ವರ ।**
**ಪರಸ್ಪರಂ ಸಮೂಚುಸ್ತೇ ಪಾಂಡವಾ ಅತಿದುಃಖಿತಾಃ ॥ ೨೦ ॥**

---

೧೭. ಓ ಮುನೀಂದ್ರ, ಹೀಗೆಂದು ನುಡಿದು ಆ ಪಾಂಡವರೆಲ್ಲರನ್ನೂ ಸಂತೈಸಿ ಶಿವನ ಅಡಿದಾವರೆಗಳನ್ನು ನೆನೆಯುತ್ತಾ ಕೃಷ್ಣನು ಅಲ್ಲಿಂದ ಕಣ್ಮರೆಯಾಗಿ ಬೇಗನೆ ದ್ವಾರಕೆಯನ್ನು ಸೇರಿದನು.

೧೮. ಬಳಿಕ ಇತ್ತಲಾಗಿ ಪಾಂಡವರು ಓರ್ವ ಭಿಲ್ಲನೊಬ್ಬನನ್ನು ಕರೆದು ಆ ದುರ್ಯೋದನನ ನಡೆನಳಿಕೆಯನ್ನು ಪರಿಶೀಲಿಸಿಕೊಂಡುಬರುವಂತೆ ಹಸ್ತಿನಾವತಿಗೆ ಕಳುಹಿಸಿದರು.

೧೯. ಆ ಭಿಲ್ಲನು ಅಲ್ಲಿಗೆ ಹೋಗಿ ದುರ್ಯೋದನನ ಗುಣಗಳನ್ನೂ ಅಭ್ಯುದಯವನ್ನೂ ಎಲ್ಲವನ್ನೂ ಚೆನ್ನಾಗಿ ತಿಳಿದುಕೊಂಡು ಮರಳಿ ತನ್ನ ಒಡೆಯರಾದ ಪಾಂಡವರ ಬಳಿಗೆ ಹಿಂದಿರುಗಿದನು.

೨೦. ಎಲೈ ಮುನಿಯೇ, ಆ ಭಿಲ್ಲನು ಹೇಳಿದ ಸಂಗತಿಯೆಲ್ಲವನ್ನೂ ಪಾಂಡವರು ಕೇಳಿ ವ್ಯಸನವನ್ನು ಹೊಂದಿದರು. ಆಗ ದುಃಖಾಕುಲರಾದ ಆ ಪಾಂಡುಪುತ್ರರು ತಮ್ಮತಮ್ಮೊಳಗೆ ಈರೀತಿಯಾಗಿ ಹೇಳಿಕೊಂಡರು.

ಕಿಂ ಕರ್ತವ್ಯಂ ಕ್ವ ಗಂತವ್ಯಮಸ್ಮಾಭಿರಧುನಾ ಯುಧಿ ।
ಸಮರ್ಥಾ ಅಪಿ ವೈ ಸರ್ವೇ ಸತ್ಯಪಾಶೇನ ಯಂತ್ರಿತಾಃ　　॥ ೨೧ ॥

॥ ನಂದೀಶ್ವರ ಉವಾಚ ॥

ಏತಸ್ಮಿನ್ಸಮಯೇ ವ್ಯಾಸೋ ಭಸ್ಮಭೂಷಿತಮಸ್ತಕಃ ।
ರುದ್ರಾಕ್ಷಾಭರಣಶ್ಚಾಯಾಜ್ಜಟಾಜೂಟವಿಭೂಷಿತಃ　　॥ ೨೨ ॥

ಪಂಚಾಕ್ಷರಂ ಜಪನ್ಮಂತ್ರಂ ಶಿವಪ್ರೇಮಸಮಾಕುಲಃ ।
ತೇಜಸಾಂ ಚ ಸ್ವಯಂ ರಾಶಿಸ್ಸಾಕ್ಷಾದ್ಧರ್ಮ ಇವಾಪರಃ　　॥ ೨೩ ॥

ತಾನ್ದೃಷ್ಟ್ವಾ ತೇ ತದಾ ಪ್ರೀತಾ ಉತ್ಥಾಯ ಪುರತಃ ಸ್ಥಿತಾಃ ।
ದತ್ವಾಸನಂ ತದಾ ತಸ್ಮೈ ಕುಶಾಜಿನಸುಶೋಭಿತಂ　　॥ ೨೪ ॥

---

೨೧. ನಾವೀಗ ಏನುಮಾಡೋಣ ? ಎಲ್ಲಿಹೋಗೋಣ ? ನಾವೆಷ್ಟೇ ರಣ ದುರ್ಮದರಾದರೂ ಈಗ ಸತ್ಯಕ್ಕೆ ಕಟ್ಟುಬಿದ್ದಿರುವೆವು.

೨೨. ಓ ಮುನೀಂದ್ರ, ಹೀಗೆ ಅವರು ಚಿಂತಿಸುತ್ತಿರಲು ಅಲ್ಲಿಗೆ ವ್ಯಾಸ ಮಹರ್ಷಿಯು ಬಂದನು. ಆತನು ಹಣೆಯಲ್ಲಿ ವಿಭೂತಿಯನ್ನು ಧರಿಸಿ ರುದ್ರಾಕ್ಷ ಗಳನ್ನು ಒಡವೆಗಳಂತೆ ತೊಟ್ಟಿದ್ದನು. ತಲೆಯಲ್ಲಿ ಜಟೆಯು ಒಪ್ಪುತ್ತಿತ್ತು.

೨೩. ಶಿವಭಕ್ತಿಯು ತುಂಬಿ ತುಳುಕಾಡುತ್ತಾ ಇರುವ ಆ ತೇಜೋನಿಧಿಯು ಪಂಚಾಕ್ಷರಮಂತ್ರವನ್ನು ಜಪಿಸುತ್ತಾ ಸಾಕಾರವಾದ ಧರ್ಮವೋ ಎನ್ನುವಂತೆ ತೋರಿದನು.

೨೪. ಆತನನ್ನು ಕಾಣುತ್ತಲೇ ಆ ಪಾಂಡವರು ಮಹಾಪ್ರೀತಿಯನ್ನು ತಾಳಿ ಝುಗ್ಗನೆ ಎದ್ದು ಎದುರ್ಗೊಂಡು ಆ ಮಹರ್ಷಿಗೆ ದರ್ಭಮಯವಾದ ಆಸ್ತರಣದಿಂದಲೂ ಮೃಗಚರ್ಮದಿಂದಲೂ ಅಂದವಾಗಿ ಒಪ್ಪುತ್ತಿರುವ ಆಸನವನ್ನು ಇತ್ತರು.

ತತ್ರೋಪವಿಷ್ಟಂ ತಂ ವ್ಯಾಸಂ ಪೂಜಯಂತಿ ಸ್ಮ ಹರ್ಷಿತಾಃ ।
ಸ್ತುತಿಂ ಚ ವಿವಿಧಾಂ ಕೃತ್ವಾ ಧನ್ಯಾಃ ಸ್ಮ ಇತಿ ವಾದಿನಃ ॥ ೨೫ ॥

ತಪಶ್ಚೈವ ಸುಸಂತಪ್ತಂ ದಾನಾನಿ ವಿವಿಧಾನಿ ಚ ।
ತತ್ಸರ್ವಂ ಸಫಲಂ ಜಾತಂ ತೃಪ್ತಾಸ್ತೇ ದರ್ಶನಾತ್ಪ್ರಭೋ ॥ ೨೬ ॥

ದುಃಖಂ ಚ ದೂರತೋ ಜಾತಂ ದರ್ಶನಾತ್ತೇ ಪಿತಾಮಹ ।
ದುಷ್ಟೈಶ್ಚೈವ ಮಹಾದುಃಖಂ ದತ್ತಂ ನಃ ಕ್ರೂರಕರ್ಮಭಿಃ ॥ ೨೭ ॥

ಶ್ರೀಮತಾಂ ದರ್ಶನೇ ಜಾತೇ ದುಃಖಂ ಚೈವ ಗಮಿಷ್ಯತಿ ।
ಕದಾಚಿನ್ನ ಗತಂ ತತ್ರ ನಿಶ್ಚಯೋಽಯಂ ವಿಚಾರಿತಃ ॥ ೨೮ ॥

ಮಹತಾಮಾಶ್ರಮೇ ಪ್ರಾಪ್ತೇ ಸಮರ್ಥೇ ಸರ್ವಕರ್ಮಣಿ ।
ಯದಿ ದುಃಖಂ ನ ಗಚ್ಛೇತ್ತು ದೈವಮೇವಾತ್ರ ಕಾರಣಂ ॥ ೨೯ ॥

---

೨೫. ಆ ಮಹರ್ಷಿಯು ಪೀಠವನ್ನಲಂಕರಿಸಿದ ಬಳಿಕ ಹೃಷ್ಟರಾದ ಆ ಪಾಂಡವರು ಇಂದಿಗೆ ನಾವು ಧನ್ಯರಾದೆವು ಎಂದುಕೊಳ್ಳುತ್ತಾ ಬಗೆಬಗೆಯಾಗಿ ಸ್ತೋತ್ರವನ್ನು ಮಾಡುತ್ತಾ ಆತನನ್ನು ಬಹುವಾಗಿ ಸತ್ಕರಿಸಿದರು.

೨೬. ಎಲೈ ಪ್ರಭುವೇ, ಇಂದಿಗೆ ನಾವು ಮಾಡಿದ ತಪಸ್ಸೂ ಬಗೆಬಗೆಯ ದಾನಗಳೂ ಎಲ್ಲವೂ ಸಾರ್ಥಕವಾದುವು. ನಿನ್ನ ದರ್ಶನದಿಂದ ನಾವು ಸಂತೃಪ್ತರಾದೆವು.

೨೭. ಎಲೈ ಪಿತಾಮಹನೇ, ನಿನ್ನ ಸಂದರ್ಶನದಿಂದ ನಮ್ಮ ದುಃಖವೆಲ್ಲವೂ ದೂರವಾಯಿತು. ಮಹಾಕ್ರೂರಾಚಾರರಾದ ಆ ದುಷ್ಟರು ನಮಗೆ ಬಹು ಸಂಕಟವನ್ನು ಕೊಟ್ಟರು.

೨೮. ಸಾಧುಗಳ ಸಂದರ್ಶನವು ಲಭಿಸಲು ದುಃಖವು ದೂರವಾಗುವುದು. ಒಂದುವೇಳೆ ಅದು ನಾಶವಾಗದಿದ್ದರೆ ಈರೀತಿ ವಿಚಾರಿಸಿ ಅರಿತುಕೊಳ್ಳಬೇಕು.

೨೯. ಸರ್ವಕಾರ್ಯಸಾಧಕವಾದ ಮಹಾತ್ಮರ ಆಶ್ರಯವು ದೊರೆತರೂ ದುಃಖವು ಪರಿಹೃತವಾಗದಿದ್ದಲ್ಲಿ ದೈವವೇ ಕಾರಣವೆಂದು ನಿಶ್ಚಯವಾಗುವುದು.

ನಿಶ್ಚಯೇನೈವ ಗಚ್ಛೇತ್ತು ದಾರಿದ್ರ್ಯಂ ದುಃಖಕಾರಣಂ ।
ಮಹತಾಂ ಚ ಸ್ವಭಾವೋಽಯಂ ಕಲ್ಪವೃಕ್ಷಸಮೋ ಮತಃ ॥ ೩೦ ॥

ತದ್ಗುಣಾನೇವ ಗಣಯನ್ಮಹತೋ ವಸ್ತುಮಾತ್ರತಃ ।
ಆಶ್ರಯಸ್ಯ ವಶಾದೇವ ಪುಂಸೋ ವೈ ಜಾಯತೇ ಪ್ರಭೋ ॥ ೩೧ ॥

ಲಘುತ್ವಂ ಚ ಮಹತ್ತ್ವಂ ಚ ನಾತ್ರ ಕಾರ್ಯಾ ವಿಚಾರಣಾ ।
ಉತ್ತಮಾನಾಂ ಸ್ವಭಾವೋಽಯಂ ಯದ್ದೀನಪ್ರತಿಪಾಲನಂ ॥ ೩೨ ॥

ರಂಕಸ್ಯ ಲಕ್ಷಣಂ ಲೋಕೇ ಹ್ಯತಿಶ್ರೇಯಸ್ಕರಂ ಮತಂ ।
ಪುರೋಽಸ್ಯ ಪರಯುಕ್ತೋ ವೈ ಸುಜನಾನಾಂ ಚ ಸೇವನಂ ॥ ೩೩ ॥

ಅತಃ ಪರಂ ಚ ಭಾಗ್ಯಂ ವೈ ದೋಷಶ್ಚೈವ ನ ದೀಯತಾಂ ।
ಏತಸ್ಮಾತ್ಕಾರಣಾತ್ಸ್ವಾಮಿಂಸ್ತ್ವಯಿ ದೃಷ್ಟೋ ಶುಭಂ ತದಾ ॥ ೩೪ ॥

---

೩೦ ದುಃಖಕ್ಕೆಲ್ಲಾ ಕಾರಣವೆನಿಸಿದ ದಾರಿದ್ರ್ಯವೆಂಬುದು ಖಂಡಿತವಾಗಿಯೂ ನಾಶವಾಗುವುದು ಮಹಾತ್ಮರ ಮನೋಭಾವವು ಕಲ್ಪವೃಕ್ಷಕ್ಕೆ ಸರಿಸಮನಾದುದು.

೩೧-೩೨ ಆ ಮಹಾತ್ಮರ ಗುಣಗಳನ್ನು ಎಷ್ಟು ಕೊಂಡಾಡಿದರೂ ಸಾಲದು. ಅವರನ್ನು ಆಶ್ರಯಿಸಿದ ಮಾತ್ರಕ್ಕೇ ಆ ಗುಣಗಳೆಲ್ಲವೂ ಮತ್ತೊಬ್ಬನಲ್ಲಿ ಸಂಕ್ರಾಂತವಾಗಿ ಆತನೂ ಮಹಾತ್ಮನಾಗಿಬಿಡುವನು. ಇವನು ಕೀಳು ಅವನು ಮೇಲು ಎಂಬ ವಿಚಾರಕ್ಕೆ ಇಲ್ಲಿ ಅವಕಾಶವೇ ಇಲ್ಲ ಕಷ್ಟದಲ್ಲಿ ಸಿಲುಕಿದವರನ್ನು ಅಲ್ಲಿಂದ ಪಾರು ಮಾಡಿ ಸಂರಕ್ಷಿಸುವುದೇ ಮಹಾಪುರುಷರ ಸ್ವಭಾವವು

೩೩. ಲೋಕದಲ್ಲಿ ದಾರಿದ್ರ್ಯವೆಂಬುದು ಮಹತ್ತಾದ ಶ್ರೇಯಸ್ಸಿಗೆ ಕಾರಣವೆಂದು ಹೇಳಲ್ಪಟ್ಟಿರುವುದು. ಏಕೆಂದರೆ ಈ ದಾರಿದ್ರ್ಯದಿಂದಲೇ ಸಾಧುಪುರುಷರ ಸೇವೆಯು ದೊರೆಯಲು ಅನುವಾಗುವುದು.

೩೪. ಸಾಧುಪುರುಷರ ಪರಿಚರ್ಯೆಯಿಂದ ಭಾಗ್ಯವು ದೊರೆಕೊಳ್ಳುವುದು. ಆದುದರಿಂದ ದಾರಿದ್ರ್ಯವನ್ನು ನಿಂದಿಸಬಾರದು. ಆದುದರಿಂದಲೇ ಹೇ ಪ್ರಭುವೇ, ನಿನ್ನ ಸಂದರ್ಶನವುಂಟಾಗಲು ಶುಭವು ಒದಗಿತೆಂದೇ ಬಗೆಯುವೆನು.

ತ್ವದಾಗಮನಮಾತ್ರೇಣ ಸಂತುಷ್ಟಾನಿ ಮನಾಂಸಿ ನಃ ।
ದಿಶೋಪದೇಶಂ ಯೇನಾಶು ದುಃಖಂ ನಷ್ಟಂ ಭವೇಚ್ಚ ನಃ ॥ ೩೫ ॥

॥ ನಂದೀಶ್ವರ ಉವಾಚ ॥

ಇತ್ಯೇತದ್ವಚನಂ ಶ್ರುತ್ವಾ ಪಾಂಡವಾನಾಂ ಮಹಾಮುನಿಃ ।
ಪ್ರಸನ್ನಮಾನಸೋ ಭೂತ್ವಾ ವ್ಯಾಸಶ್ಚೈವಾಬ್ರವೀದಿದಂ ॥ ೩೬ ॥

ಹೇ ಪಾಂಡವಾಶ್ಚ ಯೂಯಂ ವೈ ನ ಕಷ್ಟಂ ಕರ್ತುಮರ್ಹಥ ।
ಧನ್ಯಾಃ ಸ್ಥ ಕೃತಕೃತ್ಯಾಃ ಸ್ಥ ಸತ್ಯಂ ನೈವ ವಿಲೋಪಿತಂ ॥ ೩೭ ॥

ಸುಜನಾನಾಂ ಸ್ವಭಾವೋಽಯಂ ಪ್ರಾಣಾಂತೇಽಪಿ ಸುಶೋಭನಃ ।
ಧರ್ಮಂ ತ್ಯಜಂತಿ ನೈವಾತ್ರ ಸತ್ಯಂ ಸಫಲಭಾಜನಂ ॥ ೩೮ ॥

ಅಸ್ಮಾಕಂ ಚೈವ ಯೂಯಂ ಚ ತೇ ಚಾಪಿ ಸಮತಾಂ ಗತಾಃ ।
ತಥಾಪಿ ಪಕ್ಷಪಾತೋ ವೈ ಧರ್ಮಿಷ್ಠಾನಾಂ ಮತೋ ಬುಧೈಃ ॥ ೩೯ ॥

---

೩೫. ನಿನ್ನ ಈ ಆಗಮನದಿಂದ ನಮ್ಮ ಮನಸ್ಸುಗಳೆಲ್ಲವೂ ಸಂತೋಷಭರಿತವಾಗಿರುವುವು. ನಮ್ಮಾ ದುಃಖವೆಲ್ಲವೂ ಪರಿಹಾರವಾಗುವಂತೆ ತಕ್ಕ ಉಪದೇಶವೊಂದನ್ನು ನಮಗೆ ನೀಡು ಎಂದರು.

೩೬. ಎಲೈ ಸನತ್ಕುಮಾರನೇ, ಈರೀತಿಯಾಗಿ ಪಾಂಡವರು ನುಡಿದುದನ್ನು ಕೇಳಿ ಆ ವ್ಯಾಸಮಹರ್ಷಿಯು ಪ್ರಸನ್ನಹೃದಯನಾಗಿ ಅವರನ್ನು ಕುರಿತು ಇಂತೆಂದನು.

೩೭. ಎಲೈ ಪಾಂಡವರಿರಾ, ನಿಮಗೆ ಈ ಕಷ್ಟವು ಒದಗಬಾರದು. ಆದರೂ ನೀವೇ ಧನ್ಯರು, ನೀವೇ ಕೃತಾರ್ಥರು. ಎಷ್ಟೇ ಕಷ್ಟವೊದಗಿದರೂ ಸತ್ಯವನ್ನು ಮಾತ್ರ ಬಿಡದಿರುವಿರಿ.

೩೮. ಪ್ರಾಣಹೋಗುವಂತಹ ಸಮಯವೊದಗಿದರೂ ಸುಜನರಾದವರು ಧರ್ಮವನ್ನೂ, ಸಫಲತೆಗೆ ಕಾರಣವಾದ ಸತ್ಯವನ್ನೂ ಎಂದಿಗೂ ತ್ಯಜಿಸಲಾರರು. ಇದು ಅವರ ಮಂಗಲಕರವಾದ ಸ್ವಭಾವವು.

೩೯. ನಮಗಂತೂ ನೀವೂ ಕೌರವರೂ ಸಮಾನರಾಗಿಯೇ ಇರುವಿರಿ. ಆದರೂ ಧರ್ಮನಿರತರಾದವರ ವಿಷಯದಲ್ಲಿ ಪಕ್ಷಪಾತವು ವಿವೇಕಿ ಸಮ್ಮತವಾದುದು

ಧೃತರಾಷ್ಟ್ರೇಣ ದುಷ್ಟೇನ ಪ್ರಥಮಂ ಚ ಹ್ಯಚಕ್ಷುಷಾ ।
ಧರ್ಮಸ್ತ್ಯಕ್ತಃ ಸ್ವಯಂ ಲೋಭಾದ್ಯುಷ್ಮಾಕಂ ರಾಜ್ಯಮಾಹೃತಂ　॥ ೪೦ ॥

ತಸ್ಯ ಯೂಯಂ ಚ ತೇ ಚಾಪಿ ಪುತ್ರಾ ಏವ ನ ಸಂಶಯಃ ।
ಪಿತರ್ಯುಪರತೇ ಬಾಲಾ ಅನುಕಂಪ್ಯಾ ಮಹಾತ್ಮನಃ　॥ ೪೧ ॥

ಪಶ್ಚಾತ್ಪುತ್ರಶ್ಚ ತೇನೈವ ವಾರಿತೋ ನ ಕದಾಚನ ।
ಅನರ್ಥೋ ನೈವ ಜಾಯೇತ ಯಚ್ಚೈವಂ ಚ ಕೃತಂ ತದಾ　॥ ೪೨ ॥

ಅತಃ ಪರಂ ಚ ಯಜ್ಜಾತಂ ತಜ್ಜಾತಂ ನಾನ್ಯಥಾ ಭವೇತ್ ।
ಅಯಂ ದುಷ್ಟೋ ಭವಂತಶ್ಚ ಧರ್ಮಿಷ್ಠಾಃ ಸತ್ಯವಾದಿನಃ　॥ ೪೩ ॥

ತಸ್ಮಾದಂತೇ ಚ ತಸ್ಯೈವಾಶುಭಂ ಹಿ ಭವಿತಾ ಧ್ರುವಂ ।
ಯಚ್ಚೈವ ವಾಪಿತಂ ಬೀಜಂ ತತ್ಪ್ರರೋಹೋ ಭವೇದಿಹ　॥ ೪೪ ॥

---

೪೦. ಮೊದಲೇ ಕಣ್ಣಿಲ್ಲದ ಆ ಕುರುಡ ಧೃತರಾಷ್ಟ್ರನು ದುಷ್ಟನಾಗಿ ಲೋಭಕ್ಕೀಡಾಗಿ ಧರ್ಮವನ್ನು ತೊರೆದು ನಿಮ್ಮ ರಾಜ್ಯವನ್ನು ಕಸಿದುಕೊಂಡಿರುವನು

೪೧ ಅವನಿಗೆ ನೀವೂ ಆ ಕೌರವರೂ ಇಬ್ಬರೂ ಮಕ್ಕಳೇ ಆಗಿರುವಿರಿ ಇದರಲ್ಲಿ ಸಂದೇಹವಿಲ್ಲ ತಂದೆಯನ್ನು ಕಳೆದುಕೊಂಡ ಹುಡುಗರಾದ ನಿಮ್ಮಮೇಲೆ ಅವನಿಗೆ ವಿಶೇಷವಾಗಿ ದಯೆಯಿರಬೇಕಾಗಿತ್ತು

೪೨ ಅವನು ಎಂದಿಗೂ ದುಷ್ಟನಾದ ತನ್ನ ಮಗನನ್ನು ಬೇಡವೆಂದು ಹಿಂದಕ್ಕೆ ತಳ್ಳಲಿಲ್ಲ ಆಗೇನಾದರೂ ಹಾಗೆಮಾಡಿದ್ದರೆ ಇಂದು ಈ ಅನರ್ಥವುಂಟಾಗುತ್ತಿರಲಿಲ್ಲ

೪೩. ಅದಾದನಂತರ ಏನು ನಡೆಯಿತೋ ಅದು ಆಗಿಯೇ ತೀರಬೇಕಾದುದು. ಮತ್ತಾವ ರೀತಿಯಲ್ಲೂ ಬದಲಾಗುವಂತಿಲ್ಲ ಇವನು ಕಡುಪಾಪಿ. ನೀವು ಧರ್ಮನಿರತರು, ಸತ್ಯವಾದಿಗಳು.

೪೪. ಆದುದರಿಂದ ಕೊನೆಯಲ್ಲಿ ಅವನಿಗೆ ಕೇಡು ಖಂಡಿತವಾಗಿಯೂ ಉಂಟಾಗುವುದು. ಅವನು ಉತ್ತ ಬಿತ್ತವು ಈಗ ಚಿಗುರಿ ಗಿಡವಾಗಿ ಬೆಳದೇ ಬೆಳೆಯುವುದು.

ತಸ್ಮಾದ್ದುಃಖಂ ನ ಕರ್ತವ್ಯಂ ಭವದ್ಭಿಃ ಸರ್ವಥಾ ಧ್ರುವಮ್।
ಭವಿಷ್ಯತಿ ಶುಭಂ ವೋ ಹಿ ನಾತ್ರ ಕಾರ್ಯಾ ವಿಚಾರಣಾ ॥ ೪೫ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಪಾಂಡವಾಃ ಸರ್ವೇ ತೇನ ವ್ಯಾಸೇನ ಪ್ರೀಣಿತಾಃ ।
ಯುಧಿಷ್ಠಿರಮುಖಾಸ್ತೇ ಚ ಪುನರೇವಾಬ್ರುವನ್ವಚಃ ॥ ೪೬ ॥

॥ ಪಾಂಡವಾ ಊಚುಃ ॥

ಸತ್ಯಮುಕ್ತಂ ತ್ವಯಾ ನಾಥ ದುಷ್ಟೈರ್ದುಃಖಂ ನಿರಂತರಂ ।
ದುಷ್ಟಾತ್ಮಭಿರ್ವನೇ ಚಾಪಿ ದೀಯತೇ ಹಿ ಮುಹುರ್ಮುಹುಃ ॥ ೪೭ ॥

ತನ್ನಾಶಯಾಶುಭಂ ತೇಽದ್ಯ ಕಿಂಚಿದ್ದೇಯಂ ಶುಭಂ ವಿಭೋ ।
ಕೃಷ್ಣೇನ ಕಥಿತಂ ಪೂರ್ವಮಾರಾಧ್ಯಶ್ಶಂಕರಸ್ಸದಾ ॥ ೪೮ ॥

---

೪೫. ಆದುದರಿಂದ ನೀವು ಖಂಡಿತವಾಗಿಯೂ ಕೊರಗಬೇಡಿರಿ. ನಿಮಗೆ ನಿಜವಾಗಿಯೂ ಒಳ್ಳೆಯದಾಗುವುದು. ಇದರಲ್ಲಿ ವಿಚಾರಮಾಡಬೇಕಾಗಿಲ್ಲ ಎಂದನು.

೪೬. ಓ ಮುನೀಂದ್ರ, ಈರೀತಿಯಾಗಿ ವ್ಯಾಸಮಹರ್ಷಿಯು ನುಡಿದುದನ್ನು ಕೇಳಿ ಸಂತುಷ್ಟರಾದ ಧರ್ಮರಾಜ ಮೊದಲಾದ ಪಾಂಡವರು ಅವನನ್ನು ಕುರಿತು ಮರಳಿ ಇಂತೆಂದರು.

೪೭. ಹೇ ಪ್ರಭೋ, ನೀನು ನಿಜವಾದುದನ್ನೇ ಹೇಳಿದೆ. ಆ ದುಷ್ಟರು ಎಡೆ ಬಿಡದೆ ನಮ್ಮನ್ನು ಪೀಡಿಸುತ್ತಲೇ ಇರುವರು. ಈ ಕಾಡಿನಲ್ಲಿಯೂ ಸಹ ಅವರ ಕೋಟಲೆಯು ಮೇಲೆಮೇಲೆ ಒದಗುತ್ತಲೇ ಇದೆ.

೪೮. ಆದುದರಿಂದ ನಮಗೀಗ ಒದಗಿರುವ ಈ ಅಶುಭವನ್ನು ಪರಿಹರಿಸು. ಎಲೈ ಸ್ವಾಮಿಯೇ, ಏನಾದರೂ ಒಳ್ಳೆಯದನ್ನು ನೀನೀಗ ನಮಗೆ ಕರುಣಿಸಬೇಕು. ಕೃಷ್ಣನು ಹಿಂದೆ ಶ್ರೀ ಶಂಕರನನ್ನು ಎಂದೆಂದಿಗೂ ಬಿಡದೆ ಆರಾಧಿಸಿರೆಂದು ನುಡಿದಿದ್ದನು.

ಪ್ರಮಾದಶ್ಚ ಕೃತೋಽಸ್ಮಾಭಿಸ್ತದ್ವಚಶ್ಶಿಥಿಲೀಕೃತಂ ।
ಸ ದೇವಮಾರ್ಗಸ್ತು ಪುನರಿದಾನೀಮುಪದಿಶ್ಯತಾಂ ॥ ೪೯ ॥

॥ ನಂದೀಶ್ವರ ಉವಾಚ ॥

ಇತ್ಯೇತದ್ವಚನಂ ಶ್ರುತ್ವಾ ವ್ಯಾಸೋ ಹರ್ಷಸಮನ್ವಿತಃ ।
ಉವಾಚ ಪಾಂಡವಾನ್ಪ್ರೀತ್ಯಾ ಸ್ಮೃತ್ವಾ ಶಿವಪದಾಂಬುಜಂ ॥ ೫೦ ॥

॥ ವ್ಯಾಸ ಉವಾಚ ॥

ಶ್ರೂಯತಾಂ ವಚನಂ ಮೇಽದ್ಯ ಪಾಂಡವಾ ಧರ್ಮಬುದ್ಧಯಃ ।
ಸತ್ಯಮುಕ್ತಂ ತು ಕೃಷ್ಣೇನ ಮಯಾ ಸಂಸೇವ್ಯತೇ ಶಿವಃ ॥ ೫೧ ॥

ಭವದ್ಭಿಃ ಸೇವ್ಯತಾಂ ಪ್ರೀತ್ಯಾ ಸುಖಂ ಸ್ಯಾದತುಲಂ ಸದಾ ।
ಸರ್ವದುಃಖಂ ಭವತ್ಯೇವ ಶಿವಾಽಸೇವಾತ ಏವ ಹಿ ॥ ೫೨ ॥

---

೪೯. ನಾವೇನೋ ಅಚಾತುರ್ಯವನ್ನು ಮಾಡಿಬಿಟ್ಟೆವು. ಆತನ ಮಾತಿನಂತೆ ನಡೆಯಲ್ಲಿಲ್ಲ. ಆದುದರಿಂದ ಆ ಶಿವನನ್ನು ಭಜಿಸುವ ಮಾರ್ಗವನ್ನು ಈಗ ನೀನು ಮತ್ತೊಮ್ಮೆ ನಮಗೆ ವಿವರಿಸು ಎಂದರು.

೫೦. ಈರೀತಿಯಾಗಿ ಪಾಂಡವರು ನುಡಿದ ಮಾತನ್ನು ಕೇಳಿ ಸಂತುಷ್ಟನಾದ ವ್ಯಾಸಮಹರ್ಷಿಯು ಶಿವನ ಪಾದಾರವಿಂದಗಳನ್ನು ಹೃದಯದಲ್ಲಿ ಧ್ಯಾನಿಸಿ ಪ್ರೀತಿಯಿಂದ ಅವರನ್ನಿಂತೆಂದನು

೫೧. ಎಲೈ ಧರ್ಮನಿರತರಾದ ಪಾಂಡವರಿರಾ, ನನ್ನ ಮಾತನ್ನು ಈಗ ಲಾಲಿಸಿರಿ. ಕೃಷ್ಣನು ಸತ್ಯವನ್ನೇ ನುಡಿದಿರುವನು. ನಾನು ಈಗಲೂ ಶಿವನನ್ನು ಆರಾಧಿಸುತ್ತಿರುವೆನು.

೫೨. ನೀವು ಪ್ರೀತಿಯಿಂದ ಶಿವನನ್ನು ಆರಾಧಿಸಿರಿ. ನಿಮಗೆ ಸರ್ವದಾ ಸುಖವುಂಟಾಗುವುದು. ಶಿವನನ್ನು ಸೇವಿಸದಿರುವುದರಿಂದಲೇ ಎಲ್ಲ ಬಗೆಯ ದುಃಖಗಳು ಉಂಟಾಗುವುವು ಎಂದು ಹೇಳಿ,

॥ ನಂದೀಶ್ವರ ಉವಾಚ ॥

**ಅಥ ಪಂಚಸು ತೇಷ್ವೇವ ವಿಚಾರ್ಯ ಶಿವಪೂಜನೇ ।**
**ಅರ್ಜುನಂ ಯೋಗ್ಯಮುಚ್ಚಾರ್ಯ ವ್ಯಾಸೋ ಮುನಿವರಸ್ತಥಾ ॥ ೫೩ ॥**

**ತಪಃಸ್ಥಾನಂ ವಿಚಾರ್ಯೈವಂ ತತಸ್ಸ ಮುನಿಸತ್ತಮಃ ।**
**ಪಾಂಡವಾನ್ಧರ್ಮಸನ್ನಿಷ್ಠಾನ್ಪುನರೇವಾಬ್ರವೀದಿದಂ ॥ ೫೪ ॥**

॥ ವ್ಯಾಸ ಉವಾಚ ॥

**ಶ್ರೂಯತಾಂ ಪಾಂಡವಾಸ್ಸರ್ವೇ ಕಥಯಾಮಿ ಹಿತಂ ಸದಾ ।**
**ಶಿವಂ ಸರ್ವಂ ಪರಂ ದೃಷ್ಟ್ವಾ ಪರಂ ಬ್ರಹ್ಮ ಸತಾಂ ಗತಿಂ ॥ ೫೫ ॥**

**ಬ್ರಹ್ಮಾದಿತ್ರಿಪರಾದ್ಧಾಂತಂ ಯತ್ಕಿಂಚಿದ್ದೃಶ್ಯತೇ ಜಗತ್ ।**
**ತತ್ಸರ್ವಂ ಶಿವರೂಪಂ ಚ ಪೂಜ್ಯಂ ಧ್ಯೇಯಂ ಚ ತತ್ಪುನಃ ॥ ೫೬ ॥**

**ಸರ್ವೇಷಾಂ ಚೈವ ಸೇವ್ಯೋಽಸೌ ಶಂಕರಸ್ಸರ್ವದುಃಖಹಾ ।**
**ಶಿವಃ ಸ್ವಲ್ಪೇನ ಕಾಲೇನ ಸಂಪ್ರಸೀದತಿ ಭಕ್ತಿತಃ ॥ ೫೭ ॥**

---

೫೩-೫೪. ಅನಂತರ ಆ ಪಂಚಪಾಂಡವರಲ್ಲಿ ಶಿವಪೂಜೆಯನ್ನು ಮಾಡಲು ಯಾರು ತಕ್ಕವರೆಂದು ವಿಚಾರಿಸಿ, ಅರ್ಜುನನೇ ಅದಕ್ಕೆ ಸರಿಯೆಂದು ನಿಶ್ಚಯಿಸಿದಲ್ಲದೆ ತಪೋಯೋಗ್ಯವಾದ ಸ್ಥಾನವನ್ನೂ ವಿಚಾರಿಸಿ ನಿರ್ಧರಗೈದು ಅನಂತರ ಆ ವ್ಯಾಸನು ಅವರನ್ನು ಮರಳಿ ಇಂತೆಂದನು.

೫೫. ಎಲೈ ಪಾಂಡವರಿರಾ, ನೀವೆಲ್ಲರೂ ಈ ಮಾತನ್ನು ಆಲಿಸಿರಿ. ಎಂದೆಂದಿಗೂ ನಿಮಗೆ ಹಿತವಾದುದನ್ನೇ ನುಡಿಯುವೆನು. ಆ ಶಿವನೇ ಎಲ್ಲರಿಗೂ ಮೇಲಾದವನೆಂದೂ ಪರಮಪುರುಷನೆಂದೂ ಸತ್ಪುರುಷರಿಗೆ ಶರಣ್ಯನೆಂದೂ ತಿಳಿಯಿರಿ.

೫೬. ಬ್ರಹ್ಮನಿಂದ ಹಿಡಿದು ಅಣುವಿನವರೆಗೂ ಜಗತ್ತಿನಲ್ಲಿ ಕಣ್ಣಿಗೆ ಬೀಳುವ ವಸ್ತುವೆಲ್ಲವೂ ಶಿವನ ರೂಪವೆಂದು ತಿಳಿದು ಅವೆಲ್ಲವನ್ನೂ ಪೂಜಿಸಿರಿ, ಧ್ಯಾನ ಮಾಡಿರಿ.

೫೭. ಸಕಲ ದುಃಖವನ್ನೂ ಪರಿಹರಿಸುವ ಆ ಶಂಕರನು ಎಲ್ಲರಿಗೂ ಆರಾಧ್ಯನಾಗಿರುವನು. ಆ ಶಿವನು ಸ್ವಲ್ಪಕಾಲದಲ್ಲಿಯೇ ಭಕ್ತಿಗೆ ಮೆಚ್ಚಿ ಪ್ರಸನ್ನನಾಗುವನು.

ಸುಪ್ರಸನ್ನೋ ಮಹೇಶೋ ಹಿ ಭಕ್ತೇಭ್ಯಃ ಸಕಲಪ್ರದಃ ।
ಭುಕ್ತಿಂ ಮುಕ್ತಿಮಿಹಾಮುತ್ರ ಯಚ್ಛತೀತಿ ಸುನಿಶ್ಚಿತಂ ॥ ೫೮ ॥

ತಸ್ಮಾತ್ಸೇವ್ಯಸ್ಸದಾ ಶಂಭುರ್ಭುಕ್ತಿಮುಕ್ತಿಫಲೇಪ್ಸುಭಿಃ ।
ಪುರುಷಶ್ಶಂಕರಃ ಸಾಕ್ಷಾದ್ದುಷ್ಟಹಂತಾ ಸತಾಂ ಗತಿಃ ॥ ೫೯ ॥

ಪರಂತು ಪ್ರಥಮಂ ಶಕ್ರವಿದ್ಯಾಂ ದೃಢಮನಾ ಜಪೇತ್ ।
ಕ್ಷತ್ರಿಯಸ್ಯ ಪರಾಖ್ಯಸ್ಯ ಚೇದಮೇವ ಸಮಾಹಿತಂ ॥ ೬೦ ॥

ಅತೋಽರ್ಜುನಶ್ಚ ಪ್ರಥಮಂ ಶಕ್ರವಿದ್ಯಾಂ ಜಪೇದ್ದೃಢಃ ।
ಕರಿಷ್ಯತಿ ಪರೀಕ್ಷಾಂ ಪ್ರಾಕ್ಸಂತುಷ್ಟಸ್ತದ್ಭವಿಷ್ಯತಿ ॥ ೬೧ ॥

ಸುಪ್ರಸನ್ನಶ್ಚ ವಿಘ್ನಾನಿ ಸಂಹರಿಷ್ಯತಿ ಸರ್ವದಾ ।
ಪುನಶ್ಚೈವಂ ಶಿವಸ್ಯೈವ ವರಂ ಮಂತ್ರಂ ಪ್ರದಾಸ್ಯತಿ ॥ ೬೨ ॥

---

೫೮. ಆ ಮಹೇಶ್ವರನು ಪ್ರಸನ್ನನಾದಲ್ಲಿ ಭಕ್ತರಿಗೆ ಇಹಲೋಕದಲ್ಲಿ ಸಕಲ ಭೋಗಗಳನ್ನೂ ಪರಲೋಕದಲ್ಲಿ ಮೋಕ್ಷಸುಖವನ್ನೂ ಕೊಟ್ಟೇಕೊಡುವನು. ಇದು ಖಂಡಿತವಾದುದು.

೫೯. ಆದುದರಿಂದ ಭೋಗಮೋಕ್ಷಗಳನ್ನು ಬಯಸುವವರು, ದುಷ್ಟನಿಗ್ರಹ ಕರ್ತನೂ ಸತ್ಪುರುಷಶರಣ್ಯನೂ ಪರಮಪುರುಷನೂ ಆದ ಶ್ರೀ ಶಂಕರನನ್ನು ಸರ್ವದಾ ಸೇವಿಸುತ್ತಿರಬೇಕು.

೬೦. ಆದರೆ ಮೊತ್ತಮೊದಲು ದೃಢವಾದ ಮನಸ್ಸಿನಿಂದ ಇಂದ್ರಪ್ರೀತಿಕರವಾದ ಮಂತ್ರವನ್ನು ಜಪಿಸಬೇಕು. ಶ್ರೇಷ್ಠವೆನಿಸಿದ ಕ್ಷತ್ರಿಯನಿಗಂತೂ ಇದು ಅತ್ಯವಶ್ಯಕ ವಾದುದು.

೬೧. ಆದುದರಿಂದ ಅರ್ಜುನನು ಮೊದಲು ದೃಢಮನಸ್ಕನಾಗಿ ಇಂದ್ರಮಂತ್ರ ವನ್ನು ಜಪಿಸಲಿ. ಮೊದಲು ಇಂದ್ರನು ಪರೀಕ್ಷೆಮಾಡುವನು. ಒಳಿಕ ಸಂತುಷ್ಟ ನಾಗುವನು.

೬೨. ಆ ಇಂದ್ರನು ಸುಪ್ರಸನ್ನನೇ ಆದಲ್ಲಿ ಎಂದೆಂದಿಗೂ ಯಾವ ವಿಘ್ನವೂ ಬಾರದಂತೆ ಅವುಗಳನ್ನು ತಡೆಗಟ್ಟುವನು. ಅನಂತರ ಮರಳಿ ಶ್ರೇಷ್ಠವಾದ ಶಿವಮಂತ್ರ ವನ್ನೇ ಉಪದೇಶಮಾಡುವೆನು ಎಂದನು.

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾರ್ಜುನಮಾಹೂಯೋಪೇಂದ್ರವಿದ್ಯಾಮುಪಾದಿಶತ್ ।
ಸ್ನಾತ್ವಾ ಚ ಪ್ರಾಙ್ಮುಖೋ ಭೂತ್ವಾ ಜಗ್ರಾಹಾರ್ಜುನ ಉಗ್ರಧೀಃ ॥ ೬೩ ॥

ಪಾರ್ಥಿವಸ್ಯ ವಿಧಾನಂ ಚ ತಸ್ಮೈ ಮುನಿವರೋ ದದೌ ।
ಪ್ರತ್ಯುವಾಚ ಚ ತಂ ವ್ಯಾಸೋ ಧನಂಜಯಮುದಾರಧೀಃ ॥ ೬೪ ॥

॥ ವ್ಯಾಸ ಉವಾಚ ॥

ಇತೋ ಗಚ್ಛಾಧುನಾ ಪಾರ್ಥ ಇಂದ್ರಕೀಲೇ ಸುಶೋಭನೇ ।
ಜಾಹ್ನವ್ಯಾಶ್ಚ ಸಮೀಪೇ ವೈ ಸ್ಥಿತ್ವಾ ಸಮ್ಯಕ್ತಪಃ ಕುರು ॥ ೬೫ ॥

ಅದೃಶ್ಯಾ ಚೈವ ವಿದ್ಯಾ ಸ್ಯಾತ್ಸದಾ ತೇ ಹಿತಕಾರಿಣೀ ।
ಇತ್ಯಾಶಿಷಂ ದದೌ ತಸ್ಮೈ ತತಃ ಪ್ರೋವಾಚ ತಾನ್ಮುನಿಃ ॥ ೬೬ ॥

---

೬೩. ಎಲೈ ಮುನಿಯೇ, ವ್ಯಾಸಮಹರ್ಷಿಯು ಹೀಗೆ ಹೇಳಿ ಅರ್ಜುನನನ್ನು ಕರೆದು ಇಂದ್ರನನ್ನು ಪ್ರಸನ್ನೀಕರಿಸಲು ಸಾಧಕವಾದ ವಿದ್ಯೆಯನ್ನು ಉಪದೇಶಿಸಿದನು ತೀಕ್ಷ್ಣಬುದ್ಧಿಯುಳ್ಳ ಆ ಅರ್ಜುನನು ಸ್ನಾನಮಾಡಿ ಶುಚಿರ್ಭೂತನಾಗಿ, ಪ್ರಾಙ್ಮುಖನಾಗಿ ಕುಳಿತು ಆ ವಿದ್ಯೆಯನ್ನು ಪರಿಗ್ರಹಿಸಿದನು.

೬೪. ಅನಂತರ ಆ ಮುನಿವರನು ಪ್ರಾರ್ಥಿಸುವ ಪೂಜೆಗೆ ಯಾವ ವಿಧಿಯನ್ನು ಅನುಸರಿಸಬೇಕೋ ಆ ವಿಧಾನವನ್ನು ಹೇಳಿಕೊಟ್ಟನು. ಬಳಿಕ ವಿಶಾಲಪ್ರಾಜ್ಞನಾದ ಆ ವ್ಯಾಸನು ಅರ್ಜುನನ್ನಿಂತೆಂದನು.

೬೫. ಎಲೈ ಅರ್ಜುನನೇ, ಈಗ ನೀನು ಇಲ್ಲಿಂದ ಹೊರಟು ಇಂದ್ರಕೀಲ ಪರ್ವತಕ್ಕೆ ತೆರಳು. ಅಲ್ಲಿ ಗಂಗಾತೀರದಲ್ಲಿ ನಿಂತು ಚೆನ್ನಾಗಿ ತಪಸ್ಸುಮಾಡು.

೬೬. ನಾನುಪದೇಶಗೈದ ಈ ವಿದ್ಯೆಯು ಯಾವಾಗಲೂ ಅದೃಶ್ಯವಾಗಿಯೇ ನಿನ್ನನ್ನು ಸಂರಕ್ಷಿಸುತ್ತಿರುವುದು. ಹೀಗೆಂದು ವ್ಯಾಸಮಹರ್ಷಿಯು ಅರ್ಜುನನನ್ನು ಆಶೀರ್ವದಿಸಿ ಬಳಿಕ ಉಳಿದ ಪಾಂಡವರನ್ನು ಕುರಿತು ಇಂತೆಂದನು.

ಧರ್ಮಮಾಸ್ಥಾಯ ಸರ್ವೇ ವೈ ತಿಷ್ಠಂತು ನೃಪಸತ್ತಮಾಃ ।
ಸಿದ್ಧಿಃ ಸ್ಯಾತ್ಸರ್ವಥಾ ಶ್ರೇಷ್ಠಾ ನಾತ್ರ ಕಾರ್ಯಾ ವಿಚಾರಣಾ ॥ ೬೭ ॥

॥ ನಂದೀಶ್ವರ ಉವಾಚ ॥

ಇತಿ ದತ್ವಾಶಿಷಂ ತೇಭ್ಯಃ ಪಾಂಡವೇಭ್ಯೋ ಮುನೀಶ್ವರಃ ।
ಸ್ಮೃತ್ವಾ ಶಿವಪದಾಂಭೋಜಂ ವ್ಯಾಸಶ್ಚಾಂತರ್ದಧೇ ಕ್ಷಣಾತ್ ॥ ೬೮ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ವ್ಯಾಸೋಪದೇಶವರ್ಣನಂ ನಾಮ
ಸಪ್ತತ್ರಿಂಶೋಽಧ್ಯಾಯಃ

---

೬೭. ಎಲೈ ರಾಜಶ್ರೇಷ್ಠರಿರಾ, ನೀವೆಲ್ಲರೂ ಧರ್ಮಾಚರಣೆಯನ್ನು ಅವಲಂಬಿಸಿಕೊಂಡು ಇರುತ್ತೀರಿ. ನಿಮಗೆ ಸಕಲವಿಧದಲ್ಲಿಯೂ ಸಿದ್ಧಿಯುಂಟಾಗುವುದು ಇದರಲ್ಲಿ ಸ್ವಲ್ಪವೂ ಸಂದೇಹಕ್ಕಾಸ್ಪದವಿಲ್ಲ

೬೮. ಓ ಮುನೀಂದ್ರ, ಈರೀತಿಯಾಗಿ ವ್ಯಾಸಮಹರ್ಷಿಯು ಪಾಂಡವರಿಗೆ ಆಶೀರ್ವಾದಮಾಡಿ ಶಿವನ ಪಾದಾರವಿಂದಗಳನ್ನು ನೆನೆದು ಅಲ್ಲಿಂದ ತಟ್ಟನೆ ಕಣ್ಮರೆಯಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ವ್ಯಾಸೋಪದೇಶವರ್ಣನವೆಂಬ ಮೂವತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಅಷ್ಟತ್ರಿಂಶೋಽಧ್ಯಾಯಃ

**॥ ನಂದೀಶ್ವರ ಉವಾಚ ॥**

**ಅರ್ಜುನೋಽಪಿ ತದಾ ತತ್ರ ದೀಪ್ಯಮಾನೋ ವ್ಯದೃಶ್ಯತ ।**
**ಮಂತ್ರೇಣ ಶಿವರೂಪೇಣ ತೇಜಶ್ಚಾತುಲಮಾವಹನ್ ॥ ೧ ॥**

**ತೇ ಸರ್ವೇ ಚಾರ್ಜುನಂ ದೃಷ್ಟ್ವಾ ಪಾಂಡವಾ ನಿಶ್ಚಯಂ ಗತಾಃ ।**
**ಜಯೋಽಸ್ಮಾಕಂ ಧ್ರುವಂ ಜಾತಂ ತೇಜಶ್ಚ ವಿಪುಲಂ ಯತಃ ॥ ೨ ॥**

---

## ಮೂವತ್ತೆಂಟನೆಯ ಅಧ್ಯಾಯವು

೧. ನಂದಿಕೇಶ್ವರನು ಹೇಳತೊಡಗಿದನು ;—ಆಗ ಅರ್ಜುನನು ಶಿವಸ್ವರೂಪವಾದ ಆ ಮಂತ್ರಪ್ರಭಾವದಿಂದ ಎಣೆಯಿಲ್ಲದ ತೇಜಸ್ಸನ್ನು ತಳೆದು ಜ್ವಲಿಸುತ್ತಿರುವವನಂತೆ ತೋರಿದನು.

೨. ಆಗ ಧರ್ಮರಾಜ ಮೊದಲಾದ ಪಾಂಡವರೆಲ್ಲರೂ ಅರ್ಜುನನ್ನು ಕಂಡು ಖಂಡಿತವಾಗಿಯೂ ನಮಗೆ ಗೆಲುವು ದೊರೆಯಿತು. ಇಲ್ಲದಿದ್ದರೆ ಈ ಅಪಾರವಾದ ತೇಜಸ್ಸು ಹೇಗೆತಾನೇ ಉಂಟಾಗುತ್ತಿತ್ತು ಎಂದು ಮನಸ್ಸಿನಲ್ಲಿ ನಿಶ್ಚಯವನ್ನು ತಾಳಿದರು.

ಇದಂ ಕಾರ್ಯಂ ತ್ವಯಾ ಸಾಧ್ಯಂ ನಾನ್ಯೇನ ಚ ಕದಾಚನ ।
ವ್ಯಾಸಸ್ಯ ವಚನಾದ್ಭಾತಿ ಸಫಲಂ ಕುರು ಜೀವಿತಂ ॥ ೩ ॥

ಇತಿ ಪ್ರೋಚ್ಯಾರ್ಜುನಂ ತೇ ವೈ ವಿರಹೌತ್ಸುಕ್ಯಕಾತರಾಃ ।
ಅನಿಚ್ಛಂತೋಽಪಿ ತತ್ರೈವ ಪ್ರೇಷಯಾಮಾಸುರಾದರಾತ್ ॥ ೪ ॥

ದ್ರೌಪದೀ ದುಃಖಸಂಯುಕ್ತಾ ನೇತ್ರಾಶ್ರೂಣಿ ನಿರುಧ್ಯ ಚ ।
ಪ್ರೇಷಯಂತೀ ಶುಭಂ ವಾಕ್ಯಂ ತದೋವಾಚ ಪತಿವ್ರತಾ ॥ ೫ ॥

॥ ದ್ರೌಪದ್ಯುವಾಚ ॥

ವ್ಯಾಸೋಪದಿಷ್ಟಂ ಯದ್ರಾಜಂಸ್ತ್ವಯಾ ಕಾರ್ಯಂ ಪ್ರಯತ್ನತಃ ।
ಶುಭಪ್ರದೋಽಸ್ತು ತೇ ಪಂಥಾಶ್ಶಂಕರಶ್ಶಂಕರೋಽಸ್ತು ವೈ ॥ ೬ ॥

---

೩. ವ್ಯಾಸಮಹರ್ಷಿಯ ಮಾತಿನಿಂದ ಈ ಕೆಲಸವು ನಿನ್ನಿಂದಲ್ಲದೆ ಮತ್ತಾರಿಂದಲೂ ಅಸಾಧ್ಯವೆಂಬುದಾಗಿ ತೋರುವುದು. ನಮ್ಮೆಲ್ಲರ ಜನ್ಮವನ್ನು ಸಾರ್ಥಕವಾದುದನ್ನಾಗಿ ಮಾಡು ಎಂದರು

೪. ಹೀಗೆ ಅರ್ಜುನನಿಗೆ ಹೇಳಿ ಆ ಪಾಂಡವರು ಅವನನ್ನು ಬಿಟ್ಟಿರಲಾರದೆಯೂ ಮುಂದಿನ ಹಿತದೃಷ್ಟಿಯಿಂದ ಕುತೂಹಲಭರಿತರಾಗಿಯೂ ಮನದಲ್ಲಿ ವ್ಯಾಕುಲ ಪಡುತ್ತಾ, ಇಷ್ಟವಿಲ್ಲದಿದ್ದರೂ ಸಹ ಇಂದ್ರಕೀಲಕ್ಕೆ ಅವನನ್ನು ಕಳುಹಿಸಿಕೊಟ್ಟರು

೫. ಆಗ ಮಹಾಪತಿವ್ರತೆಯಾದ ದ್ರೌಪದಿಯು ಬಹು ದುಃಖಿತಳಾಗಿ ಕಣ್ಣೀರನ್ನು ಬೀಳದಂತೆ ತಡೆಗಟ್ಟಿ ಅರ್ಜುನನನ್ನು ಬೀಳ್ಕೊಡುತ್ತಾ ಶುಭಕರವಾದ ಈ ಮಾತನ್ನಾಡಿದಳು.

೬. ವ್ಯಾಸಮಹರ್ಷಿಯ ಉಪದೇಶದಂತೆ ಪ್ರಯತ್ನಪೂರ್ವಕವಾಗಿ ಎಲ್ಲವನ್ನೂ ನೀನು ಮಾಡು. ನಿನಗೆ ದಾರಿಯು ಮಂಗಳದಾಯಕವಾಗಿರಲಿ. ಶಂಕರನು ಕಲ್ಯಾಣವನ್ನುಂಟುಮಾಡಲಿ ಎಂದಳು.

ತೇ ಸರ್ವೇ ಚಾವಸಂಸ್ತತ್ರ ವಿಸೃಜ್ಯಾರ್ಜುನಮಾದರಾತ್ ।
ಅತ್ಯಂತದುಃಖಮಾಪನ್ನಾ ಮಿಲಿತ್ವಾ ಪಂಚ ಏವ ಚ ॥ ೭ ॥

ಸ್ಥಿತಾಸ್ತತ್ರ ವದಂತಿ ಸ್ಮ ಶ್ರೂಯತಾನ್ಮೃಷಿಸತ್ತಮ ।
ದುಃಖೇऽಪಿ ಪ್ರಿಯಸಂಗೋ ವೈ ನ ದುಃಖಾಯ ಪ್ರಜಾಯತೇ ॥ ೮ ॥

ವಿಯೋಗೇ ದ್ವಿಗುಣಂ ತಸ್ಯ ದುಃಖಂ ಭವತಿ ನಿತ್ಯಶಃ ।
ತತ್ರ ಧೈರ್ಯಧರಸ್ಯಾಪಿ ಕಥಂ ಧೈರ್ಯಂ ಭವೇದಿಹ ॥ ೯ ॥

॥ ನಂದೀಶ್ವರ ಉವಾಚ ॥

ಕುರ್ವತ್ಸ್ವೇವ ತದಾ ದುಃಖಂ ಪಾಂಡವೇಷು ಮುನೀಶ್ವರಃ ।
ಕೃಪಾಸಿಂಧುಶ್ಚ ಸ ವ್ಯಾಸ ಋಷಿವರ್ಯಸ್ಸಮಾಗತಃ ॥ ೧೦ ॥

ತಂ ತದಾ ಪಾಂಡವಾಸ್ತೇ ವೈ ನತ್ವಾ ಸಂಪೂಜ್ಯ ಚಾದರಾತ್ ।
ದತ್ವಾಸನಂ ಹಿ ದುಃಖಾಢ್ಯಾಃ ಕರೌ ಬಧ್ವಾ ವಚೋऽಬ್ರುವನ್ ॥ ೧೧ ॥

---

೭. ಬಳಿಕ ಅರ್ಜುನು ಹೊರಟುಹೋಗಲು ದ್ರೌಪದೀಸಮೇತರಾದ ಉಳಿದ ಪಾಂಡವರು ಬಹುವಾಗಿ ವ್ಯಥೆಯನ್ನು ತಾಳಿ ಆ ತಪ್ಪೋವನಲ್ಲಿಯೇ ಇರುತ್ತಿ ).

೮. ಎಲೈ ಮುನೀಂದ್ರನೇ ಕೇಳು ಆ ಪಾಂಡವರು ಹೀಗೆ ತಮ್ಮತಮ್ಮಲ್ಲಿ ಹೇಳಿಕೊಳ್ಳುತ್ತಿದ್ದರು. ಪ್ರಿಯಜನರು ಜೊತೆಯಲ್ಲಿರಲು ಎಂತಹ ದುಃಖಸಮಯದಲ್ಲಿಯೂ ಸಹ ದುಃಖವೇ ತೋರುವುದಿಲ್ಲ.

೯. ಆದರೆ ಅದೇ ಪ್ರಿಯಜನರ ವಿಯೋಗವುಂಟಾಗಲು ಒಂದಕ್ಕೆರಡರಷ್ಟು ದುಃಖವುಂಟಾಗುವುದು. ದುಃಖಸಮಯದಲ್ಲಿ ಹೇಗಾದರೂ ಧೈರ್ಯವನ್ನು ವಹಿಸಬಹುದು. ಆದರೆ ಈ ಪ್ರಿಯಜನವಿಯೋಗವುಂಟಾಗುವ ಸಮಯದಲ್ಲಿ ಹೇಗೆತಾನೆ ಧೈರ್ಯವು ದೊರೆತೀತು?

೧೦. ಓ ಸನತ್ಕುಮಾರ! ಈ ರೀತಿಯಾಗಿ ಆ ಪಾಂಡವರು ವ್ಯಸನಪಡುತ್ತಿರಲು ಕರುಣಾಸಾಗರನಾದ ವ್ಯಾಸಮಹರ್ಷಿಯು ಅಲ್ಲಿಗೆ ಬಂದನು.

೧೧. ಆ ಮಹರ್ಷಿಯನ್ನು ಕಂಡು ಆ ಪಾಂಡವರು ನಮಸ್ಕರಿಸಿ ಆದರದಿಂದ ಸತ್ಕಾರಮಾಡಿ ಪೀಠವಿತ್ತು ಕುಳ್ಳಿರಿಸಿ ಕೈಮುಗಿದುಕೊಂಡು ಈ ರೀತಿ ನುಡಿದರು.

॥ ಪಾಂಡವಾ ಊಚುಃ ॥

ಶ್ರೂಯತಾಮ್ನೃಷಭಶ್ರೇಷ್ಠ ದುಃಖದಗ್ಧಾ ವಯಂ ಪ್ರಭೋ ।
ದರ್ಶನಂ ತೇಽದ್ಯ ಸಂಪ್ರಾಪ್ಯ ಹ್ಯಾನಂದಂ ಪ್ರಾಪ್ನುಮೋ ಮುನೇ ॥ ೧೨ ॥

ಕಿಯತ್ಕಾಲಂ ವಸಾತ್ರೈವ ದುಃಖನಾಶಾಯ ನಃ ಪ್ರಭೋ ।
ದರ್ಶನಾತ್ತವ ವಿಪ್ರರ್ಷೇಸ್ಸರ್ವದುಃಖಂ ವಿಲೀಯತೇ ॥ ೧೩ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತಸ್ಸ ಋಷಿಶ್ರೇಷ್ಠೋ ನ್ಯವಸತ್ತತ್ಸುಖಾಯ ವೈ ।
ಕಥಾಭಿರ್ವಿವಿಧಾಭಿಶ್ಚ ತದ್ದುಃಖಂ ನೋದಯಂಸ್ತದಾ ॥ ೧೪ ।

ವಾರ್ತಾಯಾಂ ಕ್ರಿಯಮಾಣಾಯಾಂ ತೇನ ವ್ಯಾಸೇನ ಸನ್ಮುನೇ ।
ಸುಪ್ರಣಮ್ಯ ವಿನೀತಾತ್ಮಾ ಧರ್ಮರಾಜೋಽಬ್ರವೀದಿದಂ ॥ ೧೫ ।

---

೧೨. ಎಲೈ ಋಷಿಶ್ರೇಷ್ಠನೇ ಆಲಿಸುವವನಾಗು ನಾವು ಬಹುವಾಗಿ ದುಃಖಿತರಾಗಿರುವೆವು ಇಂದು ನಿನ್ನ ಸಂದರ್ಶನವು ದೊರೆಯಲು ಆನಂದವನ್ನು ಹೊಂದಿದೆವು

೧೩. ಎಲೈ ವಿಪ್ರರ್ಷಿಯೇ, ಕೆಲವುಕಾಲ ನಮ್ಮ ದುಃಖವು ಶಮನವಾಗುವಂತೆ ಇಲ್ಲೇ ಇರು ನಿನ್ನನ್ನು ನೋಡುತ್ತಲೇ ಎಲ್ಲ ದುಃಖವೂ ಅಡಗಿಹೋಗುವುದು.

೧೪. ಓ ಮುನೀಂದ್ರ ! ಈ ರೀತಿಯಾಗಿ ಪಾಂಡವರಿಂದ ಪ್ರಾರ್ಥಿಸಲ್ಪಟ್ಟ ಆ ವ್ಯಾಸಮುನೀಂದ್ರನು ಅವರಿಗೆ ಸುಖವುಂಟಾಗುವಂತೆ ಬಗೆಬಗೆಯಾದ ಕಥೆಗಳನ್ನು ತಿಳಿಸುತ್ತಾ ಅವರ ದುಃಖಗಳನ್ನು ಪರಿಹರಿಸಿ ಅವರೊಡನೆ ಅಲ್ಲಿಯೇ ವಾಸವಾಗಿದ್ದನು.

೧೫. ಎಲೈ ಮಹರ್ಷಿಯೇ, ಹೀಗೆ ವ್ಯಾಸಮಹರ್ಷಿಯು ಒಂದಾನೊಂದ ದಿನ ಮಾತನಾಡುತ್ತಿರುವಾಗ್ಗೆ ಧರ್ಮರಾಜನು ಆ ಮಹರ್ಷಿಗೆ ನಮಸ್ಕರಿಸಿ ವಿನಯದಿಂದ ಇಂತು ನುಡಿದನು.

॥ ಧರ್ಮರಾಜ ಉವಾಚ ॥

ಶೃಣು ತ್ವಂ ಹಿ ಋಷಿಶ್ರೇಷ್ಠ ದುಃಖಶಾಂತಿರ್ಗತಾ ಮಮ ।
ಪೃಚ್ಛಾಮಿ ತ್ವಾಂ ಮಹಾಪ್ರಾಜ್ಞ ಕಥನೀಯಂ ತ್ವಯಾ ಪ್ರಭೋ ॥ ೧೬ ॥

ಈದೃಶಂ ಚೈವ ದುಃಖಂ ಚ ಪುರಾ ಪ್ರಾಪ್ತಶ್ಚ ಕಶ್ಚನ ।
ವಯಮೇವ ಪರಂ ದುಃಖಂ ಪ್ರಾಪ್ತಾ ನೈ ನೈವ ಕಶ್ಚನ ॥ ೧೭ ॥

॥ ವ್ಯಾಸ ಉವಾಚ ॥

ರಾಜ್ಞಸ್ತು ನಲನಾಮ್ನೋ ವೈ ನಿಷಧಾಧಿಪತೇಃ ಪುರಾ ।
ಭವದ್ದುಃಖಾಧಿಕಂ ದುಃಖಂ ಜಾತಂ ತಸ್ಯ ಮಹಾತ್ಮನಃ ॥ ೧೮ ॥

ಹರಿಶ್ಚಂದ್ರಸ್ಯ ನೃಪತೇರ್ಜಾತಂ ದುಃಖಂ ಮಹತ್ತರಂ ।
ಅಕಥ್ಯಂ ತದ್ವಿಶೇಷೇಣ ಪರಶೋಕಾವಹಂ ತಥಾ ॥ ೧೯ ॥

---

೧೬. ಎಲೈ ಮಹಾಪ್ರಜ್ಞಾಶಾಲಿಯಾದ ಮುನಿಪುಂಗವನೇ, ನಾನು ಈಗ ಈ ದುಃಖವು ಶಮನವಾಗುಂತೆ ಆಶಿಸುತ್ತೇನೆ. ಆದುದರಿಂದ ನಾನು ಕೇಳುವುದನ್ನು ದಯವಿಟ್ಟು ನೀನು ತಿಳಿಸಬೇಕು.

೧೭. ಹಿಂದೆ ಯಾವನಾದರೂ ಇಂತಹ ದುಃಖವನ್ನು ಹೊಂದಿದ್ದನೆ? ನನಗೆ ತೋರುವಂತೆ ಇಂತಹ ಭಾರಿದುಃಖವನ್ನು ಹೊಂದಿದವರು ನಾನೇ ಹೊರತು ಮತ್ತಾವನೂ ಅಲ್ಲ. ಎನ್ನಲು,

೧೮. ಆಗ ವ್ಯಾಸನಿಂತೆಂದನು:— ಹಿಂದೆ ನಿಷಧದೇಶದ ಒಡೆಯನಾದ ನಲ ನೆಂಬ ಅರಸನು ನಿನ್ನ ದುಃಖಕ್ಕಿಂತಲೂ ಕಡುತರವಾದ ದುಃಖವನ್ನು ಅನುಭವಿಸಿದನು

೧೯. ಅದರಂತೆ ಹರಿಶ್ಚಂದ್ರನೆಂಬ ರಾಜನೂ ಮಿತಿಮೀರಿದ ದುಃಖವನ್ನು ಅನುಭವಿಸಿದನು. ತನ್ನ ದುಃಖವನ್ನು ವಿಶೇಷವಾಗಿ ವರ್ಣಿಸಲೇ ಬಾರದು. ಏಕೆಂದರೆ ಅದನ್ನು ಕೇಳಿದವರಿಗೂ ಸಹ ಬಹಳವಾಗಿ ದುಃಖವುಂಟಾಗುವುದು.

**ದುಃಖಂ ತಥೈವ ವಿಜ್ಞೇಯಂ ರಾಮಸ್ಯಾಪ್ಯಥ ಪಾಂಡವ ।**
**ಯಚ್ಛ್ರುತ್ವಾ ಸ್ತ್ರೀನರಾಣಾಂ ಚ ಭವೇನ್ಮೋಹೋ ಮಹತ್ತರಃ ॥ ೨೦ ॥**

**ತಸ್ಮಾದ್ವರ್ಣಯಿತುಂ ನೈವ ಶಕ್ಯತೇ ಹಿ ಮಯಾ ಪುನಃ ।**
**ಶರೀರಂ ದುಃಖರಾಶಿಂ ಚ ಮತ್ವಾ ತ್ಯಾಜ್ಯಂ ತ್ವಯಾಧುನಾ ॥ ೨೧ ॥**

**ಯೇನೇದಂ ಚ ಧೃತಂ ತೇನ ವ್ಯಾಪ್ತಮೇವ ನ ಸಂಶಯಃ ।**
**ಪ್ರಥಮಂ ಮಾತೃಗರ್ಭೇ ವೈ ಜನ್ಮ ದುಃಖಸ್ಯ ಕಾರಣಂ ॥ ೨೨ ॥**

**ಕೌಮಾರೇಽಪಿ ಮಹಾದುಃಖಂ ಬಾಲಲೀಲಾನುಸಾರಿ ಯತ್ ।**
**ತತೋಽಪಿ ಯೌವನೇ ಕಾಮಾಸ್ಸಂಜಾನೋ ದುಃಖರೂಪಿಣಃ ॥ ೨೩ ॥**

---

೨೦ ಎಲೈ ಪಾಂಡುಪುತ್ರನೇ, ಯಾವುದನ್ನು ಕಿವಿಯಾರೆ ಕೇಳಿದರೂ ಸ್ತ್ರೀಯರಿಗೂ ಪುರುಷರಿಗೂ ಮಿತಿಮೀರಿದ ಅಳುವುಂಟಾಗುವುದೋ ಅಂತಹ ದುಃಖವು ಶ್ರೀರಾಮಚಂದ್ರನಿಗೂ ತಪ್ಪಲಿಲ್ಲ ಆತನೂ ಆ ದುಃಖವನ್ನು ಅನುಭವಿಸಬೇಕಾಯಿತು

೨೧ ಆದುದರಿಂದ ಇವನ್ನು ಎಷ್ಟು ವರ್ಣಿಸಿದರೂ ನನ್ನಿಂದ ಸಾಧ್ಯವಾಗಲಾರದು ಆದ್ದರಿಂದ ನೀನೀಗ ಈ ದೇಹವೇ ದುಃಖಗಳ ತೌರುಮನೆಯೆಂದು ಭಾವಿಸಿ ಈ ದುಃಖವನ್ನು ತ್ಯಜಿಸುವುದೊಳ್ಳೆಯದು

೨೨ ಮನುಷ್ಯನು ಈ ಶರೀರವನ್ನು ಯಾವಾಗ ಆಶ್ರಯಿಸುವನೋ ಆಗ ದುಃಖಗಳು ಅವನನ್ನು ಮುತ್ತಿಕೊಂಡಿರುವುವೆಂದೇ ಖಂಡಿತವಾಗಿ ಅರಿಯಬೇಕು ಮೊತ್ತಮೊದಲಾಗಿ ತಾಯ ಬಸುರಿನಲ್ಲಿರುವಾಗಲೇ ಬಹು ದುಃಖಗಳನ್ನನುಭವಿಸಬೇಕಾಗುವುದು.

೨೩-೨೪. ಆಟಪಾಟಗಳಲ್ಲೇ ಮಗ್ನನಾಗಿರುವ ಬಾಲ್ಯದಶೆಯಲ್ಲಿಯೂ ಅಷ್ಟೆ, ಒಂದಲ್ಲ ಒಂದು ರೀತಿಯಾಗಿ ಕಡುದುಃಖವು ಇದ್ದೇ ಇರುವುದು. ಯೌವನದಲ್ಲಿಯಂತೂ ನಾವು ಪ್ರೀತಿಯಿಂದ ಹಾತೊರೆದು ಅನುಭವಿಸುವ ಕಾಮಗಳೆಲ್ಲವೂ ದುಃಖಗಳೇ ಅಲ್ಲದೆ ಮತ್ತೆ ಬೇರೆಯಲ್ಲ. ದಿನವಹಿ ನಾನಾವಿಧವಾದ ಕಾರ್ಯಭಾರಗಳಿಂದಲೂ

ಗತಾಗತೈರ್ದಿನಾನಾಂ ಹಿ ಕಾರ್ಯಭಾರೈರನೇಕಶಃ ।
ಆಯುಶ್ಚ ಕ್ಷೀಯತೇ ನಿತ್ಯಂ ನ ಜಾನಾತಿ ಹ ತತ್ಪುನಃ ॥ ೨೪ ॥

ಅಂತೇ ಚ ಮರಣಂ ಚೈವ ಮಹಾದುಃಖಮತಃ ಪರಂ ।
ನಾನಾನರಕಪೀಡಾಶ್ಚ ಭುಜ್ಯಂತೇಽಜ್ಞೈರ್ನರೈಸ್ತದಾ ॥ ೨೫ ॥

ತಸ್ಮಾದಿದಮಸತ್ಯಂ ಚ ತ್ವಂ ತು ಸತ್ಯಂ ಸಮಾಚರ ।
ಯೇನೈವ ತುಷ್ಯತೇ ಶಂಭುಸ್ತಥಾ ಕಾರ್ಯಂ ನರೇಣ ಚ ॥ ೨೬ ॥

॥ ನಂದೀಶ್ವರ ಉವಾಚ ॥

ಏವಂ ವಿವಿಧವಾರ್ತಾಭಿಃ ಕಾಲನಿರ್ಯಾಪಣಂ ತದಾ ।
ಚಕ್ರುಸ್ತೇ ಭ್ರಾತರಃ ಸರ್ವೇ ಮನೋರಥಪಥೈಃ ಪುನಃ ॥ ೨೭ ॥

ಅರ್ಜುನೋಽಪಿ ಸ್ವಯಂ ಗಚ್ಛನ್ದುರ್ಗಾದ್ರಿಷು ದೃಢವ್ರತಃ ।
ಯಕ್ಷಂ ಲಬ್ಧ್ವಾ ಚ ತೇನೈವ ದಸ್ಯೂನ್ನಿಘ್ನನ್ನನೇಕಶಃ ॥ ೨೮ ॥

---

ಅತ್ತಿತ್ತ ತಿರುಗಾಟದಿಂದಲೂ ಆಯುಸ್ಸು ಕ್ಷಯಿಸುತ್ತಲೇ ಇರುವುದು. ಆದರೂ ಇದನ್ನಾವನೂ ಅರಿಯುವದಿಲ್ಲ.

೨೫. ಕೊನೆಗೆ ಸಾವಂತೂ ತಪ್ಪಿದ್ದೇ ಅಲ್ಲ. ಅದರ ಬಳಿಕ ದುಃಖಗಳಿಗೆ ಕೊನೆ ಮೊದಲೇ ಇಲ್ಲ. ಹೀಗೆ ಅರಿಯದ ನರರು ನಾನಾವಿಧವಾದ ನರಕದುಃಖಗಳನ್ನು ಅನಂತಕಾಲ ಅನುಭವಿಸುವರು.

೨೬. ಆದುದರಿಂದ ಇವೆಲ್ಲವೂ ಅಸತ್ಯವಾದವುಗಳು, ನೀನು ಸತ್ಯವಾದುದನ್ನು ಆಚರಿಸುತ್ತಿರು. ಮನುಷ್ಯನಾದವನು ಶಿವನು ಸುಪ್ರೀತನಾಗುವಂತಹ ಕಾರ್ಯವನ್ನು ಮಾಡಬೇಕು ಎಂದನು.

೨೭. ಈ ರೀತಿಯಾಗಿ ಆ ಪಾಂಡುಪುತ್ರರು ಮುಂದೆ ಶ್ರೇಯಸ್ಸಾಗುವುದೆಂಬ ಆಶೋತ್ತರದಿಂದ ಕೂಡಿ ವಿವಿಧವಾದ ಚರಿತ್ರಶ್ರವಣಗಳಿಂದ ಕಾಲವನ್ನು ಕಳೆಯುತ್ತಾ ಬಂದರು.

೨೮. ಇತ್ತಲಾಗಿ ಅರ್ಜುನನು ಮಹಾಸಿಯುಮವನ್ನು ತಳೆದು ಅಡವಿಗಳಲ್ಲಿಯೂ ಬೆಟ್ಟಗಳಲ್ಲಿಯೂ ಸಂಚರಿಸುತ್ತಾ ಮಾರ್ಗಮಧ್ಯದಲ್ಲಿ ಯಕ್ಷನೊಬ್ಬನನ್ನು ಸಂಧಿಸಿ ಅವನ ಸಹಾಯದಿಂದ ಅನೇಕಮಂದಿ ಕಳ್ಳಕಾಕರರನ್ನು ಸದೆಬಡಿಯುತ್ತಾ,

ಮನಸಾ ಹರ್ಷಸಂಯುಕ್ತೋ ಜಗಾಮಾಚಲಮುತ್ತಮಂ ।
ತತ್ರ ಗತ್ವಾ ಚ ಗಂಗಾಯಾಸ್ಸಮೀಪಂ ಸುಂದರಂ ಸ್ಥಲಂ ॥ ೨೯ ॥

ಅಶೋಕಕಾನನಂ ಯತ್ರ ತಿಷ್ಠತಿ ಸ್ವರ್ಗ ಉತ್ತಮಃ ।
ತತ್ರ ತಸ್ಥೌ ಸ್ವಯಂ ಸ್ನಾತ್ವಾ ನತ್ವಾ ಚ ಗುರುಮುತ್ತಮಂ ॥ ೩೦ ॥

ಯಥೋಪದಿಷ್ಟಂ ವೇಷಾದಿ ತಥಾ ಚೈವಾಕರೋತ್ಸ್ವಯಂ ।
ಇಂದ್ರಿಯಾಣ್ಯಪಕೃಷ್ಯಾದೌ ಮನಸಾ ಸಂಸ್ಥಿತೋಽಭವತ್ ॥ ೩೧ ॥

ಪುನಶ್ಚ ಪಾರ್ಥಿವಂ ಕೃತ್ವಾ ಸುಂದರಂ ಸಮುಸೂತ್ರಕಂ ।
ತದಗ್ರೇ ಪ್ರಣಿದಧ್ಯೌ ಸ ತೇಜೋರಾಶಿಮನುತ್ತಮಂ ॥ ೩೨ ॥

ತ್ರಿಕಾಲಂ ಚೈವ ಸುಸ್ನಾತಃ ಪೂಜನಂ ವಿವಿಧಂ ತದಾ ।
ಚಕಾರೋಪಾಸನಂ ತತ್ರ ಹರಸ್ಯ ಚ ಪುನಃ ಪುನಃ ॥ ೩೩ ॥

---

೨೯-೩೦ ಹರ್ಷಭರಿತವಾದ ಮನಸ್ಸಿನಿಂದ ಇಂದ್ರಕೀಲಪರ್ವತಕ್ಕೆ ಬಂದನು. ಅಲ್ಲಿ ಗಂಗೆಯ ದಡದಲ್ಲಿ ರಮಣೀಯವಾದ, ಸ್ವರ್ಗದಲ್ಲೆಲ್ಲಾ ಬಹು ಶ್ರೇಷ್ಠವೆನಿಸಿದ ಅಶೋಕಕಾನನವಿರುವೆಡೆಯಲ್ಲಿ ಆಶ್ರಮವನ್ನು ಸ್ಥಾಪಿಸಿ ಇರತೊಡಗಿದನು ಅಲ್ಲಿ ಗಂಗೆಯಲ್ಲಿ ಸ್ನಾನಮಾಡಿ ಪೂಜ್ಯನಾದ ಗುರುವನ್ನು ನಮಸ್ಕರಿಸಿ,

೩೧ ಆತನು ಉಪದೇಶಮಾಡಿದ್ದಂತೆ ತಪಸ್ಸಿಗುಚಿತವಾದ ವೇಷಭೂಷಣಾದಿಗಳನ್ನು ಧರಿಸಿದನು. ಅನಂತರ ಮೊದಲು ಇಂದ್ರಿಯಗಳನ್ನು ನಿಗ್ರಹಿಸಿ ಏಕಾಗ್ರಚಿತ್ತತೆಯನ್ನು ಅವಲಂಬಿಸಿದನು

೩೨ ಅನಂತರ ಸೂತ್ರಪ್ರಮಾಣವನ್ನು ಅನುಸರಿಸಿ ಸುಂದರವಾದ ಪಾರ್ಥಿವಲಿಂಗವನ್ನು ಮಾಡಿ ಅದರಮುಂದೆ ಕುಳಿತು, ಪರಮಶ್ರೇಷ್ಠವಾದ ಆ ಮಹಾಜ್ಯೋತಿಯನ್ನು ಧ್ಯಾನಮಾಡತೊಡಗಿದನು

೩೩ ಪ್ರಾತರ್ಮಾಧ್ಯಂದಿನಸಾಯಾಹ್ನಗಳೆಂಬ ಕಾಲತ್ರಯಗಳಲ್ಲಿ ಸ್ನಾನಮಾಡಿ ಶುಚಿಯಾಗಿ ಬಗೆಬಗೆಯಾದ ಪೂಜೆಗಳನ್ನು ಮಾಡುತ್ತಾ ಶ್ರೀ ಶಂಕರನನ್ನು ಉಪಾಸನೆ ಮಾಡತೊಡಗಿದನು.

ತಸ್ಯೈವ ಶಿರಸಸ್ತೇಜೋ ನಿಸ್ಸೃತಂ ತಚ್ಚರಾಸ್ತದಾ ।
ದೃಷ್ಟ್ವಾ ಭಯಂ ಸಮಾಪನ್ನಾಃ ಪ್ರವಿಷ್ಟಶ್ಚ ಕದಾ ಹ್ಯಯಂ ॥ ೩೪ ॥

ಪುನಸ್ತೇ ಚ ವಿಚಾರ್ಯೈವಂ ಕಥನೀಯಂ ಬಿಡೌಜಸೇ ।
ಇತ್ಯುಕ್ತ್ವಾ ತು ಗತಾಸ್ತೇ ವೈ ಶಕ್ರಸ್ಯಾಂತಿಕಮಂಜಸಾ ॥ ೩೫ ॥

॥ ಚರಾ ಊಚುಃ ॥

ದೇವೋ ವಾಥ ಋಷಿರ್ಶ್ಚೈವ ಸೂರ್ಯೋ ವಾಥ ವಿಭಾವಸುಃ ।
ತಪಶ್ಚರತಿ ದೇವೇಶ ನ ಜಾನೀಮೋ ವನೇ ಚ ತಂ ॥ ೩೬ ॥

ತಸ್ಯೈವ ತೇಜಸಾ ದಗ್ಧಾ ಆಗತಾಸ್ತವ ಸನ್ನಿಧೌ ।
ನಿವೇದಿತಂ ಚರಿತ್ರಂ ತತ್ಕ್ರಿಯತಾಮುಚಿತಂ ತು ಯತ್ ॥ ೩೭ ॥

---

೩೪. ಹೀಗೆ ಇರುತ್ತಿರಲು ಆ ಅರ್ಜುನನ ಶಿರಸ್ಸಿನಿಂದ ತೇಜಸ್ಸೊಂದು ಹೊರ ಹೊಮ್ಮಿತು. ಆಗ ಅಲ್ಲಿದ್ದ ಚಾರರು ಇದನ್ನು ಕಂಡು ಇವನಾರು? ಯಾವಾಗ ಬಂದನೆಂದುಕೊಳ್ಳುತ್ತಾ ಬಹುವಾಗಿ ಭಯವನ್ನು ಹೊಂದಿದರು.

೩೫. ಆಗ ಅವರೆಲ್ಲರೂ ಇನ್ನೊಬ್ಬರು ತಮ್ಮ ತಮ್ಮಲ್ಲಿ ವಿಚಾರಮಾಡಿ ಇಂದ್ರನಿಗೆ ಈ ಸಂಗತಿಯನ್ನು ತಿಳಿಸಬೇಕೆಂದು ನಿರ್ಧರಿಸಿ ಬೇಗನೆ ಅವನಬಳಿಗೆ ಬಂದರು,

೩೬. ದೇವತೆಗಳಿಗೆಲ್ಲಾ ಒಡೆಯನಾದ ಸ್ವಾಮಿಯೇ, ಅಶೋಕಕಾನನದಲ್ಲಿ ಒಬ್ಬನು ತಪಸ್ಸುಮಾಡುತ್ತಿರುವನು. ಅವನು ದೇವತೆಯೋ, ಮುನಿಯೋ, ಸೂರ್ಯನೋ, ಅಗ್ನಿಯೋ, ಯಾರೆಂಬುದನ್ನು ನಾವರಿಯೆವು.

೩೭. ಆತನ ತೇಜಸ್ಸಿನಿಂದ ಬೆಂದುಹೋದವರಾಗಿ ನಿನ್ನ ಬಳಿಗೆ ಬಂದಿರುವೆವು ಆತನ ನಡವಳಿಕೆಯನ್ನು ತಿಳಿಸಿರುವೆವು. ಈಗ ಉಚಿತವಾದುದಾವುದೋ ಅದನ್ನು ಮಾಡೋಣವಾಗಲಿ ಎಂದು ಬಿನ್ನವಿಸಿದರು.

॥ ನಂದೀಶ್ವರ ಉವಾಚ ॥

ಇತ್ಯುಕ್ತಸ್ತೈಶ್ಚರೈಸ್ಸರ್ವಂ ಜ್ಞಾತ್ವಾ ಪುತ್ರಚಿಕೀರ್ಷಿತಂ ।
ಸಗೋತ್ರಪಾನ್ವಿಸೃಜ್ಯೈವ ತತ್ರ ಗಂತುಂ ಮನೋ ದಧೇ　　　　॥ ೩೮ ॥

ಸ ವೃದ್ಧಬ್ರಾಹ್ಮಣೋ ಭೂತ್ವಾ ಬ್ರಹ್ಮಚಾರೀ ಶಚೀಪತಿಃ ।
ಜಗಾಮ ತತ್ರ ವಿಪ್ರೇಂದ್ರ ಪರೀಕ್ಷಾರ್ಥಂ ಹಿ ತಸ್ಯ ವೈ　　　　॥ ೩೯ ॥

ತಮಾಗತಂ ತದಾ ದೃಷ್ಟ್ವಾಕಾರ್ಷೀತ್ಪೂಜಾಂ ಚ ಪಾಂಡವಃ ।
ಸ್ಥಿತೋಽಗ್ರೇ ಚ ಸ್ತುತಿಂ ಕೃತ್ವಾ ಕ್ವಾಯಾತೋಽಸಿ ವದಾಧುನಾ　　॥ ೪೦ ॥

ಇತ್ಯುಕ್ತಸ್ತೇನ ದೇವೇಶೋ ಧೈರ್ಯಾರ್ಥಂ ತಸ್ಯ ಪ್ರೀತಿತಃ ।
ಪರೀಕ್ಷಾಗರ್ವಿತಂ ವಾಕ್ಯಂ ಪಾಂಡವಂ ತಂ ತತೋಽಬ್ರವೀತ್　　॥ ೪೧ ॥

---

೩೮. ಎಲೈ ಸನತ್ಕುಮಾರನೇ, ಈ ರೀತಿಯಾಗಿ ಆ ದೂತರು ಬಿನ್ನವಿಸಲು, ಇದೆಲ್ಲವೂ ತನ್ನ ಮಗನಾದ ಅರ್ಜುನನ ಕಾರ್ಯವೆಂದು ತಿಳಿದು ಆ ಇಂದ್ರನು ತನ್ನ ಪರಿವಾರವೆಲ್ಲವನ್ನೂ ಬಿಟ್ಟು ತಾನೊಬ್ಬನೇ ಅಲ್ಲಿಗೆ ಹೋಗಬೇಕೆಂದು ಮನಸ್ಸು ಮಾಡಿ

೩೯. ಬ್ರಹ್ಮಚರ್ಯನಿರತನಾದ ವೃದ್ಧಬ್ರಾಹ್ಮಣನ ವೇಷವನ್ನು ತಾಳಿ ಆ ಅರ್ಜುನನನ್ನು ಪರೀಕ್ಷಿಸಬೇಕೆಂದು ಅಲ್ಲಿಗೆ ಹೊರಟನು

೪೦. ಆಗ ಆ ವೃದ್ಧಬ್ರಹ್ಮಚಾರಿಯು ಬಂದುದನ್ನು ಕಂಡು ಅರ್ಜುನನು ಅವನನ್ನು ಸತ್ಕರಿಸಿ, ಸ್ತೋತ್ರಮಾಡಿ, ಅವನ ಮುಂದೆ ಕುಳಿತು ಅಯ್ಯಾ, ವಿಪ್ರೋತ್ತಮನೇ, ನೀನೆಲ್ಲಿಂದ ಬಂದೆ ದಯವಿಟ್ಟು ತಿಳಿಸು ಎಂಬುದಾಗಿ ಕೇಳಿದನು.

೪೧. ಆಗಲಾ ದೇವೇಶ್ವರನು, ಆವನನ್ನು ಹುರಿದುಂಬಿಸಬೇಕೆಂದು ಬಯಸಿ, ಪ್ರೀತಿಯಿಂದ ಪರೀಕ್ಷಿಸುವ ಸಲುವಾಗಿ, ಅರ್ಜುನನ್ನು ಕುರಿತು ಹೆಮ್ಮೆಯಿಂದ ಮಾತಾಡತೊಡಗಿದನು

॥ ಬ್ರಾಹ್ಮಣ ಉವಾಚ ॥

ನವೇ ವಯಸಿ ನೈ ತಾತ ಕಿಂ ತಪಸ್ಯಸಿ ಸಾಂಪ್ರತಂ ।
ಮುಕ್ತ್ಯರ್ಥಂ ವಾ ಜಯಾರ್ಥಂ ಕಿಂ ಸರ್ವಥೈತತ್ತಪಸ್ತವ ॥ ೪೨ ॥

॥ ನಂದೀಶ್ವರ ಉವಾಚ ॥

ಇತಿ ಪೃಷ್ಟಸ್ತದಾ ತೇನ ಸರ್ವಂ ಸಂವೇದಿತಂ ಪುನಃ ।
ತಚ್ಛ್ರುತ್ವಾ ಸ ಪುನರ್ವಾಕಮುವಾಚ ಬ್ರಾಹ್ಮಣಸ್ತದಾ ॥ ೪೩ ॥

॥ ಬ್ರಾಹ್ಮಣ ಉವಾಚ ॥

ಯುಕ್ತಂ ನ ಕ್ರಿಯತೇ ವೀರ ಸುಖಂ ಪ್ರಾಪ್ತುಂ ಚ ಯತ್ತಪಃ ।
ಕ್ಷಾತ್ರಧರ್ಮೇಣ ಕ್ರಿಯತೇ ಮುಕ್ತ್ಯರ್ಥಂ ಕುರು ಸತ್ತಮ ॥ ೪೪ ॥

ಇಂದ್ರಸ್ತು ಸುಖದಾತಾ ವೈ ಮುಕ್ತಿದಾತಾ ಭವೇನ್ನ ಹಿ ।
ತಸ್ಮಾತ್ತ್ವಂ ಸರ್ವಥಾ ಶ್ರೇಷ್ಠ ಕರ್ತುಮರ್ಹಸಿ ಸತ್ತಮಃ ॥ ೪೫ ॥

---

೪೨. ಅಪ್ಪಾ, ಇದೇನು ಈ ಎಳೆಯ ವಯಸ್ಸಿನಲ್ಲಿಯೇ ತಪಸ್ಸಿಗೆ ತೊಡಗಿರುವೆ ? ಇದೇನು ಮೋಕ್ಷವನ್ನು ಪಡೆಯಲೋಸುಗವೇ ? ಇಲ್ಲವಿದ್ದರೆ ವಿಜಯವನ್ನು ಸಂಪಾದಿಸಲೋಸುಗವೇ ? ಎಂದನು.

೪೩. ಎಲೈ ಮುನಿಯೇ, ಈರೀತಿ ಬ್ರಾಹ್ಮಣನು ಪ್ರಶ್ನಿಸಲು, ಅರ್ಜುನನು ಎಲ್ಲ ಸಂಗತಿಯನ್ನೂ ತಿಳಿಸಿದನು. ಆಗ ಅದನ್ನು ಕೇಳಿದ ಆ ಬ್ರಾಹ್ಮಣನು ಮರಳಿ ಇಂತೆಂದನು.

೪೪. ಎಲೈ ವೀರನೇ, ನೀನು ಮಾಡುವ ರೀತಿಯು ಯುಕ್ತವಾದುದಲ್ಲ. ಸುಖವನ್ನು ಪಡೆಯಬೇಕೆಂದು ಕ್ಷತ್ರಧರ್ಮವನ್ನನುಸರಿಸಿ ಈರೀತಿ ತಪವೆಸಗುವುದು ಸರಿಯೇ ? ಮೋಕ್ಷಕ್ಕಾಗಿ ಬೇಕಾದರೆ ತಪಸ್ಸನ್ನು ಆಚರಿಸು.

೪೫. ಇಂದ್ರನು ಬೇಕಾದರೆ ಸುಖವನ್ನು ಕೊಡಬಹುದೇ ಹೊರತು ಮುಕ್ತಿಯನ್ನು ಕೊಡಲಾರನು. ಆದುದರಿಂದ ಎಲೈ ಶ್ರೇಷ್ಠನೇ ನೀನು ಸರಿಯಾಗಿ ತಪಸ್ಸನ್ನು ಆಚರಿಸುವುದು ಒಳ್ಳೆಯದು. ಎನ್ನಲು,

॥ ನಂದೀಶ್ವರ ಉವಾಚ ॥

ಇದಂ ತದ್ವಚನಂ ಶ್ರುತ್ವಾ ಕ್ರೋಧಂ ಚಕ್ರೇಽರ್ಜುನಸ್ತದಾ ।
ಪ್ರತ್ಯುವಾಚ ವಿನೀತಾತ್ಮಾ ತದನಾದೃತ್ಯ ಸುವ್ರತಃ ॥ ೪೬ ॥

॥ ಅರ್ಜುನ ಉವಾಚ ॥

ರಾಜ್ಯಾರ್ಥಂ ನ ಚ ಮುಕ್ತ್ಯರ್ಥಂ ಕಿಮರ್ಥಂ ಭಾಷಸೇ ತ್ವಿದಂ ।
ವ್ಯಾಸಸ್ಯ ವಚನೇನೈವ ಕ್ರಿಯತೇ ತಪ ಈದೃಶಂ ॥ ೪೭ ॥

ಇತೋ ಗಚ್ಛ ಬ್ರಹ್ಮಚಾರಿನ್ಮಾಂ ಪಾತಯಿತುಮಿಚ್ಛಸಿ ।
ಪ್ರಯೋಜನಂ ಕಿಮತ್ರಾಸ್ತಿ ತವ ವೈ ಬ್ರಹ್ಮಚಾರಿಣಃ ॥ ೪೮ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತಃ ಸ ಪ್ರಸನ್ನೋಽಭೂತ್ಸುಂದರಂ ರೂಪಮುತ್ತಮಂ ।
ಸ್ವೋಪಸ್ಕರಣಸಂಯುಕ್ತಂ ದರ್ಶಯಾಮಾಸ ವೈ ನಿಜಂ ॥ ೪೯ ॥

---

೪೬. ಈರೀತಿ ಅವನ ಮಾತನ್ನು ಕೇಳಿ ಅರ್ಜುನನಿಗೆ ಕೋಪವುಂಟಾಯಿತು. ಆಗ ಆ ವ್ರತನಿಷ್ಠನು ವಿನಯದಿಂದ ಅದನ್ನು ಅಲ್ಲವೆನ್ನುತ್ತಾ ಇಂತೆಂದನು

೪೭. ಇದೇಕೆ ಇಂತು ಮಾತಾಡುವೆ ? ನಾನು ರಾಜ್ಯದ ಸಲುವಾಗಿಯಾಗಲೀ ಮೋಕ್ಷದಸಲುವಾಗಿಯಾಗಲಿ, ತಪಸ್ಸನ್ನು ಮಾಡುತ್ತಿಲ್ಲ ವ್ಯಾಸಮಹರ್ಷಿಯ ಮಾತಿನಂತೆ ತಪಸ್ಸನ್ನು ಆಚರಿಸುತ್ತಿರುವೆನು

೪೮. ಎಲೈ ಬ್ರಹ್ಮಚಾರಿಯೆ ! ನೀನು ಇಲ್ಲಿಂದ ಹೊರಡು ನನ್ನನ್ನು ಪತಿತನನ್ನಾಗಿ ಮಾಡಬೇಕೆಂದಿರುವೆ ಬ್ರಹ್ಮಚರ್ಯನಿರತನಾದ ನಿನಗೆ ಇದರಿಂದ ಆಗುವ ಪ್ರಯೋಜನವಾದರೂ ಏನು ? ಎಂದನು.

೪೯. ಎಲೈ ಮುನಿಯೇ, ಹೀಗೆ ಅರ್ಜುನನು ನುಡಿಯಲು, ಆಗ ಇಂದ್ರನು ಪ್ರಸನ್ನನಾಗಿ ಅದ್ಭುತವೂ, ರಮಣೀಯವೂ ಆದ ತನ್ನ ನಿಜರೂಪವನ್ನು ತನ್ನೆಲ್ಲ ಇತರ ಕುರುಹುಗಳೊಡನೆ ತೋರ್ಪಡಿಸಿದನು.

ಶಕ್ರರೂಪಂ ತದಾ ದೃಷ್ಟ್ವಾ ಲಜ್ಜಿತಶ್ಚಾರ್ಜುನಸ್ತದಾ ।
ಸ ಇಂದ್ರಸ್ತಂ ಸಮಾಶ್ವಾಸ್ಯ ಪುನರೇವ ವಚೋಽಬ್ರವೀತ್ ॥ ೫೦ ॥

॥ ಇಂದ್ರ ಉವಾಚ ॥

ವರಂ ವೃಣೀಷ್ವ ಹೇ ತಾತ ಧನಂಜಯ ಮಹಾಮತೇ ।
ಯದಿಚ್ಛಸಿ ಮನೋಽಭೀಷ್ಟಂ ನಾದೇಯಂ ವಿದ್ಯತೇ ತವ ॥ ೫೧ ॥

ತಚ್ಛ್ರುತ್ವಾ ಶಕ್ರವಚನಂ ಪ್ರತ್ಯುವಾಚಾರ್ಜುನಸ್ತದಾ ।
ವಿಜಯಂ ದೇಹಿ ಮೇ ತಾತ ಶತ್ರುಕ್ಲಿಷ್ಟಸ್ಯ ಸರ್ವದಾ ॥ ೫೨ ॥

॥ ಶಕ್ರ ಉವಾಚ ॥

ಬಲಿಷ್ಠಾಶ್ಶತ್ರವಸ್ತೇ ಚ ದುರ್ಯೋಧನಪುರಃಸರಾಃ ।
ದ್ರೋಣೋ ಭೀಷ್ಮಶ್ಚ ಕರ್ಣಶ್ಚ ಸರ್ವೇ ತೇ ದುರ್ಜಯಾ ಧ್ರುವಂ ॥ ೫೩ ॥

---

೫೦. ಇಂದ್ರನ ರೂಪವನ್ನು ಕಾಣುತ್ತಲೇ ಅರ್ಜುನನು ನಾಚಿಕೆಯನ್ನು ತಾಳಲು, ಆಗ ಇಂದ್ರನು ಅವನನ್ನು ಸಂತೈಸಿ ಮತ್ತೆ ಅವನನ್ನು ಕುರಿತು ಇಂತೆಂದನು.

೫೧. ಅಪ್ಪಾ ಅರ್ಜುನನೇ ! ನಿನಗೆ ಬೇಕಾದ ವರವನ್ನು ಕೇಳಿಕೋ, ನಿನಗೆ ಕೊಡಬಾರದಂತಹುದು ಯಾವುದೂ ಇಲ್ಲ ಎಂದನು.

೫೨. ಹೀಗೆ ಇಂದ್ರನು ಹೇಳಿದುದನ್ನು ಕೇಳಿ, ಅರ್ಜುನನು, ಓ ತಂದೆಯೇ, ಶತ್ರುಗಳಿಂದ ಪೀಡಿತನಾದ ನನಗೆ ಎಲ್ಲ ರೀತಿಯಲ್ಲೂ ಗೆಲುವುಂಟಾಗುವಂತೆ ಅನುಗ್ರಹಿಸು ಎಂದು ಬೇಡಿಕೊಂಡನು.

೫೩. ಆಗ ಇಂದ್ರನು ಅವನನ್ನು ಕುರಿತು ಇಂತೆಂದನು. ದುರ್ಯೋಧನನೇ ಮೊದಲಾದ ನಿನ್ನ ಶತ್ರುಗಳು ಬಲಾಢ್ಯರಾಗಿರುವರು. ಆ ದ್ರೋಣ, ಭೀಷ್ಮ, ಕರ್ಣ ಎಲ್ಲರೂ ನಿಜವಾಗಿಯೂ ನಿನಗೆ ದುರ್ಜಯರು.

**ಅಶ್ವತ್ಥಾಮಾ ದ್ರೋಣಪುತ್ರೋ ರೌದ್ರೋಂಶೋ ದುರ್ಜಯೋಽತಿ ಸಃ ।**
**ಮಯಾಸಾಧ್ಯಾ ಭವೇಯುಸ್ತೇ ಸರ್ವಥಾ ಸ್ವಹಿತಂ ಶೃಣು ॥ ೫೪ ॥**

**ಏತದ್ವೀರ ಜಪಂ ಕರ್ತುಂ ನ ಶಕ್ತಃ ಕಶ್ಚಸಾಧುನಾ ।**
**ವರ್ತತೇ ಹಿ ಶಿವೋ ವರ್ಯಸ್ತಸ್ಮಾಚ್ಛಂಭೋರ್ಜಪೋಽಧುನಾ ॥ ೫೫ ॥**

**ಶಂಕರಃ ಸರ್ವಲೋಕೇಶಶ್ಚರಾ ರಪತಿಃ ಸ್ವರಾಟ್ ।**
**ಸರ್ವಂ ಕರ್ತುಂ ಸಮರ್ಥೋಽಸ್ತಿ ಭುಕ್ತಿಮುಕ್ತಿಫಲಪ್ರದಃ ॥ ೫೬ ॥**

**ಅಹಮನ್ಯೇ ಚ ಬ್ರಹ್ಮಾದ್ಯಾ ವಿಷ್ಣುಃ ಸರ್ವವರಪ್ರದಃ ।**
**ಅನ್ಯೇ ಜಿಗೀಷವೋ ಯೇ ಚ ತೇ ಸರ್ವೇ ಶಿವಪೂಜಕಾಃ ॥ ೫೭ ॥**

**ಅದ್ಯಪ್ರಭೃತಿ ತನ್ಮಂತ್ರಂ ಹಿತ್ವಾ ಭಕ್ತ್ಯಾ ಶಿವಂ ಭಜ ।**
**ಪಾರ್ಥಿವೇನ ವಿಧಾನೇನ ಧ್ಯಾನೇನೈವ ಶಿವಸ್ಯ ಚ ॥ ೫೮ ॥**

೫೪ ದ್ರೋಣಪುತ್ರನೂ ರುದ್ರಾವತಾರನೂ ಆದ ಆ ಅಶ್ವತ್ಥಾಮನಂತೂ ಅತೀವ ದುರ್ಜಯನು ನಾನೂ ಕೂಡ ಅವರನ್ನು ಗೆಲ್ಲಲಾರೆನು ಆದುದರಿಂದ ನಿನಗೆ ಹೇಳುವ ಈ ಹಿತವಚನವನ್ನು ಆಲಿಸು

೫೫. ಎಲೈ ವೀರಾಗ್ರಣಿಯೇ, ಈ ಜಪವನ್ನು ಮಾಡಲು ಈಗ ಯಾರಿಗೂ ಸಾಧ್ಯವಿಲ್ಲ ಶ್ರೀ ಶಂಕರನು ಸರ್ವರಿಗೂ ಶ್ರೇಷ್ಠನೆನಿಸಿ ವಿರಾಜಿಸುತ್ತಿರುವನು, ಆ ಶಂಭುವಿನ ಪ್ರೀತಿಯನ್ನು ಗಳಿಸಿಕೊಡುವಂತಹುದೇ ಈ ಜಪವು

೫೬. ಆ ಶಂಕರನು ಸಕಲ ಲೋಕಗಳಿಗೂ ಅಧಿಪತಿಯು, ಚರಾಚರಗಳಿಗೂ ಒಡೆಯನು, ಸ್ವಯಂಪ್ರಕಾಶನು, ಭೋಗಗಳನ್ನೂ, ಮೋಕ್ಷಗಳನ್ನೂ ನೀಡುವಂತಹನು ಎಲ್ಲವನ್ನೂ ಮಾಡಲು ಸಮರ್ಥನು

೫೭. ನಾನೂ, ಇತರ ಬ್ರಹ್ಮಾದಿಗಳೂ, ವರದಾಯಕನೆನಿಸಿದ ವಿಷ್ಣುವೂ, ಜಯಶಾಲಿಗಳಾಗಲಿರುವ ಇನ್ನೂ ಅನೇಕಮಂದಿ ಇತರರೂ ಎಲ್ಲರೂ ಶಿವನನ್ನು ಆರಾಧಿಸುವವರೇ

೫೮. ಇದುವರೆಗೆ ನೀನು ಜಪಿಸುತ್ತಿದ್ದ ಮಂತ್ರವನ್ನು ಇಂದಿನಿಂದ ಬಿಟ್ಟುಬಿಟ್ಟು ಭಕ್ತಿಮಾರ್ಗದಿಂದ ಶಿವನನ್ನು ಒಲಿಸು ಪಾರ್ಥಿವ ಪೂಜಾಕ್ರಮದಿಂದಲೂ ಶಿವಧ್ಯಾನದಿಂದಲೂ,

ಉಪಚಾರೈರನೇಕೈಶ್ಚ ಸರ್ವಭಾವೇನ ಭಾರತ ।
ಸಿದ್ಧಿಃ ಸ್ಯಾದಚಲಾ ತೇಽದ್ಯ ನಾತ್ರ ಕಾರ್ಯಾ ವಿಚಾರಣಾ ॥ ೫೯ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ಚ ಚರಾನ್ಸರ್ವಾನ್ಸಮಾಹೂಯಾಬ್ರವೀದಿದಂ ।
ಸಾವಧಾನೇನ ವೈ ಸ್ಥೇಯಮೇತತ್ಸಂರಕ್ಷಣೇ ಸದಾ ॥ ೬೦ ॥

ಪ್ರಬೋಧ್ಯ ಸ್ವಚರಾನಿಂದ್ರೋಽರ್ಜುನಸಂರಕ್ಷಣಾದಿಕಂ ।
ವಾತ್ಸಲ್ಯಪೂರ್ಣಹೃದಯಃ ಪುನರೂಚೇ ಕಪಿಧ್ವಜಂ ॥ ೬೧ ॥

॥ ಇಂದ್ರ ಉವಾಚ ॥

ರಾಜ್ಯಂ ತ್ವಯಾ ಪ್ರಮಾದಾದ್ವೈ ನ ಕರ್ತವ್ಯಂ ಕದಾಚನ ।
ಶ್ರೇಯಸೇ ಭದ್ರ ವಿದ್ಯೇಯಂ ಭವೇತ್ತವ ಪರಂತಪ ॥ ೬೨ ॥

---

೫೯. ಮತ್ತು ಇನ್ನೂ ನಾನಾರೀತಿಯ ಉಪಚಾರಗಳಿಂದಲೂ, ಹೆಚ್ಚೇಕೆ ಎಲ್ಲ ಬಗೆಗಳಿಂದಲೂ ಆ ಶಂಕರನನ್ನು ಆರಾಧಿಸಿದಲ್ಲಿ ನಿನಗೆ ಸ್ಥಿರವಾದ ಸಿದ್ಧಿಯು ಲಭಿಸುವುದು. ಇದರಲ್ಲಿ ಸಂಶಯವಿಲ್ಲ ಎಂದನು.

೬೦. ಓ ಸನತ್ಕುಮಾರ ! ಹೀಗೆ ಇಂದ್ರನು ಉಪದೇಶಿಸಿ, ತನ್ನ ಚಾರರನ್ನು ಕರೆದು ಈತನ ಸಂರಕ್ಷಣೆಯನ್ನು ಸರ್ವದಾ ಎಚ್ಚರಿಕೆಯಿಂದ ಮಾಡುತ್ತಿರಬೇಕೆಂಬುದಾಗಿ ಅಪ್ಪಣೆಮಾಡಿದನು.

೬೧. ಹೀಗೆ ಇಂದ್ರನು ತನ್ನಕಡೆಯ ಚಾರರಿಗೆ ಎಚ್ಚರಿಕೆಯಿತ್ತು ಮಮತೆಯಿಂದ ಹೃದಯವು ತುಂಬಿಬರಲು ಮತ್ತೆ ಅರ್ಜುನನ್ನು ಕುರಿತು ಈರೀತಿ ನುಡಿದನು.

೬೨. ಎಲೈ ಶತ್ರುಂಜಯನೇ, ಮಂಗಳಾಂಗನೇ, ನೀನೆಂದಿಗಾದರೂ ಪ್ರಮಾದಕ್ಕೆ ಸಿಲುಕಿ ರಾಜ್ಯವನ್ನು ಆಳೀಯೆ ? ನಿನಗೆ ಈತ್ತ ಈ ಉಪದೇಶವು ಎಂದೆಂದಿಗೂ ಶ್ರೇಯಸ್ಸನ್ನೇ ಉಂಟುಮಾಡುವುದು.

ಧೈರ್ಯಂ ಧಾರ್ಯಂ ಸಾಧಕೇನ ಸರ್ವಥಾ ರಕ್ಷಕಃ ಶಿವಃ ।
ಸಂಪತ್ತೀಶ್ಚ ಫಲಂ ತುಲ್ಯಂ ದಾಸ್ಯತೇ ನಾತ್ರ ಸಂಶಯಃ ॥ ೬೩ ॥

॥ ನಂದೀಶ್ವರ ಉವಾಚ ॥

ಇತಿ ದತ್ವಾ ವರಂ ತಸ್ಯ ಭಾರತಸ್ಯ ಸುರೇಶ್ವರಃ ।
ಸ್ಮರಞ್ಛಿವಪದಾಂಭೋಜಂ ಜಗಾಮ ಭವನಂ ಸ್ವಕಂ ॥ ೬೪ ॥

ಅರ್ಜುನೋಽಪಿ ಮಹಾವೀರಸ್ಸಂಪ್ರಣಮ್ಯ ಸುರೇಶ್ವರಂ ।
ತಪಸ್ತೇಪೇ ಸಂಯತಾತ್ಮಾ ಶಿವಮುದ್ದಿಶ್ಯ ತದ್ವಿಧಂ ॥ ೬೫ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಕಿರಾತಾವತಾರವರ್ಣನಪ್ರಸಂಗೇಽರ್ಜುನತಪೋವರ್ಣನಂ ನಾಮ
ಅಷ್ಟತ್ರಿಂಶೋಽಧ್ಯಾಯಃ

---

೬೩ ಸಾಧನಮಾರ್ಗದಲ್ಲಿ ತೊಡಗಿರುವವನು ಯಾವಾಗಲೂ ಧೈರ್ಯವನ್ನವಲಂಬಿಸಿರಬೇಕು. ಶ್ರೀ ಶಂಕರನು ಎಲ್ಲ ಬಗೆಯಿಂದಲೂ ಸಂರಕ್ಷಿಸುವನು. ಆತನು ಖಂಡಿತನಾಗಿಯೂ, ಅನೇಕ ಸಂಪದಗಳನ್ನೂ ತಪಸ್ಸಿಗೆ ತಕ್ಕ ಫಲವನ್ನೂ ಇತ್ತೇ ಈಯುವನು ಇದರಲ್ಲಿ ಸಂಶಯವಿಲ್ಲ

೬೪. ಎಲೈ ಸನತ್ಕುಮಾರಮುನಿಯೇ, ಹೀಗೆ ಆ ದೇವೇಂದ್ರನು ಭರತವಂಶೋತ್ಪನ್ನನಾದ ಆ ಅರ್ಜುನನಿಗೆ ವರವನ್ನಿತ್ತು, ಶಿವನ ಚರಣಕಮಲಗಳನ್ನು ನೆನೆಯುತ್ತಾ ತನ್ನ ಮನೆಗೆ ಹೊರಟುಹೋದನು.

೬೫ ಇತ್ತಲಾಗಿ ವೀರವರನಾದ ಅರ್ಜುನನು ಇಂದ್ರನಿಗೆ ನಮಸ್ಕರಿಸಿ, ದೃಢವಾದ ಮನಸ್ಸಿನಿಂದ, ಶಿವನನ್ನು ಕುರಿತು ಇಂದ್ರನು ಹೇಳಿದಂತೆ ತಪಸ್ಸು ಮಾಡತೊಡಗಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಅರ್ಜುನತಪೋವರ್ಣನವೆಂಬ ಮೂವತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಏಕೋನಚತ್ವಾರಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಸ್ನಾನಂ ಸ ವಿಧಿವತ್ಕೃತ್ವಾ ನ್ಯಾಸಾದಿ ವಿಧಿವತ್ತಥಾ ।
ಧ್ಯಾನಂ ಶಿವಸ್ಯ ಸದ್ಭಕ್ತ್ಯಾ ವ್ಯಾಸೋಕ್ತಂ ಯತ್ತಥಾಽಕರೋತ್ ॥ ೧ ॥

ಏಕಪಾದತಲೇನೈವ ತಿಷ್ಠನ್ಮುನಿವರೋ ಯಥಾ ।
ಸೂರ್ಯೇ ದೃಷ್ಟಿಂ ನಿಬಧ್ಯೈಕಾಂ ಮಂತ್ರಮಾವರ್ತಯನ್ಸ್ಥಿತಃ ॥ ೨ ॥

---

## ಮೂವತ್ತೊಂಭತ್ತನೆಯ ಅಧ್ಯಾಯವು

೧. ಓ ಮುನೀಂದ್ರ ! ಬಳಿಕ ಅರ್ಜುನನು ವಿಧಿಪೂರ್ವಕವಾಗಿ ಸ್ನಾನವನ್ನು ಮಾಡಿ, ವಿಧ್ಯುಕ್ತರೀತಿಯಲ್ಲಿ ನ್ಯಾಸಾದಿಗಳನ್ನು ಮಾಡಿಕೊಂಡು, ವ್ಯಾಸನು ಉಪದೇಶಿಸಿದ್ದಂತೆ ಭಕ್ತಿಯಿಂದ ಶ್ರೀ ಶಂಕರರನ್ನು ಧ್ಯಾನಮಾಡಿದನು.

೨. ಪಳಗಿದ ಮುನಿವರ್ಯನಂತೆ, ನೆಲದಮೇಲೆ ಒಂದು ಕಾಲನ್ನುಮಾತ್ರ ಊರಿನಿಂತು, ಅತ್ತಿತ್ತ ಅಲುಗದಂತೆ ಸೂರ್ಯನಲ್ಲಿಯೇ ನೆಟ್ಟದೃಷ್ಟಿಯಿಟ್ಟು ಮಂತ್ರವನ್ನು ಪುನಶ್ಚರಣಮಾಡುತ್ತಾ ನಿಂತನು.

ತಪಸ್ತೇಪೇತಿ ಸಂಪ್ರೀತ್ಯಾ ಸಂಸ್ಮರನ್ಮನಸಾ ಶಿವಂ ।
ಪಂಚಾಕ್ಷರಂ ಮನುಂ ಶಂಭೋರ್ಜಪನ್ಸರ್ವೋತ್ತಮೋತ್ತಮಂ ॥ ೩ ॥

ತಪಸಸ್ತೇಜ ಏವಾಸೀದ್ವ್ಯಥಾ ದೇವಾ ವಿಸಿಸ್ಮಿಯುಃ ।
ಪುನಶ್ಚೈವ ಶಿವಂ ಯಾತಾಃ ಪ್ರತ್ಯೂಚುಸ್ತೇ ಸಮಾಹಿತಾಃ ॥ ೪ ॥

॥ ದೇವಾ ಊಚುಃ ॥

ನರೇಣೈಕೇನ ಸರ್ವೇಶ ತ್ವದರ್ಥೇ ತಪ ಆಹಿತಂ ।
ಯದಿಚ್ಛತಿ ನರಃ ಸೋಽಯಂ ಕಿನ್ನ ಯಚ್ಛತಿ ತತ್ಪ್ರಭೋ ॥ ೫ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ತು ಸ್ತುತಿಂ ಚಕ್ರುರ್ವಿವಿಧಾಂ ತೇ ತದಾ ಸುರಾಃ ।
ತತ್ಪಾದಯೋರ್ದೃಶಃ ಕೃತ್ವಾ ತತ್ರ ತಸ್ಥುಃ ಸ್ಥಿರಾಧಯಃ ॥ ೬ ॥

---

೩. ಈರೀತಿಯಾಗಿ, ಮನಸ್ಸಿನಲ್ಲಿ ಶಿವನನ್ನು ನೆನೆಯುತ್ತಾ, ಬಾಯಲ್ಲಿ ಉತ್ತಮವಾದ ಮಂತ್ರಗಳಲ್ಲೆಲ್ಲಾ ಉತ್ತಮವೆನಿಸಿದ ಶಿವಪಂಚಾಕ್ಷರಮಹಾಮಂತ್ರವನ್ನು ಜಪಿಸುತ್ತಾ ಅತಿ ಪ್ರೀತಿಯಿಂದ ತಪಸ್ಸನ್ನು ಮಾಡಿದನು.

೪ ಆಗ ದೇವತೆಗಳೆಲ್ಲರೂ ಆಶ್ಚರ್ಯಪಡುವಂತೆ ಆ ತಪಸ್ಸಿನ ತೇಜಸ್ಸು ಹಬ್ಬಿತು. ಆಗ ಅವರೆಲ್ಲರೂ ಮರಳಿ ಶಿವನಬಳಿ ಬಂದು ಭಯಭಕ್ತಿಯಿಂದ ಇಂತು ಬಿನ್ನವಿಸಿದರು.

೫. ಹೇ ಸರ್ವೇಶ್ವರ! ಯಾವನೋ ಮನುಜನೊಬ್ಬನು ನಿನ್ನನ್ನು ಕುರಿತು ತಪಸ್ಸುಮಾಡುತ್ತಿರುವನು. ಎಲೈ ಪ್ರಭುವೇ, ಆ ಮನುಜನು ಏನಪೇಕ್ಷಿಸುವನೋ ಅದನ್ನೇತಕ್ಕೆ ಕೊಡದಿರುವೆ ? ಎಂದರು.

೬. ಎಲೈ ಮುನೀಂದ್ರನೇ, ಹೀಗೆ ಹೇಳಿ ದುಃಖಿತರಾದ ಆ ದೇವತೆಗಳೆಲ್ಲರೂ ಬಗೆಬಗೆಯಾಗಿ ಸ್ತೋತ್ರಮಾಡಿ ಆತನ ಪಾದಗಳಲ್ಲಿಯೇ ನೆಟ್ಟ ದೃಷ್ಟಿಯುಳ್ಳವನಾಗಿ ನಿಂತರು.

ಶಿವಸ್ತು ತದ್ವಚಃ ಶ್ರುತ್ವಾ ಮಹಾಪ್ರಭುರುದಾರಧೀಃ ।
ಸುವಿಹಸ್ಯ ಪ್ರಸನ್ನಾತ್ಮಾ ಸುರಾನ್ವಚನಮಬ್ರವೀತ್ ॥ ೭ ॥

॥ ಶಿವ ಉವಾಚ ॥

ಸ್ವಸ್ಥಾನಂ ಗಚ್ಛತ ಸುರಾಃ ಸರ್ವೇ ಸತ್ಯಂ ನಸಂಶಯಃ ।
ಸರ್ವಥಾಹಂ ಕರಿಷ್ಯಾಮಿ ಕಾರ್ಯಂ ವೋ ನಾತ್ರ ಸಂಶಯಃ ॥ ೮ ॥

॥ ನಂದೀಶ್ವರ ಉವಾಚ ॥

ತಚ್ಛ್ರುತ್ವಾ ಶಂಭುವಚನಂ ನಿಶ್ಚಯಂ ಪರಮಂ ಗತಾಃ ।
ಪರಾವೃತ್ಯ ಗತಾ ಸರ್ವೇ ಸ್ವಸ್ಥಾನಂ ತೇ ಹಿ ನಿರ್ಜರಾಃ ॥ ೯ ॥

ಏತಸ್ಮಿನ್ನಂತರೇ ದೈತ್ಯೋ ಮೂಕನಾಮಾಗತಸ್ತದಾ ।
ಸೌಕರಂ ರೂಪಮಾಸ್ಥಾಯ ಪ್ರೇಷಿತಶ್ಚ ದುರಾತ್ಮನಾ ॥ ೧೦ ॥

ದುರ್ಯೋಧನೇನ ವಿಪ್ರೇಂದ್ರ ಮಾಯಿನಾ ಚಾರ್ಜುನಂ ತದಾ ।
ಯತ್ರಾರ್ಜುನಸ್ಥಿತಶ್ಚಾಸೀತ್ತೇನ ಮಾರ್ಗೇಣ ವೈ ತದಾ ॥ ೧೧ ॥

---

೭. ಮಹಾಪ್ರಭುವೂ ಔದಾರ್ಯಶಾಲಿಯೂ ಆದ ಆ ಶಂಕರನು ಅವರ ಮಾತನ್ನು ಕೇಳಿ ಪ್ರಸನ್ನನಾಗಿ ನಸುನಕ್ಕು ಆ ದೇವತೆಗಳನಿಂತೆಂದನು.

೮. ಎಲೈ ದೇವತೆಗಳಿರಾ, ನೀವೆಲ್ಲರೂ ನಿಮ್ಮ ನಿಮ್ಮ ನೆಲೆಗಳಿಗೆ ತೆರಳಿರಿ. ಸಂದೇಹಪಡಬೇಡಿ. ಖಂಡಿತವಾಗಿಯೂ ನಿಮ್ಮ ಕೆಲಸವನ್ನು ಮಾಡಿಕೊಡುವೆನು.

೯. ಹೀಗೆ ಶಿವನು ಹೇಳಿದುದನ್ನು ಕೇಳಿ, ಆ ದೇವತೆಗಳೆಲ್ಲರೂ ಮನಸ್ಸಿನಲ್ಲಿ ನಿಶ್ಚಯವನ್ನು ತಳೆದು ಅಲ್ಲಿಂದ ತಮ್ಮ ತಮ್ಮ ನಿವಾಸಗಳಿಗೆ ಹಿಂದಿರುಗಿದರು.

೧೦,೧೧. ಎಲೈ ಬ್ರಾಹ್ಮಣಶ್ರೇಷ್ಠನೇ, ಇಷ್ಟರಲ್ಲಿ ಮೋಸಗಾರನೂ, ದುಷ್ಟನೂ ಆದ ದುರ್ಯೋಧನನು, ಅರ್ಜುನನು ಇರುವೆಡೆಯಲ್ಲಿಗೆ ಅವನು ಹೋದ ದಾರಿಯನ್ನೇ ಹಿಡಿದು ಹೋಗುವಂತೆ ನಿಯಮಿಸಿ ಮೂಕನೆಂಬ ರಾಕ್ಷಸನನ್ನು ಕಳುಹಿಸಿದನು. ಆ ಮೂಕದಾನವನು ಅವನ ಮಾತಿನಂತೆ ಆ ದಾರಿಯನ್ನೇ ಹಿಡಿದು ಕಾಡುಹಂದಿಯ ವೇಷವನ್ನು ತಾಳಿ ಅರ್ಜುನನಿರುವೆಡೆಯಲ್ಲಿಗೆ ಬಂದನು.

ಶೃಂಗಾಣಿ ಪರ್ವತಸ್ಯೈವ ಛಿಂದನ್ವೃಕ್ಷಾನನೇಕಶಃ ।
ಶಬ್ದಂ ಚ ವಿವಿಧಂ ಕುರ್ವನ್ನತಿವೇಗೇನ ಸಂಯುತಃ ॥ ೧೨ ॥

ಅರ್ಜುನೋಽಪಿ ಚ ತಂ ದೃಷ್ಟ್ವಾ ಮೂಕನಾಮಾಸುರಂ ತದಾ ।
ಸ್ಮೃತ್ವಾ ಶಿವಪದಾಂಭೋಜಂ ವಿಚಾರೇ ತತ್ಪರೋಽಭವತ್ ॥ ೧೩ ॥

॥ ಅರ್ಜುನ ಉವಾಚ ॥

ಕೋಽಯಂ ವಾ ಕುತ ಆಯಾತಿ ಕ್ರೂರಕರ್ಮಾ ಚ ದೃಶ್ಯತೇ ।
ಮಮಾನಿಷ್ಟಂ ಧ್ರುವಂ ಕರ್ತುಂ ಸಮಾಗಚ್ಛತ್ಯಸಂಶಯಂ ॥ ೧೪ ॥

ಮನ್ಯೇವಂ ಮನ ಆಯಾತಿ ಶತ್ರುರೇವ ನ ಸಂಶಯಃ ।
ಮಯಾ ವಿನಿಹತಾಃ ಪೂರ್ವಮನೇಕೇ ದೈತ್ಯದಾನವಾಃ ॥ ೧೫ ॥

---

೧೨. ಆ ಮಾಯಾಸೂಕರವು ಪರ್ವತದ ಕೋಡುಗಳನ್ನೂ ಅನೇಕ ಮರಗಿಡಗಳನ್ನೂ ಮುಸುಡಿಯಿಂದ ಗುದ್ದಿ ಗುದ್ದಿ ಕತ್ತರಿಸಿಕೆಡಹುತ್ತಾ ನಾನಾವಿಧವಾಗಿ ಗುರುಗುಟ್ಟುತ್ತಾ ಬಹುಬೇಗದಿಂದ ನುಗ್ಗಿಬಂದಿತು.

೧೩. ಆಗ ಆ ಮೂಕದಾನವನು ಬರುತ್ತಿರುವುದನ್ನು ಅರ್ಜುನನೂ ಕಂಡು ಶಿವನ ಅಡಿದಾವರೆಗಳನ್ನು ನೆನೆದು ಈರೀತಿ ಮನದೊಳಗೆ ಆಲೋಚಿಸುತೊಡಗಿದನು.

೧೪. ಇವನು ಯಾರು? ಎಲ್ಲಿಂದ ಬರುತ್ತಿರುವನು? ನೋಡಿದರೆ ಬಹಳ ಕ್ರೂರನೆಂದೂ ತೋರುವನು. ಖಂಡಿತವಾಗಿಯೂ ಇವನು ನನಗೆ ಕೇಡನ್ನು ಮಾಡಬೇಕೆಂದೇ ಬರುತ್ತಿರುವನು.

೧೫. ನನ್ನ ಮನಸ್ಸಿನಲ್ಲಿ ಖಂಡಿತವಾಗಿಯೂ ಇವನು ಶತ್ರುವೆಂದೇ ತೋರುತ್ತಿದೆ. ಇದಕ್ಕೆ ಮೊದಲು ನಾನು ಎಷ್ಟೋ ಮಂದಿ ದೈತ್ಯರನ್ನೂ, ದಾನವರನ್ನೂ ಕೊಂದು ಕೆಡಹಿರುವೆನು.

ತದೀಯಃ ಕಶ್ಚಿದಾಯಾತಿ ವೈರಂ ಸಾಧಯಿತುಂ ಪುನಃ ।
ಅಥವಾ ಚ ಸಖಾ ಕಶ್ಚಿದ್ದುರ್ಯೋಧನಹಿತಾವಹಃ ॥ ೧೬ ॥

ಯಸ್ಮಿನ್ದೃಷ್ಟೇ ಪ್ರಸೀದೇತ್ತ್ವಂ ಮನಃ ಸ ಹಿತಕೃದ್ಧ್ರುವಂ ।
ಯಸ್ಮಿನ್ದೃಷ್ಟೇ ತದೇವ ಸ್ಯಾದಾಕುಲಂ ಶತ್ರುರೇವ ಸಃ ॥ ೧೭ ॥

ಆಚಾರಃ ಕುಲಮಾಖ್ಯಾತಿ ವಪುರಾಖ್ಯಾತಿ ಭೋಜನಂ ।
ವಚನಂ ಶ್ರುತಮಾಖ್ಯಾತಿ ಸ್ನೇಹಮಾಖ್ಯಾತಿ ಲೋಚನಂ ॥ ೧೮ ॥

ಆಕಾರೇಣ ತಥಾ ಗತ್ಯಾ ಚೇಷ್ಟಯಾ ಭಾಷಿತೈರಪಿ ।
ನೇತ್ರವಕ್ತ್ರವಿಕಾರಾಭ್ಯಾಂ ಜ್ಞಾಯತೇಽಂತರ್ಹಿತಂ ಮನಃ ॥ ೧೯ ॥

---

೧೬. ಅವರ ಕಡೆಯವನಾವನಾದರೂ ಹಿಂದಿನ ಆ ವೈರವನ್ನು ಸಾಧಿಸಲು ಮರಳಿ ಬರುತ್ತಿರುವನೋ ? ಇಲ್ಲವೇ ದುರ್ಯೋಧನನಿಗೆ ಆಪ್ತನಾದವನಾರಾದರೂ ಅವನಿಗೆ ಹಿತವನ್ನುಂಟುಮಾಡಬೇಕೆಂದೆಳಸಿ ಬರುತ್ತಿರುವನೋ ?

೧೭. ಯಾವನನ್ನು ಕಾಣಲು ನಮ್ಮ ಮನಸ್ಸು ಪ್ರಸನ್ನತೆಯನ್ನು ಹೊಂದುವುದೋ ಅವನು ಖಂಡಿತವಾಗಿಯೂ ನಮಗೆ ಹಿತವನ್ನೇ ಕೋರುವನು. ಅದೇ ಮನಸ್ಸು ಇನ್ನಾವನನ್ನಾದರೂ ಕಂಡಾಗ ಕಳವಳಕ್ಕೀಡಾದಲ್ಲಿ ಆ ಮನುಷ್ಯನು ನಿಜವಾಗಿಯೂ ನಮಗೆ ಕೇಡನ್ನೆಣಿಸುವ ಶತ್ರುವೆಂದೇ ಬಗೆಯಬೇಕು.

೧೮. ಮನುಷ್ಯನ ಶೀಲವು ( ನಡತೆಯು ) ಅವನ ವಂಶವನ್ನು ಹೇಳುವುದು. ಶರೀರಪುಷ್ಟಿಯು ಭೋಜನವನ್ನು ವಿವರಿಸುವುದು. ಮಾತು ಮನುಷ್ಯನ ತಿಳಿವಳಿಕೆಯನ್ನು ತೋರಿಸುವುದು. ನೋಟವು ಸ್ನೇಹವನ್ನು ಬಣ್ಣಿಸುವುದು.

೧೯. ಆಕಾರದಿಂದಲೂ, ನಡಿಗೆಯಿಂದಲೂ, ಚಲನವಲನದಿಂದಲೂ, ಮಾತುಗಳಿಂದಲೂ, ಕಣ್ಣು ಮುಖಗಳ ಇಂಗಿಂತದಿಂದಲೂ, ಮನುಷ್ಯನ ಮನಸ್ಸಿನ ಇಂಗಿತವು ಗೋಚರವಾಗುವುದು.

ಉಜ್ಜ್ವಲಂ ಸರಸಂ ಚೈವ ವಕ್ರಮಾರಕ್ತಕಂ ತಥಾ ।
ನೇತ್ರಂ ಚತುರ್ವಿಧಂ ಪ್ರೋಕ್ತಂ ತಸ್ಯ ಭಾವಂ ಪೃಥಗ್ಪೃಥಾಃ ॥ ೨೦ ॥

ಉಜ್ಜ್ವಲಂ ಮಿತ್ರಸಂಯೋಗೇ ಸರಸಂ ಪುತ್ರದರ್ಶನೇ ।
ವಕ್ರಂ ಚ ಕಾಮಿನೀಯೋಗೇ ಆರಕ್ತಂ ಶತ್ರುದರ್ಶನೇ ॥ ೨೧ ॥

ಅಸ್ಮಿನ್ನಮು ತು ಸರ್ವಾಣಿ ಕಲುಷಾನೀಂದ್ರಿಯಾಣಿ ಚ ।
ಅಯಂ ಶತ್ರುರ್ಭವೇದೇವ ಮಾರಣೀಯೋ ನ ಸಂಶಯಃ ॥ ೨೨ ॥

ಗುರೋಶ್ಚ ವಚನಂ ಮೇಽದ್ಯ ವರ್ತತೇ ದುಃಖದಸ್ತ್ವಯಾ ।
ಹಂತವ್ಯಃ ಸರ್ವಥಾ ರಾಜನ್ನಾತ್ರ ಕಾರ್ಯಾ ವಿಚಾರಣಾ ॥ ೨೩ ॥

---

೨೦. ತಿಳಿದವರಾದ ವಿದ್ವಾಂಸರು ಹೊಳೆಯುತ್ತಿರುವುದು, ಸೌವ್ಯವಾದುದು ಕುಟಿಲವಾದುದು, ಕೆಂಪೇರಿರುವುದು, ಎಂದು ನಾಲ್ಕುಬಗೆಯಾಗಿ ಕಣ್ಣಿನ ದೃಷ್ಟಿಯನ್ನು ವಿಭಾಗಮಾಡಿ ಒಂದೊಂದರ ಅಭಿಪ್ರಾಯವನ್ನು ಬೇರೆಬೇರೆ ವಿವರಿಸುವರು.

೨೧. ಮಿತ್ರರನ್ನು ಸಂದರ್ಶಿಸುವಾಗ ಕಣ್ಣು ಉಜ್ಜ್ವಲವಾಗುವುದು. ಮಕ್ಕಳನ್ನು ಕಂಡಾಗ ಅದು ಆರ್ದ್ರವಾಗುವುದು. ಪ್ರಿಯಾಂಗನೆಯ ಸಮಾಗಮವಾದಾಗ ಕೊಂಕಾಗುವುದು. ಶತ್ರುವು ಎದುರಾದಾಗ ಅದು ಕೆಂಪೇರುವುದು.

೨೨. ಇವನನ್ನು ಕಾಣುತ್ತಲೇ ನನ್ನ ಇಂದ್ರಿಯಗಳೆಲ್ಲವೂ ಕನಡಿನಂತಾಗಿವೆ. ಆದುದರಿಂದ ಇವನು ಖಂಡಿತವಾಗಿಯೂ ನನಗೆ ಶತ್ರುವೇ ಆಗಿರಬೇಕು. ಇವನು ನಿಜವಾಗಿಯೂ ವಧಾರ್ಹನೇ ಸರಿ.

೨೩. ನಿನ್ನನ್ನು ತೊಂದರೆಗೆ ಗುರಿಪಡಿಸುವವನನ್ನು ಖಂಡಿತವಾಗಿಯೂ ಬಿಟ್ಟು ಬಿಡದೆ ಕೊಂದು ಕೆಡಹು ಎಂಬುದಾಗಿ ನನ್ನ ಗುರುವು ಹೇಳಿರುವನು. ಆದುದರಿಂದ ಇನ್ನು ನಾನು ಹಿಂದುಮುಂದು ನೋಡಬೇಕಾಗಿಲ್ಲ.

ಏತದರ್ಥಂ ತ್ವಾಯುಧಾನಿ ಮಮ ಚೈವ ನ ಸಂಶಯಃ ।
ವಿಚಾರ್ಯೇತಿ ಚ ತತ್ರೈವ ಬಾಣಂ ಸಂಸ್ಥಾಯ ಸಂಸ್ಥಿತಃ ॥ ೨೪ ॥

ಏತಸ್ಮಿನ್ನಂತರೇ ತತ್ರ ರಕ್ಷಾರ್ಥಂ ಹ್ಯರ್ಜುನಸ್ಯ ವೈ ।
ತದ್ಭಕ್ತೇಶ್ಚ ಪರೀಕ್ಷಾರ್ಥಂ ಶಂಕರೋ ಭಕ್ತವತ್ಸಲಃ ॥ ೨೫ ॥

ವಿದಗ್ಧಭಿಲ್ಲರೂಪಂ ಹಿ ಗಣೈಃ ಸಾರ್ಧಂ ಮಹಾದ್ಭುತಂ ।
ತಸ್ಯ ದೈತ್ಯಸ್ಯ ನಾಶಾರ್ಥಂ ದ್ರುತಂ ಕೃತ್ವಾ ಸಮಾಗತಃ ॥ ೨೬ ॥

ಬದ್ಧಕಚ್ಛಶ್ಚ ಬಸ್ತ್ರೀಭಿರ್ಬದ್ಧೇಶಾನಧ್ವಜಸ್ತದಾ ।
ಶರೀರೇ ಶ್ವೇತರೇಖಾಶ್ಚ ಧನುರ್ಬಾಣಯುತಃ ಸ್ವಯಂ ॥ ೨೭ ॥

---

೨೪. ಇದರ ಸಲುವಾಗಿಯೇ ನಾನು ಈ ಆಯುಧಗಳನ್ನು ಧರಿಸಿರುವುದು. ಹೀಗೆಂದು ಅರ್ಜುನನು ತನ್ನೊಳಗೆ ಆಲೋಚಿಸಿ ಬಾಣವನ್ನು ಬಿಲ್ಲಿಗೆ ಹೂಡಿ ಸಿದ್ಧನಾಗಿ ನಿಂತನು.

೨೫-೨೬. ಇಷ್ಟರಲ್ಲಿ ಅರ್ಜುನನಿಗೆ ಒದಗಿದ ಈ ವಿಪತ್ತಿನಿಂದ ಅವನನ್ನು ಸಲಹಬೇಕೆಂತಲೂ ಅವನ ಭಕ್ತಿಯನ್ನು ಪರೀಕ್ಷಿಸಬೇಕೆಂತಲೂ ನಿಶ್ಚಯಿಸಿ ಭಕ್ತವತ್ಸಲನಾದ ಶಂಕರನು ಚತುರನಾದ ಭಿಲ್ಲನೊಬ್ಬನ ವೇಷವನ್ನು ತಾಳಿ, ತನ್ನಂತೆ ಸಮಾನವೇಷವುಳ್ಳ ಗಣಗಳೊಡಗೂಡಿ ಆ ಮೂಕದಾನವನನ್ನು ಕೊಲ್ಲಲೋಸುಗ ಬೇಗನೆ ಬಂದನು.

೨೭-೩೮. ಆ ಭಿಲ್ಲನು ಪೀರಗಚ್ಚೆಯನ್ನು ಹಾಕಿದ್ದನು. ಶಿವನ ಚಿತ್ರವುಳ್ಳ ಬಟ್ಟೆಗಳನ್ನು ಕಟ್ಟಿದ ಧ್ವಜಗಳನ್ನು ಧರಿಸಿದ್ದನು. ಮೈಮೇಲೆಲ್ಲಾ ಬಿಳಿಯಬಣ್ಣದ ಗೆರೆಗಳನ್ನು ಬಳಿದುಕೊಂಡಿದ್ದನು. ಕೈಲಿ ಬಿಲ್ಲು ಬಾಣಗಳನ್ನೂ, ಬೆನ್ನಿನಮೇಲೆ ಬತ್ತಳಿಕೆಯನ್ನು ಧರಿಸಿದ್ದನು. ಈ ರೀತಿ ಬಂದ ಆ ಭಿಲ್ಲನ ಅನುಯಾಯಿಗಳಾದ

ಬಾಣಾನಾಂ ತೂಣಕಂ ಪೃಷ್ಠೇ ಧೃತ್ವಾ ವೈ ಸ ಜಗಾಮ ಹ ।
ಗಣಶ್ಚೈವ ತಥಾ ಜಾತೋ ಭಿಲ್ಲರಾಜೋಽಭವಚ್ಛಿವಃ ॥ ೨೮ ॥

ಶಬ್ದಾಂಶ್ಚ ವಿವಿಧಾನ್ಕೃತ್ವಾ ನಿರ್ಯಯೌ ವಾಹಿನೀಪತಿಃ ।
ಶೂಕರಸ್ಯ ಸಸಾರಾಥ ಶಬ್ದಶ್ಚ ಪ್ರದಿಶೋ ದಶ ॥ ೨೯ ॥

ವನೇಚರೇಣ ಶಬ್ದೇನ ವ್ಯಾಕುಲಶ್ಚಾರ್ಜುನಸ್ತದಾ ।
ಪರ್ವತಾದ್ಯಾಶ್ಚ ತೈಶ್ಶಬ್ದೈಸ್ತೇ ಸರ್ವೇ ವ್ಯಾಕುಲಾಸ್ತದಾ ॥ ೩೦ ॥

ಅಹೋ ಕಿಂ ನು ಭವೇದೇಹ ಶಿವಃ ಶುಭಕರಸ್ತ್ವಿಹ ।
ಮಯಾ ಚೈವ ಶ್ರುತಂ ಪೂರ್ವಂ ಕೃಷ್ಣೇನ ಕಥಿತಂ ಪುನಃ ॥ ೩೧ ॥

ವ್ಯಾಸೇನ ಕಥಿತಂ ಚೈವ ಸ್ಮೃತ್ವಾ ದೇವೈಸ್ತಥಾ ಪುನಃ ।
ಶಿವಃ ಶುಭಕರಃ ಪ್ರೋಕ್ತಃ ಶಿವಃ ಸುಖಕರಸ್ತಥಾ ॥ ೩೨ ॥

---

ಗಣಗಳೆಲ್ಲರೂ ಅದೇ ರೀತಿ ವೇಷಗಳನ್ನು ತಳೆದಿದ್ದರು ಆ ಶಿವನು ಆ ಭಿಲ್ಲರಿಗೆ ಒಡೆಯನಾಗಿದ್ದನು

೨೯ ಆ ಭಿಲ್ಲರೊಡೆಯನು ತನ್ನ ಕಡೆಯವರೊಡನೆ ನಾನಾವಿಧವಾಗಿ ಸದ್ದುಗಳನ್ನು ಮಾಡುತ್ತಾ ಹೊರಟನು. ಆಗ ಆ ಕಪಟಸೂಕರದ ಗುಡುಗಾಟದ ಮೊಳಗು ದಿಕ್ಕುದಿಕ್ಕುಗಳೆಲ್ಲಾ ಹಬ್ಬಿತು.

೩೦. ಆಗ ಕಾಡಿನಲ್ಲಿ ಉಂಟಾದ ಗಲಭೆಯಿಂದ ಅರ್ಜುನನು ವ್ಯಾಕುಲಚಿತನಾದನು. ಆ ಕೋಲಾಹಲದಿಂದ ಪರ್ವತಗಳೇ ಮೊದಲಾದುವು ತಳಮಳಿಸಿಹೋದವು

೩೧ ಆಗ ಅರ್ಜುನನು ಮನಸ್ಸಿನಲ್ಲಿ ಆಲೋಚಿಸತೊಡಗಿದನು ಇವನು ಶುಭಕರನಾದ ಶಿವನೇ ಆಗಿರಬಹುದೇ ? ಹಿಂದೆ ಕೃಷ್ಣನು ಹೇಳಿದುದನ್ನು ಕೇಳಿದ್ದೆನು.

೩೨ ವ್ಯಾಸನೂ ದೇವತೆಗಳೂ ಅದೇರೀತಿಯಾಗಿ ಶಿವನೇ ಶುಭಕರನೆಂದೂ ಸುಖಕರನೆಂದೂ ಹೇಳಿರುವರು.

ಮುಕ್ತಿದಶ್ಚ ಸ್ವಯಂ ಪ್ರೋಕ್ತೋ ಮುಕ್ತಿದಾನಾನ್ನ ಸಂಶಯಃ ।
ತನ್ನಾಮಸ್ಮರಣಾತ್ಪುಂಸಾಂ ಕಲ್ಯಾಣಂ ಜಾಯತೇ ಧ್ರುವಂ ॥ ೩೩ ॥

ಭಜತಾಂ ಸರ್ವಭಾವೇನ ದುಃಖಂ ಸ್ವಪ್ನೇಽಪಿ ನೋ ಭವೇತ್ ।
ಯದಾ ಕದಾಚಿಜ್ಜಾಯೇತ ತದಾ ಕರ್ಮಸಮುದ್ಭವಂ ॥ ೩೪ ॥

ಭಾವಿ ತದ್ಬಹ್ವಪಿ ಜ್ಞೇಯಂ ನೂನಮಲ್ಪಂ ನ ಸಂಶಯಃ ।
ಪ್ರಾರಬ್ಧಸ್ಯಾಥ ವಾ ದೋಷೋ ನೂನಂ ಜ್ಞೇಯೋ ವಿಶೇಷತಃ ॥ ೩೫ ॥

ಅಥವಾ ಬಹು ಚಾಲ್ಪಂ ಹಿ ಭೋಗ್ಯಂ ನಿಸ್ತೀರ್ಯ ಶಂಕರಃ ।
ಕದಾಚಿದಿಚ್ಛಯಾ ತಸ್ಯ ದೂರೀಕುರ್ಯಾನ್ನ ಸಂಶಯಃ ॥ ೩೬ ॥

---

೩೩. ಮುಕ್ತಿಯನ್ನು ಕೊಡುವವನಾದುದರಿಂದಲೇ ಮುಕ್ತಿದನೆಂಬುದಾಗಿಯೇ ಆತನು ಪ್ರಸಿದ್ಧನಾಗಿರುವನು. ಆತನ ನಾಮಸ್ಮರಣಮಾತ್ರದಿಂದಲೇ ಮಂಗಳವು ಉಂಟಾಗುವುದು ಖಂಡಿತ.

೩೪. ಸರ್ವರೀತಿಯಿಂದಲೂ ಆತನನ್ನು ಸೇವಿಸುವವರಿಗೆ ದುಃಖವು ಸ್ವಪ್ನದಲ್ಲಿಯೂ ಉಂಟಾಗಲಾರದು. ಒಂದುವೇಳೆ ಆದರೂ ಅದು ಅವರ ಪ್ರಾರಬ್ಧಕರ್ಮದಿಂದ ಎಂದು ಅರಿಯಬೇಕು.

೩೫. ಆ ದುಃಖವು ಬಹು ಹೆಚ್ಚಾಗಿ ಒದಗಿದರೂ ಅದು ಸ್ವಲ್ಪವೆಂದೇ ಅರಿಯಬೇಕು. ಇಲ್ಲದಿದ್ದರೆ ಪ್ರಾರಬ್ಧಕರ್ಮದ ದೋಷವೆಂದಾದರೂ ಭಾವಿಸಬೇಕು.

೩೬. ಇಲ್ಲದಿದ್ದರೆ ಆ ಶಿವನೇ, ಹೆಚ್ಚೋ ಸ್ವಲ್ಪವೋ ಭೋಗಿಸಬೇಕಾದುದನ್ನನುಭವಿಸುವಂತೆ ಕೊಟ್ಟು, ಒಂದಾನೊಂದು ಸಮಯದಲ್ಲಿ ತನ್ನಿಚ್ಛೆಯುಂಟಾದಾಗ ಆ ಸಂಕಟವನ್ನು ಪರಿಹರಿಸಿಯೂ ಬಿಡುವನು.

ವಿಷಂ ಚೈವಾಮೃತಂ ಕುರ್ಯಾದಮೃತಂ ವಿಷಮೇವ ವಾ ।
ಯದಿಚ್ಛತಿ ಕರೋತ್ಯೇವ ಸಮರ್ಥಃ ಕಿಂ ನಿಷಿಧ್ಯತೇ ॥ ೩೭ ॥

ಇತ್ಥಂ ವಿಚಾರ್ಯಮಾಣೋಽಪಿ ಭಕ್ತೈರನ್ಯೈಃ ಪುರಾತನೈಃ ।
ಭಾವಿಭಿಶ್ಚ ಸದಾ ಭಕ್ತೈರಿಹಾನೀಯ ಮನಃ ಸ್ಥಿರಂ ॥ ೩೮ ॥

ಲಕ್ಷ್ಮೀರ್ಗಚ್ಛೇಚ್ಚಾವತಿಷ್ಠೇನ್ಮರಣಂ ನಿಕಟೇ ಪುರಃ ।
ನಿಂದಾಂ ವಾಥ ಪ್ರಕುರ್ವಂತು ಸ್ತುತಿಂ ವಾ ದುಃಖಸಂಕ್ಷಯಂ ॥ ೩೯ ॥

ಜಾಯತೇ ಪುಣ್ಯಪಾಪಾಭ್ಯಾಂ ಶಂಕರಸ್ಸುಖದಃ ಸದಾ ।
ಕದಾಚಿಚ್ಚ ಪರೀಕ್ಷಾರ್ಥಂ ದುಃಖಂ ಯಚ್ಛತಿ ವೈ ಶಿವಃ ॥ ೪೦ ॥

---

೩೭. ಆ ಶಂಕರನು ವಿಷವನ್ನು ಅಮೃತವನ್ನಾಗಿ ತೋರ್ಪಡಿಸುವನು. ಅಮೃತವನ್ನೂ ವಿಷವನ್ನಾಗಿಸಿ ಬಿಡುವನು ಆ ಸರ್ವಶಕ್ತನು ತನ್ನಿಷ್ಟಬಂದುದನ್ನು ಮಾಡಿಯೇ ಬಿಡುವನು ಅವನನ್ನು ತಡೆಯುವವರು ಯಾರು ?

೩೮. ಈ ರೀತಿ ವಿಚಾರಮಾಡಿಯೇ ಹಿಂದ ಅನೇಕಮಂದಿ ಪ್ರಾಚೀನರಾದ ಭಕ್ತರೂ, ಮತ್ತೆ ಮುಂದೆ ಬರಲಿರುವ ಭಕ್ತರೂ ಶಿವನವಿಷಯದಲ್ಲಿ ತಮ್ಮಮನಸ್ಸನ್ನು ಸ್ಥಿರಗೊಳಿಸುವರು.

೩೯ ಐಶ್ವರ್ಯವು ನಾಶವಾಗಬಹುದು ಇಲ್ಲವೇ ಸ್ಥಿರವಾಗಿರಬಹುದು. ಮರಣವು ಮುಂದೆಯೇ ನಿಂತಿರಬಹುದು. ಜನರು ತನ್ನನ್ನು ನಿಂದಿಸಲೂ ಬಹುದು ಸುತ್ತಿಸಲೂ ಬಹುದು. ಆದರೆ ದುಃಖವು ಎಂದಾದರೂ ಕೊನೆಗೊಳ್ಳಲೇಬೇಕು

೪೦. ಶಂಕರನು, ಮನುಷ್ಯರು ಮಾಡಿದ ಪಾಪಪುಣ್ಯಗಳನ್ನು ಅನುಸರಿಸಿಯೇ ಸುಖಗಳನ್ನೂ ಕಷ್ಟಗಳನ್ನೂ ಕೊಡುವನು ಒಂದವೇಳೆ ಪರೀಕ್ಷಿಸುವ ಫಲವಾಗಿಯೂ ದುಃಖವನ್ನು ಕೊಡುವುದುಂಟು.

ಅಂತೇ ಚ ಸುಖದಃ ಪ್ರೋಕ್ತೋ ದಯಾಲುಸ್ತ್ವಾನ್ನ ಸಂಶಯಃ ।
ಯಥಾ ಚೈವ ಸುವರ್ಣಂ ಚ ಶೋಧಿತಂ ಶುದ್ಧತಾಂ ವ್ರಜೇತ್ ॥ ೪೧ ॥

ಏವಂ ಚೈವ ಮಯಾ ಪೂರ್ವಂ ಶ್ರುತಂ ಮುನಿಮುಖಾತ್ತಥಾ ।
ಅತಸ್ತದ್ಭಜನೇನೈವ ಲಪ್ಸ್ಯೇಽಹಂ ಸುಖಮುತ್ತಮಂ ॥ ೪೨ ॥

ಇತ್ಯೇವಂ ತು ವಿಚಾರಂ ಸ ಕರೋತಿ ಯಾವದೇವ ಹಿ ।
ತಾವಚ್ಚ ಸೂಕರಃ ಪ್ರಾಪ್ತೋ ಬಾಣಸಂಮೋಚನಾವಧಿಃ ॥ ೪೩ ॥

ಶಿವೋಽಪಿ ಪೃಷ್ಠತೋ ಲಗ್ನೋ ಹ್ಯಾಯಾತಃ ಶೂಕರಸ್ಯ ಹಿ ।
ತಯೋರ್ಮಧ್ಯೇ ತದಾ ಸೋಽಯಂ ದೃಶ್ಯತೇ ಶೃಂಗಮದ್ಭುತಂ ॥ ೪೪ ॥

---

೪೧. ಚಿನ್ನವನ್ನು ಪುಟಕ್ಕೆ ಹಾಕಿ ಕೊಳೆಯನ್ನು ತೆಗೆದು ಶುದ್ಧವಾದ ಅಪರಂಜಿಯಾಗಿ ತೆಗೆಯುವಂತೆ ಆ ದಯಾಲುವಾದ ಶಂಕರನು ಮೊದಲು ಕಷ್ಟಗಳನ್ನಿತ್ತು ಪರೀಕ್ಷಿಸಿ ಕೊನೆಗೆ ಸುಖವನ್ನೇ ಕರುಣಿಸುವನು.

೪೨. ಈ ರೀತಿಯಾಗಿ ನಾನು ಮುನಿಗಳ ಮುಖದಿಂದ ಹಿಂದೆ ಕೇಳಿರುವೆನು. ಆದುದರಿಂದ ಆ ಶಿವನನ್ನು ಸೇವಿಸುತ್ತಲೇ ಉತ್ತಮವಾದ ಸುಖವನ್ನು ಪಡೆಯುವೆನು

೪೩. ಎಂದು ಮುಂತಾಗಿ ಆ ಅರ್ಜುನನು ವಿಚಾರಮಾಡುತ್ತಿರುವಷ್ಟರಲ್ಲಿಯೇ ಬಿಲ್ಲಿನಿಂದ ಬಿಟ್ಟ ಬಾಣವು ತಗುಲುವಷ್ಟು ದೂರದಲ್ಲಿ ಆ ಹಂದಿಯು ಬಂದು ಬಿಟ್ಟಿತು.

೪೪. ಆ ಕಾಡುಹಂದಿಯ ಬೆನ್ನುಹಿಂದೆಯೇ ಅದನ್ನಟ್ಟಿಕೊಂಡು ಶಂಕರನೂ ಬಂದನು. ಅವರೀರ್ವರ ನಡುವೆ ಆ ಹಂದಿಯು ಅದ್ಭುತವಾದ ಗಿರಿಶೃಂಗದಂತೆ ತೋರಿತು.

ತಸ್ಯ ಪ್ರೋಕ್ತಂ ಚ ಮಾಹಾತ್ಮ್ಯಂ ಶಿವಃ ಶೀಘ್ರತರಂ ಗತಃ ।
ಅರ್ಜುನಸ್ಯ ಚ ರಕ್ಷಾರ್ಥಂ ಶಂಕರೋ ಭಕ್ತವತ್ಸಲಃ　　॥ ೪೫ ॥

ಏತಸ್ಮಿನ್ಸಮಯೇ ತಾಭ್ಯಾಂ ಕೃತಂ ಬಾಣವಿಮೋಚನಂ ।
ಶಿವಬಾಣಸ್ತು ಪುಚ್ಛೇ ವೈ ಹ್ಯರ್ಜುನಸ್ಯ ಮುಖೇ ತಥಾ　　॥ ೪೬ ॥

ಶಿವಸ್ಯ ಪುಚ್ಛತೋ ಗತ್ವಾ ಮುಖಾನ್ನಿಸ್ಸೃತ್ಯ ಶೀಘ್ರತಃ ।
ಭೂಮೌ ವಿಲೀನಃ ಸಂಯಾತಸ್ತಸ್ಯ ವೈ ಪುಚ್ಛತೋ ಗತಃ　　॥ ೪೭ ॥

ಪಪಾತ ಪಾರ್ಶ್ವತಶ್ಚೈವ ಬಾಣಶ್ಚೈವಾರ್ಜುನಸ್ಯ ಚ ।
ಸೂಕರಸ್ತತ್ಕ್ಷಣಂ ದೈತ್ಯೋ ಮೃತೋ ಭೂಮೌ ಪಪಾತ ಹ　　॥ ೪೮ ॥

---

೪೫. ಆ ಸೂಕರದ ಬಲವನ್ನೂ ಗಡಸುತನವನ್ನೂ ಅರಿತು ಭಕ್ತವತ್ಸಲನಾದ ಶಂಕರನು ಆ ಅರ್ಜುನನ ಸಂರಕ್ಷಣೆಯುಸಲುವಾಗಿ ಬೇಗನೆ ಉದ್ಯುಕ್ತನಾದನು.

೪೬. ಈ ಸಮಯದಲ್ಲಿ ಅರ್ಜುನನೂ ಶಂಕರನೂ ಇಬ್ಬರೂ ಆ ಹಂದಿಯ ಮೇಲೆ ಏಕಕಾಲದಲ್ಲಿ ಬಾಣವನ್ನು ಬಿಟ್ಟರು. ಶಿವನ ಬಾಣವು ಅದರ ಬಾಲದಕಡೆಯೂ ಅರ್ಜುನನ ಸರಳು ಮುಖದಕಡೆಯೂ ತಗುಲಿತು.

೪೭. ಶಿವನು ಬಿಟ್ಟಬಾಣವು ಬಾಲದಕಡೆಯಿಂದ ಭೇದಿಸಿಕೊಂಡು ಹೋಗಿ ಮುಖದಕಡೆ ಈಚೆಗೆ ಕಡೆದು ಬೇಗನೆ ಭೂಮಿಯಲ್ಲಿ ಹೊಕ್ಕು ಮರೆಯಾಗಿ ಹೋಯಿತು.

೪೮. ಅರ್ಜುನನು ಬಿಟ್ಟ ಬಾಣವು ಬಾಲದಕಡೆ ಹೊರಬಂದು ಒಂದುಪಕ್ಕದಲ್ಲಿ ಬಿದ್ದಿತು. ಆಕ್ಷಣದಲ್ಲಿಯೇ ಆ ಸೂಕರವು ದೈತ್ಯರೂಪವನ್ನು ತಾಳಿ ನೆಲದಮೇಲೆ ಸತ್ತುಬಿದ್ದಿತು.

ದೇವಾ ಹರ್ಷ ಪರಂ ಪ್ರಾಪುಃ ಪುಷ್ಪವೃಷ್ಟಿಂ ಚ ಚಕ್ರಿರೇ ।
ಜಯಪೂರ್ವಂ ಸ್ತುತಿಕರಾಃ ಪ್ರಣಮ್ಯ ಚ ಪುನಃ ಪುನಃ ॥ ೪೯ ॥

ಶಿವಸ್ತ್ವಷ್ಟಮನಾ ಆಸೀದರ್ಜುನಃ ಸುಖಮಾಗತಃ ।
ದೈತ್ಯಸ್ಯ ಚ ತದಾ ದೃಷ್ಟ್ವಾ ಕ್ರೂರಂ ರೂಪಂ ಚ ತೌ ತದಾ ॥ ೫೦ ॥

ಅರ್ಜುನಸ್ತು ವಿಶೇಷೇಣ ಸುಖಿನಾ ಪ್ರಾಹ ಚೇತಸಾ ।
ಅಹೋ ದೈತ್ಯವರಶ್ಚಾಯಂ ರೂಪಂ ತು ಪರಮಾದ್ಭುತಂ ॥ ೫೧ ॥

ಕೃತ್ವಾಗತೋ ಮದ್ವಧಾರ್ಥಂ ಶಿವೇನಾಹಂ ಸುರಕ್ಷಿತಃ ।
ಈಶ್ವರೇಣ ಮಮಾದ್ಯೈವ ಬುದ್ಧಿರ್ದತ್ತಾ ನ ಸಂಶಯಃ ॥ ೫೨ ॥

---

೪೯. ದೇವತೆಗಳು ಮಿತಿಮೀರಿ ಹರ್ಷವನ್ನು ತಾಳಿದುದಲ್ಲದೆ ಪುಷ್ಪವೃಷ್ಟಿಯನ್ನು ಮಾಡಿದರು. ಮತ್ತು ಪುನಃ ಪುನಃ ನಮಸ್ಕರಿಸುತ್ತಾ ಜಯಜಯ ಎಂದು ಸ್ತುತಿಮಾಡಿದರು.

೫೦. ಆಗ ಆ ದೈತ್ಯನ ಘೋರಾಕಾರವನ್ನು ಕಂಡು ಶಿವನು ಸಂತೋಷವನ್ನು ತಾಳಿದನು. ಅರ್ಜುನನು ಸುಖಿಯಾದನು.

೫೧. ಅರ್ಜುನನಾದರೋ ಮಿತಿಮೀರಿ ಸುಖವನ್ನು ತಳೆದ ಮನಸ್ಸಿನಿಂದ ಈರೀತಿ ಹೇಳಿಕೊಂಡನು. ಅಬ್ಬಾ! ಇವನು ಭಾರಿದೈತ್ಯನು ಇವನ ರೂಪವಂತೂ ಅತ್ಯದ್ಭುತವಾದುದು.

೫೨. ಈ ಮಹಾ ಘೋರವಾದ ಆಕಾರವನ್ನು ಧರಿಸಿ ನನ್ನನ್ನು ಕೊಲ್ಲಲೆಂದು ಬಂದಿದ್ದನು. ಶಿವನಿಂದ ನಾನು ಈಗ ಸಂರಕ್ಷಿಸಲ್ಪಟ್ಟಿನು. ಈಶ್ವರನೇ ನನಗೀಗ ಒಳ್ಳೆಯ ಬುದ್ಧಿಯನ್ನು ಕೊಟ್ಟನು.

ವಿಚಾರ್ಯೇತ್ಯರ್ಜುನಸ್ತತ್ರ ಜಗೌ ಶಿವಶಿವೇತಿ ಚ ।
ಪ್ರಣನಾಮ ಶಿವಂ ಭೂಯಸ್ತುಷ್ಟಾವ ಚ ಪುನಃ ಪುನಃ ॥ ೫೩ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಕಿರಾತಾವತಾರವರ್ಣನೇಮೂಕದೈತ್ಯವಧೋ ನಾಮ
ಏಕೋನಚತ್ವಾರಿಂಶೋಽಧ್ಯಾಯಃ

೫೩. ಈ ರೀತಿಯಾಗಿ ಅರ್ಜುನನು ತನ್ನ ಮನಸ್ಸಿನಲ್ಲಿ ವಿಚಾರಮಾಡಿ ಶಿವ ಶಿವ ಎಂದು ಸಂಕೀರ್ತನೆಯನ್ನು ಮಾಡಿದನು. ಮತ್ತು ಆ ಶಿವನನ್ನು ಪುನಃ ಪುನಃ ನಮಸ್ಕರಿಸಿ ಸ್ತೋತ್ರಮಾಡಿದನು

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಶತರುದ್ರಸಂಹಿತೆಯಲ್ಲಿ
ಮೂಕದಾನವವಧವರ್ಣನವೆಂಬ ಮೂವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಚತ್ವಾರಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

ಸನತ್ಕುಮಾರ ಸರ್ವಜ್ಞ ಶೃಣು ಲೀಲಾಂ ಪರಾತ್ಮನಃ ।
ಭಕ್ತವಾತ್ಸಲ್ಯಸಂಯುಕ್ತಾಂ ತದ್ದೃಢತ್ವನಿದರ್ಶಿತಾಂ ॥ ೧ ॥

ಶಿವೋಽಪ್ಯಥ ಸ್ವಭೃತ್ಯಂ ವೈ ಪ್ರೇಷಯಾಮಾಸ ಸ ದ್ರುತಂ ।
ಬಾಣಾರ್ಥೇ ಚ ತದಾ ತತ್ರಾರ್ಜುನೋಽಪಿ ಸಮುಗಾತ್ತತಃ ॥ ೨ ॥

---

## ನಲವತ್ತನೆಯ ಅಧ್ಯಾಯವು.

೧. ಎಲೈ ಸರ್ವಜ್ಞನಾದ ಸನತ್ಕುಮಾರನೇ, ಆ ಪರಮಪುರುಷನಾದ ಶಿವನು ಭಕ್ತರಲ್ಲಿ ವಾತ್ಸಲ್ಯವನ್ನುಳ್ಳವನಾದುದರಿಂದ ಅವರ ದೃಢತೆಯನ್ನು ಪರೀಕ್ಷೆಮಾಡುವ ಸಲುವಾಗಿ ನಾನಾವಿಧವಾದ ಲೀಲೆಯನ್ನು ತೋರುವನು. ಅದನ್ನೇ ಈಗ ವರ್ಣಿಸುವೆನು, ಕೇಳು.

೨. ಅನಂತರ ಕಿರಾತರೂಪದ ಶಿವನು ತನ್ನ ಆಳೊಬ್ಬನನ್ನು ಆ ಹಂದಿಯ ಬಳಿಗೆ ಬೇಗನೆ ಅಟ್ಟಿದನು. ಆ ಸಮಯಕ್ಕೆ ಸರಿಯಾಗಿ ಅರ್ಜುನನೂ ಸಹ ತನ್ನ ಬಾಣವನ್ನು ತೆಗೆದುಕೊಳ್ಳಲೋಸುಗ ಅಲ್ಲಿಗೆ ಬಂದನು.

ಏಕಸ್ಮಿನ್ಸಮಯೇ ಪ್ರಾಪ್ತೌ ಬಾಣಾರ್ಥಂ ತದ್ಗಣಾರ್ಜುನೌ ।
ಅರ್ಜುನಸ್ತಂ ಪರಾಭರ್ತ್ಸ್ಯ ಸ್ವಬಾಣಂ ಚಾಗ್ರಹೀತ್ತದಾ　॥ ೩ ॥

ಗಣಃ ಪ್ರೋವಾಚ ತಂ ತತ್ರ ಕಿಮರ್ಥಂ ಗೃಹ್ಯತೇ ಶರಃ ।
ಬಾಣಶ್ಚೈವಾಸ್ಮದೀಯೋ ವೈ ಮುಚ್ಯತಾಂ ಋಷಿಸತ್ತಮ　॥ ೪ ॥

ಇತ್ಯುಕ್ತಸ್ತೇನ ಭಿಲ್ಲಸ್ಯ ಗಣೇನ ಮುನಿಸತ್ತಮಃ ।
ಸೋಽರ್ಜುನಃ ಶಂಕರಂ ಸ್ಮೃತ್ವಾ ವಚನಂ ಚ ತಮಬ್ರವೀತ್　॥ ೫ ॥

॥ ಅರ್ಜುನ ಉವಾಚ ॥

ಅಜ್ಞಾತ್ವಾ ಕಿಂ ಚ ವದಸಿ ಮೂರ್ಖೋಽಸಿ ತ್ವಂ ವನೇಚರ ।
ಬಾಣಶ್ಚ ಮೋಚಿತೋ ಮೇಽದ್ಯ ತ್ವದೀಯಶ್ಚ ಕಥಂ ಪುನಃ　॥ ೬ ॥

ರೇಖಾರೂಪಂ ಚ ಪಿಚ್ಛಾನಿ ಮನ್ನಾಮಾಂಕಿತ ಏವ ಚ ।
ತ್ವದೀಯಶ್ಚ ಕಥಂ ಜಾತಃ ಸ್ವಭಾವೋ ದುಸ್ತ್ಯಜಸ್ತವ　॥ ೭ ॥

---

೩. ತಮ್ಮ ತಮ್ಮ ಬಾಣಗಳನ್ನು ತೆಗೆದುಕೊಳ್ಳಲು ಏಕಕಾಲದಲ್ಲಿ ಅವರೀರ್ವರೂ ಬಂದರಷ್ಟೆ. ಆಗ ಅರ್ಜುನನು ಶಿವಕಿಂಕರನನ್ನು ಗದರಿಸಿ ತನ್ನ ಬಾಣವನ್ನು ತೆಗೆದುಕೊಂಡನು.

೪. ಆಗ ಶಿವಕಿಂಕರನು ಈ ಬಾಣವನ್ನು ಏಕೆ ತೆಗೆದುಕೊಳ್ಳುವೆ? ಇದೂ ನಮ್ಮದೆ , ಇದನ್ನು ಬಿಟ್ಟುಬಿಡು ಎಂದು ಅರ್ಜುನನಿಗೆ ಹೇಳಿದನು.

೫. ಹೀಗೆಂದು ಆ ಭಿಲ್ಲನ ಆಳು ಹೇಳುತ್ತಲೇ ತಪೋನಿರತನಾಗಿ ಮುನಿಯಂತೆ ಇದ್ದ ಅರ್ಜುನನು ಶಿವನನ್ನು ಮನಸ್ಸಿನಲ್ಲಿ ಸ್ಮರಿಸಿ, ಅವನನ್ನು ಕುರಿತು ಇಂತೆಂದನು.

೬. ಎಲೈ ಕಾಡಿನಲ್ಲಿ ಅಲೆಯುವ ಮರುಳನೇ, ಏಕೆ ತಿಳಿಯದೆ ಹರಟುವೆ? ನೀನು ಶುದ್ಧಮುಟ್ಠಾಳನಾಗಿರುವೆ. ನಾನು ಬಾಣವನ್ನು ಬಿಟ್ಟಿರುವೆನು ಅದು ಹೇಗೆ ತಾನೆ ನಿಮ್ಮದಾದೀತು.

೭. ರೇಖಾಕಾರವಾಗಿ ಆ ಬಾಣವಿರುವುದನ್ನು ನೋಡು, ಅದರ ಗರಿಗಳನ್ನೂ ನೋಡು, ಅಲ್ಲದೆ ಅದರಮೇಲೆ ನನ್ನ ಹೆಸರು ಕೆತ್ತಿರುವುದನ್ನು ನೋಡು. ಇಷ್ಟು ಇರುವಾಗ ಈ ಬಾಣವು ನಿಮ್ಮದು ಹೇಗೆತಾನೆ ಆದೀತು? ನೀನು ನಿನ್ನ ಸ್ವಭಾವವನ್ನು ಬಿಡುವುದಿಲ್ಲವೆಂದು ತೋರುತ್ತಿ ಎಂದನು.

ನಂದೀಶ್ವರ ಉವಾಚ ॥

ಇತ್ಯೇವಂ ತದ್ವಚಃ ಶ್ರುತ್ವಾ ವಿಹಸ್ಯ ಸ ಗಣೇಶ್ವರಃ ।
ಅರ್ಜುನಂ ಋಷಿರೂಪಂ ತಂ ಭಿಲ್ಲೋ ವಾಕ್ಯಮುಪಾದದೇ ॥ ೮ ॥

ತಾಪಸ ಶ್ರೂಯತಾಂ ರೇ ತ್ವಂ ನ ತಪಃ ಕ್ರಿಯತೇ ತ್ವಯಾ ।
ವೇಷತಶ್ಚ ತಪಸ್ವೀ ತ್ವಂ ನ ಯಥಾರ್ಥಂ ಛಲಾಯತೇ ॥ ೯ ॥

ತಪಸ್ವೀ ಚ ಕಥಂ ಮಿಥ್ಯಾ ಭಾಷತೇ ಕುರುತೇ ನರಃ ।
ನೈಕಾಕಿನಂ ಚ ಮಾಂ ತ್ವಂ ಚ ಜಾನೀಹಿ ವಾಹಿನೀಪತಿಂ ॥ ೧೦ ॥

ಬಹುಭಿರ್ವನಭಿಲ್ಲೈಶ್ಚ ಯುಕ್ತಃ ಸ್ವಾಮೀ ಸ ಆಸತೇ ।
ಸಮರ್ಥಸ್ಸರ್ವಥಾ ಕರ್ತುಂ ವಿಗ್ರಹಾನುಗ್ರಹೌ ಪುನಃ । ೧೧ ॥

ವರ್ತತೇ ತಸ್ಯ ಬಾಣೋಯಂ ಯೋ ನೀತಶ್ಚ ತ್ವಯಾಧುನಾ ।
ಅಯಂ ಬಾಣಶ್ಚ ತೇ ಪಾರ್ಶ್ವೇ ನ ಸ್ಥಾಸ್ಯತಿ ಕದಾಚನ ॥ ೧೨ ॥

---

೮. ಓ ಮುನೀಂದ್ರ ! ಹೀಗೆ ಮುನಿರೂಪದ ಅರ್ಜುನನಾಡಿದ ನುಡಿಯನ್ನು ಕೇಳಿ ಮಾಯಾಕಿರಾತನ ಆ ಭಟಾಗ್ರಣಿಯು ಗಟ್ಟಿಯಾಗಿ ನಕ್ಕು, ಮರಳಿ ಅವನನ್ನು ಕುರಿತು ಹೀಗೆಂದನು,

೯. ಛಿ, ದುಷ್ಟತಾಪಸನೇ ಕೇಳು. ನೀನು ತಪಸ್ಸನ್ನು ಮಾಡುತ್ತಿಲ್ಲ. ಬರಿಯ ವೇಷದಿಂದ ತಪಸ್ವಿಯಾಗಿರುವೆ. ಅಷ್ಟೇ ಹೊರತು ನಿಜವಾಗಿ ಅಲ್ಲ. ಇದೆಲ್ಲವೂ ಶುದ್ಧಮೋಸ.

೧೦. ಎಲ್ಲಾದರೂ ತಪಸ್ವಿಯಾದ ಮನುಷ್ಯನು ಸುಳ್ಳು ಹೇಳುವನೇ ? ಅಥವಾ ಸುಳ್ಳು ನಡೆವಳಿಕೆಯನ್ನು ತೋರುವನೇ ? ನಾನೊಬ್ಬನೇ ಇರುವೆನೆಂದು ತಿಳಿಯಬೇಡ ನನ್ನ ಹಿಂದೆ ಒಂದು ಸೇನೆಯೇ ಇದೆ.

೧೧. ನಮ್ಮ ಆ ಒಡೆಯನು ಅನೇಕಮಂದಿ ಭಿಲ್ಲರೊಡಗೂಡಿ ಇಲ್ಲಿಯೇ ಇರುವನು. ಅವನು ಯಾರನ್ನು ಬೇಕಾದರೂ ನಿಗ್ರಹಿಸುವನು. ಯಾರನ್ನು ಬೇಕಾದರೂ ಅನುಗ್ರಹಿಸಿ ಸಂರಕ್ಷಿಸುವನು. ಅಂತಹ ಸಮರ್ಥನವನು.

೧೨. ನೀನೀಗ ತೆಗೆದುಕೊಂಡಿರುವ ಈ ಬಾಣವು ಆ ನಮ್ಮ ಒಡೆಯನದು ಈ ಬಾಣವು ಎಂದೆಂದಿಗೂ ನಿನ್ನ ಬಳಿ ನಿಲ್ಲಲು ಸಾಧ್ಯವಿಲ್ಲ.

ತಪಃ ಫಲಂ ಕಥಂ ತ್ವಂ ಚ ಹಾತುಮಿಚ್ಛಸಿ ತಾಪಸ ।
ಚೌರ್ಯಾಚ್ಛಲಾದ್ಗರ್ವಮಾನಾಚ್ಚ ವಿಸ್ಮಯಾತ್ಸತ್ಯಭಂಜನಾತ್ ॥ ೧೩ ॥

ತಪಸಾ ಕ್ಷೀಯತೇ ಸತ್ಯಮೇತದೇವ ಮಯಾ ಶ್ರುತಂ ।
ತಸ್ಮಾಚ್ಚ ತಪಸಸ್ತೇಽದ್ಯ ಭವಿಷ್ಯತಿ ಫಲಂ ಕುತಃ ॥ ೧೪ ।

ತಸ್ಮಾಚ್ಚ ಮುಚ್ಯತೇ ಬಾಣಾತ್ಕೃತಘ್ನಸ್ತ್ವಂ ಭವಿಷ್ಯಸಿ ।
ಮಮ್ಯೈವ ಸ್ವಾಮಿನೋ ಬಾಣಸ್ತವಾರ್ಥೇ ಮೋಚಿತೋ ಧ್ರುವಂ ॥ ೧೫ ॥

ಶತ್ರುಶ್ಚ ಮಾರಿತಸ್ತೇನ ಪುನರ್ಬಾಣಶ್ಚ ರಕ್ಷಿತಃ ।
ಅತ್ಯಂತಂ ಚ ಕೃತಘ್ನೋಽಸಿ ತಪೋಽಶುಭಕರಸ್ತಥಾ ॥ ೧೬ ॥

ಸತ್ಯಂ ನ ಭಾಷಸೇ ತ್ವಂ ಚ ಕಿಮುತಃ ಸಿದ್ಧಿಮಿಚ್ಛಸಿ ।
ಪ್ರಯೋಜನಂ ಚೇದ್ಬಾಣೇನ ಸ್ವಾಮೀ ಚ ಯಾಚ್ಯತಾಂ ಮಮ ॥ ೧೭ ॥

---

೧೩. ಎಲೈ ತಾಪಸನೇ, ಏತಕ್ಕೆ ನೀನು ಈರೀತಿ ಕಳ್ಳತನದಿಂದಲೂ, ಮೋಸದಿಂದಲೂ, ಗರ್ವದಿಂದಲೂ, ಪೀಡನೆಯಿಂದಲೂ, ಸತ್ಯಭಂಗದಿಂದಲೂ ನಿನ್ನ ತಪಸ್ಸಿನ ಫಲವನ್ನು ಹಾಳುಮಾಡಿಕೊಳ್ಳಬೇಕೆಂದಿರುವೆ ?

೧೪. ಇಂತಹ ದೋಷಗಳಿಂದ ಅಲ್ಪಮತಿಯೂ ತಪೋಭ್ರಷ್ಟನಾಗುವನು. ಹೀಗೆಂದು ನಾನು ಕೇಳಿರುವೆನು. ಹೀಗಿರುವಾಗ ನೀನು ಮಾಡುವಈ ತಪಸ್ಸಿನಿಂದ ಯಾವ ಫಲವು ತಾನೇ ಹೇಗೆತಾನೆ ಉಂಟಾಗುವುದು ?

೧೫. ಆದುದರಿಂದ ಈ ಬಾಣವನ್ನು ಬಿಡು, ಇಲ್ಲದಿದ್ದರೆ ಕೃತಘ್ನನಾಗುವೆ. ನಿನ್ನನ್ನು ಸಂರಕ್ಷಿಸಲೋಸುಗವೇ ನಮ್ಮೊಡೆಯನು ಈ ಬಾಣವನ್ನು ಬಿಟ್ಟಿದ್ದು.

೧೬. ಅವನೇನೋ ನಿನ್ನ ಶತ್ರುವನ್ನು ಕೊಂದನು. ನೀನುಮಾತ್ರ ಬಾಣವನ್ನು ತೆಗೆದಿಟ್ಟುಕೊಳ್ಳುತ್ತಿರುವೆ. ಭಲೆ! ನೀನು ಎಷ್ಟು ಕೃತಘ್ನನಾಗಿರುವೆ? ನೀನು ನಿನ್ನ ತಪಸ್ಸಿಗೆ ಅಮಂಗಳವನ್ನುಂಟುಮಾಡುತ್ತಿರುವೆಯಲ್ಲಾ ?

೧೭. ನೀನಂತೂ ಸತ್ಯವನ್ನೇ ನುಡಿಯದಿರುವೆ, ಹೀಗಿರುವಾಗ ನೀನು ಸಿದ್ಧಿಯನ್ನು ಹೇಗೆ ಅಪೇಕ್ಷಿಸುವೆ ? ನಿನಗೆ ಈ ಬಾಣದಿಂದ ಏನಾದರೂ ಪ್ರಯೋಜನವಾಗುವಂತಿದ್ದರೆ ನಮ್ಮ ಸ್ವಾಮಿಯನ್ನೇ ಕೇಳು.

ಈದೃಶಾಂಶ್ಚ ಬಹೂನ್ಬಾಣಾಂಸ್ತದಾ ದಾತುಂ ಕ್ಷಮಃ ಸ್ವಯಂ ।
ರಾಜಾ ಚ ವರ್ತತೇ ಮೇಽದ್ಯ ಕಿಂ ತ್ವೇವಂ ಯಾಚ್ಯತೇ ತ್ವಯಾ ॥ ೧೮ ॥

ಉಪಕಾರಂ ಪರಿತ್ಯಜ್ಯ ಹ್ಯಪಕಾರಂ ಸಮೀಹಸೇ ।
ನೈತದ್ಯುಕ್ತಂ ತ್ವಯಾದ್ಯೈವ ಕ್ರಿಯತೇ ತ್ಯಜ ಚಾಪಲಂ ॥ ೧೯ ॥

॥ ನಂದೀಶ್ವರ ಉವಾಚ ॥

ಇತ್ಯೇವಂ ವಚನಂ ತಸ್ಯ ಶ್ರುತ್ವಾ ಪಾರ್ಥೋಽರ್ಜುನಸ್ತದಾ ।
ಕ್ರೋಧಂ ಕೃತ್ವಾ ಶಿವಂ ಸ್ಮೃತ್ವಾ ಮಿತಂ ವಾಕ್ಯಮಥಾಬ್ರವೀತ್ ॥ ೨೦ ॥

॥ ಅರ್ಜುನ ಉವಾಚ ॥

ಶೃಣು ಭಿಲ್ಲ ಪ್ರವಕ್ಷ್ಯಾಮಿ ನ ಸತ್ಯಂ ತವ ಭಾಷಣಂ ।
ಯಥಾ ಜಾತಿಸ್ತಥಾ ತ್ವಾಂ ಚ ಜಾನಾಮಿ ಹಿ ವನೇಚರ ॥ ೨೧ ॥

ಅಹಂ ರಾಜಾ ಭವಾನ್ ಚೌರಃ ಕಥಂ ಯುದ್ಧಪ್ರಯುಕ್ತತಾ ।
ಯುದ್ಧಂ ಮೇ ಸಬಲೈಃ ಕಾರ್ಯಂ ನಾಧಮೈರ್ಹಿ ಕದಾಚನ ॥ ೨೨ ॥

---

೧೮. ಹಾಗೆ ನೀನು ಕೇಳಿದಪಕ್ಷಕ್ಕೆ ಇಂತಹ ಅನೇಕ ಬಾಣಗಳನ್ನು ಕೊಡಲು ಆತನು ಶಕ್ತನಾಗಿರುವನು. ನಮಗೆಲ್ಲರಿಗೂ ಆತನು ಒಡೆಯನು. ನೀನೇಕೆ ಹೋಗಿ ಆತನನ್ನು ಕೇಳಬಾರದು?

೧೯. ಉಪಕಾರವನ್ನು ಬಿಟ್ಟು ಅಪಕಾರವನ್ನೇ ಮಾಡಬೇಕೆಂದಿರುವೆ? ಇದು ನಿನಗೆ ತರವಲ್ಲ. ನಿನ್ನ ಈ ಚಪಲತೆಯನ್ನು ಈಗಲೇ ತೊರೆದುಬಿಡು ಎಂದನು.

೨೦. ಓ ಮುನೀಂದ್ರ! ಇಂತೆಂದು ಆ ಭಿಲ್ಲನು ನುಡಿಯುತ್ತಲೇ ಪೃಥುಸೂನುವಾದ ಆ ಅರ್ಜುನನು ಕೋಪವನ್ನು ತಾಳಿದನು. ಬಳಿಕ ಶಿವನನ್ನು ಮನಸ್ಸಿನಲ್ಲಿ ಧ್ಯಾನಿಸಿ ಅವನನ್ನು ಕುರಿತು ಮತ್ತೆ ಮಾತನ್ನಾಡಿದನು.

೨೧. ಎಲೈ ಭಿಲ್ಲನೇ ಕೇಳು, ಹೇಳುತ್ತೇನೆ. ನೀನು ಹೇಳುವುದು ನಿಜವಲ್ಲ. ನೀನು ನಿನ್ನ ಜಾತಿಯ ರೀತಿಯಲ್ಲೇ ನಡೆದುಕೊಳ್ಳುವೆಯೆಂಬುದನ್ನು ನಾನರಿತಿರುವೆನು.

೨೨. ನಾನು ರಾಜನು, ನೀನು ಕಳ್ಳನು. ನಮ್ಮಿಬ್ಬರಿಗೂ ಯುದ್ಧವು ಹೇಗೆ ಹೊಂದೀತು? ಬಲಾಢ್ಯರೊಡನೆ ಯುದ್ಧಮಾಡುವುದು ನನಗೆ ಯುಕ್ತವಾದುದು. ನಿನ್ನಂಥ ಕೀಳ್ಜನರೊಂದಿಗೆ ಎಂದೆಂದಿಗೂ ನಾನು ಯುದ್ಧವನ್ನು ಮಾಡೆನು.

ತಸ್ಮಾತ್ತ್ವೇ ಚ ತಥಾ ಸ್ವಾಮಿಾ ಭವಿಷ್ಯತಿ ಭವಾದೃಶಃ ।
ದಾತಾರಶ್ಚ ವಯಂ ಪ್ರೋಕ್ತಾಶ್ಚೌರಾ ಯೂಯಂ ವನೇಚರಾಃ　　॥ ೨೩ ॥

ಕಥಂ ಯಾಚ್ಯೋ ಮಯಾ ಭಿಲ್ಲರಾಜ ಏವಂ ಚ ಸಾಂಪ್ರತಂ ।
ತ್ವಮೇವ ಯಾಚಸೇ ನ್ನೈವ ಬಾಣಂ ಮಾಂ ಕಿಂ ವನೇಚರ　　॥ ೨೪ ॥

ದದಾಮಿ ತೇ ತಥಾ ಬಾಣಾನ್ಸಂತಿ ಮೇ ಬಹವೋ ಧ್ರುವಂ ।
ರಾಜಾ ಚ ಗ್ರಹಣಂ ಚೈವ ನ ದಾಸ್ಯತಿ ತಥಾ ಭವೇತ್　　॥ ೨೫ ॥

ಕಿಂ ಪುನಶ್ಚ ತಥಾ ಬಾಣಾನ್ಪ್ರಯಚ್ಛಾಮಿ ವನೇಚರ ।
ಯದಿ ಮೇ ಯಾ ಚಿಕೀರ್ಷಾ ಸ್ಯಾತ್ಕಥಂ ನಾಗಮ್ಯತೇಽಧುನಾ　　॥ ೨೬ ॥

ಯಯಾಗಚ್ಛತ್ತು ತೇ ಭರ್ತಾ ಕಿಮರ್ಥಂ ಭಾಷತೇಽಧುನಾ ।
ಆಗತ್ಯ ಚ ಮಯಾ ಸಾರ್ಧಂ ಜಿತ್ವಾ ಯುದ್ಧೇ ಚ ಮಾಂ ಪುನಃ　　॥ ೨೭ ॥

---

೨೩. ಆದುದರಿಂದ ನಿನ್ನ ಸ್ವಾಮಿಯೂ ನಿನ್ನಂತೆಯೇ ಇರುವನೆಂದು ತಿಳಿಯುವೆನು. ದಾನಶೀಲರಲ್ಲಿ ನಾವು ಹೆಸರಾದವರು ಕಾಡಿನಲ್ಲಿ ಅಲೆಯುವ ನೀವೆಲ್ಲರೂ ಕಳ್ಳರೆಂಬುದು ಎಲ್ಲರಿಗೂ ಗೊತ್ತು.

೨೪. ಹೀಗಿರುವಾಗ ನಾನು ಹೇಗೆ ಹೋಗಿ ಭಿಲ್ಲರಾಜನನ್ನು ಯಾಚಿಸಬೇಕಾದೀತು ? ಎಲೈ ವನೇಚರನೇ, ನೀನೇ ಏತಕ್ಕೆ ನನ್ನನ್ನೇ ಬಾಣವನ್ನು ಬೇಡಬಾರದು ?

೨೫. ನಿನಗೆ ನಾನು ಬೇಕಾದಷ್ಟು ಬಾಣಗಳನ್ನು ಕೊಡುವೆನು ನನ್ನ ಬಳಿಯಲ್ಲಿ ಲೆಕ್ಕವಿಲ್ಲದಷ್ಟು ಬಾಣಗಳಿವೆ, ರಾಜನಾದವನು ಎಂದಿಗೂ ಗ್ರಹಣಮಾಡಲಾರನು. ಆದರೆ ಮತ್ತೊಬ್ಬರಿಗೆ ಮಾತ್ರ ದಾನಮಾಡುವನು.

೨೬. ಎಲೈ ವನೇಚರನೇ, ನಾನು ಹಾಗೇನಾದರೂ ಈಗ ಬಾಣಗಳನ್ನು ಕೊಡಲೇನು ? ನಿನ್ನ ಸ್ವಾಮಿಯು ಏತಕ್ಕೆ ಇಲ್ಲಿಗೆ ಬರಬಾರದು ?

೨೭. ನಿನ್ನ ಆ ಒಡೆಯನು ಏತಕ್ಕೆ ಇಲ್ಲಿಗೆ ಬಾರದೆಯೇ ಹೀಗೆ ನಿನ್ನ ಮೂಲಕ ಮಾತನಾಡುತ್ತಿರುವನು ? ಅವನು ಇಲ್ಲಿಗೆ ಬರಲಿ, ನನ್ನೊಡನೆ ಯುದ್ಧಮಾಡಲಿ. ಬಳಿಕ ನನ್ನನ್ನು ಗೆಲ್ಲಲಿ.

ನೀತ್ವಾ ಬಾಣಮಿಮಂ ಭಿಲ್ಲಸ್ವಾಮೀ ತೇ ವಾಹಿನೀಪತಿಃ ।
ನಿಜಾಲಯಂ ಸುಖಂ ಯಾತು ವಿಲಂಬಃ ಕ್ರಿಯತೇ ಕಥಂ ॥ ೨೮ ॥

॥ ನಂದೀಶ್ವರ ಉವಾಚ ॥

ಮಹೇಶ್ವರಕೃಪಾಪ್ರಾಪ್ತಸದ್ಬಲಸ್ಯಾರ್ಜುನಸ್ಯ ಹಿ ।
ಇತ್ಯೇತದ್ವಚನಂ ಶ್ರುತ್ವಾ ಭಿಲ್ಲೋ ವಾಕ್ಯಮಥಾಬ್ರವೀತ್ ॥ ೨೯ ॥

॥ ಭಿಲ್ಲ ಉವಾಚ ॥

ಅಜ್ಞೋಽಸಿ ತ್ವಂ ಋಷಿರ್ನಾಸಿ ಮರಣಂ ತ್ವೀಹಸೇ ಕಥಂ ।
ದೇಹಿ ಬಾಣಂ ಸುಖಂ ತಿಷ್ಠ ತ್ವನ್ಯಥಾ ಕ್ಲೇಶಭಾಗ್ಭವೇಃ ॥ ೩೦ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತಸ್ತೇನ ಭಿಲ್ಲೇನ ಶಿವಸಚ್ಛಕ್ತಿಶೋಭಿನಾ ।
ಗಣೇನ ಪಾಂಡವಸ್ತಂ ಚ ಪ್ರಾಹ ಸ್ಮೃತ್ವಾ ಚ ಶಂಕರಂ ॥ ೩೧ ॥

---

೨೮. ಆಮೇಲೆ ಮಾತ್ರ ನಿನ್ನಾ ಸೇನಾಪತಿಯಾದ ಭಿಲ್ಲರಾಜನು ಈ ಬಾಣವನ್ನು ತೆಗೆದುಕೊಂಡು ತನ್ನ ಮನೆಗೆ ಸುಖವಾಗಿ ತೆರಳಲಿ. ಏತಕ್ಕೆ ತಡ ಎಂದನು.

೨೯. ಓ ಸನತ್ಕುಮಾರ, ಮಹೇಶ್ವರನ ಕೃಪೆಗೆ ಪಾತ್ರನೆನಿಸಿ ಮತ್ತು ಸ್ವಬಲಸಂಪನ್ನನಾದ ಆ ಅರ್ಜುನನು ಹೀಗೆ ನುಡಿದುದನ್ನು ಕೇಳಿ, ಆ ಭಿಲ್ಲನು ಮರಳಿ ಇಂತೆಂದನು.

೩೦. ನೀನು ಶುದ್ಧ ಮೂರ್ಖನು, ಋಷಿಯಲ್ಲ. ಏತಕ್ಕೀರೀತಿ ಮರಣವನ್ನು ಪಡೆಯಬೇಕೆನ್ನುವೆ? ಬಾಣವನ್ನಿತ್ತುಕೊಟ್ಟು ಸುಖವಾಗಿರು. ಇಲ್ಲದಿದ್ದರೆ ಇಲ್ಲದ ತೊಂದರೆಗೆ ಗುರಿಯಾಗುವೆ.

೩೧. ಓ ಮುನೀಂದ್ರ, ಹೀಗೆಂದು ಶಿವನ ಶಕ್ತಿಯನ್ನು ಪಡೆದು ಶೋಭಿಸುತ್ತಿರುವ ಭಿಲ್ಲವೇಷಧಾರಿಯಾದ ಗಣಪುರುಷನು ನುಡಿಯಲು, ಅರ್ಜುನನು ಶಿವನನ್ನು ಸ್ಮರಿಸಿ ಇಂತೆಂದನು.

॥ ಅರ್ಜುನ ಉವಾಚ ॥

ಮದ್ವಾಕ್ಯಂ ತತ್ತ್ವತೋ ಭಿಲ್ಲ ಶೃಣು ತ್ವಂ ಚ ವನೇಚರ ।
ಆಗಮಿಷ್ಯತಿ ತೇ ಸ್ವಾಮೀ ದರ್ಶಯಿಷ್ಯೇ ಫಲಂ ತದಾ ॥ ೩೨ ॥

ನ ಶೋಭತೇ ತ್ವಯಾ ಯುದ್ಧಂ ಕರಿಷ್ಯೇ ಸ್ವಾಮಿನಾ ತವ ।
ಉಪಹಾಸಕರಂ ಜ್ಞೇಯಂ ಯುದ್ಧಂ ಸಿಂಹಶೃಗಾಲಯೋಃ ॥ ೩೩ ॥

ಶ್ರುತಂ ಚ ಮದ್ವಚಸ್ತೇಽದ್ಯ ದ್ರಕ್ಷ್ಯಸಿ ತ್ವಂ ಮಹಾಬಲಂ ।
ಗಚ್ಛಸ್ವ ಸ್ವಾಮಿನಂ ಭಿಲ್ಲ ಯಥೇಚ್ಛಸಿ ತಥಾ ಕುರು ॥ ೩೪ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತಸ್ತು ಗತಸ್ತತ್ರ ಭಿಲ್ಲಃ ಪಾರ್ಥೇನ ವೈ ಮುನೇ ।
ಶಿವಾವತಾರೋ ಯತ್ರಾಸ್ತೇ ಕಿರಾತೋ ವಾಹಿನೀಪತಿಃ ॥ ೩೫ ॥

ಅಥಾರ್ಜುನಸ್ಯ ವಚನಂ ಭಿಲ್ಲನಾಥಾಯ ವಿಸ್ತರಾತ್ ।
ಸರ್ವಂ ನಿವೇದಯಾಮಾಸ ತಸ್ಮೈ ಭಿಲ್ಲಪರಾತ್ಮನೇ ॥ ೩೬ ॥

---

೩೨. ಎಲೈ ಕಾಡಿನಲ್ಲಿ ಅಲೆಯುವ ಭಿಲ್ಲನೇ, ನನ್ನ ಮಾತನ್ನು ಯಥಾರ್ಥವೆಂಬುದಾಗಿ ಅರಿತು ಕೇಳು. ನಿನ್ನ ಸ್ವಾಮಿಯು ಬಂದಾಗ ಇದರ ಫಲವನ್ನು ತೋರುವೆನು.

೩೩. ನಿನ್ನೊಡನೆ ನಾನು ಯುದ್ಧಮಾಡುವುದು ತರವಲ್ಲ. ನಿನ್ನ ಒಡೆಯನೊಡನೆಯೇ ಯುದ್ಧಮಾಡುವೆನು. ಸಿಂಹಕ್ಕೂ ನರಿಗೂ ಹೋರಾಟವೆಂದರೆ ಹಾಸ್ಯಾಸ್ಪದವೇ ಸರಿ.

೩೪. ಈಗ ನನ್ನ ಮಾತನ್ನು ಕೇಳಿದೆಯಷ್ಟೆ? ನೋಡುವೆಯಂತೆ ನನ್ನ ಬಲವೆಷ್ಟೆಂಬುದನ್ನು? ಎಲೈ ಭಿಲ್ಲ, ನಡೆ ನಿನ್ನ ಸ್ವಾಮಿಯಬಳಿಗೆ. ನಿನ್ನ ಇಷ್ಟ ಬಂದಂತೆ ಮಾಡುವೆಯಂತೆ.

೩೫. ಓ ಮುನೀಂದ್ರ, ಹೀಗೆ ಅರ್ಜುನನು ಹೇಳಲು, ಆ ಭಿಲ್ಲನು ಕಪಟ ಕಿರಾತ ಸೇನಾಪತಿಯಾದ ಶಿವನು ಇರುವ ಕಡೆಗೆ ಬಂದನು.

೩೬. ಬಳಿಕ ಆ ಭಿಲ್ಲನು ಕಿರಾತಾಧಿಪತಿಯ ವೇಷವನ್ನು ಧರಿಸಿರುವ ಆ ಪರಮ ಪುರುಷನಿಗೆ ಅರ್ಜುನನು ಹೇಳಿದುದೆಲ್ಲವನ್ನೂ ವಿಸ್ತಾರವಾಗಿ ತಿಳಿಸಿದನು.

ಸ ಕಿರಾತೇಶ್ವರಃ ಶ್ರುತ್ವಾ ತದ್ವಚೋ ಹರ್ಷಮಾಗತಃ ।
ಆಜಗಾಮ ಸ್ವಸೈನ್ಯೇನ ಶಂಕರೋ ಭಿಲ್ಲರೂಪಧೃಕ್ ॥ ೩೭ ॥

ಅರ್ಜುನಶ್ಚ ತದಾ ಸೇನಾಂ ಕಿರಾತಸ್ಯ ಚ ಪಾಂಡವಃ ।
ದೃಷ್ಟ್ವಾ ಗೃಹೀತ್ವಾ ಸಶರಂ ಧನುಃ ಸಂಮುಖ ಆಯಯೌ ॥ ೩೮ ॥

ಅಥೋ ಕಿರಾತಶ್ಚ ಪುನಃ ಪ್ರೇಷಯಾಮಾಸ ತಂ ಚರಂ ।
ತನ್ಮುಖೇನ ಜಗೌ ವಾಕ್ಯಂ ಭಾರತಾಯ ಮಹಾತ್ಮನೇ ॥ ೩೯ ॥

॥ ಕಿರಾತ ಉವಾಚ ॥

ಪಶ್ಯ ಸೈನ್ಯಂ ತಪಸ್ವಿಂಸ್ತ್ವಂ ಮುಂಚ ಬಾಣಂ ವ್ರಜಾಧುನಾ ।
ಮರಣಂ ಸ್ವಲ್ಪಕಾರ್ಯಾರ್ಥಂ ಕಥಮಿಚ್ಛಸಿ ಸಾಂಪ್ರತಂ ॥ ೪೦ ॥

ಭ್ರಾತರಸ್ತವ ದುಃಖಾರ್ತಾಃ ಕಲತ್ರಂ ಚ ತತಃ ಪರಂ ।
ಪೃಥಿವೀ ಹಸ್ತತಸ್ತೇಽದ್ಯ ಯಾಸ್ಯತೀತಿ ಮತಿರ್ಮಮ ॥ ೪೧ ॥

---

೩೭. ಆಗ ಕಪಟಕಿರಾತನಾಥನಾದ ಶಂಕರನು ಆ ಮಾತನ್ನು ಕೇಳಿ ಹರ್ಷವನ್ನು ತಾಳಿ ತನ್ನ ಸೇನಾಸಮೇತನಾಗಿ ಅರ್ಜುನನಿರುವ ಕಡೆಗೆ ಬಂದನು

೩೮. ಆಗ ಕಿರಾತಸೇನೆಯು ಬರುತ್ತಿರುವುದನ್ನು ಕಂಡು ಪಾಂಡುಪುತ್ರನಾದ ಅರ್ಜುನನು ಬಿಲ್ಲುಬಾಣಗಳನ್ನು ಹಿಡಿದು ಎದುರಾಗಿ ಬಂದುನಿಂತನು.

೩೯. ಅನಂತರ ಕಿರಾತನು ಮತ್ತೊಮ್ಮೆ ತನ್ನ ಚಾರನನ್ನು ಕಳುಹಿಸಿ ಅವನ ಮುಖಾಂತರ ಮಹಾತ್ಮನಾದ ಅರ್ಜುನನಿಗೆ ಈ ರೀತಿ ತಿಳಿಸಿದನು.

೪೦. ಎಲೈ ತಪಸ್ವಿಯೇ. ಈ ಕಿರಾತಸೇನೆಯನ್ನು ನೋಡು. ಆ ಬಾಣವನ್ನು ಕೊಟ್ಟು, ಈಗಲೇ ಹೊರಡು. ಈ ಸಣ್ಣ ಕೆಲಸಕ್ಕೋಸ್ಕರ ಏತಕ್ಕೆ ಮರಣಕ್ಕೆ ಗುರಿಯಾಗಬಯಸುವೆ ?

೪೧. ನಿನ್ನ ಸಹೋದರರೆಲ್ಲರೂ ದುಃಖಿತರಾಗುವರು. ನಿನ್ನ ಹೆಂಡತಿಯು ಮತ್ತಷ್ಟು ಗೋಳಾಡುವಳು. ಈಗ ನಿನ್ನಕೈಯಿಂದ ಭೂಮಿಯು ಜಾರಿ ಹೋಗುವುದೆಂದು ನಾನು ಎಣಿಸುವೆನು ಎಂದನು.

॥ ನಂದೀಶ್ವರ ಉವಾಚ ॥

ಇತ್ಯುಕ್ತಂ ಪರಮೇಶೇನ ಪಾರ್ಥದಾರ್ಢ್ಯಪರೀಕ್ಷಯಾ ।
ಸರ್ವಥಾರ್ಜುನರಕ್ಷಾರ್ಥಂ ಧೃತರೂಪೇಣ ಶಂಭುನಾ ॥ ೪೨ ॥

ಇತ್ಯುಕ್ತಸ್ತು ತದಾಗತ್ಯ ಸ ಗಣಶ್ಶಂಕರಸ್ಯ ತತ್ ।
ವಿಸ್ತರಾದ್ವೃತ್ತಮಖಿಲಮರ್ಜುನಾಯ ನ್ಯವೇದಯತ್ ॥ ೪೩ ॥

ತಚ್ಛ್ರುತ್ವಾ ತು ಪುನಃ ಪ್ರಾಹ ಪಾರ್ಥಸ್ತಂ ದೂತಮಾಗತಂ ।
ನಾಹಿಂಸೇಪತಯೇ ವಾಕ್ಯಂ ವಿಪರೀತಂ ಭವಿಷ್ಯತಿ ॥ ೪೪ ॥

ಯದ್ಯಹಂ ಚೈವ ತೇ ಬಾಣಂ ಯಚ್ಛಾಮಿ ಚ ಮದೀಯಕಂ ।
ಕುಲಸ್ಯ ದೂಷಣಂ ಚಾಪಂ ಭವಿಷ್ಯಾಮಿ ನ ಸಂಶಯಃ ॥ ೪೫ ॥

ಭ್ರಾತರಶ್ಚೈವ ದುಃಖಾರ್ತಾ ಭವಂತು ಚ ತಥಾ ಧ್ರುವಂ ।
ವಿದ್ಯಾಶ್ಚ ನಿಷ್ಫಲಾ ಮೇ ಸ್ಯುಸ್ತಸ್ಮಾದಾಗಚ್ಛ ವೈ ಧ್ರುವಂ ॥ ೪೬ ॥

---

೪೨ ಓ ಸನತ್ಕುಮಾರ, ಹೀಗೆ ಆ ಪಾರ್ಥನ ಮನೋದಾರ್ಢ್ಯವನ್ನು ಪರೀಕ್ಷಿಸಬೇಕೆಂದು ಅದೇ ಪಾರ್ಥನನ್ನು ಸರ್ವರೀತಿಯಿಂದಲೂ ಸಂರಕ್ಷಿಸಲೋಸುಗವೇ ವೇಷಾಂತರವನ್ನು ಧರಿಸಿದ್ದ ಆ ಪರಶಿವನು ನುಡಿದನು

೪೩. ಈ ರೀತಿಯಾಗಿ ಶಂಕರನು ತನ್ನ ಅನುಚರನಿಗೆ ತಿಳಿಸಿದುದಂತೆಯೇ ಆ ಶಂಕರನ ಕಿಂಕರನೂ ಅಲ್ಲಿಗೆ ಬಂದು, ಆ ವೃತ್ತಾಂತವೆಲ್ಲವನ್ನೂ ಅರ್ಜುನನಿಗೆ ತಿಳಿಸಿದನು

೪೪ ಈ ರೀತಿ ಬೇಗಬೇಗನೆ ಬಂದು ಸರಸರನೆ ನುಡಿದ ಆ ಕಿರಾತಾನುಚರನ ಮಾತನ್ನು ಕೇಳಿ ಅರ್ಜುನನು ಅವನ ಮೂಲಕ ಕಿರಾತಸೇನಾನಾಯಕನಿಗೆ ಈ ರೀತಿ ಹೇಳಿಕಳುಹಿಸಿದನು ಹೇಳು, ಇದೆಲ್ಲವೂ ತಲೆಕೆಳಗಾಗಿ ಆಗುವುದು

೪೫. ನಾನೇನಾದರೂ ನಿನಗೆ ನನ್ನೀಬಾಣವನ್ನು ಕೊಟ್ಟುಬಿಡುವವನಾದರೆ ಖಂಡಿತವಾಗಿಯೂ ಕುಲಕ್ಕೆ ಕೆಟ್ಟಹೆಸರನ್ನು ತರುವೆನು

೪೬. ನನ್ನ ಒಡಹುಟ್ಟಿದವರು ದುಃಖವನ್ನಾದರೂ ಪಡೆಯಲಿ ನಾನು ಕಲಿತ ವಿದ್ಯೆಗಳೆಲ್ಲವೂ ಅಪ್ರಯೋಜಕವಾದರೂ ಆಗಲಿ ಚಿಂತೆಯಿಲ್ಲ ಆದ್ದರಿಂದ ಖಂಡಿತವಾಗಿಯೂ ನೀನು ಹೊರಟು ಬಾ.

ಸಿಂಹಶ್ಚೈವ ಶೃಗಾಲಾದ್ವಾ ಭೀಶೋ ನೈವ ಮಯಾ ಶ್ರುತಃ ।
ತಥಾ ವನೇಚರಾದ್ರಾಜಾ ನ ಬಿಭೇತಿ ಕದಾಚನ ॥ ೪೭ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತಸ್ತಂ ಪುನರ್ಗತ್ವಾ ಸ್ವಾಮಿನಂ ಪಾಂಡವೇನ ಸಃ ।
ಸರ್ವಂ ನಿವೇದಯಾಮಾಸ ತದುಕ್ತಂ ಹಿ ವಿಶೇಷತಃ ॥ ೪೮ ॥

ಅಥ ಸೋಽಪಿ ಕಿರಾತಾಹ್ವೋ ಮಹಾದೇವಸ್ಸಸೈನ್ಯಕಃ ।
ತಚ್ಛ್ರುತ್ವಾ ಸೈನ್ಯಸಂಯುಕ್ತೋ ಹ್ಯರ್ಜುನಂ ಚಾಗಮತ್ತದಾ ॥ ೪೯ ॥

ಇತಿ ಶ್ರೀ ಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಕಿರಾತಾವತಾರೇ ಭಿಲ್ಲಾರ್ಜುನಸಂವಾದೋ ನಾಮ
ಚತ್ವಾರಿಂಶೋಽಧ್ಯಾಯಃ.

---

೪೭. ಸಿಂಹವೆಲ್ಲಿಯಾದರೂ ನರಿಗೆ ಹೆದರಿದುದನ್ನು ಇದುವರೆಗೆ ನಾನು ಕೇಳಿಲ್ಲ. ಅದೇರೀತಿಯಾಗಿ ಕಾಡಿನಲ್ಲಿ ಅಲೆಯುವವನೊಬ್ಬನಿಗೆ ರಾಜನಾದವನು ಎಂದಿಗೂ ಹೆದರಲಾರನು.

೪೮. ಓ ಸನತ್ಕುಮಾರ, ಈ ರೀತಿಯಾಗಿ ಅರ್ಜುನನು ನುಡಿಯಲು ಆ ಕಿರಾತದೂತನು ತನ್ನ ಸ್ವಾಮಿಯ ಬಳಿಗೆ ತೆರಳಿ ಆ ವೃತ್ತಾಂತವೆಲ್ಲವನ್ನೂ ವಿಸ್ತಾರ ವಾಗಿ ತಿಳಿಸಿದನು.

೪೯. ಅನಂತರ ಆ ಮಾತನ್ನು ಕೇಳಿ ಕಿರಾತವೇಷಧಾರಿಯಾದ ಆ ಮಹೇ ಶ್ವರನು ತನ್ನ ಸೇನೆಯೊಡಗೂಡಿ ಅರ್ಜುನನ ಬಳಿಗೆ ಹೊರಟುಬಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಕಿರಾತಾವತಾರದಲ್ಲಿ ಭಿಲ್ಲಾರ್ಜುನ ಸಂವಾದವರ್ಣನವೆಂಬ ನಲವತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ಏಕಚತ್ವಾರಿಂಶೋಽಧ್ಯಾಯಃ

॥ ನಂದೀಶ್ವರ ಉವಾಚ ॥

**ತಮಾಗತಂ ತತೋ ದೃಷ್ಟ್ವಾ ಧ್ಯಾನಂ ಕೃತ್ವಾ ಶಿವಸ್ಯ ಸಃ ।**
**ಗತ್ವಾ ತತ್ರಾರ್ಜುನಸ್ತೇನ ಯುದ್ಧಂ ಚಕ್ರೇ ಸುದಾರುಣಂ ॥ ೧ ॥**

**ಗಣೈಶ್ಚ ವಿವಿಧೈಸ್ತೀಕ್ಷ್ಣೈರಾಯುಧೈಸ್ತಂ ನ್ಯಪೀಡಯತ್ ।**
**ತೈಸ್ತದಾ ಪೀಡಿತಃ ಪಾರ್ಥಃ ಸಸ್ಮಾರ ಸ್ವಾಮಿನಂ ಶಿವಂ ॥ ೨ ॥**

---

### ನಲವತ್ತೊಂದನೆಯ ಅಧ್ಯಾಯವು.

೧ ನಂದಿಕೇಶ್ವರನು ಹೇಳತೊಡಗಿದನು:—ಆ ಭಿಲ್ಲಾಧಿಪತಿಯು ಬಂದುದನ್ನು ಕಂಡು ಅರ್ಜುನನು ಶಿವನನ್ನು ಧ್ಯಾನಮಾಡಿ, ಸ್ವಲ್ಪ ಮುಂದೆಬಂದು ಅವನೊಡನೆ ಘೋರವಾಗಿ ಯುದ್ಧವನ್ನು ಮಾಡಿದನು

೨. ಆಗ ಆ ಭಿಲ್ಲನು ತನ್ನ ಕಡೆಯ ಭಟರಿಂದಲೂ, ಬಗೆಬಗೆಯ ಕೂರಾದ ಆಯುಧಗಳಿಂದಲೂ ಆ ಅರ್ಜುನನನ್ನು ಹಿಂಸೆಪಡಿಸಿದನು ಆಗ ಅವರಿಂದ ಪೀಡಿಸಲ್ಪಟ್ಟ ಅರ್ಜುನನು ಪ್ರಭುವಾದ ಶಂಕರನನ್ನು ಸ್ಮರಿಸಿದನು.

**ಅರ್ಜುನಶ್ಚ ತದಾ ತೇಷಾಂ ಬಾಣಾವಲಿಮಥಾಚ್ಛಿನತ್ ।**
**ಯದಾ ಯುದ್ಧಂ ಚ ತೈಃ ಕ್ಷಿಪ್ತಂ ತತಃ ಶರ್ವಂ ಪರಾಮೃಶತ್ ॥ ೩ ॥**

**ಪೀಡಿತಾಸ್ತೇ ಗಣಾಸ್ತೇನ ಯಯುಶ್ಚೈವ ದಿಶೋ ದಶ ।**
**ಗಣೇಶಾ ವಾರಿತಾಸ್ತೇ ಚ ನಾಜಗ್ಮುಸ್ಸ್ವಾಮಿನಂ ಪ್ರತಿ ॥ ೪ ॥**

**ಶಿವಶ್ಚೈವಾರ್ಜುನಶ್ಚೈವ ಯುಯುಧಾತೇ ಪರಸ್ಪರಂ ।**
**ನಾನಾಯುಧೈಶ್ಚಾಯುಧೈರ್ಹಿ ಮಹಾಬಲಪರಾಕ್ರಮೌ ॥ ೫ ॥**

**ಶಿವೋಽಪಿ ಮನಸಾ ನೂನಂ ದಯಾಂ ಕೃತ್ವಾರ್ಜುನಂ ಹ್ಯಗಾತ್ ।**
**ಅರ್ಜುನಶ್ಚ ದೃಢಂ ತತ್ರ ಪ್ರಹಾರಂ ಕೃತವಾಂಸ್ತದಾ ॥ ೬ ॥**

**ಆಯುಧಾನಿ ಶಿವಸ್ಸೋಽನ್ಯೈ ಹ್ಯರ್ಜುನಸ್ಯಾಚ್ಛಿನತ್ತದಾ ।**
**ಕವಚಾನಿ ಚ ಸರ್ವಾಣಿ ಶರೀರಂ ಕೇವಲಂ ಸ್ಥಿತಂ ॥ ೭ ॥**

೩. ಬಳಿಕ ಆ ಅರ್ಜುನನು ಶಿವನನ್ನು ನೆನೆಯುತ್ತಾ ಅವರು ಬಿಟ್ಟ ಬಾಣ ಪರಂಪರೆಗಳನ್ನು ಸರಸರನೆ ಕತ್ತರಿಸಿಬಿಟ್ಟನು.

೪. ಅವನ ಏಟನ್ನು ತಾಳಲಾರದೆ ಹಿಂಸೆಗೊಳಗಾದ ವೇಷಧಾರಿಗಳಾದ ಆ ಪ್ರಮಥರು, ಗಣಪತಿಯು ತಮ್ಮನ್ನು ತಡೆಯುತ್ತಿದ್ದರೂ ಲೆಕ್ಕಿಸದೆ ದಿಕ್ಕುದಿಕ್ಕಿಗೆ ಚೆದುರಿಹೋದರು. ಮತ್ತೆ ಒಡೆಯನ ಬಳಿಗೆ ಬರಲೇ ಇಲ್ಲ.

೫. ಆಗ ಮಹಾಬಲಶಾಲಿಗಳೂ ಸಾಹಸಶೀಲರೂ ಆದ ಆ ಶಿವಾರ್ಜುನರಿಬ್ಬರೇ ಪರಸ್ಪರವಾಗಿ ನಾನಾವಿಧವಾದ ಆಯುಧಗಳಿಂದ ಹೋರಾಡತೊಡಗಿದರು.

೬. ಶಿವನು ಅರ್ಜುನನ ಮೇಲೆ ದಯೆಯಿಟ್ಟು ಅತಿ ತೀವ್ರವಾಗಿ ಹೋರಾಡದೆ ಮೆಲ್ಲನೆ ಹೋರಾಡುವನು. ಆದರೆ ಅರ್ಜುನನು ಎದುರಾಳಿಯೆಂದೇ ನೆಚ್ಚಿ ಅವನನ್ನು ಬಲವಾಗಿ ಪ್ರಹರಿಸುವನು.

೭. ಆಗ ಶಿವನು ಅರ್ಜುನನ ಶರೀರವೊಂದು ಮಾತ್ರ ಉಳಿಯುವಂತೆ ಆಯುಧಗಳನ್ನೂ, ಕವಚಗಳನ್ನೂ ಎಲ್ಲವನ್ನೂ ಕತ್ತರಿಸಿಬಿಟ್ಟನು.

ತದಾರ್ಜುನಶ್ಶಿವಂ ಸ್ಮೃತ್ವಾ ಮಲ್ಲಯುದ್ಧಂ ಚಕಾರ ಸಃ ।
ನಾಹಿನೀಪತಿನಾ ತೇನ ಭಯಾಕ್ಲಿಷ್ಟೋಽಪಿ ಧೈರ್ಯವಾನ್ ॥ ೮ ॥

ತದ್ಯುದ್ಧೇನ ಮಹೀ ಸರ್ವಾ ಚಕಂಪೇ ಸಸಮುದ್ರಕಾ ।
ದೇವಾ ದುಃಖಂ ಸಮಾಪನ್ನಾಃ ಕಿಂ ಭವಿಷ್ಯತಿ ವಾ ಪುನಃ ॥ ೯ ॥

ಏತಸ್ಮಿನ್ನಂತರೇ ದೇವಃ ಶಿವೋ ಗಗನಮಾಸ್ಥಿತಃ ।
ಯುದ್ಧಂ ಚಕಾರ ತತ್ರಸ್ಥಸ್ಸೋಽರ್ಜುನಶ್ಚ ತಥಾಽಕರೋತ್ ॥ ೧೦ ॥

ಉಡ್ಡೀಯೋಡ್ಡೀಯ ತೌ ಯುದ್ಧಂ ಚಕ್ರತುರ್ದೇವಸಾರ್ಥಿನೌ ।
ದೇವಾಶ್ಚ ವಿಸ್ಮಯಂ ಪ್ರಾಪ್ತಾ ಪರಂ ದೃಷ್ಟ್ವಾ ತದಾದ್ಭುತಂ ॥ ೧೧ ॥

ಅಥಾರ್ಜುನೋತ್ತರಂ ಜ್ಞಾತ್ವಾ ಸ್ಮೃತ್ವಾ ಶಿವಪದಾಂಬುಜಂ ।
ದಧಾರ ಪಾದಯೋಸ್ತಂ ವೈ ತದ್ಧ್ಯಾನಾದಾಪ್ತಸದ್ಬಲಃ ॥ ೧೨ ॥

---

೮ ಆಗ ಕಿರಾತಸೇನಾಪತಿಯಿಂದ ಆ ರೀತಿ ಪೀಡಿತನಾದ ಅರ್ಜುನನು ಧೈರ್ಯವನ್ನು ವಹಿಸಿ, ಶಿವನನ್ನು ಮನಸ್ಸಿನಲ್ಲಿ ನೆನೆದು, ಅವನೊಡನೆ ಬಾಹುಯುದ್ಧಕ್ಕೆ ಮೊದಲುಮಾಡಿದನು

೯. ಇವರ ಹೋರಾಟದಿಂದ ಭೂಮಿಯೂ ಸಮುದ್ರಗಳೂ ಸಹ ನಡುಗಿ ಹೋದವು. ಆಗ ದೇವತೆಗಳು ಮುಂದೇನಾಗುವುದೋ ಎಂದು ಭಯದಿಂದ ಕಳವಳ ಪಡತೊಡಗಿದರು

೧೦. ಇಷ್ಟರಲ್ಲಿ ಶಿವನು ಆಕಾಶಕ್ಕೆ ನೆಗೆದು ಅಲ್ಲಿಯೇ ನಿಂತು ಹೋರಾಡ ತೊಡಗಿದನು ಆಗ ಅರ್ಜುನನೂ ಸಹ ಅದೇರೀತಿ ಹೋರಾಡತೊಡಗಿದನು

೧೧ ಶಂಕರನೂ ಅರ್ಜುನನೂ ಹಾರುಹಾರುತ್ತಾ ಕುಪ್ಪಳಿಸುತ್ತಾ ಯುದ್ಧಮಾಡಹತ್ತಿದರು ಆಗ ಅತ್ಯದ್ಭುತವಾದ ಆ ಯುದ್ಧವನ್ನು ಕಂಡು ದೇವತೆಗಳೂ ಬೆರಗಾದರು.

೧೨ ಬಳಿಕ ಅರ್ಜುನನು ಶಿವನ ಅಡಿದಾವರೆಯನ್ನು ಧ್ಯಾನಿಸುತ್ತಾ ಅದರಿಂದ ಉಂಟಾದ ಮಹಾಬಲವನ್ನು ಪಡೆದು, ಆ ಕಿರಾತನನ್ನು ಕಾಲ್ಗಳಬಳಿ ಹಿಡಿದುಬಿಟ್ಟನು

ಧೃತ್ವಾ ಪಾದೌ ತದಾ ತಸ್ಯ ಭ್ರಾಮಯಾಮಾಸ ಸೋಽರ್ಜುನಃ ।
ವಿಜಹಾಸ ಮಹಾದೇವೋ ಭಕ್ತವತ್ಸಲ ಊತಿಕೃತ್ ॥ ೧೩ ॥

ದಾತುಂ ಸ್ವದಾಸತಾಂ ತಸ್ಮೈ ಭಕ್ತವಶ್ಯತಯಾ ಮುನೇ ।
ಶಿವೇನೈವ ಕೃತಂ ಹ್ಯೇತಚ್ಚರಿತಂ ನಾನ್ಯಥಾ ಭವೇತ್ ॥ ೧೪ ॥

ಪಶ್ಚಾದ್ವಿಹಸ್ಯ ತತ್ರೈವ ಶಂಕರೋ ರೂಪಮದ್ಭುತಂ ।
ದರ್ಶಯಾಮಾಸ ಸಹಸಾ ಭಕ್ತವಶ್ಯತಯಾ ಶುಭಂ ॥ ೧೫ ॥

ಯಥೋಕ್ತಂ ವೇದಶಾಸ್ತ್ರೇಷು ಪುರಾಣೇ ಪುರುಷೋತ್ತಮಂ ।
ವ್ಯಾಸೋಪದಿಷ್ಟಂ ಧ್ಯಾನಾಯ ತಸ್ಯ ಯತ್ಸರ್ವಸಿದ್ಧಿದಂ ॥ ೧೬ ॥

ತದ್ದೃಷ್ಟ್ವಾ ಸುಂದರಂ ರೂಪಂ ಧ್ಯಾನಪ್ರಾಪ್ತಂ ಶಿವಸ್ಯ ತು ।
ಬಭೂವ ವಿಸ್ಮಿತೋಽತೀವ ಹ್ಯರ್ಜುನೋ ಲಜ್ಜಿತಃ ಸ್ವಯಂ ॥ ೧೭ ॥

---

೧೩. ಅವನಕಾಲನ್ನು ಹಿಡಿಯುತ್ತಲೇ ಅವನನ್ನು ಅರ್ಜುನನು ಗರಗರನೆ ತಿರುಗಿಸಿಬಿಟ್ಟನು. ಆಗ ಭಕ್ತವತ್ಸಲನೂ ಲೀಲಾಮೂರ್ತಿಯೂ ಆದ ಶಂಕರನು ನಸುನಕ್ಕನು.

೧೪. ಓ ಮುನೀಂದ್ರ! ಆ ಶಿವನು ಭಕ್ತಪರಾಧೀನನಾದುದರಿಂದ ಅರ್ಜುನನಿಗೆ ತನ್ನ ದಾಸತ್ವವನ್ನು ಅನುಗ್ರಹಿಸಲೋಸುಗವೇ ಈರೀತಿ ಲೀಲೆಯನ್ನು ಮಾಡಿದನು. ಇಲ್ಲದಿದ್ದರೆ ಆ ಶಿವನನ್ನು ಹೇಗೆ ಹಿಡಿಯಲು ಸಾಧ್ಯವಾಗುತ್ತಿತ್ತೋ ?

೧೫-೧೬. ಬಳಿಕ ಭಕ್ತಪರಾಧೀನನಾದ ಆ ಶಂಕರನು ಆರೀತಿ ನಕ್ಕಕೂಡಲೇ ಥಟ್ಟನೆ ಅತ್ಯದ್ಭುತವೂ ಶುಭಕರವೂ ಆದ ತನ್ನ ರೂಪವನ್ನು ತೋರಿದನು. ಆ ದಿವ್ಯ ರೂಪವು ವೇದ ಮತ್ತು ಶಾಸ್ತ್ರಗಳಲ್ಲಿ ಹೇಗೆ ಉಕ್ತವಾಗಿರುವುದೋ ಪುರಾಣದಲ್ಲಿ ಪುರುಷೋತ್ತಮನೆಂಬುದಾಗಿ ಯಾವರೀತಿ ವರ್ಣಿತವಾಗಿದೆಯೋ ಮತ್ತು ವ್ಯಾಸ ಮಹರ್ಷಿಯು ಅರ್ಜುನನಿಗೆ ಉಪದೇಶವಿತ್ತಾಗ ಸಕಲಸಿದ್ಧಿಗಳೂ ದೊರೆಯಲು ಎಂತಹ ರೂಪವನ್ನು ಧ್ಯಾನಮಾಡಬೇಕೆಂದು ಉಪದೇಶಮಾಡಿದ್ದನೋ ಅದಕ್ಕನುಸಾರವಾಗಿಯೇ ಇತ್ತು.

೧೭. ತಾನು ನಿತ್ಯವೂ ಯಾವ ರೂಪವನ್ನು ಧ್ಯಾನಮಾಡುತ್ತಿದ್ದನೋ ಅಂತಹ ದಿವ್ಯವೂ ಸುಂದರವೂ ಆದ ಶಿವನ ರೂಪವನ್ನು ಕಂಡು ಅರ್ಜುನನು ಮಿತಿಮೀರಿ ಆಶ್ಚರ್ಯವನ್ನು ತಾಳಿದುದಲ್ಲದೆ ಬಹುವಾಗಿ ಲಜ್ಜೆಗೊಂಡನು.

ಅಹೋ ಶಿವಶ್ಶಿವಸ್ಸೋಽಯಂ ಯೋ ಮೇ ಪ್ರಭುತಯಾ ವೃತಃ ।
ತ್ರಿಲೋಕೇಶಃ ಸ್ವಯಂ ಸಾಕ್ಷಾದ್ಧಾ ಕೃತಂ ಕಿಂ ಮಯಾಽಧುನಾ ॥ ೧೮ ॥

ಪ್ರಭೋರ್ಬಲವತೀ ಮಾಯಾ ಮಾಯಿನಾಮಪಿ ಮೋಹಿನೀ ।
ಕಿಂ ಕೃತಂ ರೂಪಮಾಚ್ಛಾದ್ಯ ಪ್ರಭುಣಾ ಛಲಿತೋ ಹ್ಯಹಂ ॥ ೧೯ ॥

ಧಿಯೇತಿ ಸಂವಿಚಾರ್ಯೈವಂ ಸಾಂಜಲಿರ್ನತಮಸ್ತಕಃ ।
ಪ್ರಣನಾಮ ಪ್ರಭುಂ ಪ್ರೀತ್ಯಾ ತದೋವಾಚ ಸ ಖಿನ್ನಧೀಃ ॥ ೨೦ ॥

॥ ಅರ್ಜುನ ಉವಾಚ ॥

ದೇವದೇವ ಮಹಾದೇವ ಕರುಣಾಕರ ಶಂಕರ ।
ಮಮಾಪರಾಧಂ ಸರ್ವೇಶ ಕ್ಷಂತವ್ಯಶ್ಚ ತ್ವಯಾ ಪುನಃ ॥ ೨೧ ॥

ಕಿಂ ಕೃತಂ ರೂಪಮಾಚ್ಛಾದ್ಯ ಛಲಿತೋಽಸ್ಮಿ ತ್ವಯಾಽಧುನಾ ।
ಧಿಙ್ಮಾಂ ಸಮರಕರ್ತಾರಂ ಸ್ವಾಮಿನಾ ಭವತಾ ಪ್ರಭೋ ॥ ೨೨ ॥

---

೧೮ ಅಬ್ಬಾ! ಇದೇನಚ್ಚರಿಯು ? ನಾನು ಯಾರನ್ನು ಪ್ರಭುವೆಂದು ಬಗೆದಿದ್ದೆನೋ ಆ ಶಿವನೇ ಇವನು ಸಾಕ್ಷಾತ್ ತ್ರಿಲೋಕಾಧಿಪತಿಯಾದ ಶಂಕರನೇ ಇವನು. ನಾನೀಗ ಅದೆಂತಹ ಕೆಲಸವನ್ನು ಮಾಡಿದ್ದೆನು ?

೧೯. ನನ್ನ ಪ್ರಭುವಿನ ಮಾಯೆಯು, ಮಾಯೆಯನ್ನು ತೋರುವವರೆಲ್ಲರನ್ನೂ ಮರುಳುಗೊಳಿಸುವಷ್ಟು ಪ್ರಭಾವಯುತವಾದುದು ನನ್ನೀಒಡೆಯನು ಈರೀತಿ ರೂಪವನ್ನು ಮರೆಮಾಚಿ ಎಂತಹ ಕೆಲಸವನ್ನು ಮಾಡಿಬಿಟ್ಟನು ! ನಾನು ಮೋಸಗೊಳಿಸಲ್ಪಟ್ಟೆನಲ್ಲಾ !

೨೦. ಈರೀತಿಯಾಗಿ ಮನಸ್ಸಿನಲ್ಲಿ ಆಲೋಚಿಸಿ ಅರ್ಜುನನು ಪ್ರಭುವಾದ ಶಂಕರನಿಗೆ ಪ್ರೀತಿಯಿಂದ ಅಂಜಲಿಬದ್ಧನಾಗಿ ತಲೆಬಾಗಿ ನಮಸ್ಕಾರಮಾಡಿದನು. ಆಗ ಅವನು ಖೇದದಿಂದ ಇಂತೆಂದನು

೨೧ ದೇವಾದಿದೇವನೂ ಕರುಣಾನಿಧಿಯೂ ಮಹೇಶ್ವರನೂ ಆದ ಎಲೈ ಶಂಕರನೇ, ಹೇ ಸರ್ವೇಶ, ನನ್ನೀ ಅಪರಾಧವನ್ನು ನೀನು ಮೊದಲು ಕ್ಷಮಿಸಬೇಕು.

೨೨. ಎಲೈ ಪ್ರಭುವೇ, ನಿನ್ನ ರೂಪವನ್ನು ಮರೆಸಿಕೊಂಡುಬಂದು ಏನು ಮಾಡಿಬಿಟ್ಟೆ? ನಿನ್ನಿಂದ ನಾನೀಗ ಮೋಸಹೋದೆನು ಪ್ರಭುವಾದ ನಿನ್ನೊಡನೆ ಹೋರಾಡಿದ ನನಗೆ ಧಿಕ್ಕಾರವಿರಲಿ.

। ನಂದೀಶ್ವರ ಉವಾಚ ॥

ಇತ್ಯೇವಂ ಪಾಂಡವಸ್ಸೋಽಥ ಪಶ್ಚಾತ್ತಾಪಮವಾಪ ಸಃ ।
ಪಾದಯೋರ್ನಿಪಪಾತಾಶು ಶಂಕರಸ್ಯ ಮಹಾಪ್ರಭೋಃ ॥ ೨೩ ॥

ಅಥೇಶ್ವರಃ ಪ್ರಸನ್ನಾತ್ಮಾ ಪ್ರತ್ಯುವಾಚಾರ್ಜುನಂ ಚ ತಂ ।
ತಮಾಶ್ವಾಸ್ಯೇತಿ ಬಹುಶೋ ಮಹೇಶೋ ಭಕ್ತವತ್ಸಲಃ ॥ ೨೪ ॥

॥ ಶಂಕರ ಉವಾಚ ॥

ನ ಖಿದ್ಯ ಪಾರ್ಥ ಭಕ್ತೋಽಸಿ ಮಮ ತ್ವಂ ಹಿ ವಿಶೇಷತಃ ।
ಪರೀಕ್ಷಾರ್ಥಂ ಮಯಾ ತೇಽದ್ಯ ಕೃತಮೇವಂ ಶುಚಂ ಜಹಿ ॥ ೨೫ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ತಂ ಸ್ವಹಸ್ತಾಭ್ಯಾಮುತ್ಥಾಪ್ಯ ಪ್ರಭುರರ್ಜುನಂ ।
ವಿಲಜ್ಜಂ ಕಾರಯಾಮಾಸ ಗಣೈಶ್ಚ ಸ್ವಾಮಿನೋ ಗಣೈಃ ॥ ೨೬ ॥

ಪುನಶ್ಶಿವೋಽರ್ಜುನಂ ಪ್ರಾಹ ಪಾಂಡವಂ ವೀರಸಂಮತಂ ।
ಹರ್ಷಯನ್ಸರ್ವಥಾ ಪ್ರೀತ್ಯಾ ಶಂಕರೋ ಭಕ್ತವತ್ಸಲಃ ॥ ೨೭ ॥

---

೨೩. ಓ ಸನತ್ಕುಮಾರ, ಹೀಗೆ ಆ ಪಾಂಡುಪುತ್ರನಾದ ಅರ್ಜುನನು ಬಹು ಪಶ್ಚಾತ್ತಾಪವನ್ನು ಪಟ್ಟು ಕೂಡಲೇ ಮಹಾಪ್ರಭುವಾದ ಆ ಶಂಕರನ ಕಾಲ್ಗಳಮೇಲೆ ಥಟ್ಟನೆ ಬಿದ್ದನು.

೨೪. ಬಳಿಕ ಭಕ್ತವತ್ಸಲನಾದ ಆ ಮಹೇಶ್ವರನು ಪ್ರಸನ್ನತೆಯನ್ನು ಹೊಂದಿ ಆತನನ್ನು ಬಹುವಾಗಿ ಸಂತೈಸಿ ಅವನನ್ನಿಂತೆಂದು ನುಡಿದನು.

೨೫. ಎಲೈ ಪಾರ್ಥನೇ, ಖೇದ ಪಡದಿರು. ನೀನು ನನ್ನ ಅಚ್ಚುಮೆಚ್ಚಿನ ಭಕ್ತನಾಗಿರುವೆ. ನಿನ್ನನ್ನು ಪರೀಕ್ಷಿಸಲೆಂದೇ ಹೀಗೆ ಮಾಡಿದೆನು. ಈ ಕೊರಗನ್ನು ಬಿಡು

೨೬. ಓ ಮುನೀಂದ್ರ, ಹೀಗೆ ಹೇಳಿ ಆ ಪ್ರಭುವು ತನ್ನ ಕೈಗಳಿಂದಲೇ ಅರ್ಜುನನ್ನು ಮೇಲಕ್ಕೆಬ್ಬಿಸಿ ನಿಲ್ಲಿಸಿದನು. ಬಳಿಕ ತನ್ನ ಗಣಗಳಿಂದ ಅವನು ನಾಚಿಕೆತೊರೆಯುವಂತೆ ಸಂತೈಸಿದನು.

೨೭. ಆಗ ಭಕ್ತವತ್ಸಲನಾದ ಶಂಕರನು ಪಾಂಡುಪುತ್ರನಾದ ಅರ್ಜುನನನ್ನು ಕುರಿತು, ಅವನಿಗೆ ಸರ್ವಪ್ರಕಾರದಿಂದಲೂ ಸಂತೋಷವನ್ನುಂಟುಮಾಡುತ್ತಾ ವೀರ ಜನೋಚಿತವಾದ ಮಾತನ್ನಾಡಿದನು.

॥ ಶಿವ ಉವಾಚ ॥

ಹೇ ಪಾರ್ಥ ಪಾಂಡವಶ್ರೇಷ್ಠ ಪ್ರಸನ್ನೋಽಸ್ಮಿ ವರಂ ವೃಣು ।
ಪ್ರಹಾರೈಸ್ತಾಡನೈಸ್ತೇಽದ್ಯ ಪೂಜನಂ ಮಾನಿತಂ ಮಯಾ ॥ ೨೮ ॥

ಇಚ್ಛಯಾ ಚ ಕೃತಂ ಮೇಽದ್ಯ ನಾಪರಾಧಸ್ತವಾಧುನಾ ।
ನಾದೇಯಂ ವಿದ್ಯತೇ ತುಭ್ಯಂ ಯದಿಚ್ಛಸಿ ವೃಣೀಷ್ವ ತತ್ ॥ ೨೯ ॥

ತೇ ಶತ್ರುಷು ಯಶೋರಾಜ್ಯಸ್ಥಾಪನಾಯ ಶುಭಂ ಕೃತಂ ।
ಏತದ್ದುಃಖಂ ನ ಕರ್ತವ್ಯಂ ವೈಕ್ಲವ್ಯಂ ಚ ತ್ಯಜಾಖಿಲಂ ॥ ೩೦ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತಸ್ತ್ವರ್ಜುನಸ್ತೇನ ಪ್ರಭುಣಾ ಶಂಕರೇಣ ಸಃ ।
ಉವಾಚ ಶಂಕರಂ ಭಕ್ತ್ಯಾ ಸಾವಧಾನತಯಾ ಸ್ಥಿತಃ ॥ ೩೧ ॥

---

೨೮ ಎಲೈ ಪಾಂಡವರಲ್ಲೆಲ್ಲಾ ಶ್ರೇಷ್ಠನಾದ ಅರ್ಜುನನೇ, ನಾನು ನಿನಗೆ ಪ್ರಸನ್ನನಾಗಿರುವೆನು. ಬೇಕಾದ ವರವನ್ನು ಕೇಳು ನೀನಿತ್ತ ಪ್ರಹಾರಗಳನ್ನೂ ತಾಡನಗಳನ್ನೂ ಪೂಜೆಯೆಂದೇ ಭಾವಿಸುವೆನು.

೨೯ ಇವೆಲ್ಲವನ್ನೂ ನನ್ನ ಇಚ್ಛೆಯಿಂದಲೇ ಮಾಡಿರುವೆನು. ಇದರಲ್ಲಿ ನಿನ್ನಾವ ಅಪರಾಧವೂ ಇಲ್ಲ ನಿನಗೆ ಕೊಡಬಾರದುದು ಯಾವುದೂ ಇಲ್ಲ. ನಿನಗೆ ಬೇಕಾದ ವರನನ್ನು ಕೇಳಿಕೊಳ್ಳುವವನಾಗು.

೩೦. ನಿನ್ನ ಶತ್ರುಗಳಲ್ಲೆಲ್ಲಾ ನಿನ್ನ ಯಶಸ್ಸು ಹಬ್ಬಲೆಂದೂ, ನೀನು ಅವರ ಮೇಲೆ ನಿನ್ನ ರಾಜ್ಯವನ್ನು ನಡೆಸಲೆಂದೂ ನಾನೇ ಇಂತು ಈ ಶುಭಕಾರ್ಯವನ್ನು ನಡೆಸಿದೆನು. ನೀನು ದುಃಖಪಡಬೇಕಾದ ಅವಶ್ಯಕತೆಯಿಲ್ಲ ನೀನೀಕೊರಗನ್ನು ಸಂಪೂರ್ಣವಾಗಿ ಬಿಡು ಎಂದನು.

೩೧. ಓ ಸನತ್ಕುಮಾರ, ಈರೀತಿಯಾಗಿ ಪ್ರಭುವಾದ ಶಂಕರನು ನುಡಿಯಲು, ಅರ್ಜುನನು ಭಕ್ತಿಯಿಂದ ಆ ಶಂಕರನಿಗೆ ಸಾವಧಾನಮನಸ್ಕನಾಗಿ ಬಿನ್ನವಿಸಿದನು.

॥ ಅರ್ಜುನ ಉವಾಚ ॥

ಭಕ್ತಪ್ರಿಯಸ್ಯ ಶಂಭೋಸ್ತೇ ಸುಪ್ರಭೋಃ ಕಿಂ ಸಮೀಹಿತಂ ।
ವರ್ಣನೀಯಂ ಮಯಾ ದೇವ ಕೃಪಾಲುಸ್ತ್ವಂ ಸದಾಶಿವ ॥ ೩೨ ॥

ಇತ್ಯುಕ್ತ್ವಾ ಸಂಸ್ತುತಿಂ ತಸ್ಯ ಶಂಕರಸ್ಯ ಮಹಾಪ್ರಭೋಃ ।
ಚಕಾರ ಪಾಂಡವಸ್ಸೋಽಥ ಸದ್ಭಕ್ತಿಂ ವೇದಸಂಮತಾಂ ॥ ೩೩ ॥

॥ ಅರ್ಜುನ ಉವಾಚ ॥

ನಮಸ್ತೇ ದೇವದೇವಾಯ ನಮಃ ಕೈಲಾಸವಾಸಿನೇ ।
ಸದಾಶಿವ ನಮಸ್ತುಭ್ಯಂ ಪಂಚವಕ್ತ್ರಾಯ ತೇ ನಮಃ ॥ ೩೪ ॥

ಕಪರ್ದಿನೇ ನಮಸ್ತುಭ್ಯಂ ತ್ರಿನೇತ್ರಾಯ ನಮೋಽಸ್ತು ತೇ ।
ನಮಃ ಪ್ರಸನ್ನರೂಪಾಯ ಸಹಸ್ರವದನಾಯ ಚ ॥ ೩೫ ॥

---

೩೨. ಹೇ ಸದಾಶಿವಮೂರ್ತಿಯೇ, ನನ್ನೊಡೆಯನೇ, ನನಗೆ ನಿನ್ನನ್ನು ಹೇಗೆ ತಾನೆ ವರ್ಣಿಸಲಸಾಧ್ಯವಾದೀತು? ಆದರೆ ನೀನು ಕರುಣಾಶಾಲಿಯಾಗಿರುವೆ. ಆದುದರಿಂದ ನಾನು ವರ್ಣಿಸುವೆನು.

೩೩. ಈರೀತಿಯಾಗಿ ಹೇಳಿ, ಆ ಅರ್ಜುನನು ಶಂಕರನನ್ನು ವೇದಸಮ್ಮತವೂ ಸದ್ಭಕ್ತಿಸಂಪೂರ್ಣವೂ ಆದಂತಹ ಸ್ತೋತ್ರಗಳಿಂದ ಸ್ತುತಿಸಲಾರಂಭಿಸಿದನು.

೩೪. ದೇವದೇವನಾದ ನಿನಗೆ ನಮಸ್ಕಾರವು. ಕೈಲಾಸವಾಸಿಯಾದ ನಿನಗೆ ನಮಸ್ಕಾರವು. ಎಲೈ ಸದಾಶಿವನೇ, ನಿನಗೆ ನಮಸ್ಕಾರವು. ಐದು ಮುಖಗಳುಳ್ಳ ನಿನಗೆ ನಮಸ್ಕಾರವು.

೩೫. ಕಪರ್ದಭೂಷಿತನಾದ ನಿನಗೆ ನಮಸ್ಕಾರವು. ತ್ರಿನೇತ್ರಶೋಭಿತನಾದ ನಿನಗೆ ನಮಸ್ಕಾರವು. ಪ್ರಸನ್ನರೂಪನೂ, ಸಹಸ್ರಮುಖಗಳುಳ್ಳವನೂ ಆದ ನಿನಗೆ ನಮಸ್ಕಾರವು.

ನೀಲಕಂಠ ನಮಸ್ತೇಽಸ್ತು ಸದ್ಯೋಜಾತಾಯ ವೈ ನಮಃ ।
ವೃಷಧ್ವಜ ನಮಸ್ತೇಽಸ್ತು ವಾಮಾಂಗಗಿರಿಜಾಯ ಚ ॥ ೩೬ ॥

ದಶದೋಷ ನಮಸ್ತುಭ್ಯಂ ನಮಸ್ತೇ ಪರಮಾತ್ಮನೇ ।
ಡಮರುಕಪಾಲಹಸ್ತಾಯ ನಮಸ್ತೇ ಮುಂಡಮಾಲಿನೇ ॥ ೩೭ ॥

ಶುದ್ಧಸ್ಫಟಿಕಸಂಕಾಶ ಶುದ್ಧಕರ್ಪೂರವರ್ಷ್ಮಣೇ ।
ಪಿನಾಕಪಾಣಯೇ ತುಭ್ಯಂ ತ್ರಿಶೂಲವರಧಾರಿಣೇ ॥ ೩೮ ॥

ವ್ಯಾಘ್ರಚರ್ಮೋತ್ತರೀಯಾಯ ಗಜಾಂಬರವಿಧಾರಿಣೇ ।
ನಾಗಾಂಗಾಯ ನಮಸ್ತುಭ್ಯಂ ಗಂಗಾಧರ ನಮೋಽಸ್ತು ತೇ ॥ ೩೯ ॥

ಸುಪಾದಾಯ ನಮಸ್ತೇಽಸ್ತು ಆರಕ್ತಚರಣಾಯ ಚ ।
ನಂದ್ಯಾದಿಗಣಸೇವ್ಯಾಯ ಗಣೇಶಾಯ ಚ ತೇ ನಮಃ ॥ ೪೦ ॥

---

೩೬. ಓ ನೀಲಕಂಠ, ನಿನಗೆ ನಮಸ್ಕಾರವು. ಸದ್ಯೋಜಾತನಾದ ನಿನಗೆ ನಮಸ್ಕಾರವು. ಹೇವೃಷಭಧ್ವಜ, ನಿನಗೆ ನಮಸ್ಕಾರವು ಎಡಭಾಗದಲ್ಲಿ ಗಿರಿನಂದಿನಿಯು ವಿರಾಜಿಸುತ್ತಿರುವ ಹೇ ಶಂಕರ, ನಿನಗೆ ನಮಸ್ಕಾರವು.

೩೭. ಹತ್ತು ಭುಜಗಳುಳ್ಳ ಓ ಪರಮಾತ್ಮ ನಿನಗೆ ನಮಸ್ಕಾರವು ಡಮರು, ಕಪಾಲಹಸ್ತನೂ, ಮುಂಡಮಾಲಾಧಾರಿಯೂ, ಆದ ನಿನಗೆ ನಮಸ್ಕಾರವು .

೩೮. ಸ್ಫಟಿಕದಂತೆ ಶುಭ್ರವಾದ ಮೈ ಬಣ್ಣವುಳ್ಳವನೂ, ಶುದ್ಧವಾದ ಕರ್ಪೂರ ದಂತೆನೆಯುವ ಶರೀರವುಳ್ಳವನೂ, ಪಿನಾಕಪಾಣಿಯೂ, ತ್ರಿಶೂಲಧಾರಿಯೂ ಆದ ನಿನಗೆ ನಮಸ್ಕಾರವು

೩೯ ಎಲೈ ಗಂಗಾಧರನೇ, ಹುಲಿಯ ಚರ್ಮವನ್ನು ಹೊದ್ದವನೂ, ಆನೆಯ ಚರ್ಮವನ್ನು ಉಟ್ಟಿರುವನೂ, ಮೈಯೆಲ್ಲಾ ಹಾವು ಸುತ್ತಿಕೊಂಡಿರುವವನೂ ಆದ ನಿನಗೆ ನಮಸ್ಕಾರವು.

೪೦. ಶುಭಕರವಾದ ಪಾದವುಳ್ಳವನೂ, ನಸುಗೆಂಪಾದ ಅಂಗಾಲುಳ್ಳವನೂ ಆದ ನಿನಗೆ ನಮಸ್ಕಾರವು. ನಂದಿಯೇ ಮೊದಲಾದ ಗಣಗಳಿಂದ ಸೇವಿಸಲ್ಪಡುವವನೂ ಪ್ರಮಥಗಣಗಳಿಗೆ ಸ್ವಾಮಿಯೂ ಆದ ನಿನಗೆ ನಮಸ್ಕಾರವು.

ನಮೋ ಗಣೇಶರೂಪಾಯ ಕಾರ್ತಿಕೇಯಾನುಗಾಯ ಚ ।
ಭಕ್ತಿದಾಯ ಚ ಭಕ್ತಾನಾಂ ಮುಕ್ತಿದಾಯ ನಮೋ ನಮಃ ॥ ೪೧ ॥

ಅಗುಣಾಯ ನಮಸ್ತೇಽಸ್ತು ಸಗುಣಾಯ ನಮೋ ನಮಃ ।
ಅರೂಪಾಯ ಸರೂಪಾಯ ಸಕಲಾಯಾಕಲಾಯ ಚ ॥ ೪೨ ॥

ನಮಃ ಕಿರಾತರೂಪಾಯ ಮದನುಗ್ರಹಕಾರಿಣೇ ।
ಯುದ್ಧಪ್ರಿಯಾಯ ವೀರಾಣಾಂ ನಾನಾಲೀಲಾನುಕಾರಿಣೇ ॥ ೪೩ ॥

ಯತ್ಕಿಂಚಿದ್ದೃಶ್ಯತೇ ರೂಪಂ ತತ್ತೇಜಸ್ತಾವಕಂ ಸ್ಮೃತಂ ।
ಚಿದ್ರೂಪಸ್ತ್ವಂ ತ್ರಿಲೋಕೇಷು ರಮಸೇಽನ್ವಯಭೇದತಃ ॥ ೪೪ ॥

ಗುಣಾನಾಂ ತೇ ನ ಸಂಖ್ಯಾಸ್ತಿ ಯಥಾ ಭೂರಜಸಾಮಿಹ ।
ಆಕಾಶೇ ತಾರಕಾಣಾಂ ಹಿ ಕಣಾನಾಂ ವೃಷ್ಟ್ಯಪಾಮಪಿ ॥ ೪೫ ॥

---

೪೧. ಗಣಪತಿಯ ಸ್ವರೂಪನೂ, ಕುಮಾರನಿಂದ ಹಿಂಬಾಲಿಸುವವನೂ ಭಕ್ತರಿಗೆ ಭೋಗಗಳನ್ನೂ ಮೋಕ್ಷವನ್ನೂ ಕರುಣಿಸುವವನೂ ಆದ ನಿನಗೆ ನಮಸ್ಕಾರವು.

೪೨. ಗುಣವರ್ಜಿತನಾದ ನಿನಗೆ ನಮಸ್ಕಾರವು. ಅದರಂತೆಯೇ ರೂಪವಿಲ್ಲದವನೂ ರೂಪವುಳ್ಳವನೂ ಕಲಾರಹಿತನೂ ಕಲಾಸಹಿತನೂ ಆದ ನಿನಗೆ ನಮಸ್ಕಾರವು

೪೩. ನನ್ನನ್ನು ಅನುಗ್ರಹಿಸುವ ಸಲುವಾಗಿ ಕಿರಾತರೂಪವನ್ನು ಧರಿಸಿದ ನಿನಗೆ ನಮಸ್ಕಾರವು. ವೀರರ ಯುದ್ಧದಲ್ಲಿ ಸಂತೋಷವುಳ್ಳವನೂ, ನಾನಾವಿಧವಾದ ಲೀಲೆಗಳನ್ನು ತೋರ್ಪಡಿಸುವವನೂ ಆದ ನಿನಗೆ ನಮಸ್ಕಾರವು.

೪೪. ನಮ್ಮ ಕಣ್ಣಿಗೆ ಬೀಳುವ ಪ್ರತಿಯೊಂದು ರೂಪವೂ ನಿನ್ನ ತೇಜಸ್ಸಿನ ಅಂಶವೆಂಬುದಾಗಿಯೇ ಸ್ಥಿರವಾಗಿರುವುದು. ಜ್ಞಾನಸ್ವರೂಪನಾದ ನೀನು ಮೂರು ಲೋಕಗಳಲ್ಲಿಯೂ ಬೇರೆ ಬೇರೆ ಸಂಬಂಧವನ್ನು ತೋರ್ಪಡಿಸುತ್ತಾ ವಿಹರಿಸುವೆ.

೪೫. ನೆಲದಲ್ಲಿರುವ ಧೂಳಿನಂತೆಯೂ ಆಕಾಶದಲ್ಲಿರುವ ನಕ್ಷತ್ರಗಳಂತೆಯೂ ಮಳೆಯ ನೀರಿನ ಹನಿಗಳಂತೆಯೂ ನಿನ್ನ ಗುಣಗಳಿಗೆ ಲೆಕ್ಕವೇ ಇಲ್ಲ.

ನ ತೇ ಗುಣಾಂಸ್ತು ಸಂಖ್ಯಾತುಂ ವೇದಾ ವೈ ಸಂಭವಂತಿ ಹಿ ।
ಮಂದಬುದ್ಧಿರಹಂ ನಾಥ ವರ್ಣಯಾಮಿ ಚ ಕಂ ಪುನಃ ॥ ೪೬ ॥

ಸೋಽಸಿ ಯೋಽಸಿ ನಮಸ್ತೇಽಸ್ತು ಕೃಪಾಂ ಕರ್ತುಮಿಹಾರ್ಹಸಿ ।
ದಾಸೋಽಹಂ ತೇ ಮಹೇಶಾನ ಸ್ವಾಮೀ ತ್ವಂ ಮೇ ಮಹೇಶ್ವರ ॥ ೪೭ ॥

॥ ನಂದೀಶ್ವರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಪುನಃ ಪ್ರೋವಾಚ ಶಂಕರಃ ।
ಸುಪ್ರಸನ್ನತರೋ ಭೂತ್ವಾ ವಿಹಸನ್ಪ್ರಭುರರ್ಜುನಂ ॥ ೪೮ ॥

॥ ಶಂಕರ ಉವಾಚ ॥

ವಚಸಾ ಕಿಂ ಬಹೂಕ್ತೇನ ಶೃಣುಷ್ವ ವಚನಂ ಮಮ ।
ಶೀಘ್ರಂ ವೃಣು ವರಂ ಪುತ್ರ ಸರ್ವಂ ತಚ್ಚ ದದಾಮಿ ತೇ ॥ ೪೯ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತಶ್ಚಾರ್ಜುನಸ್ತೇನ ಪ್ರಣಿಪತ್ಯ ಸದಾಶಿವಂ ।
ಸಾಂಜಲಿರ್ನತಕಃ ಪ್ರೇಮ್ಣಾ ಪ್ರೋವಾಚ ಗದ್ಗದಾಕ್ಷರಂ ॥ ೫೦ ॥

---

೪೬. ನಿನ್ನ ಗುಣಗಳನ್ನು ಎಣಿಸಲು ವೇದಗಳಿಗೂ ಸಾಧ್ಯವಿಲ್ಲ ಹೀಗಿರುವಾಗ ಮಂದಬುದ್ಧಿಯಾದ ನಾನು ನಿನ್ನ ಯಾವ ಗುಣವನ್ನು ತಾನೇ ವರ್ಣಿಸಲಿ?

೪೭. ಹೇ ಮಹೇಶ್ವರ, ನೀನು ಹೇಗಿರುವೆಯೊ ನಾನರಿಯೆನು ಅಂತಹ ನಿನಗೆ ನಮಸ್ಕಾರವು. ನನ್ನಲ್ಲಿ ಕೃಪೆಯನ್ನು ತೋರು. ನಾನು ನಿನ್ನ ದಾಸನು. ನೀನು ನನ್ನ ಸ್ವಾಮಿಯು

೪೮. ಓ ಮುನೀಂದ್ರ, ಈರೀತಿ ಅರ್ಜುನನು ಸ್ತುತಿಸಿದುದನ್ನು ಕೇಳಿ ಪ್ರಭುವಾದ ಶಂಕರನು ಮತ್ತಷ್ಟು ಪ್ರಸನ್ನನಾಗಿ ನಸುನಗುತ್ತಾ ಅವನನ್ನಿಂತೆಂದನು

೪೯. ಇನ್ನು ಹೆಚ್ಚು ಮಾತೇಕೆ? ನನ್ನ ಮಾತು ಕೇಳು. ವತ್ಸ, ಬೇಗನೆ ನಿನಗೆ ಬೇಕಾದ ವರವನ್ನು ಕೇಳು. ಅದೆಲ್ಲವನ್ನೂ ನಿನಗೆ ಕೊಟ್ಟುಬಿಡುವೆನು.

೫೦. ಎಲೈ ಸನತ್ಕುಮಾರನೇ, ಈರೀತಿ ಶಿವನು ಹೇಳಲು, ಅರ್ಜುನನು ಸದಾಶಿವನಿಗೆ ನಮಸ್ಕರಿಸಿ ಬದ್ಧಾಂಜಲಿಪುಟನಾಗಿ ವೈಬಾಗಿ ಪ್ರೀತಿಯಿಂದ ಗದ್ಗದಧ್ವನಿಯಿಂದ ಇಂತು ನುಡಿದನು.

॥ ಅರ್ಜುನ ಉವಾಚ ॥

ಕಿಂ ಬ್ರೂಯಾಂ ತ್ವಂ ಚ ಸರ್ವೇಷಾಮಂತರ್ಯಾಮಿತಯಾ ಸ್ಥಿತಃ ।
ತಥಾಪಿ ವರ್ಣಿತಂ ಮೇಽದ್ಯ ಶ್ರೂಯತಾಂ ಚ ತ್ವಯಾ ವಿಭೋ ॥ ೫೧ ॥

ಶತ್ರೂಣಾಂ ಸಂಕಟಂ ಯಚ್ಚ ತದ್ಗತಂ ದರ್ಶನಾತ್ತವ ।
ಐಹಿಕಾಂ ಚ ಪರಾಂ ಸಿದ್ಧಿಂ ಪ್ರಾಪ್ನುಯಾಂ ವೈ ತಥಾ ಕುರು ॥ ೫೨ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ತಂ ನಮಸ್ಕೃತ್ಯ ಶಂಕರಂ ಭಕ್ತವತ್ಸಲಂ ।
ನತಸ್ಕಂಧೋಽರ್ಜುನಸ್ತತ್ರ ಬದ್ಧಾಂಜಲಿರುಪಸ್ಥಿತಃ ॥ ೫೩ ॥

ಶಿವೋಽಪಿ ಚ ತಥಾಭೂತಂ ಜ್ಞಾತ್ವಾ ಪಾಂಡವಮರ್ಜುನಂ ।
ನಿಜಭಕ್ತವರಂ ಸ್ವಾಮೀ ಮಹಾತುಷ್ಟೋ ಬಭೂವ ಹ ॥ ೫೪ ॥

ಅಸ್ತ್ರಂ ಪಾಶುಪತಂ ಸ್ವೀಯಂ ದುರ್ಜಯಂ ಸರ್ವದಾಖಿಲೈಃ ।
ದದೌ ತಸ್ಮೈ ಮಹೇಶಾನೋ ವಚನಂ ಚೇದಮಬ್ರವೀತ್ ॥ ೫೫ ॥

---

೫೧. ಎಲೈ ಸರ್ವಾತ್ಮನೇ ನಾನು ಏನು ಹೇಳಲಿ ? ನೀನು ಎಲ್ಲ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿ ನೆಲೆಸಿರುವೆ. ಆದರೂ ಸಹ ನಾನು ಹೇಳುವ ಈ ಮಾತನ್ನು ದಯವಿಟ್ಟು ಕೇಳು,

೫೨. ಶತ್ರುಗಳಿಂದ ಉಂಟಾಗಿದ್ದ ಸಂಕಟವೆಲ್ಲವೂ ನಿನ್ನನ್ನು ಕಂಡೊಡನೆಯೇ ಪರಿಹಾರವಾಯಿತು. ಈಗ ಈ ಲೋಕದಲ್ಲಿ ಉತ್ತಮವಾದ ಸಿದ್ಧಿಯು ದೊರೆಯುವಂತೆ ಅನುಗ್ರಹಿಸು ಎಂದನು.

೫೩. ಈರೀತಿ ಪ್ರಾರ್ಥಿಸಿ ಭಕ್ತವತ್ಸಲನಾದ ಆ ಶಂಕರನನ್ನು ನಮಸ್ಕರಿಸಿ ಅರ್ಜುನನು ತಲೆಬಾಗಿ ಬದ್ಧಾಂಜಲಿಪುಟನಾಗಿ ನಿಂತುಕೊಂಡನು.

೫೪. ಆಗ ಪ್ರಭುವಾದ ಶಂಕರನು ಆ ಪಾಂಡುಪುತ್ರನಾದ ಅರ್ಜುನನು ತನ್ನ ಭಕ್ತರಲ್ಲೆಲ್ಲಾ ಅತ್ಯುತ್ತಮನೆಂದು ಅರಿತು ಮಿಗಿಲಾದ ಸಂತೋಷವನ್ನು ತಾಳಿದನು.

೫೫. ಬಳಿಕ ಆ ಮಹೇಶ್ವರನು ಯಾರಿಂದಲೂ ಯಾವಾಗಲೂ ಜಯಿಸಲು ಅಸಾಧ್ಯವಾದ ತನ್ನ ಪಾಶುಪತವೆಂಬ ಅಸ್ತ್ರವನ್ನು ಅವನಿಗೆ ಇತ್ತು ಈ ರೀತಿಯಾಗಿ ನುಡಿದನು.

॥ ಶಿವ ಉವಾಚ ॥

ಸ್ವಂ ಮಹಾಸ್ತ್ರಂ ಮಯಾ ದತ್ತಂ ದುರ್ಜಯಸ್ತ್ವಂ ಭವಿಷ್ಯತಿ ।
ಅನೇನ ಸರ್ವಶತ್ರೂಣಾಂ ಜಯಕೃತ್ಯಮವಾಪ್ನುಹಿ ॥ ೫೬ ॥

ಕೃಷ್ಣಂ ಚ ಕಥಯಿಷ್ಯಾಮಿ ಸಾಹಾಯ್ಯಂ ತೇ ಕರಿಷ್ಯತಿ ।
ಸ ವೈ ಮಮಾತ್ಮ ಭೂತಶ್ಚ ಮದ್ಭಕ್ತಃ ಕಾರ್ಯಕಾರಕಃ ॥ ೫೭ ॥

ಮತ್ಪ್ರಭಾವಾದ್ಭಾರತ ತ್ವಂ ರಾಜ್ಯಂ ನಿಷ್ಕಂಟಕಂ ಕುರು ।
ಧರ್ಮಾನ್ನಾನಾವಿಧಾನ್ಭ್ರಾತ್ರಾ ಕಾರಯ ತ್ವಂ ಚ ಸರ್ವದಾ ॥ ೫೮ ॥

॥ ನಂದೀಶ್ವರ ಉವಾಚ ॥

ಇತ್ಯುಕ್ತ್ವಾ ನಿಜಹಸ್ತಂ ಚ ಧೃತ್ವಾ ಶಿರಸಿ ತಸ್ಯ ಸಃ ।
ಪೂಜಿತೋ ಹ್ಯರ್ಜುನೇನಾಶು ಶಂಕರೋಽಂತರಧೀಯತ ॥ ೫೯ ॥

---

೫೬. ನನ್ನ ಶ್ರೇಷ್ಠವಾದ ಅಸ್ತ್ರವನ್ನು ಇತ್ತಿರುವೆನು. ನೀನು ಇನ್ನುಮೇಲೆ ಯಾರಿಗೂ ಜಯಿಸಲು ಅಸಾಧ್ಯನಾಗಿರುವೆ. ಈ ಅಸ್ತ್ರದಿಂದ ಎಲ್ಲ ಶತ್ರುಗಳನ್ನು ಜಯಿಸುವವನಾಗು.

೫೭. ಕೃಷ್ಣನಿಗೂ ನಾನು ಹೇಳುವೆನು. ಅವನು ನಿನಗೆ ಸಹಾಯವನ್ನು ಮಾಡುವನು. ಅವನು ನನ್ನ ಅಂಶವೆಂದೇ ತಿಳಿ. ಮತ್ತು ಅವನು ನನ್ನ ಭಕ್ತನು. ನನ್ನ ಕೆಲಸವನ್ನು ನೆರವೇರಿಸುವನು.

೫೮. ನನ್ನ ಅನುಗ್ರಹದಿಂದ ಶತ್ರುಶೇಷವೂ ಇಲ್ಲದಂತೆ ನೀನು ರಾಜ್ಯಭಾರವನ್ನು ಮಾಡುವವನಾಗು. ಓ ಭಾರತ, ನೀನು ಯಾವಾಗಲೂ ನಿನ್ನ ಅಣ್ಣನಿಂದ ಅನೇಕ ವಿಧವಾದ ಧರ್ಮಗಳನ್ನು ನಡೆಸುವವನಾಗು.

೫೯. ಓ ಮುನೀಂದ್ರ, ಹೀಗೆ ಹೇಳಿ ಪ್ರಭುವಾದ ಶಂಕರನು ಆ ಅರ್ಜುನನ ತಲೆಯಮೇಲೆ ತನ್ನ ಅಪ್ಪತಹಸ್ತವನ್ನಿಟ್ಟು ಅವನಿಂದ ಪೂಜೆಯನ್ನು ಕೈಗೊಂಡು ತಟ್ಟನೆ ಅಲ್ಲಿಂದ ಕಣ್ಮರೆಯಾದನು.

ಅಥಾರ್ಜುನಃ ಪ್ರಸನ್ನಾತ್ಮಾ ಪ್ರಾಪ್ಯಾಸ್ತ್ರಂ ಚ ವರಂ ಪ್ರಭೋಃ ।
ಜಗಾಮ ಸ್ವಾಶ್ರಮೇ ಮುಖ್ಯಂ ಸ್ಮರಚ್ಛಕ್ತ್ಯಾ ಗುರುಂ ಶಿವಂ ॥ ೬೦ ॥

ಸರ್ವೇ ತೇ ಭ್ರಾತರಃ ಪ್ರೀತಾಸ್ತಸ್ಮಿಃ ಪ್ರಾಣಮಿವಾಗತಂ ।
ಮಿಲಿತ್ವಾ ತಂ ಸುಖಂ ಪ್ರಾಪುರ್ದ್ರೌಪದೀ ಚಾತಿ ಸುವ್ರತಾ ॥ ೬೧ ॥

ಶಿವಂ ಪರಂ ಸಂತುಷ್ಟಂ ಪಾಂಡವಾಃ ಸರ್ವ ಏವ ಹಿ ।
ನಾತೃಪ್ಯಂ ಸರ್ವವೃತ್ತಾಂತಂ ಶ್ರುತ್ವಾ ಹರ್ಷಮುಪಾಗತಾಃ ॥ ೬೨ ॥

ಆಶ್ರಮೇ ಪುಷ್ಪವೃಷ್ಟಿಶ್ಚ ಚಂದನೇನ ಸಮನ್ವಿತಾ ।
ಪಪಾತ ಸುಕರಾರ್ಥಂ ಚ ತೇಷಾಂ ಚೈವ ಮಹಾತ್ಮನಾಂ ॥ ೬೩ ॥

ಧನ್ಯಂ ಚ ಶಂಕರಂ ಚೈವ ನಮಸ್ಕೃತ್ಯ ಶಿವಂ ಮುದಾ ।
ಅವಧಿಂ ಚಾಗತಂ ಜ್ಞಾತ್ವಾ ಜಯಶ್ಚೈವ ಭವಿಷ್ಯತಿ ॥ ೬೪ ॥

---

೬೦. ಅನಂತರ ಪಾಶುಪತವೆಂಬ ಮಹಾಶ್ರೇಷ್ಠವಾದ ಅಸ್ತ್ರವನ್ನು ಶಿವನಿಂದ ಪಡೆದು ಸುಪ್ರೀತವಾದ ಮನಸ್ಸುಳ್ಳ ಅರ್ಜುನನು, ಭಕ್ತಿಯಿಂದ ತನ್ನ ಒಡೆಯನಾದ ಶಂಕರನನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ ತನ್ನ ಆಶ್ರಮಕ್ಕೆ ತೆರಳಿದನು.

೬೧. ಆಗ ಅವನ ಎಲ್ಲಾ ಅಣ್ಣತಮ್ಮಂದಿರೂ, ದ್ರೌಪದಿಯೂ, ದೇಹವನ್ನು ಬಿಟ್ಟುಹೋಗಿದ್ದ ಪ್ರಾಣವು ಮರಳಿ ಬಂದಂತೆ ಹಿಂದಿರುಗಿದ ಆ ಅರ್ಜುನನನ್ನು ಸೇರಿ ಬಹುವಾಗಿ ಸುಖವನ್ನು ತಾಳಿದರು.

೬೨. ಆ ಪಾಂಡವರೆಲ್ಲರೂ ಆ ಪರಾತ್ಪರನಾದ ಶಿವನು ಸಂತುಷ್ಟನಾದನೆಂಬ ಸುದ್ದಿಯನ್ನು ಎಷ್ಟು ಕೇಳಿದರೂ ತೃಪ್ತಿಯಿಲ್ಲದೆ ಆ ಸಂಗತಿಯೆಲ್ಲವನ್ನೂ ಮತ್ತೆ ಮತ್ತೆ ಕೇಳಿ ಮಹಾಸಂತೋಷವನ್ನು ತಾಳಿದರು.

೬೩. ಆಗ ಆ ಮಹಾತ್ಮರಿಗೆ ಶುಭೋದಯವನ್ನು ಸೂಚನೆಮಾಡುತ್ತಾ ಚಂದನದೊಡಗೂಡಿದ ಹೂವಿನ ಮಳೆಯು ಆ ಆಶ್ರಮದಲ್ಲಿ ಸುರಿಯಿತು.

೬೪. ಆಗ ಆ ಶಂಕರನನ್ನು ನೀನೇ ಧನ್ಯನೆಂದು ಕೊಂಡಾಡುತ್ತಾ ಸಂತೋಷದಿಂದ ಆತನಿಗೆ ನಮಸ್ಕಾರಮಾಡಿ ಆ ಪಾಂಡವರೆಲ್ಲರೂ ತಮ್ಮ ಗಡುವಿನ ದಿನಗಳು ಮುಗಿಯುತ್ತಾ ಬಂದವೆಂದೂ, ತಮಗೆ ಜಯವು ಲಭಿಸುವುದೆಂದೂ ಸಂತೋಷದಿಂದ ಇದ್ದರು.

ಏತಸ್ಮಿನ್ನಂತರೇ ಕೃಷ್ಣಶ್ಶ್ರುತ್ವಾರ್ಜುನಮುಥಾಗತಂ ।
ಮೇಲನಾಯ ಸಮಾಯಾತಶ್ಶ್ರುತ್ವಾ ಸುಖಮುಪಾಗತಃ ॥ ೬೫ ॥

ಅತಶ್ಚೈವ ಮಯಾಖ್ಯಾತಃ ಶಂಕರಃ ಸರ್ವದುಃಖಹಾ ।
ಸ ಸೇವ್ಯತೇ ಮಯಾ ನಿತ್ಯಂ ಭವದ್ಭಿರಪಿ ಸೇವ್ಯತಾಂ ॥ ೬೬ ॥

ಇತ್ಯುಕ್ತಸ್ತೇ ಕಿರಾತಾಹ್ವೋಽವತಾರಶ್ಶಂಕರಸ್ಯ ವೈ ।
ತಂ ಶ್ರುತ್ವಾ ಶ್ರಾವಯನ್ವಾಪಿ ಸರ್ವಾನ್ಕಾಮಾನವಾಪ್ನುಯಾತ್ ॥ ೬೭ ॥

ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ
ಕಿರಾತೇಶ್ವರಾವತಾರವರ್ಣನಂ ನಾಮ
ಏಕಚತ್ವಾರಿಂಶೋಽಧ್ಯಾಯಃ

---

೬೫ ಈ ನಡುವೆ ಆ ಅರ್ಜುನನು ಹಿಂದಿರುಗಿ ಬಂದನೆಂಬ ಸುದ್ದಿಯನ್ನು ಕೇಳಿ ಅವನನ್ನು ಕಾಣಬೇಕೆಂಬುದಾಗಿ ದ್ವಾರಕಿಯಿಂದ ಶ್ರೀಕೃಷ್ಣನು ಬಂದು ಆ ಸಂಗತಿಯೆಲ್ಲವನ್ನೂ ಕೇಳಿ ಹರ್ಷಭರಿತನಾದನು

೬೬ ಆ ಶಂಕರನು ಎಲ್ಲ ದುಃಖಗಳನ್ನೂ ಪರಿಹರಿಸುವವನು ಆದುದರಿಂದಲೇ ನಾನು ಅನುದಿನವೂ ಆತನನ್ನು ಸೇವಿಸುವೆನು. ನೀವೂ ಸಹ ಆತನನ್ನು ಆರಾಧಿಸಿರಿ. ಎಂದು ನಾನು ಅದಕ್ಕೋಸ್ಕರವೇ ನಿಮಗೆ ಹೇಳಿದ್ದು ಎಂದು ಕೃಷ್ಣನು ಹೇಳಿದನು.

೬೭. ಓ ಮುನೀಂದ್ರ, ಈ ರೀತಿಯಾಗಿ ನಿನಗೆ ಆ ಶಂಕರನ ಕಿರಾತಾವತಾರವನ್ನು ವರ್ಣಿಸಿದೆನು ಇದನ್ನು ಕೇಳಿದರೂ ಕೀರ್ತನೆಮಾಡಿದರೂ ಮಾನವನು ಎಲ್ಲ ಅಭೀಷ್ಟಗಳನ್ನೂ ಪಡೆಯುವನು

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಕಿರಾತಾವತಾರವರ್ಣನವೆಂಬ ನಲವತ್ತೊಂದನೆಯ ಅಧ್ಯಾಯವು
ಮುಗಿದುದು.



|| ಶ್ರೀಃ ||

|| ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ಶತರುದ್ರಸಂಹಿತಾಯಾಂ

## ದ್ವಿಚತ್ವಾರಿಂಶೋಽಧ್ಯಾಯಃ

|| ನಂದೀಶ್ವರ ಉವಾಚ ||

**ಅವತಾರಾಞ್ಛೃಣು ವಿಭೋರ್ದ್ವಾದಶಪ್ರಮಿತಾನ್ಪರಾನ್ ।**
**ಜ್ಯೋತಿರ್ಲಿಂಗಸ್ವರೂಪಾನ್ವೈ ನಾನೋತಿಕಾರಕಾನ್ಮುನೇ || ೧ ||**

**ಸೌರಾಷ್ಟ್ರೇ ಸೋಮನಾಥಶ್ಚ ಶ್ರೀಶೈಲೇ ಮಲ್ಲಿಕಾರ್ಜುನಃ ।**
**ಉಜ್ಜಯಿನ್ಯಾಂ ಮಹಾಕಾಲ ಓಂಕಾರೇ ಚಾಮರೇಶ್ವರಃ || ೨ ||**

---

## ನಲವತ್ತೆರಡನೆಯ ಅಧ್ಯಾಯವು.

೧. ನಂದಿಕೇಶ್ವರನು ಸನತ್ಕುಮಾರನನ್ನು ಕುರಿತು ಹೇಳತೊಡಗಿದನು. ಓ ಮುನೀಂದ್ರ! ಸರ್ವಾತ್ಮನಾದ ಆ ಶಂಕರನ ನಾನಾಲೀಲಾಕಾರಕವಾದ ಹನ್ನೆರಡು ಜ್ಯೋತಿರ್ಲಿಂಗಾವತಾರಗಳನ್ನು ವರ್ಣಿಸುವೆನು ಕೇಳು.

೨. ಸೌರಾಷ್ಟ್ರದಲ್ಲಿ (ಗುಜರಾತ್) ಸೋಮನಾಥನು, ಶ್ರೀಶೈಲದಲ್ಲಿ ಮಲ್ಲಿಕಾರ್ಜುನನು, ಉಜ್ಜಯಿನಿಯಲ್ಲಿ ಮಹಾಕಾಲನು, ಓಂಕಾರದಲ್ಲಿ ಅಮರೇಶ್ವರನು.

**ಕೇದಾರೋ ಹಿಮವತ್ಪೃಷ್ಠೇ ಡಾಕಿನ್ಯಾಂ ಭೀಮಶಂಕರಃ ।**
**ವಾರಾಣಸ್ಯಾಂ ಚ ವಿಶ್ವೇಶಸ್ತ್ರ್ಯಂಬಕೋ ಗೌತಮೀತಟೇ ॥ ೩ ॥**

**ವೈದ್ಯನಾಥಶ್ಚಿತಾಭೂಮೌ ನಾಗೇಶೋ ದಾರುಕಾವನೇ ।**
**ಸೇತುಬಂಧೇ ಚ ರಾಮೇಶೋ ಘುಶ್ಮೇಶಶ್ಚ ಶಿವಾಲಯೇ ॥ ೪ ॥**

**ಅವತಾರದ್ವಾದಶಕಮೇತಚ್ಛಂಭೋಃ ಪರಾತ್ಮನಃ ।**
**ಸರ್ವಾನಂದಕರಂ ಪುಂಸಾಂ ದರ್ಶನಾತ್ಸ್ಪರ್ಶನಾನ್ಮುನೇ ॥ ೫ ॥**

**ತತ್ರಾದ್ಯಸ್ಸೋಮನಾಥೋ ಹಿ ಚಂದ್ರದುಃಖಕ್ಷಯಂಕರಃ ।**
**ಕ್ಷಯಕುಷ್ಠಾದಿರೋಗಾಣಾಂ ನಾಶಕಃ ಪೂಜನಾನ್ಮುನೇ ॥ ೬ ॥**

---

೩ ಹಿಮವತ್ಪರ್ವತದಮೇಲೆ ಕೇದಾರನು, ಡಾಕಿನಿಯಲ್ಲಿ (ಗೋದಾವರೀ ಸಮುದ್ರ ಸಂಗಮ) ಭೀಮಶಂಕರನು, ಕಾಶೀಕ್ಷೇತ್ರದಲ್ಲಿ ವಿಶ್ವೇಶ್ವರನು, ಗೋದಾವರೀ ನದೀಮೂಲದಲ್ಲಿ ತ್ರ್ಯಂಬಕನು

೪ ಚಿತಾಭೂಮಿಯಲ್ಲಿ (ಹೈದರಾಬಾದಿದ ಬಳಿಯಲ್ಲಿ) ವೈದ್ಯನಾಥನು, ದಾರುಕಾವನದಲ್ಲಿ ನಾಗೇಶನು, ಸೇತುವಿನಲ್ಲಿ ರಾಮೇಶ್ವರನು, ಶಿವಾಲಯದಲ್ಲಿ ಘುಶ್ಮೇಶನು ಇವು ಜ್ಯೋತಿರ್ಲಿಂಗಗಳು

೫. ಎಲೈ ಮುನಿಯೇ! ಇವು ಹನ್ನೆರಡೂ, ಪರಮಪುರುಷನಾದ ಶಿವನ ಅವತಾರಗಳು. ಇವುಗಳನ್ನು ಸಂದರ್ಶಿಸಿದರೂ, ಸ್ಪರ್ಶಮಾಡಿದರೂ, ಪುರುಷರಿಗೆ ಸಕಲವಿಧವಾದ ಆನಂದವೂ ಉಂಟಾಗುವುದು

೬. ಇವುಗಳಲ್ಲಿ ಮೊದಲನೆಯ ಸೋಮನಾಥನು, ಚಂದ್ರನ ದುಃಖವನ್ನು ನಿವಾರಣೆಮಾಡಿದನು. ಈ ಸೋಮನಾಥೇಶ್ವರನನ್ನು ಪೂಜಿಸಲು, ಕ್ಷಯ ಕುಷ್ಠ ಮುಂತಾದ ವ್ಯಾಧಿಗಳು ಪರಿಹಾರವಾಗುವುವು.

ಶಿವಾವತಾರಸ್ಸೋಮೇಶೋ ಲಿಂಗರೂಪೇಣ ಸಂಸ್ಥಿತಃ ।
ಸೌರಾಷ್ಟ್ರೇ ಶುಭದೇಶೇ ಚ ಶಶಿನಾ ಪೂಜಿತಃ ಪುರಾ ॥ ೭ ॥

ಚಂದ್ರಕುಂಡಂ ಚ ತತ್ರೈವ ಸರ್ವಪಾಪವಿನಾಶಕಂ ।
ತತ್ರ ಸ್ನಾತ್ವಾ ನರೋ ಧೀಮಾನ್ಸರ್ವರೋಗೈಃ ಪ್ರಮುಚ್ಯತೇ ॥ ೮ ॥

ಸೋಮೇಶ್ವರಂ ಮಹಾಲಿಂಗಂ ಶಿವಸ್ಯ ಪರಮಾತ್ಮಕಂ ।
ದೃಷ್ಟ್ವಾ ಪ್ರಮುಚ್ಯತೇ ಪಾಪಾದ್ಭುಕ್ತಿಂ ಮುಕ್ತಿಂ ಚ ವಿಂದತಿ ॥ ೯ ॥

ಮಲ್ಲಿಕಾರ್ಜುನಸಂಜ್ಞಶ್ಚಾವತಾರಶ್ಶಂಕರಸ್ಯ ವೈ ।
ದ್ವಿತೀಯಃ ಶ್ರೀಗಿರೌ ತಾತ ಭಕ್ತಾಭೀಷ್ಟಫಲಪ್ರದಃ ॥ ೧೦ ॥

---

೭. ಶಿವಾವತಾರನಾದ ಆ ಸೋಮೇಶನು ಶುಭಕರವಾದ ಸೌರಾಷ್ಟ್ರದೇಶದಲ್ಲಿ ಲಿಂಗರೂಪವನ್ನು ತಾಳಿ ಪೂರ್ವದಲ್ಲಿ ಚಂದ್ರನಿಂದ ಪೂಜಿತನಾದನು.

೮. ಆ ಸೋಮನಾಥಲಿಂಗದ ಸಮೀಪದಲ್ಲಿಯೇ ಸಕಲಪಾಪಗಳನ್ನು ಪರಿಹರಿಸುವ ಚಂದ್ರಕುಂಡವೆಂಬ ಸರಸ್ಸಿರುವುದು. ಅಲ್ಲಿ ಸ್ನಾನವನ್ನು ಮಾಡಿದ ವಿವೇಕಿಯು ಎಲ್ಲ ರೋಗಗಳಿಂದಲೂ ಬಿಡುಗಡೆಯನ್ನು ಹೊಂದುವನು.

೯. ಶಿವನ ಪರಸ್ವರೂಪವಾದ ಆ ಸೋಮನಾಥ ಮಹಾಲಿಂಗವನ್ನು ಸಂದರ್ಶಿಸಿದಮಾತ್ರದಿಂದಲೇ ಮನುಷ್ಯನು ತನ್ನೆಲ್ಲ ಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುವನಲ್ಲದೆ ಭೋಗಗಳನ್ನೂ ಮೋಕ್ಷಸುಖವನ್ನು ಹೊಂದುವನು.

೧೦. ಅಪ್ಪ, ಶ್ರೀಶೈಲದಲ್ಲಿ ನೆಲಸಿ, ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸಿ ಕೊಡುತ್ತಾ ಇರುವ ಮಲ್ಲಿಕಾರ್ಜುನ ಲಿಂಗವು ಶಂಕರನ ಎರಡನೆಯ ಅವತಾರವು.

**ಸಂಸ್ತುತೋ ಲಿಂಗರೂಪೇಣ ಸುತದರ್ಶನಹೇತುತಃ ।**
**ಗತಸ್ತತ್ರ ಮಹಾಪ್ರೀತ್ಯಾ ಸ ಶಿವಃ ಸ್ವಗಿರೇರ್ಮುನೇ　　　　॥ ೧೧ ॥**

**ಜ್ಯೋತಿರ್ಲಿಂಗಂ ದ್ವಿತೀಯಂ ತದ್ದರ್ಶನಾತ್ಪೂಜನಾನ್ಮುನೇ ।**
**ಮಹಾಸುಖಕರಂ ಚಾಂತೇ ಮುಕ್ತಿದಂ ನಾತ್ರ ಸಂಶಯಃ　　　　॥ ೧೨ ॥**

**ಮಹಾಕಾಲಾಭಿಧಸ್ತಾತಾವತಾರಶ್ಶಂಕರಸ್ಯ ವೈ ।**
**ಉಜ್ಜಯಿನ್ಯಾಂ ನಗರ್ಯಾಂ ಚ ಬಭೂವ ಸ್ವಜನಾವನಃ　　　　॥ ೧೩ ॥**

**ದೂಷಣಾಖ್ಯಾಸುರಂ ಯಸ್ತು ವೇದಧರ್ಮಪ್ರಮರ್ದಕಂ ।**
**ಉಜ್ಜಯಿನ್ಯಾಂ ಗತಂ ವಿಪ್ರದ್ವೇಷಿಣಂ ಸರ್ವನಾಶನಂ　　　　॥ ೧೪ ॥**

೧೧　ತನ್ನ ಮಗನಾದ ಕುಮಾರನು ಇಲ್ಲಿರುವನೆಂದು ತಿಳಿದು ಅವನನ್ನು ನೋಡುವ ಸಲುವಾಗಿ ಆ ಶಂಕರನು ತನ್ನ ನಿವಾಸವಾದ ಕೈಲಾಸವನ್ನು ಬಿಟ್ಟು ಮಹಾಪ್ರೀತಿಯಿಂದ ಈ ಶ್ರೀಶೈಲಕ್ಕೆ ಲಿಂಗರೂಪದಿಂದ ಬಂದು ನೆಲೆಸಿದನು

೧೨　ಓ ಮುನೀಂದ್ರ ! ಈ ಎರಡನೆಯದಾದ ಜ್ಯೋತಿರ್ಲಿಂಗವನ್ನು ಸಂದರ್ಶಿಸಲು, ಈ ಲೋಕದಲ್ಲಿ ಅನುಪಮವಾದ ಅನೇಕ ಸುಖಗಳನ್ನನುಭವಿಸಿ ಕೊನೆಗೆ ಮೋಕ್ಷಸುಖವನ್ನು ಖಂಡಿತವಾಗಿಯೂ ಪಡೆಯುವರು

೧೩-೧೪　ಅಪ್ಪ ಸನತ್ಕುಮಾರ! ಆ ಶಂಕರನ ಮೂರನೆಯ ಜ್ಯೋತಿರ್ಲಿಂಗಾವತಾರವು ತನ್ನ ಭಕ್ತರನ್ನು ಸಂರಕ್ಷಿಸುವ ಸಲುವಾಗಿ ಮಹಾಕಾಲನೆಂಬ ಹೆಸರಿನಿಂದ ಉಜ್ಜಯಿನೀನಗರದಲ್ಲಿ ಉಂಟಾಯಿತು　ದೂಷಣನೆಂಬ ಅಸುರನೊಬ್ಬನು ವೇದಧರ್ಮಗಳನ್ನು ನಾಶಗೊಳಿಸುತ್ತಿದ್ದನು　ರತ್ನಮಾಲೆಯೆಂಬಲ್ಲಿ ವಾಸವಾಗಿದ್ದ ಆ ದೂಷಣನು, ಬ್ರಾಹ್ಮಣರನ್ನು ಕಂಡರೆ ಕೆಂಡವನ್ನು ಕಾರುತ್ತಾ ಆಗಾಗ್ಗೆ ಉಜ್ಜಯಿನಿಗೆ ಬಂದು ಎಲ್ಲವನ್ನೂ ಹಾಳುಮಾಡಿಹೋಗುತ್ತಿದ್ದನು. ಆಗ ವೇದವಿಪ್ರನೆಂಬ ಬ್ರಾಹ್ಮಣನ

ವೇದವಿಪ್ರಸುತ ಧ್ಯಾತೋ ಹುಂಕಾರೇಣೈವ ಸ ದ್ರುತಂ ।
ಭಸ್ಮಸಾತ್ಕೃತವಾಂಸ್ತಂ ಚ ರತ್ನಮಾಲನಿವಾಸಿನಂ ॥ ೧೫ ॥

ತಂ ಹತ್ವಾ ಸ ಮಹಾಕಾಲೋ ಜ್ಯೋತಿರ್ಲಿಂಗಸ್ವರೂಪತಃ ।
ದೇವೈಸ್ಸ ಪ್ರಾರ್ಥಿತೋಽತಿಷ್ಠತ್ಸ್ವಭಕ್ತಪರಿಪಾಲಕಃ ॥ ೧೬ ॥

ಮಹಾಕಾಲಾಹ್ವಯಂ ಲಿಂಗಂ ದೃಷ್ಟ್ವಾಭ್ಯರ್ಚ್ಯ ಪ್ರಯತ್ನತಃ ।
ಸರ್ವಾನ್ಕಾಮಾನವಾಪ್ನೋತಿ ಲಭತೇ ಪರತೋ ಗತಿಂ ॥ ೧೭ ॥

ಓಂಕಾರಃ ಪರಮೇಶಾನೋ ಧೃತಃ ಶಂಭೋಃ ಪರಾತ್ಮನಃ ।
ಅವತಾರಶ್ಚತುರ್ಥೋ ಹಿ ಭಕ್ತಾಭೀಷ್ಟಫಲಪ್ರದಃ ॥ ೧೮ ॥

---

ಪುತ್ರನು ತನ್ನನ್ನು ಧ್ಯಾನಮಾಡಲು, ಮಹಾಕಾಲರೂಪದಿಂದ ಅಲ್ಲಿ ಅವತರಿಸಿ, ತನ್ನ ಹುಂಕಾರಮಾತ್ರದಿಂದಲೇ ಕ್ಷಣಮಾತ್ರದಲ್ಲಿ ಆ ದೂಷಣನನ್ನು ಸಂಹರಿಸಿಬಿಟ್ಟನು.

೧೬. ಆ ಮಹಾಕಾಲಮೂರ್ತಿಯು ದೂಷಣನನ್ನು ಕೊಂದಮೇಲೆ, ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ, ಭಕ್ತರನ್ನು ಸಲಹುತ್ತಾ ಜ್ಯೋತಿರ್ಲಿಂಗಸ್ವರೂಪದಿಂದ ಉಜ್ಜಯಿನಿಯಲ್ಲೇ ನೆಲೆಸಿಬಿಟ್ಟನು.

೧೭. ಯಾವಾತನು ಪ್ರಯತ್ನಪುರಸ್ಸರವಾಗಿ ಮಹಾಕಾಲವೆಂಬ ಈ ಲಿಂಗವನ್ನು ಸಂದರ್ಶಿಸಿ ಪೂಜಾದಿಗಳನ್ನು ಮಾಡುವನೋ ಅವನು ಈ ಲೋಕದಲ್ಲಿ ತಾನು ಬಯಸಿದ ಸುಖಗಳೆಲ್ಲವನ್ನೂ ಅನುಭವಿಸಿ ಕೊನೆಗೆ ಉತ್ತಮವಾದ ಗತಿಯನ್ನು ಹೊಂದುವನು.

೧೮. ಭಕ್ತರ ಇಷ್ಟಾರ್ಥಗಳನ್ನು ಕರುಣಿಸುವ ಓಂಕಾರವೆಂಬ ಆ ಪರಮಪುರುಷನಾದ ಶಿವನ ಅವತಾರವು ನಾಲ್ಕನೆಯದು.

ವಿಧಿನಾ ಸ್ಥಾಪಿತೋ ಭಕ್ತ್ಯಾ ಸ ಲಿಂಗಾತ್ಪಾರ್ಥಿವಾನ್ಮುನೇ ।
ಪ್ರಾದುರ್ಭೂತೋ ಮಹಾದೇವೋ ವಿಂಧ್ಯಕಾಮಪ್ರಪೂರಕಃ ॥ ೧೯ ॥

ದೇವೈಸ್ಸಂಪ್ರಾರ್ಥಿತಸ್ತತ್ರ ದ್ವಿಧಾರೂಪೇಣ ಸಂಸ್ಥಿತಃ ।
ಭುಕ್ತಿಮುಕ್ತಿಪ್ರದೋ ಲಿಂಗರೂಪೋ ವೈ ಭಕ್ತವತ್ಸಲಃ ॥ ೨೦ ॥

ಪ್ರಣವೇ ಚೈವ ಚೋಂಕಾರನಾಮಾಸೀಲ್ಲಿಂಗಮುತ್ತಮಂ ।
ಪರಮೇಶ್ವರನಾಮಾಸೀತ್ಪಾರ್ಥಿವಶ್ಚ ಮುನೀಶ್ವರ ॥ ೨೧ ॥

ಭಕ್ತಾಭೀಷ್ಟಪ್ರದೋ ಜ್ಞೇಯೋ ಯೋऽಪಿ ದೃಷ್ಟೋऽರ್ಚಿತೋ ಮುನೇ ।
ಜ್ಯೋತಿರ್ಲಿಂಗೇ ಮಹಾದಿವ್ಯೇ ವರ್ಣಿತೇ ತೇ ಮಹಾಮುನೇ ॥ ೨೨ ॥

---

೧೯. ಓ ಮುನೀಂದ್ರ! ಭಕ್ತಿಯಿಂದ ವಿಧಿಪೂರ್ವಕವಾಗಿ ಸ್ಥಾಪಿಸಿರುವ ಪಾರ್ಥಿವಲಿಂಗದಿಂದ ಆ ಮಹೇಶ್ವರನು ಆವಿರ್ಭವಿಸಿ, ವಿಂಧ್ಯನ ಅಭಿಲಾಷೆಯನ್ನೀಡೇರಿಸಿದನು

೨೦, ಆಗ ದೇವತೆಗಳು ತನ್ನನ್ನು ಪ್ರಾರ್ಥಿಸಲು ಆ ಭಕ್ತವತ್ಸಲನು, ಭೋಗಗಳನ್ನೂ ಮೋಕ್ಷಸುಖವನ್ನೂ ಕರುಣಿಸುತ್ತಾ ಎರಡು ಲಿಂಗದ ರೂಪವನ್ನು ತಾಳಿ ಅಲ್ಲಿ ನಿಂತನು

೨೧. ಹೊಸದಾಗಿ ಉದ್ಭವಿಸಿದ ಆ ಮೂರ್ತಿಯು ಓಂಕಾರವೆಂಬಲ್ಲಿ ಓಂಕಾರನೆಂಬ ಹೆಸರಿನ ಲಿಂಗದ ರೂಪವನ್ನು ತಾಳಿ ನೆಲೆಸಿದನು. ಆ ಪಾರ್ಥಿವಲಿಂಗವೂ ಸಹ ಪರಮೇಶ್ವರನೆಂಬ (ಅಮರೇಶ್ವರ) ಹೆಸರನ್ನು ತಾಳಿತು

೨೨. ಆ ಲಿಂಗಗಳನ್ನು ಸಂದರ್ಶಿಸಿದರೂ ಸೇವಿಸಿದರೂ ಭಕ್ತರ ಅಭೀಷ್ಟಗಳು ಈಡೇರುವುವು. ಓ ಮುನೀಂದ್ರ, ಇಂತು ನಿನಗೆ ಒಂದೇ ಸ್ಥಳದಲ್ಲಿ ಎರಡು ಜ್ಯೋತಿರ್ಲಿಂಗಗಳನ್ನು ವರ್ಣಿಸಿದೆನು.

ಕೇದಾರೇಶೋಽವತಾರಸ್ತು ಪಂಚಮಃ ಪರಮಶ್ಶಿವಃ ।
ಜ್ಯೋತಿರ್ಲಿಂಗಸ್ವರೂಪೇಣ ಕೇದಾರೇ ಸಂಸ್ಥಿತಸ್ಸ ಚ ॥ ೨೩ ॥

ನರನಾರಾಯಣಾಖ್ಯೌ ಯಾವವತಾರೌ ಹರೇರ್ಮುನೇ ।
ತತ್ಪ್ರಾರ್ಥಿತಶ್ಶಿವಸ್ತತ್ರಸ್ಥಿತಃ ಕೇದಾರೇ ಹಿಮಭೂಧರೇ ॥ ೨೪ ॥

ತಾಭ್ಯಾಂ ಚ ಪೂಜಿತೋ ನಿತ್ಯಂ ಕೇದಾರೇಶ್ವರಸಂಜ್ಞಕಃ ।
ಭಕ್ತಾಭೀಷ್ಟಪ್ರದಃ ಶಂಭುರ್ದರ್ಶನಾದರ್ಚನಾದಪಿ ॥ ೨೫ ॥

ಅಸ್ಯ ಖಂಡಸ್ಯ ಸ ಸ್ವಾಮೀ ಸರ್ವೇಶೋಽಪಿ ವಿಶೇಷತಃ ।
ಸರ್ವಕಾಮಪ್ರದಸ್ತಾತ ಸೋಽವತಾರಶ್ಶಿವಸ್ಯ ವೈ ॥ ೨೬ ॥

ಭೀಮಶಂಕರಸಂಜ್ಞಸ್ತು ಷಷ್ಠಶ್ಶಂಭೋರ್ಮಹಾಪ್ರಭೋಃ ।
ಅವತಾರೋ ಮಹಾಲೀಲೋ ಭೀಮಾಸುರವಿನಾಶನಃ ॥ ೨೭ ॥

---

೨೩. ಆ ಪರಮಶಿವನ ಕೇದಾರೇಶ್ವರನೆಂಬ ಐದನೆಯ ಅವತಾರವು ಕೇದಾರ ಕ್ಷೇತ್ರದಲ್ಲಿ ಜ್ಯೋತಿರ್ಲಿಂಗಸ್ವರೂಪದಿಂದ ನೆಲೆಸಿರುವುದು.

೨೪. ಓ ಮುನೀಂದ್ರ! ಶ್ರೀಹರಿಯ ಅವತಾರವಾದ ನರ ಮತ್ತು ನಾರಾಯಣ ಎಂಬ ಋಷಿಗಳು ಪ್ರಾರ್ಥಿಸಲು, ಶ್ರೀಶಂಕರನು ಹಿಮವತ್ಕೇದಾರದಲ್ಲಿ ನೆಲೆಸಿದನು.

೨೫. ಆ ಶಂಭುವು ನರನಾರಾಯಣರಿಂದ ನಿತ್ಯವೂ ಸೇವೆಯನ್ನು ಕೈಗೊಳ್ಳುತ್ತಾ ಕೇದಾರೇಶ್ವರನೆಂಬ ಹೆಸರನ್ನು ತಾಳಿ, ತನ್ನನ್ನು ಸಂದರ್ಶಿಸಿದ ಮತ್ತು ಸಂಪೂಜಿಸಿದ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತಾ ಇರುವನು.

೨೬. ಅಪ್ಪ ಸನತ್ಕುಮಾರ! ಆ ಶಿವನ ಅವತಾರವಾದ ಕೇದಾರನಾಥನು ಸರ್ವೇಶ್ವರನಾದರೂ ಈ ಖಂಡಕ್ಕೇ ವಿಶೇಷವಾಗಿ ಅಧಿಪತಿಯೆನಿಸಿರುವನು. ಮತ್ತು ಸಕಲೇಷ್ಟಾರ್ಥಗಳನ್ನೂ ಈಡೇರಿಸುವನು.

೨೭. ಮಹಾಪ್ರಭುವಾದ ಆ ಶಂಕರನು ಭೀಮನೆಂಬ ರಾಕ್ಷಸನನ್ನು ಕೊಂದು ಕೆಡಹಿದ ಅದ್ಭುತಲೀಲಾಮಯವಾದ ಭೀಮಶಂಕರನೆಂಜ ಅವತಾರವು ಆರನೆಯದು.

ಸುದಕ್ಷಿಣಾಭಿಧಂ ಭಕ್ತಂ ಕಾಮರೂಪೇಶ್ವರಂ ನೃಪಂ ।
ಯೋ ರರಕ್ಷಾದ್ಭುತಂ ಹತ್ವಾಸುರಂ ತಂ ಭಕ್ತದುಃಖದಂ ॥ ೨೮ ॥

ಭೀಮಶಂಕರನಾಮಾ ಸ ಡಾಕಿನ್ಯಾಂ ಸಂಸ್ಥಿತಸ್ಸ್ವಯಂ ।
ಜ್ಯೋತಿರ್ಲಿಂಗಸ್ವರೂಪೇಣ ಪ್ರಾರ್ಥಿತಸ್ತೇನ ಶಂಕರಃ ॥ ೨೯ ॥

ವಿಶ್ವೇಶ್ವರಾವತಾರಸ್ತು ಕಾಶ್ಯಾಂ ಜಾತೋ ಹಿ ಸಪ್ತಮಃ ।
ಸರ್ವಬ್ರಹ್ಮಾಂಡರೂಪಶ್ಚ ಭುಕ್ತಿಮುಕ್ತಿಪ್ರದೋ ಮುನೇ ॥ ೩೦ ॥

ಪೂಜಿತಸ್ಸರ್ವದೇವೈಶ್ಚ ಭಕ್ತ್ಯಾ ವಿಷ್ಣ್ವಾದಿಭಿಸ್ಸದಾ ।
ಕೈಲಾಸಪತಿನಾ ಚಾಪಿ ಭೈರವೇಣಾಪಿ ನಿತ್ಯಶಃ ॥ ೩೧ ॥

ಜ್ಯೋತಿರ್ಲಿಂಗಸ್ವರೂಪೇಣ ಸಂಸ್ಥಿತಸ್ತತ್ರ ಮುಕ್ತಿದಃ ।
ಸ್ವಯಂ ಸಿದ್ಧಸ್ವರೂಪೋ ಹಿ ತಥಾ ಸ್ವಪುರಿ ಸ ಪ್ರಭುಃ ॥ ೩೨ ॥

---

೨೮. ಭಕ್ತರಿಗೆ ಕಿರುಕುಳವನ್ನು ಕೊಡುತ್ತಿದ್ದ ಆ ರಾಕ್ಷಸನನ್ನು ಕೊಂದು, ಕಾಮರೂಪದೇಶಾಧಿಪತಿಯಾದ ಸುದಕ್ಷಿಣನೆಂಬ ಅರಸನನ್ನು ಆ ಸ್ವಾಮಿಯು ಕಾಪಾಡಿದನು.

೨೯. ಆ ಸುದಕ್ಷಿಣನ ಪ್ರಾರ್ಥನೆಯಂತೆ, ಆ ಶಂಕರನು ಭೀಮಶಂಕರನೆಂಬ ಹೆಸರನ್ನು ಧರಿಸಿ, ಡಾಕಿನಿಯೆಂಬಲ್ಲಿ (ಈಗಿಳ ಕೋಕನಾಡದ ಬಳಿಯಲ್ಲಿರುವ ಕೋಟಿ ಫಲಿಯೆಂಬಲ್ಲಿ) ಜ್ಯೋತಿರ್ಲಿಂಗಸ್ವರೂಪದಿಂದ ನೆಲೆಸಿದನು.

೩೦. ಓ ಮುನೀಂದ್ರ ! ಸಮಸ್ತ ಬ್ರಹ್ಮಾಂಡಸ್ವರೂಪನೂ, ಭುಕ್ತಿಯನ್ನೂ ಮುಕ್ತಿಯನ್ನೂ ಕರುಣಿಸುವ ವಿಶ್ವೇಶ್ವರನೆಂಬ ಏಳನೆಯ ಅವತಾರವು ಕಾಶೀಕ್ಷೇತ್ರದಲ್ಲಿ ಉಂಟಾಯಿತು.

೩೧. ಆ ವಿಶ್ವೇಶ್ವರನು ಪ್ರತಿನಿತ್ಯವೂ ವಿಷ್ಣುವೇ ಆದಿಯಾಗಿ ಎಲ್ಲ ದೇವತೆಗಳಿಂದಲೂ, ಕೈಲಾಸಕ್ಕೆ ಒಡೆಯನಾದ ಕುಬೇರನಿಂದಲೂ ಭೈರವನಿಂದಲೂ ಭಕ್ತಿಪೂರ್ವಕವಾದ ಪೂಜೆಗೊಳ್ಳುತ್ತಿರುವನು.

೩೨. ಸ್ವಯಂಸಿದ್ಧವಾದ ಸ್ವರೂಪವುಳ್ಳ ಆ ಪ್ರಭುವು ತನ್ನ ನಗರಿಯಲ್ಲಿ ಜ್ಯೋತಿರ್ಲಿಂಗಸ್ವರೂಪದಿಂದ ನೆಲೆಸಿ ಮೋಕ್ಷವನ್ನು ಕರುಣಿಸುತ್ತಿರುವನು.

ಕಾಶೀವಿಶ್ವೇಶಯೋರ್ಭಕ್ತ್ಯಾ ತನ್ನಾಮಜಪಕಾರಕಾಃ ।
ನಿರ್ಲಿಪ್ತಾಃ ಕರ್ಮಭಿರ್ನಿತ್ಯಂ ಕೈವಲ್ಯಪದಭಾಗಿನಃ ॥ ೩೩ ॥

ತ್ರ್ಯಂಬಕಾಖ್ಯೋಽವತಾರೋ ಯಃ ಸೋಽಷ್ಟಮೋ ಗೌತಮೀತಟೇ ।
ಪ್ರಾರ್ಥಿತೋ ಗೌತಮೇನಾವಿರ್ಬಭೂವ ಶಶಿಮೌಲಿನಃ ॥ ೩೪ ॥

ಗೌತಮಸ್ಯ ಪ್ರಾರ್ಥನಯಾ ಜ್ಯೋತಿರ್ಲಿಂಗಸ್ವರೂಪತಃ ।
ಸ್ಥಿತಸ್ತತ್ರಾಚಲಃ ಪ್ರೀತ್ಯಾ ತಸ್ಯ ಮುನೇಃ ಪ್ರೀತಿಕಾಮ್ಯಯಾ ॥ ೩೫ ॥

ತಸ್ಯ ಸಂದರ್ಶನಾತ್ಸ್ಪರ್ಶಾದ್ದರ್ಶನಾಚ್ಚ ಮಹೇಶಿತುಃ ।
ಸರ್ವೇ ಕಾಮಾಃ ಪ್ರಸಿಧ್ಯಂತಿ ತತೋ ಮುಕ್ತಿರ್ಭವೇದಹೋ ॥ ೩೬ ॥

ಶಿವಾನುಗ್ರಹತಸ್ತತ್ರ ಗಂಗಾನಾಮ್ನಾ ತು ಗೌತಮೀ ।
ಸಂಸ್ಥಿತಾ ಗೌತಮಪ್ರೀತ್ಯಾ ಪಾವನೀ ಶಂಕರಪ್ರಿಯಾ ॥ ೩೭ ॥

---

೩೩. ಯಾರು ಅನುದಿನವೂ ಭಕ್ತಿಯಿಂದ ಕಾಶೀಕ್ಷೇತ್ರ ಮತ್ತು ವಿಶ್ವೇಶ್ವರದ ನಾಮಸಂಕೀರ್ತನೆ ಮಾಡುವರೋ ಅವರು ಕರ್ಮಲೋಪಕ್ಕೊಳಗಾಗದೆ, ಮುಕ್ತಿ ಹೊಂದುವರು.

೩೪. ಗೌತಮ ಮಹರ್ಷಿಯ ಪ್ರಾರ್ಥನೆಯಂತೆ ಗೋದಾವರೀ ತೀರದಲ್ಲಿ ಆ ಶಂಕರನ ತ್ರ್ಯಂಬಕನೆಂಬ ಹೆಸರಿನ ಎಂಟನೆಯ ಅವತಾರವುಂಟಾಯಿತು.

೩೫. ಆ ಶಿವನು, ಗೌತಮಮಹರ್ಷಿಯ ಪ್ರೀತಿಗೆ ಭಂಗಬರಬಾರದೆಂದು ಎಣಿಸಿ, ಆತನ ಪ್ರಾರ್ಥನೆಗನುಸಾರವಾಗಿ ಪ್ರೀತಿಯಿಂದ ಅಲ್ಲಿ ಅಲುಗಾಡದೆ ನಿಂತನು.

೩೬. ಆತ್ರ್ಯಂಬಕೇಶ್ವರನ ಸಂದರ್ಶನದಿಂದಲೂ, ಸ್ಪರ್ಶದಿಂದಲೂ, ಪೂಜೆ ಯಿಂದಲೂ ಎಲ್ಲ ಇಷ್ಟಾರ್ಥಗಳೂ ನೆರವೇರಿ ಕೊನೆಗೆ ಮೋಕ್ಷವು ಲಭಿಸುವುದು.

೩೭. ಅಲ್ಲಿ ಪರಮಪಾವನೆಯೂ ಶಂಕರನ ಪ್ರಿಯೆಯೂ ಆದ ಗಂಗೆಯು ಆ ಗೌತಮಮಹರ್ಷಿಯ ಮೇಲಿನ ಮಮತೆಯಿಂದಲೂ ಶಿವನ ಅನುಗ್ರಹದಿಂದಲೂ ಗೌತಮೀ (ಗೋದಾವರಿ) ಎಂಬ ಹೆಸರಿನಿಂದ ನೆಲೆಸಿ ಹರಿಯುತ್ತಿರುವಳು.

ವೈದ್ಯನಾಥಾವತಾರೋ ಹಿ ನವಮಸ್ತತ್ರ ಕೀರ್ತಿತಃ ।
ಆವಿರ್ಭೂತೋ ರಾವಣಾರ್ಥಂ ಬಹುಲೀಲಾಕರಃ ಪ್ರಭುಃ ॥ ೩೮ ॥

ತದಾನಯನರೂಪಂ ಹಿ ವ್ಯಾಜಂ ಕೃತ್ವಾ ಮಹೇಶ್ವರಃ ।
ಜ್ಯೋತಿರ್ಲಿಂಗಸ್ವರೂಪೇಣ ಚಿತಾಭೂಮೌ ಪ್ರತಿಷ್ಠಿತಃ ॥ ೩೯ ॥

ವೈದ್ಯನಾಥೇಶ್ವರೋ ನಾಮ್ನಾ ಪ್ರಸಿದ್ಧೋಽಭೂಜ್ಜಗತ್ತ್ರಯೇ ।
ದರ್ಶನಾತ್ಪೂಜನಾದ್ಭಕ್ತ್ಯಾ ಭುಕ್ತಿಮುಕ್ತಿಪ್ರದಃ ಸ ಹಿ ॥ ೪೦ ॥

ವೈದ್ಯನಾಥೇಶ್ವರಶಿವಮಾಹಾತ್ಮ್ಯಮನುಶಾಸನಂ ।
ಪಠತಾಂ ಶೃಣ್ವತಾಂ ಚಾಪಿ ಭುಕ್ತಿಮುಕ್ತಿಪ್ರದಂ ಮುನೇ ॥ ೪೧ ॥

---

೩೮. ನಾನಾಲೀಲಾವಿಶಾರದನಾದ ಆ ಪ್ರಭುವು ರಾವಣಾನುಗ್ರಹಾರ್ಥವಾಗಿ ವೈದ್ಯನಾಥವೆಂಬ ಅವತಾರವನ್ನು ತಾಳಿದನು. ಇದು ಒಂಬತ್ತನೆಯ ಜ್ಯೋತಿರ್ಲಿಂಗವು.

೩೯. ಆ ರಾವಣನು ತನ್ನನ್ನು ಎಳೆದೊಯ್ಯುವನೆಂಬುದನ್ನು ಅರಿತು, ಆ ಮಹೇಶ್ವರನು ಯಾವುದೋ ನೆಪದಿಂದ ಆ ಚಿತಾಭೂಮಿಯಲ್ಲೇ ಜ್ಯೋತಿರ್ಲಿಂಗ ಸ್ವರೂಪದಿಂದ ನೆಲೆಸಿಬಿಟ್ಟನು.

೪೦. ತನ್ನನ್ನು ಸಂದರ್ಶಿಸಲೂ, ಪೂಜಿಸಲೂ ಭೋಗಭಾಗ್ಯಗಳನ್ನೂ ಮೋಕ್ಷವನ್ನೂ ಕರುಣಿಸುವ ಆ ಪರಮಶಿವನು ವೈದ್ಯನಾಥೇಶ್ವರನೆಂಬುದಾಗಿ ಮೂರುಲೋಕಗಳಲ್ಲಿಯೂ ಪ್ರಸಿದ್ಧನಾದನು.

೪೧. ಓ ಮುನೀಂದ್ರ! ವೈದ್ಯನಾಥೇಶ್ವರನ ಮಾಹಾತ್ಮ್ಯವು ತನ್ನನ್ನು ಪಠಿಸಿದವರಿಗೂ, ಕೇಳಿದವರಿಗೂ ಭುಕ್ತಿಮುಕ್ತಿಗಳನ್ನು ಕೊಡುವುದು.

ನಾಗೇಶ್ವರಾವತಾರಸ್ತು ದಶಮಃ ಪರಿಕೀರ್ತಿತಃ ।
ಆವಿರ್ಭೂತಃ ಸ್ವಭಕ್ತಾರ್ಥಂ ದುಷ್ಟಾನಾಂ ದಂಡದಃ ಸದಾ ॥ ೪೨ ॥

ಹತ್ವಾ ದಾರುಕನಾಮಾನಂ ರಾಕ್ಷಸಂ ಧರ್ಮಘಾತಕಂ ।
ಸ್ವಭಕ್ತಂ ವೈಶ್ಯನಾಥಂ ಚ ಪ್ರಾರಕ್ಷತ್ಸುಪ್ರಿಯಾಭಿದಂ ॥ ೪೩ ॥

ಲೋಕಾನಾಮುಪಕಾರಾರ್ಥಂ ಜ್ಯೋತಿರ್ಲಿಂಗಸ್ವರೂಪಧೃಕ್ ।
ಸಂತಸ್ಥೌ ಸಾಂಬಿಕಶ್ಶಂಭುರ್ಬಹುಲೀಲಾಕರಃ ಪರಃ ॥ ೪೪ ॥

ತದ್ದೃಷ್ಟ್ವಾ ಶಿವಲಿಂಗಂ ತು ಮುನೇ ನಾಗೇಶ್ವರಾಭಿಧಂ ।
ವಿನಶ್ಯಂತಿ ದ್ರುತಂ ಚಾರ್ಚ್ಯ ಮಹಾಪಾತಕರಾಶಯಃ ॥ ೪೫ ॥

ರಾಮೇಶ್ವರಾವತಾರಸ್ತು ಶಿವಸ್ಯೈಕಾದಶಃ ಸ್ಮೃತಃ ।
ರಾಮಚಂದ್ರಪ್ರಿಯಕರೋ ರಾಮಸಂಸ್ಥಾಪಿತೋ ಮುನೇ ॥ ೪೬ ॥

---

೪೨. ದುಷ್ಟಶಿಕ್ಷಕನಾದ ಆ ಪ್ರಭುವು ತನ್ನ ಭಕ್ತರಿಗೋಸ್ಕರ ನಾಗೇಶ್ವರನೆಂಬ ರೂಪದಿಂದ ಅವತಾರವನ್ನು ತಾಳಿದನು. ಇದು ಹತ್ತನೆಯದು.

೪೩. ಧರ್ಮದ್ರೋಹಿಯಾದ ದಂಡಕನೆಂಬ ರಕ್ಕಸನನ್ನು ಕೊಂದು ಕೆಡಹಿ, ತನ್ನ ಭಕ್ತನಾದ ಸುಪ್ರಿಯನೆಂಬ ವೈಶ್ಯಶ್ರೇಷ್ಠನನ್ನು ಸಲಹಿದನು.

೪೪. ನಾನಾಲೀಲಾವಿಶಾರದನಾದ ಆ ಶಂಕರನು ಲೋಕೋಪಕಾರಾರ್ಥವಾಗಿ ಜ್ಯೋತಿರ್ಲಿಂಗಸ್ವರೂಪವನ್ನು ತಾಳಿ ಜಗನ್ಮಾತೆಯೊಡನೆ ಅಲ್ಲಿ ನೆಲೆಸಿದನು.

೪೫. ಎಲೈ ಮುನೀಂದ್ರನೇ, ಆ ನಾಗೇಶ್ವರನೆಂಬ ಶಿವಲಿಂಗವನ್ನು ಸಂದರ್ಶಿಸಿದರೂ ಪೂಜಿಸಿದರೂ ರಾಶಿಗಟ್ಟಲೆ ಮಹಾಪಾಪಗಳು ತಟ್ಟನೆ ಹಾಳಾಗಿಹೋಗುವುವು.

೪೬. ಶ್ರೀರಾಮನಿಗೆ ಪ್ರಿಯವನ್ನುಂಟುಮಾಡಿದ ರಾಮೇಶ್ವರನೆಂಬುದು, ಶಿವನ ಹನ್ನೊಂದನೆಯ ಅವತಾರವು. ಈ ಲಿಂಗವನ್ನು ರಾಮಚಂದ್ರನು ಪ್ರತಿಷ್ಠೆ ಮಾಡಿದನು.

ದದೌ ಜಯವರಂ ಪ್ರೀತ್ಯಾ ಯೋ ರಾಮಾಯ ಸುತೋಷಿತಃ ।
ಆವಿರ್ಭೂತಸ್ಸಲಿಂಗಸ್ತು ಶಂಕರೋ ಭಕ್ತವತ್ಸಲಃ ॥ ೪೭ ॥

ರಾಮೇಣ ಪ್ರಾರ್ಥಿತೋಽತ್ಯರ್ಥಂ ಜ್ಯೋತಿರ್ಲಿಂಗಸ್ವರೂಪತಃ ।
ಸಂತಸ್ಥೌ ಸೇತುಬಂಧೇ ಚ ರಾಮಸಂಸೇವಿತೋ ಮುನೇ ॥ ೪೮ ॥

ರಾಮೇಶ್ವರಸ್ಯ ಮಹಿಮಾದ್ಭುತೋಽಭೂದ್ಭುವಿ ಚಾತುಲಃ ।
ಭುಕ್ತಿಮುಕ್ತಿಪ್ರದಶ್ಚೈವ ಸರ್ವದಾ ಭಕ್ತಕಾಮದಃ ॥ ೪೯ ॥

ತಂ ಚ ಗಂಗಾಜಲೇನೈವ ಸ್ನಾಪಯಿಷ್ಯತಿ ಯೋ ನರಃ ।
ರಾಮೇಶ್ವರಂ ಚ ಸದ್ಭಕ್ತ್ಯಾ ಸ ಜೀವನ್ಮುಕ್ತ ಏವ ಹಿ ॥ ೫೦ ॥

ಇಹ ಭುಕ್ತ್ವಾಖಿಲಾನ್ಭೋಗಾನ್ದೇವತಾದುರ್ಲಭಾನಪಿ ।
ಅತಃ ಪ್ರಾಪ್ಯ ಪರಂ ಜ್ಞಾನಂ ಕೈವಲ್ಯಂ ಮೋಕ್ಷಮಾಪ್ನುಯಾತ್ ॥ ೫೧ ॥

---

೪೭. ಭಕ್ತವತ್ಸಲನಾದ ಶಂಕರನು, ಆ ಲಿಂಗರೂಪದಿಂದ ಅವತರಿಸಿ, ಶ್ರೀರಾಮಚಂದ್ರನಿಗೆ ಪ್ರಸನ್ನನಾಗಿ, ಜಯುವರವನ್ನು ಅನುಗ್ರಹಮಾಡಿದನು.

೪೮. ಓ ಮುನೀಂದ್ರ! ಶ್ರೀರಾಮಚಂದ್ರನು ಬಹುವಾಗಿ ಪ್ರಾರ್ಥನೆಮಾಡಲು, ಆ ಶಿವನು ಜ್ಯೋತಿರ್ಲಿಂಗಸ್ವರೂಪದಿಂದ ರಾಮನಿಂದ ಪೂಜಿತನಾಗಿ ಸೇತುವಿನ ಬಳಿ ನೆಲೆಸಿದನು

೪೯. ಸರ್ವದಾ ಭಕ್ತರಿಗೆ ಭುಕ್ತಿಯನ್ನೂ ಮುಕ್ತಿಯನ್ನೂ ನೀಡುವ ಆ ರಾಮೇಶ್ವರನ ಮಹಿಮೆಯು, ಭೂಮಿಯಲ್ಲಿ ಹೋಲಿಕೆಯೇ ಇಲ್ಲದಷ್ಟು ಅದ್ಭುತವಾಗಿ ಬೆಳೆದಿರುವುದು.

೫೦. ಯಾವ ಮಾನವನು ಆ ರಾಮೇಶ್ವರನಿಗೆ ಭಕ್ತಿಪೂರ್ವಕವಾಗಿ ಗಂಗಾ ಜಲದಿಂದ ಅಭಿಷೇಕಮಾಡುವನೋ ಅವನನ್ನು ಜೀವನ್ಮುಕ್ತನೆಂವೇ ಭಾವಿಸಬೇಕು

೫೧. ಅವನು ದೇವತೆಗಳಿಗೂ ದುರ್ಲಭವೆನಿಸಿದಂತಹ ಅನೇಕ ಭೋಗ ಗಳನ್ನು ಅನುಭವಿಸುವನಲ್ಲದೆ, ದಿವ್ಯಜ್ಞಾನವನ್ನು ಪಡೆದು, ಮೋಕ್ಷಸುಖಭಾಗಿ ಯಾಗುವನು.

ಘುಶ್ಮೇಶ್ವರಾವತಾರಸ್ತು ದ್ವಾದಶಶ್ಶಂಕರಸ್ಯ ಹಿ ।
ನಾನಾಲೀಲಾಕರೋ ಘುಶ್ಮಾನಂದದೋ ಭಕ್ತವತ್ಸಲಃ ॥ ೫೨ ॥

ದಕ್ಷಿಣಸ್ಯಾಂ ದಿಶಿ ಮುನೇ ದೇವಶೈಲಸಮೀಪತಃ ।
ಆವಿರ್ಬಭೂವ ಸರಸಿ ಘುಶ್ಮಾಪ್ರಿಯಕರಃ ಪ್ರಭುಃ ॥ ೫೩ ॥

ಸುದೇಹ್ಯಮಾರಿತಂ ಘುಶ್ಮಾಪುತ್ರಂ ಸಾಕಲ್ಯತೋ ಮುನೇ ।
ತುಷ್ಟಸ್ತದ್ಭಕ್ತಿತಶ್ಶಂಭುರ್ಯೋಽರಕ್ಷದ್ಭಕ್ತವತ್ಸಲಃ ॥ ೫೪ ॥

ತತ್ಪ್ರಾರ್ಥಿತಸ್ಸ ವೈ ಶಂಭುಸ್ತಡಾಗೇ ತತ್ರ ಕಾಮದಃ ।
ಜ್ಯೋತಿರ್ಲಿಂಗಸ್ವರೂಪೇಣ ತಸ್ಥೌ ಘುಶ್ಮೇಶ್ವರಾಭಿಧಃ ॥ ೫೫ ॥

---

೫೨. ಘುಶ್ಮೆಯೆಂಬುವಳಿಗೆ ಆನಂದವನ್ನುಂಟುಮಾಡಿದ, ನಾನಾಲೀಲಾಮಯವಾದ, ಭಕ್ತವಾತ್ಸಲ್ಯಭರಿತವಾದ ಘುಶ್ಮೇಶ್ವರವೆಂಬುದು ಶಿವನ ಹನ್ನೆರಡನೆಯ ಅವತಾರವು.

೫೩. ಓ ಮುನೀಂದ್ರ! ಆ ಶಂಕರನು ಘುಶ್ಮೆಗೆ ಪ್ರೀತಿಯನ್ನುಂಟುಮಾಡುತ್ತಾ ದಕ್ಷಿಣದಿಕ್ಕಿನಲ್ಲಿ ದೇವಗಿರಿಯುಬಳಿಯಲ್ಲಿ ಸರೋವರವೊಂದರಲ್ಲಿ ಅವತರಿಸಿದನು.

೫೪. ಸುದೇಹ್ಯನೆಂಬುವನಿಂದ ಸಂಪೂರ್ಣವಾಗಿ ಕೊಲ್ಲಲ್ಪಟ್ಟ ಆ ಘುಶ್ಮೆಯ ಮಗನನ್ನು ಭಕ್ತವತ್ಸಲನಾದ ಆ ಶಂಕರನು ಆಕೆಯ ಭಕ್ತಿಪೂರ್ವಕವಾದ ಸ್ತೋತ್ರದಿಂದ ಸುಪ್ರೀತನಾಗಿ ಸಲಹಿದನು.

೫೫. ಆಗ ಘುಶ್ಮೆಯಿಂದ ಪ್ರಾರ್ಥಿಸಲ್ಪಟ್ಟ ಶಂಕರನು, ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುತ್ತಾ ಘುಶ್ಮೇಶ್ವರನೆಂಬ ಜ್ಯೋತಿರ್ಲಿಂಗಸ್ವರೂಪದಿಂದ ಆ ಸರಸ್ಸಿನ ಬಳಿ ನೆಲೆಸಿದನು.

ತಂ ದೃಷ್ಟ್ವಾ ಶಿವಲಿಂಗಂ ತು ಸಮಭ್ಯರ್ಚ್ಯ ಚ ಭಕ್ತಿತಃ ।
ಇಹ ಸರ್ವಸುಖಂ ಭುಕ್ತ್ವಾ ತತೋ ಮುಕ್ತಿಂ ಚ ವಿಂದತಿ ॥ ೫೬ ॥

ಇತಿ ತೇ ಹಿ ಸಮಾಖ್ಯಾತಾ ಜ್ಯೋತಿರ್ಲಿಂಗಾವಲೀ ಮಯಾ ।
ದ್ವಾದಶಪ್ರಮಿತಾ ದಿವ್ಯಾ ಭುಕ್ತಿಮುಕ್ತಿಪ್ರದಾಯಿನೀ ॥ ೫೭ ॥

ಏತಾಂ ಜ್ಯೋತಿರ್ಲಿಂಗಕಥಾಂ ಯಃ ಪಠೇಚ್ಛೃಣುಯಾದಪಿ ।
ಮುಚ್ಯತೇ ಸರ್ವಪಾಪೇಭ್ಯೋ ಭುಕ್ತಿಂ ಮುಕ್ತಿಂ ಚ ವಿಂದತಿ ॥ ೫೮ ॥

ಶತರುದ್ರಾಭಿಧಾ ಚೇಯಂ ವರ್ಣಿತಾ ಸಂಹಿತಾ ಮಯಾ ।
ಶತಾವತಾರಸತ್ಕೀರ್ತಿಸ್ಸರ್ವಕಾಮಫಲಪ್ರದಾ ॥ ೫೯ ॥

---

೫೬. ಆ ಘುಶ್ಮೇಶ್ವರನನ್ನು ಕಂಡು ಭಕ್ತಿಯಿಂದ ಪೂಜಿಸಿದವರು ಇಲ್ಲಿ ಸಕಲ ಸುಖಗಳನ್ನೂ ಅನುಭವಿಸಿ ಕೊನೆಗೆ ಮೋಕ್ಷವನ್ನು ಹೊಂದುವರು.

೫೭. ಓ ಸನತ್ಕುಮಾರ, ನಿನಗೆ ಈ ರೀತಿಯಾಗಿ ಭುಕ್ತಿಮುಕ್ತಿಪ್ರದಾಯಕವಾದ ದಿವ್ಯವಾದ ದ್ವಾದಶಜ್ಯೋತಿರ್ಲಿಂಗಗಳನ್ನು ವರ್ಣಿಸಿದೆನು.

೫೮ ಈ ದ್ವಾದಶ ಜ್ಯೋತಿರ್ಲಿಂಗಗಳ ಚರಿತ್ರವನ್ನು ಯಾವನು ಪಠಿಸುವನೋ ಮತ್ತು ಯಾವನು ಶ್ರವಣಮಾಡುವನೋ ಅವನು ಸಕಲ ಪಾಪಗಳಿಂದ ವಿಮುಕ್ತನಾಗಿ ಈ ಲೋಕದಲ್ಲಿ ಸಮಸ್ತ ಸುಖಗಳನ್ನೂ ಸವಿದು ಕೊನೆಗೆ ಮೋಕ್ಷವನ್ನು ಹೊಂದುವನು

೫೯. ಶತರುದ್ರವೆಂಬ ಹೆಸರುಳ್ಳ ಈ ಸಂಹಿತೆಯು ಶಿವನ ನೂರು ಅವತಾರಗಳ ಪುಣ್ಯಚರಿತವನ್ನು ಒಳಗೊಂಡಿರುವುದು. ಇದನ್ನು ನಿನಗೆ ವರ್ಣಿಸಿರುವೆನು ಇದು ಸಕಲ ಅಭಿಲಾಷೆಗಳನ್ನೂ ಈಡೇರಿಸುವುದು.

**ಇಮಾಂ ಯಃ ಪಠತೇ ನಿತ್ಯಂ ಶೃಣುಯಾದ್ವಾ ಸಮಾಹಿತಃ ।**
**ಸರ್ವಾನ್ಕಾಮಾನವಾಪ್ನೋತಿ ತತೋ ಮುಕ್ತಿಂ ಲಭೇದ್ಧ್ರುವಂ ॥ ೬೦ ॥**

**ಇತಿ ಶ್ರೀಶಿವಮಹಾಪುರಾಣೇ ತೃತೀಯಾಯಾಂ ಶತರುದ್ರಸಂಹಿತಾಯಾಂ ಸನತ್ಕುಮಾರನಂದೀಶ್ವರಸಂವಾದೇ ದ್ವಾದಶ ಜ್ಯೋತಿರ್ಲಿಂಗಾವತಾರವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ**
**॥ ಶತರುದ್ರಸಂಹಿತಾ ಚ ಸಮಾಪ್ತಾ ॥**

---

೬೦. ಈ ಶತರುದ್ರಸಂಹಿತೆಯನ್ನು ಯಾವನು ಮನಸ್ಸಿಟ್ಟು ಪ್ರತಿನಿತ್ಯವೂ ಪಠಿಸುವನೋ ಇಲ್ಲವೇ ಶ್ರವಣಮಾಡುವನೋ ಅವನು ಎಲ್ಲ ಕೋರಿಕೆಗಳನ್ನೂ ಅನುಭವಿಸಿ ಬಳಿಕ ಮುಕ್ತಿಯನ್ನು ಪಡೆದೇಪಡೆಯುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಶತರುದ್ರಸಂಹಿತೆಯಲ್ಲಿ
ಸನತ್ಕುಮಾರ ನಂದಿಕೇಶ್ವರ ಸಂವಾದದಲ್ಲಿ ದ್ವಾದಶಜ್ಯೋತಿರ್ಲಿಂಗಾ
ವತಾರವರ್ಣನವೆಂಬ ನಲ್ವತ್ತೆರಡನೆಯ
ಅಧ್ಯಾಯವು ಮುಗಿದುದು.

ಶಿವಮಹಾಪುರಾಣದಲ್ಲಿ ಶತರುದ್ರಸಂಹಿತೆಯು ಮುಗಿದುದು.



---

Printed by Y. R. Ranga Rao, Proprietor
Sri Chamundeswari Electric Press, Mysore—1945.